ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

ಶ್ರೀ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

ಉತ್ತರಖಂಡ—ಆರನೆಯ ಭಾಗ

([illegible] ಅಧ್ಯಾಯಗಳು)

ಅನುವಾದಕ:

ಬೇಲಡಕೆರೆ ಸೂರ್ಯನಾರಾಯಣಶಾಸ್ತ್ರೀ

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)

ಮೈಸೂರು:

ಶ್ರೀ ಹನುಮಾನ್ ಪ್ರೆಸ್

೧೯೪೬

॥ ಶ್ರೀಃ ॥

–x–

# ಮುನ್ನುಡಿ



ಇದು ಪದ್ಮಮಹಾಪುರಾಣದ ಉತ್ತರಖಂಡದ ಆರನೆಯ ಭಾಗವಾಗಿದೆ. ಇದರಲ್ಲಿ ೨೧೯ ನೆಯ ಅಧ್ಯಾಯದಿಂದ ೨೪೬ ನೆಯ ಅಧ್ಯಾಯಗಳವರೆಗೂ ಸೇರಿರುತ್ತದೆ.

ಇದರಲ್ಲಿ ಮಾಘಮಾಸವು ಎಲ್ಲಿಂದ ಎಲ್ಲಿಯವರೆಗೆಂಬುದನ್ನು ಶಾಸ್ತ್ರದ ರೀತಿಯಿಂದ ವಿಚಾರಿಸಿ ಜೊತೆಗೆ ಮಕರಮಾಸವೂ ಇದ್ದರೆ ಅದರ ಮಹಿಮೆಯು ಎಷ್ಟರ ಮಟ್ಟಕ್ಕೇರುತ್ತದೆಂಬುದನ್ನು ದೃಷ್ಟಾಂತಪೂರ್ವಕವಾಗಿ ವಿವರಿಸಿದೆ.

ಈ ಮಾಘದಲ್ಲಿ ಸ್ನಾನಮಾಡಲು ಯಾವ ತೀರ್ಥಗಳು ಯೋಗ್ಯವಾದುವು? ಎಂಬುದನ್ನು ತೆಗೆದುಕೊಂಡು ಎಲ್ಲಿ ಬೇಕಾದರೂ ಆಗಲಿ, ಯಾವುದಾದರೂ ಆಗಲಿ ಕೆರೆ, ಭಾವಿ ಮುಂತಾದುವೆಲ್ಲವೂ ಈ ಮಾಘದಲ್ಲಿ ತೀರ್ಥವೇ ಎಂಬುದನ್ನು ಸಮರ್ಥಿಸಿದೆ.

ನೀರಿಲ್ಲದೆ ಸೇದುವ ಭಾವಿಗಳಿರುವಲ್ಲಿ ಅವಗಾಹನ ಸ್ನಾನಕ್ಕೆ ಮಾಡಬೇಕಾದ ವಿಧಿಗಳನ್ನು ವಿವರಿಸಿ ಅಲ್ಲಿ ಹೇಗೆ ಸ್ನಾನಮಾಡಬೇಕೆಂಬುದನ್ನೂ ಸಕಾರಣವಾಗಿ ವಿವರಿಸಿದೆ.

ನದಿಗಳು, ಕೆರೆಗಳು, ಮಡುಗಳು, ಸಮುದ್ರಗಳು ಇವುಗಳ ಯೋಗ್ಯತೆಯನ್ನು ಅನುಸರಿಸಿಕೊಂಡು ಅವುಗಳಲ್ಲಿ ನಿತ್ಯಸ್ನಾನದಿಂದ ಬರುವ ಫಲವನ್ನೂ, ಮಾಘಮಾಸದಲ್ಲಿ ಸ್ನಾನಮಾಡುವುದರಿಂದ ಬರುವ ಫಲವನ್ನೂ ಲೆಕ್ಕಹಾಕಿ ಹೇಳಿರುವುದು.

ಈ ಮಾಘಸ್ನಾನವನ್ನು ತನ್ನ ಸ್ವಂತಕ್ಕೆ ಬೇಕಾದರೂ ಮಾಡಬಹುದು. ಪರರಿಗೋಸ್ಕರವಾದರೂ ಮಾಡಬಹುದು. ಪರರಿಗೋಸ್ಕರ ಸ್ನಾನ ಮಾಡಿದರೂ ಅದರಿಂದ ತನಗೂ ಭಾಗವುಂಟು ಎಂಬುದು ಮನೋಹರವಾದ ರೀತಿಯಿಂದ ವಿವೃತವಾಗಿದೆ.

ಈ ಮಾಘಮಾಸದ ಮಹಿಮೆಯನ್ನು ವಿವರಿಸುವಾಗ ಶ್ರೀ ಕೃಷ್ಣನು ಸಾಂದೀಪಿನಿಯ ಮಗನನ್ನು ಬದುಕಿಸಿದನೆಂಬ ವಿಷಯವೂ, ಶ್ರೀರಾಮನು ಬ್ರಾಹ್ಮಣನ ಪುತ್ರನನ್ನು ಬದುಕಿಸಿದನೆಂಬ ವಿಷಯವೂ, ಅವರು ದೇವಾಂಶ ಪುರುಷರೆಂಬ ಭಕ್ತಿಯನ್ನುಂಟುಮಾಡತಕ್ಕದ್ದಾಗಿರುತ್ತವೆ.

ಮೃಗಶೃಂಗಮುನಿಯ ಚರಿತ್ರೆಯನ್ನು ತೆಗೆದುಕೊಂಡು ಸ್ತ್ರೀಧರ್ಮವನ್ನು ವಿವರಿಸಿರುವುದು ಎಲ್ಲರಿಗೂ ಗ್ರಾಹ್ಯವಾಗಿರುವುದಲ್ಲದೆ ಅನುಸರಣೀಯವಾಗಿಯೂ ಧರ್ಮಕ್ಕೂ ಸುಖಕ್ಕೂ ದಾರಿಯನ್ನು ತೋರಿಸುವುದಾಗಿಯೂ ಇರುತ್ತದೆ.

ಪಂಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ಕನ್ನಡಿಗರಿಗೆಲ್ಲ ಜ್ಞಾನಾಮೃತಪಾನವು ಸುಲಭವಾಗಿ ದೊರಕುವಂತೆ ಲೋಕೋಪಕಾರ ಮಾಡುತ್ತಲಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಭಗವಂತನು ಆಯುರಾರೋಗ್ಯ ಸತ್ಸಂತಾನಗಳನ್ನು ಕೊಟ್ಟು ಸಲಹಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ಮೈಸೂರು,
3—4—1946

ಅನುವಾದಕ,
**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



# ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಆರನೆಯ ಭಾಗದ

## ವಿಷಯಾನುಕ್ರಮಣಿಕೆ.



ಪುಟಸಂಖ್ಯೆ

॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ·

## ॥ ಏಕೋನವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥



॥ ವ್ಯಾಸ ಉವಾಚ ॥

ಆರಬ್ಧಂ ನೈಮಿಷಾರಣ್ಯೇ ಸತ್ರಂ ದ್ವಾದಶವಾರ್ಷಿಕಂ ।
ಆಜಗ್ಮುರಖಿಲಾಸ್ತತ್ರ ಮುನಯೋ ಬ್ರಹ್ಮವಾದಿನಃ ॥ ೧ ॥

ಅಸಿತೋ ದೇವಲಶ್ಚೈವ ಸುಮಂತಃ ಪೈಲ ಏವ ಚ ।
ಸುಮತಿರ್ವಾಮದೇವಶ್ಚ ಜಾಬಾಲಿಃ ಕಾಶ್ಯಪೋ ಭೃಗುಃ ॥ ೨ ॥

ಪರ್ವತಶ್ಶರಭಂಗಶ್ಚ ಸುತೀಕ್ಷ್ಣೋಽಗಸ್ತ್ಯ ಏವ ಚ ।
ಆಪಸ್ತಂಬೋಽಣಿಮಾಂಡವ್ಯಃ ಸತ್ಯಃ ಕಾತ್ಯಾಯನಸ್ತಥಾ ॥ ೩ ॥

---

## ಇನ್ನೂರ ಹತ್ತೊಂಭತ್ತನೆಯ ಅಧ್ಯಾಯವು



೧. ವ್ಯಾಸನು ಹೇಳಿದನು–ಒಂದು ಸಾರಿ ನೈಮಿಷಾರಣ್ಯದಲ್ಲಿ ಹನ್ನೆರಡು ವರ್ಷಗಳಕಾಲ ನಡೆಯತಕ್ಕ ಒಂದು ಯಾಗವನ್ನು ಬ್ರಹ್ಮವೇತ್ತೃಗಳಾದ ಋಷಿಗಳು ಮಾಡಲು ಉದ್ದೇಶಪಟ್ಟರು.

೨-೧೨. ಅಸಿತ, ದೇವಲ, ಸುಮಂತ, ಪೈಲ, ಸುಮತಿ, ವಾಮದೇವ, ಜಾಬಾಲಿ, ಕಾಶ್ಯಪ, ಭೃಗು, ಪರ್ವತ, ಶರಭಂಗ, ಸುತೀಕ್ಷ್ಣ, ಅಗಸ್ತ್ಯ, ಆಪಸ್ತಂಬ, ಅಣಿಮಾಂಡವ್ಯ, ಸತ್ಯ, ಕಾತ್ಯಾಯನ, ರಥೀತರ, ಆಂಗೀರಸ,

ರಥೀತರೋಂಗಿರಾಶ್ಚೈವ ಕಪಿಲೋ ರೈಭ್ಯ ಏವ ಚ ।
ಮುದ್ಗಲೋ ಗೌತಮಶ್ಚೈವ ಕಣ್ವಃ ಕಾಣೋತ್ರಿರೇವ ಚ ॥ ೪ ॥

ಧೂಮ್ರೋ ಹಾರೀತಕಶ್ಶಂಕುಃ ಪೃಥುರ್ಮಂಕಶ್ಚ ಸಂಕೃತಿಃ ।
ಕಾಂಡಿನ್ಯೋ ನಿಧ್ರುವಶ್ಚೈವ ಕಾಣಾದೋ ಗರ್ಗ ಏವ ಚ ॥ ೫ ॥

ಕಾಶಿಕೋ ಗಾಲವೋ ಬಭ್ರುಃ ಶುಕಃ ಶಕ್ತಿಃ ಪರಾಶರಃ ।
ಶಿನಿರ್ವಿಭಾಂಡಕಃ ಪಂಕೋ ಬುಧೋ ಬೌಧಾಯನೋ ವಸುಃ ॥ ೬ ॥

ಜಮದಗ್ನಿರ್ಭರದ್ವಾಜೋ ಧೂಮಪೋ ಮೌನಭಾರ್ಗವಃ ।
ಶೌನಕೋ ನಾರದಶ್ಚೈವ ಶತಾನಂದಃ ಶತಾತಪಃ ॥ ೭ ॥

ವಿಷ್ಣುವೃದ್ಧೋ ವಿಶಾಲಾಕ್ಷೋ ಜರ್ಜರೋ ಜಂಗಮೋ ಜಯಃ ।
ಪಕ್ವಃ ಪಾಶಧರಃ ಪಾರಃ ಪಾರಗಃ ಪಂಡಿತೋತ್ತಮಃ ॥ ೮ ॥

ಮಹಾಕಾಯೋ ಮಹಾಗ್ರೀವೋ ಮಹಾಬಾಹುರ್ಮಹೋದರಃ ।
ಉದ್ದಾಲಕೋ ಮಹಾಸೇನ ಆರ್ತ ಆಮಲಕಪ್ರಿಯಃ ॥ ೯ ॥

ಏಕಪಾದೋರ್ಧಪಾದಶ್ಚ ಊರ್ಧ್ವಬಾಹುರ್ಜಲಾಶನಃ ।
ಉಗ್ರಶೀಲೋ ಮಹಾಶೀಲಃ ಪಿಂಗಳೋ ಮಂತ್ರವಿತ್ಪಟುಃ ॥ ೧೦ ॥

---

ಕಪಿಲ, ರೈಭ್ಯ, ಮುದ್ಗಲ, ಗೌತಮ, ಕಣ್ವ, ಕಾಣ, ಅತ್ರಿ, ಧೂಮ್ರ, ಹಾರೀತಕ, ಶಂಕು, ಪೃಥು, ಮಂಕ, ಸಂಕೃತಿ, ಕೌಂಡಿನ್ಯ, ನಿಧ್ರುವ, ಕಾಣಾದ, ಗರ್ಗ, ಕೌಶಿಕ, ಗಾಲವ, ಬಭ್ರು. ಶುಕ, ಶಕ್ತಿ, ಪರಾಶರ, ಶಿನಿ, ವಿಭಾಂಡಕ, ಪಂಕ, ಬುಧ, ಬೌಧಾಯನ, ವಸು, ಜಮದಗ್ನಿ, ಭರದ್ವಾಜ, ಧೂಮಪ, ಮೌನ ಭಾರ್ಗವ, ಶೌನಕ, ನಾರದ, ಶತಾನಂದ, ಶತಾತಪ, ವಿಷ್ಣುವೃದ್ಧ, ವಿಶಾಲಾಕ್ಷ ಜರ್ಜರ, ಜಂಗಮ, ಜಯ, ಪಕ್ವ, ಪಾಶಧರ, ಪಾರ, ಪಾರಗ, ಪಂಡಿತೋತ್ತಮ, ಮಹಾಕಾಯ, ಮಹಾಗ್ರೀವ, ಮಹಾಬಾಹು, ಮಹೋದರ, ಉದ್ದಾಲಕ, ಮಹಾಸೇನ, ಆರ್ತ, ಆಮಲಕಪ್ರಿಯ, ಏಕಪಾದ, ಅರ್ಧಪಾದ, ಊರ್ಧ್ವಬಾಹು, ಜಲಾಶನ, ಉಗ್ರಶೀಲ, ಮಹಾಶೀಲ, ಪಿಂಗಲ, ಮಂತ್ರವಿತ್, ಪಟು, ಶಂಡಿರ,

ಶಂಡೀರಃ ಕರುಣಃ ಕಾಲಃ ಕೈವಲ್ಯಶ್ಚ ಕಲಾಧರಃ ।
ಕಲ್ಪಾನ್ತಃ ಕಂಕಣಃ ಕಂಡುಃ ಕಠಃ ಕಾಲಾಗ್ನಿರುದ್ರಕಃ ॥ ೧೧ ॥

ಶ್ವೇತಬಾಹುರ್ಮಹಾಪ್ರಾಜ್ಞಃ ಶ್ವೇತಾಶ್ವತರಸಂಜ್ಞಕಃ ।
ಏತೇ ಶಿಷ್ಯೈಃ ಪ್ರಶಿಷ್ಯೈಶ್ಚ ಬ್ರಹ್ಮಿಷ್ಠಾ ವೇದಪಾರಗಾಃ ॥ ೧೨ ॥

ಲೋಕಾನುಗ್ರಹಕರ್ತಾರಃ ಪರೋಪಕೃತಿಶಾಲಿನಃ ।
ಪರಪ್ರಿಯರತಾ ನಿತ್ಯಂ ಪಂಚಯಜ್ಞಪರಾಯಣಾಃ ॥ ೧೩ ॥

ಆಗತ್ಯ ನೈಮಿಷಾರಣ್ಯಮಶೇಷಗುಣಸಂಯುತಾಃ ।
ಕರ್ತುಮಾರೇಭಿರೇ ಸತ್ರಮಥ ಸೂತಃ ಸಮಾಯಯೌ ॥ ೧೪ ॥

ತಮಾಶ್ರಮಮನುಪ್ರಾಪ್ತಂ ಜಟಾವಲ್ಕಲಧಾರಿಣಂ ।
ಪ್ರಸನ್ನವದನಂ ಶಾನ್ತಂ ಪರಮಾರ್ಥವಿಶಾರದಂ ॥ ೧೫ ॥

---

ಕರುಣ, ಕಾಲ, ಕೈವಲ್ಯ, ಕಲಾಧರ, ಕಲ್ಪಾಂತ, ಕಂಕಣ, ಕಂಡು, ಕಠ, ಕಾಲಾಗ್ನಿ, ರುದ್ರಕ, ಶ್ವೇತ,ಬಾಹು ಮಹಾಪ್ರಾಜ್ಞ, ಶ್ವೇತಾಶ್ವತರ, ಈ ಋಷಿಗಳೂ ಇನ್ನೂ ಅನೇಕ ಋಷಿಗಳೂ ಶಿಷ್ಯರು ಪ್ರಶಿಷ್ಯರೊಡನೆ ಬಂದರು. ಇವರೆಲ್ಲರೂ ಬ್ರಹ್ಮನನ್ನು ಸಾಕ್ಷಾತ್ಕರಿಸಿದವರು. ವೇದವನ್ನು ಚೆನ್ನಾಗಿ ತಿಳಿದಿರತಕ್ಕವರು.

೧೩. ಇವರೆಲ್ಲರೂ ಲೋಕಕ್ಕೆ ಅನುಗ್ರಹ ಮಾಡುವ ಬುದ್ಧಿಯನ್ನು ಹೊಂದಿರತಕ್ಕವರು. ಪರರಿಗೆ ಉಪಕಾರ ಮಾಡುವುದರಲ್ಲಿಯೇ ಆಸಕ್ತರು. ಯಾವಾಗಲೂ ಪರರಿಗೆ ಪ್ರಿಯವನ್ನೇ ಮಾಡುತ್ತಿರುವವರು. ಪಂಚಯಜ್ಞಗಳನ್ನು ಯಾವಾಗಲೂ ಮಾಡುವುದರಲ್ಲಿಯೇ ಆಸಕ್ತರು.

೧೪. ಉತ್ತಮವಾದ ಗುಣಗಳಿಂದ ಕೂಡಿರುವ ಈ ಋಷಿಗಳೆಲ್ಲರೂ ಸೇರಿಕೊಂಡು ನೈಮಿಷಾರಣ್ಯದಲ್ಲಿ ಹನ್ನೆರಡುವರ್ಷಕಾಲದ ಯಾಗವನ್ನು ಮಾಡಲು ಮೊದಲು ಮಾಡಿದರು. ಆಗ ಅಲ್ಲಿಗೆ ಸೂತನು ಬಂದನು.

೧೫. ಜಟೆಯನ್ನೂ ನಾರು ಬಟ್ಟೆಯನ್ನೂ ಧರಿಸಿಕೊಂಡು ಶಾಂತನಾಗಿ ಸಂತೋಷಗೊಂಡು ಇರುವ ಆ ಸೂತನು ಎಲ್ಲಾ ತತ್ವಗಳನ್ನೂ ಬಲ್ಲವನಾಗಿದ್ದನು.

ಅಶೇಷಗುಣಸಂಪನ್ನಮಶೇಷಾನಂದಶೇವಧಿಂ ।
ಭಸ್ಮೋದ್ಧೂಳಿತಸರ್ವಾಂಗಂ ತ್ರಿಪುಂಡ್ರಾಂಕಿತಮಸ್ತಕಂ ॥ ೧೬ ॥

ರುದ್ರಾಕ್ಷಮಾಲಾಭರಣಂ ಜಟಾಮುಕುಟಮಂಡಿತಂ ।
ಸರ್ವಶಾಸ್ತ್ರಾರ್ಥತತ್ತ್ವಜ್ಞಂ ಸರ್ವಭೂತಹಿತೇ ರತಂ ॥ ೧೭ ॥

ಜಿತೇಂದ್ರಿಯಂ ಜಿತಕ್ರೋಧಂ ಜೀವನ್ಮುಕ್ತಂ ಜಗದ್ಗುರುಂ ।
ವ್ಯಾಸಪ್ರಸಾದಸಂಪನ್ನಂ ವ್ಯಾಸವದ್ವಿಗತಸ್ಪೃಹಂ ॥ ೧೮ ॥

ವೇದಮಾರ್ಗೇ ಸದಾ ನಿಷ್ಠಂ ವೇದಮಾರ್ಗಪ್ರವರ್ತಕಂ ।
ನೈಮಿಷೇಯಾ ಮಹಾತ್ಮಾನೋ ಮಹಾಭಕ್ತಿಸಮನ್ವಿತಾಃ ।
ಚಿತ್ರಾಃ ಶ್ರೋತುಂ ಕಥಾಸ್ತತ್ರ ಪರಿವವ್ರುಸ್ಸಮನ್ವಿತಾಃ । ॥ ೧೯ ॥

---

೧೬-೧೮. ಆ ಸೂತನು ಸಮಸ್ತವಾದ ಗುಣಗಳಿಂದ ಕೂಡಿಕೊಂಡಿದ್ದನು. ಪೂರ್ಣಾನಂದಕ್ಕೆ ಸ್ಥಾನವಾಗಿದ್ದನು. ಮೈಗೆಲ್ಲವೂ ಬೂದಿಯನ್ನು ಬಳಿದುಕೊಂಡಿದ್ದನು. ಹಣೆಯಲ್ಲಿ ಮೂರು ಎಳೆಯಾಗಿ ವಿಭೂತಿಯನ್ನಿಟ್ಟುಕೊಂಡಿದ್ದನು. ರುದ್ರಾಕ್ಷಿ ಮಾಲೆಗಳನ್ನು ಹಾಕಿಕೊಂಡಿದ್ದನು. ಜಟೆಯನ್ನು ತಲೆಯಮೇಲುಗಡೆಗೆ ಎತ್ತಿ ಕಟ್ಟಿಕೊಂಡಿದ್ದನು ಎಲ್ಲಾ ಶಾಸ್ತ್ರಗಳ ತತ್ವವನ್ನೂ ತಿಳಿದಿದ್ದನು. ಎಲ್ಲಾ ಪ್ರಾಣಿಗಳಿಗೂ ಒಳ್ಳೆಯದಾಗಬೇಕೇಂದೇ ಪ್ರಯತ್ನಿಸುತ್ತಿರುವನು. ಇಂದ್ರಿಯಗಳನ್ನು ಜಯಿಸಿದ್ದನು. ಕೋಪವನ್ನು ಬಿಟ್ಟಿದ್ದನು. ಅವನು ಜೀವದಿಂಡ ಇರುವಾಗಲೇ ಮುಕ್ತಿಯನ್ನು ಹೊಂದಿದ್ದನು. ಜಗತ್ತಿಗೇ ಗುರುವಾಗಿದ್ದನು. ವ್ಯಾಸನ ಅನುಗ್ರಹವು ಅವನಲ್ಲಿ ಪೂರ್ಣವಾಗಿ ಉಂಟಾಗಿದ್ದಿತು. ವ್ಯಾಸನಂತೆ ಆಸೆಯನ್ನು ಬಿಟ್ಟುಬಿಟ್ಟಿದ್ದನು. ವೇದೋಕ್ತವಾದ ದಾರಿಯಲ್ಲಿಯೇ ನಡೆಯುತ್ತಿದ್ದನು. ವೇದದ ರೀತಿಯ ನಡತೆಯನ್ನು ಎಲ್ಲರಿಗೂ ಬೋಧಿಸಿ ಆ ರೀತಿಯಾಗಿ ನಡೆಯುವಂತೆ ಮಾಡುತ್ತಿದ್ದನು.

೧೯. ಬಂದ ಈತನನ್ನು ನೋಡಿ ಆ ನೈಮಿಷಾರಣ್ಯದಲ್ಲಿದ್ದ ಮಹಿಮರಾದ ಋಷಿಗಳೆಲ್ಲರೂ ಬಹು ಭಕ್ತಿಯಿಂದ ಕೂಡಿಕೊಂಡು ಬಗೆಬಗೆಯಾದ ಕಥೆಗಳನ್ನು ಕೇಳಲು ಎಲ್ಲರೂ ಗುಂಪು ಗುಂಪಾಗಿ ಅವನನ್ನು ಸುತ್ತುಗಟ್ಟಿಕೊಂಡರು.

ಅಭಿವಾದ್ಯ ಮುನೀಂಸ್ತಾಂಸ್ತು ಸರ್ವಾನೇವ ಕೃತಾಂಜಲಿಃ ।
ಅಪ್ಯಚ್ಛತ್ಸ ತಪೋವೃದ್ಧಿಮೃಷಿಭಿಶ್ಚಾಭಿನಂದಿತಃ ॥ ೨೦ ॥

ಅಥ ತೇಷೂಪವಿಷ್ಟೇಷು ಸರ್ವೇಷ್ವೇವ ತಪಸ್ವಿಸು ।
ನಿರ್ದಿಷ್ಟಮಾಸನಂ ಭೇಜೇ ವಿನಯಾದ್ರೌಮಹರ್ಷಣಿಃ ॥ ೨೧ ॥

ಸುಖಾಸೀನಂ ತತಸ್ತಂ ತು ವಿಶ್ರಾನ್ತಿಮುಪಲಭ್ಯ ಚ ।
ಶ್ರೋತುಕಾಮಾಃ ಕಥಾಂ ಪುಣ್ಯಾಮಿದಂ ವಚನಮಬ್ರುವನ್ ॥ ೨೨ ॥

॥ ಋಷಯ ಊಚುಃ ॥

ಅಷ್ಟಾದಶಪುರಾಣಾನಿ ಸೇತಿಹಾಸಾನಿ ಕೃತ್ಸ್ನಶಃ ।
ತ್ವತ್ತಶ್ಶ್ರುತಾನ್ಯಶೇಷಾಣಿ ಶ್ರೋತವ್ಯಾಂಶೋ ನ ವಿದ್ಯತೇ ॥ ೨೩ ॥

॥ ಸೂತ ಉವಾಚ ॥

ಶೃಣ್ವನ್ತು ಮುನಯಸ್ಸರ್ವೇ ಶ್ರೋತವ್ಯಾಂಶಂ ಮನೋಗತಂ ।
ಯಾವತ್ ಜ್ಞಾನಂ ಪ್ರವಕ್ಷ್ಯಾಮಿ ಯುಷ್ಮಾಕಂ ವಿದುಷಾಂ ಪುರಃ ॥ ೨೪ ॥

---

೨೦. ಆ ಸೂತನು ಎಲ್ಲಾ ಋಷಿಗಳಿಗೂ ನಮಸ್ಕರಿಸಿ ಕೈಮುಗಿದು ಅವರನ್ನು ತಪಸ್ಸು ವೃದ್ಧಿಯಾಗುವುದೇ? ಎಂದು ಕುಶಲ ಪ್ರಶ್ನೆಯನ್ನು ಮಾಡಲು ಅವರೆಲ್ಲರೂ ಸಂತೋಷಿಸಿ ಶ್ಲಾಘಿಸಿದರು.

೨೧. ಆಗ ಎಲ್ಲಾ ಋಷಿಗಳೂ ಕುಳಿತುಕೊಳ್ಳಲು ಈ ರೋಮಹರ್ಷಣನ ಮಗನಾದ ಸೂತನು ತನಗೋಸ್ಕರ ಹಾಕಿರತಕ್ಕ ಆಸನದಲ್ಲಿ ಕುಳಿತುಕೊಂಡನು.

೨೨. ಆ ಸೂತನು ಸುಖವಾಗಿ ಕುಳಿತುಕೊಂಡು ಶ್ರಮಪರಿಹಾರವನ್ನು ಮಾಡಿಕೊಂಡನು. ಇದನ್ನು ತಿಳಿದು ಆ ಋಷಿಗಳು ಪುಣ್ಯಕಥೆಗಳನ್ನು ಕೇಳಲಿಚ್ಛೆಯುಳ್ಳವರಾಗಿ ಅವನನ್ನು ಕುರಿತು ಇಂತೆಂದರು.

೨೩. ಋಷಿಗಳು ಹೇಳಿದರು-ಎಲೈ ಸೂತನೆ! ಹದಿನೆಂಟು ಪುರಾಣಗಳನ್ನು ಕಥೆಗಳೊಂದಿಗೆ ಪೂರ್ಣವಾಗಿ ನಿನ್ನಿಂದಲೇ ಕೇಳಿದ್ದೇವೆ. ಇನ್ನು ಕೇಳತಕ್ಕ ಭಾಗವು ಉಳಿದಿಲ್ಲ.

೨೪. ಸೂತನು ಹೇಳಿದನು–ಎಲೈ ಋಷಿಗಳಿರ! ನಿಮ್ಮ ಮನಸ್ಸಿನಲ್ಲಿರುವ ಕೇಳಬೇಕಾದ ವಿಷಯವನ್ನು ಕೇಳಿರಿ. ವಿದ್ವಾಂಸರಾದವರ ಮುಂದೆ ನನಗೆ ತಿಳಿದ ಮಟ್ಟಿಗೆ ಹೇಳುತ್ತೇನೆ.

ಬ್ರಾಹ್ಮಂ ಪುರಾಣಂ ಪ್ರಥಮಂ ಪಾದ್ಮಂ ವೈಷ್ಣವಮೇವ ಚ ।
ಶೈವಂ ಭಾಗವತಂ ಚೈವ ಭವಿಷ್ಯಂ ನಾರದೀಯಕಂ ॥ ೨೫ ॥

ಮಾರ್ಕಂಡೇಯಂ ತಥಾಗ್ನೇಯಂ ಬ್ರಹ್ಮವೈವರ್ತಮೇವ ಚ ।
ಲೈಂಗಂ ತಥೈವ ವಾರಾಹಂ ಸ್ಕಾಂದಂ ವಾಮನಮೇವ ಚ ॥ ೨೬ ॥

ಕೌರ್ಮಂ ಮಾತ್ಸ್ಯಂ ಗಾರುಡಂ ಚ ಬ್ರಹ್ಮಾಂಡಂ ಚ ತತಃ ಪರಂ ।
ಆದ್ಯೇಷ್ವಷ್ಟಾದಶಸ್ವೇಷು ಪುರಾಣೇಷು ಮಹತ್ಸು ಚ ॥ ೨೭ ॥

ದ್ವಿತೀಯಂ ಪಾದ್ಮಮಿತ್ಯುಕ್ತಂ ಪುರಾಣಂ ರೌಮಹರ್ಷಣಂ ।
ಪಂಚಪಂಚಾಶದಿತ್ಯುಕ್ತಂ ಸಹಸ್ರಂ ಗ್ರಂಥಸಂಖ್ಯಯಾ ॥ ೨೮ ॥

ತಸ್ಮಿನ್ ಪುರಾಣೇ ಹಿ ಮಯಾಮಾಘಮಾಸಸ್ಯ ವೈಭವಃ ।
ಸಂಕ್ಷೇಪಾದ್ವೋಗ್ರತೋ ವಿಪ್ರಾ ವರ್ಣಿತೋ ನ ತು ವಿಸ್ತರಾತ್ ॥ ೨೯ ॥

॥ ಋಷಯ ಊಚುಃ ॥

ತಸ್ಮಿನ್ ಪುರಾಣೇ ಭವತಾ ಮಾಘಮಾಸಸ್ಯ ವೈಭವಃ ।
ಅಗ್ರತೋ ವರ್ಣಿತೋಸ್ಮಾಕಂ ತದ್ಭೂಯೋ ವಕ್ತುಮರ್ಹಸಿ ॥ ೩೦ ॥

---

೨೫-೨೮. ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ಶಿವಪುರಾಣ, ಭಾಗವತ, ಭವಿಷ್ಯಪುರಾಣ, ನಾರದೀಯಪುರಾಣ, ಮಾರ್ಕಂಡೇಯಪುರಾಣ, ಅಗ್ನಿಪುರಾಣ, ಬ್ರಹ್ಮವೈವರ್ತಪುರಾಣ, ಲಿಂಗಪುರಾಣ, ವರಾಹಪುರಾಣ, ಸ್ಕಾಂದಪುರಾಣ, ವಾಮನಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ಗರುಡಪುರಾಣ, ಬ್ರಹ್ಮಾಂಡಪುರಾಣ, ಈ ರೀತಿಯಾಗಿ ಪುರಾಣಗಳು ಹದಿನೆಂಟಿವೆ ಪೂರ್ವದಿಂದಲೂ ಬಂದ ಈ ಹದಿನೆಂಟು ಮಹಾಪುರಾಣಗಳಲ್ಲಿ ಎರಡನೆಯ ಪುರಾಣವು ಪಾದ್ಮಪುರಾಣವು. ಅದು ಬಹು ಸಂತೋಷಜನಕವಾದುದು. ಅದು ಐವತ್ತೈದು ಸಾವಿರಗ್ರಂಥಗಳುಳ್ಳದ್ದೆಂದು ಪರಿಗಣಿತವಾಗಿದೆ.

೨೯. ಆ ಪಾದ್ಮಪುರಾಣದಲ್ಲಿರುವ ಮಾಘಮಾಸದ ಮಹಿಮೆಯನ್ನು ನಾನು ನಿಮಗೆ ಸಂಕ್ಷೇಪವಾಗಿ ಹೇಳಿದ್ದೇನೆ. ವಿಸ್ತಾರವಾಗಿ ಹೇಳಲಿಲ್ಲ.

೩೦. ಋಷಿಗಳು ಹೇಳಿದರು—ಆ ಪಾದ್ಮಪುರಾಣದ ಮಾಘಮಾಸದ ವೈಭವವನ್ನು ನಮಗೆ ಹೇಳಿದ್ದೀಯೆ ! ಅದನ್ನೇ ಮತ್ತೊಂದು ಬಾರಿ ಹೇಳು.

ಏತೇಷಾಮತ್ರ ಸರ್ವೇಷಾಂ ವಿಸ್ಮೃತಪ್ರಾಯ ಏವ ನಃ ।
ಇದಾನೀಮಪಿ ನೇದೀಯಾನ್ಮಾಘಸ್ತಸ್ಮಾತ್ಕೃಪಾನಿಧೇ ।
ತದ್ಬ್ರೂಯಾಃ ಶ್ರೋತುಕಾಮಾನಾಮಸ್ಮಾಕಂ ವರ್ಣಯಾಗ್ರತಃ　　|| ೩೧ ||

|| ವ್ಯಾಸ ಉವಾಚ ||

ಮುನೀನಾಂ ವಚನಂ ಶ್ರುತ್ವಾ ಸೂತಃ ಪೌರಾಣಿಕೋಽಬ್ರವೀತ್　　|| ೩೨ ||

|| ಸೂತ ಉವಾಚ ||

ಸಾಧು ಸಾಧು ಮಹಾಪ್ರಾಜ್ಞಾಃ ಸತ್ಪ್ರಸಂಗಃ ಸಮೀರಿತಃ ।
ಆಲೋಕ್ಯ ಮಾಘಮಾಸನ್ನಮೇತದರ್ಥಮಿಹಾಗತಃ　　|| ೩೩ ||

ವಕ್ತುಂ ವೋ ಮಾಘಮಾಹಾತ್ಮ್ಯಮಿತಿ ಮತ್ವಾಗತೋಽಸ್ಮ್ಯಹಂ ।
ಭವದ್ಭಿಶ್ಚ ಮುನಿಶ್ರೇಷ್ಠಾಃ ಪ್ರಶ್ನಸ್ತತ್ಸದೃಶಃ ಕೃತಃ　　|| ೩೪ ||

---

೩೧. ಆ ಮಹಿಮೆಯ ವಿಷಯವು ನಮ್ಮೆಲ್ಲರಿಗೂ ಮರೆತು ಹೋದಂತೆಯೇ ಆಗಿರುವುದು. ಈಗಲೂ ಕೂಡ ಆ ಮಾಘಮಾಸವು ಹತ್ತಿರವಾಗಿದೆ. ಎಲೈ ಕೃಪಾನಿಧಿಯೆ ! ಅದನ್ನೇ ಮತ್ತೆ ನಮ್ಮೆದುರಿಗೆ ಹೇಳು. ನಮಗೆ ಕೇಳಬೇಕೆಂಬ ಇಚ್ಛೆಯಿದೆ.

೩೨. ವ್ಯಾಸನು ಹೇಳಿದನು-ಮುನಿಗಳ ಈ ಮಾತನ್ನು ಕೇಳಿ ಪೌರಾಣಿಕನಾದ ಸೂತನು ಹೇಳಿದನು.

೩೩. ಸೂತನು ಹೇಳಿದನು-ಎಲೈ ಪ್ರಾಜ್ಞರಿರ ! ನೀವು ಕೇಳಿದುದು ಚೆನ್ನಾಗಿದೆ. ಸಾಧು. ಸಾಧು. ಒಳ್ಳೆಯ ವಿಷಯವನ್ನೇ ಕೇಳಿದಿರಿ. ಮಾಘಮಾಸವು ಹತ್ತಿರವಾಗಿರುವುದನ್ನು ನೋಡಿಯೇ ನಾನು ಇಲ್ಲಿಗೆ ಬಂದಿದ್ದೇನೆ.

೩೪. ನಿಮ್ಮಗಳಿಗೆ ಮಾಘಮಾಸದ ಮಹಿಮೆಯನ್ನು ಹೇಳಬೇಕೆಂದೇ ನಾನು ಇಲ್ಲಿಗೆ ಬಂದಿದ್ದೇನೆ. ಎಲೈ ಋಷಿಗಳಿರಾ ! ಆ ನನ್ನ ಆಲೋಚನೆಗೆ ಸರಿಯಾಗಿ ನೀವೂ ಪ್ರಶ್ನಿಮಾಡಿದಿರಿ.

ತಸ್ಮಾದ್ಭೂಯಃ ಪ್ರವಕ್ಷ್ಯಾಮಿ ಮುನಯಃ ಶೃಣುತಾದರಾತ್ ।
ರೋಮಹರ್ಷಣನಾಮ್ನಶ್ಚ ಶಿಷ್ಯತಾಯಾಶ್ಚ ಮದ್ಗುರೋಃ ॥ ೩೫ ॥

ನಾರಾಯಣಾಂಶತಾಯಾಶ್ಚ ಸದೃಶಂ ಪ್ರಬ್ರವೀಮಿ ವಃ ।
ಶ್ರೋತೃಪ್ರರೋಚನಾರ್ಥಾಯ ಏಕತ್ರ ಜ್ಞಾಪನಾಯ ಚ ॥ ೩೬ ॥

ಪುರಾಣಾನಾಂ ಚ ಬಾಹುಲ್ಯಾತ್ ಸರ್ವತ್ರೋದ್ಧೃತ್ಯ ಸಾರವತ್ ।
ಕೇಷು ಕೇಷು ಪುರಾಣೇಷು ವರ್ಣಿತಂ ಬಹುಧಾ ಬುಧೈಃ ॥ ೩೭ ॥

ಮಾಘಸ್ಯ ಮಹಿಮಾನಂ ತಮುದ್ಧೃತ್ಯೋದ್ಧೃತ್ಯಸಾರವತ್ ।
ದಿಲೀಪಾಯೋಕ್ತವಾನ್ ಪೂರ್ವಂ ವಸಿಷ್ಠೋ ಬ್ರಹ್ಮನಂದನಃ ॥ ೩೮ ॥

ತದಹಂ ಭವತಾಮಗ್ರೇ ಸಮಾಸಾದ್ವ್ಯಾಸಯೋಗತಃ ।
ಬ್ರವೀಮಿ ಮಾಘಮಾಹಾತ್ಮ್ಯಂ ಯೂಯಂ ಶೃಣ್ವಂತ್ವನಾರತಂ ॥ ೩೯ ॥

---

೩೫-೩೯. ಆದ್ದರಿಂದಲೇ ನಿಮಗೆ ವಿಶ್ವಾಸದಿಂದ ಮತ್ತೆ ಹೇಳುತ್ತೇನೆ. ನನ್ನ ಗುರುವಾದ ರೋಮಹರ್ಷಣನಿಗೆ ಶಿಷ್ಯನಾಗಬೇಕಾದರೆ ಯಾವ ರೀತಿಯಾದ ಯೋಗ್ಯತೆಯಿರಬೇಕೋ ಆ ರೀತಿಯಾದ ಯೋಗ್ಯತೆಯಿಂದಲೂ ಅವನು ನಾರಾಯಣನ ಅಂಶವಾಗಿರುವುದಕ್ಕೆ ತಕ್ಕಂತೆಯೂ ಯೋಚಿಸಿ ಹೇಳುತ್ತೇನೆ. ಕೇಳತಕ್ಕವರಿಗೆ ಆಸೆ ಹುಟ್ಟುವುದಕ್ಕೂ ಒಂದೇ ಕಡೆಯಲ್ಲಿ ಎಲ್ಲವೂ ತಿಳಿಯುವುದಕ್ಕೋಸ್ಕರವೂ ಪುರಾಣಗಳು ಬಹುವಾಗಿರುವುದರಿಂದ ಅವುಗಳಲ್ಲಿ ಸಾರವಾದುದನ್ನು ತೆಗೆದು ಹೇಳುತ್ತೇನೆ. ವಿದ್ವಾಂಸರಾಗಿರತಕ್ಕವರು ಯಾವ ಯಾವ ಪುರಾಣಗಳಲ್ಲಿ ಎಷ್ಟೆಷ್ಟು ಬಗೆಯಾಗಿ ವರ್ಣಿಸಿರುವರೋ ಆ ಮಾಘಮಾಸದ ಮಹಿಮೆಯ ಸಾರವನ್ನೆಲ್ಲಾ ಸೇರಿಸಿ ಬ್ರಹ್ಮನ ಮಗನಾದ ವಸಿಷ್ಠನು ದಿಲೀಪನಿಗೆ ಪೂರ್ವದಲ್ಲಿ ಹೇಳಿರುವನು. ಅದನ್ನೇ ನಾನು ನಿಮಗೆ ವಿಸ್ತರಿಸುವ ಜಾಗವಲ್ಲಿ ವಿಸ್ತರಿಸಿಯೂ ಸಂಕ್ಷೇಪಿಸುವಲ್ಲಿ ಸಂಕ್ಷೇಪಿಸಿಯೂ ಹೇಳುತ್ತೇನೆ. ಇಂತಹ ಮಾಘಮಾಸದ ಮಹಿಮೆಯನ್ನು ನೀವು ಸಾವಧಾನದಿಂದ ಕೇಳಿರಿ.

॥ ವ್ಯಾಸ ಉವಾಚ ॥

ಇತ್ಯಗ್ರತೋ ಮುನೀಂದ್ರಾಣಾಮುದೀರ್ಯ ವಿನಯೋಜ್ವಲಃ ।
ವಕ್ತುಮಾರಭತೇ ದೇವಂ ನಮಸ್ಕೃತ್ಯ ಪಿನಾಪಿನಂ ॥ ೪೦ ॥

॥ ಸೂತ ಉವಾಚ ॥

ಓಂ ನಮೋಽಹಂಪದಾರ್ಥಾಯ ಪರಬ್ರಹ್ಮಸ್ವರೂಪಿಣೇ ।
ನಮೋ ಹಿರಣ್ಯಗರ್ಭಾಯ ಹರಯೇ ಶಂಕರಾಯ ಚ ।
ಸರಸ್ವತ್ಯೈ ನಮೋ ನಿತ್ಯಂ ವಿಘ್ನೇಶಾಯ ನಮೋ ನಮಃ ॥ ೪೧ ॥

ಪಾರಾಶರ್ಯಂ ಪರಮಪುರುಷಂ ವಿಶ್ವವೇದೈಕಯೋನಿಂ ।
ವಿದ್ಯಾಧಾರಂ ವಿಮಲಮನಸಂ ವೇದವೇದಾಂತವೇದ್ಯಂ ।
ಶಶ್ವಚ್ಛಾಂತಂ ಶಮಿತವಿಷಯಂ ಶುದ್ಧಬುದ್ಧಿಂ ವಿಶಾಲಂ ।
ವೇದವ್ಯಾಸಂ ವಿಮಲಯಶಸಂ ಸರ್ವದಾಹಂ ನಮಾಮಿ ॥ ೪೨ ॥

---

೪೦. ವ್ಯಾಸನು ಹೇಳಿದನು-ಆ ಸೂತನು ಈ ರೀತಿಯಾಗಿ ಮುನಿಗಳಿಗೆ ಹೇಳಿ ವಿನಯವಂತನಾಗಿ ಪಿನಾಕಿಯಾದ ಶಂಭುವನ್ನು ನಮಸ್ಕರಿಸಿ ಹೇಳಲು ಮೊದಲು ಮಾಡಿದನು.

೪೧. ಸೂತನು ಹೇಳಿದನು-ಅಹಂ ಎಂಬುದಾಗಿ ಹೇಳಿಸಿಕೊಳ್ಳುವ ಪರಬ್ರಹ್ಮಸ್ವರೂಪಿಯಾದ ಆ ತೇಜೋರೂಪನಿಗೆ ನಮಸ್ಕಾರವು. ಸರಸ್ವತಿಗೆ ನಮಸ್ಕಾರವು. ವಿಘ್ನೇಶ್ವರನಿಗೆ ನಮಸ್ಕಾರವು.

೪೨. ಪರಾಶರನ ಮಗನಾದ ಪರಮಪುರುಷನಾದ ವೇದಗಳೆಲ್ಲಕ್ಕೂ ಸ್ಥಾನವಾದ ವಿದ್ಯೆಗಳಿಗೆ ನೆಲೆಯಾದ ಪರಿಶುದ್ಧವಾದ ಮನಸ್ಸುಳ್ಳ ವೇದಗಳನ್ನೂ ವೇದಾಂತಗಳನ್ನೂ ಬಲ್ಲ ಯಾವಾಗಲೂ ಶಾಂತಿಮೂರ್ತಿಯಾಗಿರುವ ವಿಷಯ ಸುಖಗಳನ್ನು ನಿಗ್ರಹಿಸಿರುವ ನಿರ್ಮಲವಾದ ಬುದ್ಧಿಯುಳ್ಳ ವಿಶಾಲವಾದ ಮನಸ್ಸುಳ್ಳ ಪವಿತ್ರವಾದ ಯಶಸ್ಸುಳ್ಳ ವೇದವ್ಯಾಸನನ್ನು ಯಾವಾಗಲೂ ನಮಸ್ಕರಿಸುತ್ತೇನೆ.

॥ ವ್ಯಾಸ ಉವಾಚ ॥

ಇತಿ ದೇವನ್ನಮಸ್ಕೃತ್ಯ ಮುನೀಂದ್ರಾನಿದಮಬ್ರವೀತ್ । ॥ ೪೩ ॥

॥ ಸೂತ ಉವಾಚ ॥

ಇಮಂ ಪ್ರಶ್ನಂ ಸಮುದ್ದಿಶ್ಯ ದಿಲೀಪೋ ಭೂಭೃತಾಂ ವರಃ ।
ಪಪ್ರಚ್ಛ ಸ್ವಕುಲಾಚಾರ್ಯಂ ವಸಿಷ್ಠಂ ಮುನಿಪುನಿಗವಂ ॥ ೪೪ ॥

ತಸ್ಮೈ ತೇನ ಸಮಾಖ್ಯಾತಂ ಮಾಹಾತ್ಮ್ಯಂ ಮಹದದ್ಭುತಂ ।
ತದೇವಾಹಂ ಪ್ರವಕ್ಷ್ಯಾಮಿ ಭವತಾಮಿಹ ವಿಸ್ತರಾತ್ ॥ ೪೫ ॥

ಯಥಾವನ್ಮಾಘಮಾಹಾತ್ಮ್ಯಂ ವಕ್ತಾ ಶ್ರೋತಾ ಚ ದುರ್ಲಭಃ ।
ಸುಲಭಾಶ್ಚ ವಯಂ ಯೂಯಂ ವಕ್ತುಂ ಶ್ರೋತುಂ ಚ ತತ್ತ್ವತಃ ॥ ೪೬ ॥

---

೪೩. ವ್ಯಾಸನು ಹೇಳಿದನು-ಈ ರೀತಿಯಾಗಿ ದೇವತೆಗಳನ್ನು ನಮಸ್ಕರಿಸಿ ಮುನಿಗಳನ್ನು ಕುರಿತು ಇಂತೆಂದನು.

೪೪. ಸೂತನು ಹೇಳಿದನು-ರಾಜಶ್ರೇಷ್ಠನಾದ ದಿಲೀಪನು ಇದೇ ಪ್ರಶ್ನೆಯನ್ನು ಉದ್ದೇಶಿಸಿ ತನ್ನ ಕುಲಕ್ಕೆ ಆಚಾರ್ಯನಾದ ವಸಿಷ್ಠನನ್ನು ಕುರಿತು ಇಂತೆಂದು ಪ್ರಶ್ನಿಸಿದನು.

೪೫. ಆ ದಿಲೀಪನಿಗೆ ಆ ವಸಿಷ್ಠನು ಆ ಅದ್ಭುತವಾದ ಮಾಘದ ಮಹಿಮೆಯನ್ನು ಹೇಳಿದನು. ಅದನ್ನೇ ನಾನೂ ನಿಮಗೆ ವಿಸ್ತಾರವಾಗಿ ಹೇಳುತ್ತೇನೆ.

೪೬. ಯೋಚಿಸಿ ನೋಡಿದರೆ ನಿಶ್ಚಯವಾಗಿಯೂ ಈ ಮಾಘ ಮಹಿಮೆಯನ್ನು ಹೇಳಬಲ್ಲವನೂ ಸಿಕ್ಕುವುದಿಲ್ಲ. ಆದರೆ ಆ ರೀತಿಯಾದ ಶ್ರದ್ಧೆಯೂ ಜ್ಞಾನವೂ ಉಳ್ಳ ನಾವು ಇಲ್ಲಿ ಸುಲಭವಾಗಿ ಸೇರಿದ್ದೇವೆ.

ಸ ಮಾಘಮಾಸೋಽಖಿಲಪಾಪಶತ್ರುಃ
ಸೌಭಾಗ್ಯಹೇತುಃ ಖಲು ವರ್ಣ್ಯತೇಽದ್ಯ ।
ನಿಮಜ್ಜನಾದ್ಯತ್ರ ವಿಭಾತಕಾಲೇ
ನರಾಃ ಸುವರ್ಲೋಕಕುಟುಂಬಿನಸ್ಸ್ಯುಃ ॥ ೪೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಮಾಘ ಮಾಸ ಮಾಹಾತ್ಮ್ಯೇ ಋಷಿಪ್ರಶ್ನೋ ನಾಮ ಏಕೋನವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೪೭. ಆ ಮಾಘಮಾಸವೆಂಬುದು ಪಾಪಗಳಿಗೆಲ್ಲಾ ಶತ್ರುವು. ಜನರಿಗೆ ಸೌಭಾಗ್ಯಕ್ಕೆ ಕಾರಣವು. ಅಂತಹ ಮಾಘವನ್ನು ವರ್ಣಿಸುತ್ತೇನೆ. ಆ ಮಾಘಮಾಸದಲ್ಲಿ ಸೂರ್ಯೋದಯ ಕಾಲದಲ್ಲಿ ನರರು ಸ್ನಾನಮಾಡಿದರೆ ಪಾಪಗಳನ್ನು ಕಳೆದುಕೊಂಡು ಸ್ವರ್ಗಲೋಕದಲ್ಲಿ ಮನೆಗಳನ್ನು ಮಾಡಿಕೊಳ್ಳುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಮಾಘ ಮಾಸದ ಮಹಿಮೆಯಲ್ಲಿ ಋಷಿಪ್ರಶ್ನ ಎಂಬ ಇನ್ನೂರ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ವಿಂಶತ್ಯಧಿಕದ್ವಿಶತತಮೋಽಧ್ಯಾಯಃ



|| ಸೂತ ಉವಾಚ ||

ಅಧ್ವರಾವಭೃತಸ್ನಾತ ಋಷಿಭಿಃ ಕೃತಮಂಗಳಃ ।
ಪೂಜಿತೋ ನಾಗರೈಸ್ಸರ್ವೈರ್ದಿಲೀಪೋ ಭೂಭೃದುತ್ತಮಃ || ೧ ||

ಅಯೋಧ್ಯಾಯಾಂ ಸ ನೃಪತಿಃ ಪ್ರಜ್ಞಾಸಂರಕ್ಷಣೇ ರತಃ ।
ಕಾಲೇ ಕಾಲೇ ಪ್ರಜಾಂ ರಕ್ಷನ್ ವಸಿಷ್ಠಾನುಮತೇ ಸ್ಥಿತಃ || ೨ ||

ಮೃಗಯಾರಸಿಕೋ ಭೂತ್ವಾ ಸ್ವಪುರಾನ್ನಿರ್ಗತೋ ಬಹಿಃ ।
ಕೌತೂಹಲಸಮಾವಿಷ್ಟ ಆಖೇಟವ್ಯೂಹಸಂವೃತಃ || ೩ ||

---

## ಇನ್ನೂರ ಇಪ್ಪತ್ತನೆಯ ಅಧ್ಯಾಯವು



೧. ಸೂತನು ಹೇಳಿದನು-ದಿಲೀಪನು ಯಾಗಮಾಡಿ ಅವಭೃತ ಸ್ನಾನ ಮಾಡಿದಮೇಲೆ ಋಷಿಗಳು ಸ್ವಸ್ತಿವಾಚನವನ್ನು ಮಾಡಿದರು. ಮತ್ತು ಪಟ್ಟಣಿಗರೂ ಕೂಡ ಇಂತಹ ಉತ್ತಮನಾದ ರಾಜನನ್ನು ಯಜ್ಞಮಾಡಿದಮೇಲೆ ಕಂಡು ಗೌರವಿಸಿದರು.

೨. ಈ ರೀತಿಯಾಗಿ ಗೌರವಿತನಾದ ಆ ರಾಜನು ಪ್ರಜೆಗಳನ್ನು ರಕ್ಷಿಸುವುದರಲ್ಲಿ ಆಸಕ್ತಿಯುಳ್ಳವನಾಗಿ ಯಾವ ಕಾಲಕ್ಕೆ ಯಾವುದು ಬೇಕೋ ಅದನ್ನು ಒದಗಿಸಿಕೊಡುತ್ತ ಕಷ್ಟಗಳನ್ನು ಪರಿಹಾರಮಾಡುತ್ತ ವಸಿಷ್ಠನ ಮಾತಿನಂತೆ ರಾಜ್ಯಭಾರಮಾಡಿಕೊಂಡಿದ್ದನು.

೩. ಒಂದುಸಾರಿ ಬೇಟೆಯಾಡುವುದರಲ್ಲಿ ಆಸೆಪಟ್ಟವನಾಗಿ ಬೇಡರ ಪಡೆಯಿಂದ ಕೂಡಿಕೊಂಡು ತನ್ನ ಊರಿನಿಂದ ಹೊರಹೊರಟನು.

ಉಪಾನದ್ರೂಢಪಾದಶ್ಚ ನೀಲೋಷ್ಣೀಷೋ ಹರಿಚ್ಛದಃ ।
ಬದ್ಧಗೋಧಾಂಗುಳಿತ್ರಾಣೋ ಧನುಷ್ಪಾಣಿಃ ಶರೀ ನೃಪಃ ॥ ೪ ॥

ಬದ್ಧಕ್ಷೌದ್ರಾಸಿಧೇನುಶ್ಚ ತಥಾಭೂತೈಶ್ಚ ಪತ್ರಿಭಿಃ ।
ಕಂದರೇಷು ಸುರಮ್ಯೇಷು ವನೇಷು ವಿಪುಲೇಷು ಚ ॥ ೫ ॥

ಉಲ್ಲಂಘಿತಮಹಾಸ್ರೋತೋ ಯುವಾ ಪಂಚಾಸ್ಯವಿಕ್ರಮಃ ।
ತಥಾ ಕ್ರೀಡತಿ ತೈಸ್ಸಾರ್ಧಂ ಕುಂಜೇಷು ಮೃಗಯನ್ಮೃಗಾನ್ ॥ ೬ ॥

ಹನ್ಯತಾಂ ಹನ್ಯತಾಮೇಷ ಮೃಗೋ ವೇಗಾತ್ಪಲಾಯತೇ ।
ಇತಿ ಜಲ್ಪನ್ ಸ್ವಭೃತ್ಯೇಷು ಸ್ವಯಮುತ್ಪತ್ಯ ಹಂತಿ ಚ ॥ ೭ ॥

---

೪. ಕಾಲಿಗೆ ರಾಜಯೋಗ್ಯವಾದ ಕೆರವನ್ನು ಹಾಕಿಕೊಂಡು ಹಸುರಾದ ರುಮಾಲನ್ನು ಸುತ್ತಿಕೊಂಡು ಹಸುರು ಬಟ್ಟೆಗಳನ್ನು ಹಾಕಿಕೊಂಡು ಕೈಗಳಿಗೂ ಬೆರಳುಗಳಿಗೂ ಬಿಲ್ಲಿನೇಟು ಬೀಳದಂತೆ ಚರ್ಮದ ಚೀಲವನ್ನು ಹಾಕಿಕೊಂಡು ಕೈಯ್ಯಲ್ಲಿ ಬಿಲ್ಲುಬಾಣಗಳನ್ನು ಹಿಡಿದುಕೊಂಡಿದ್ದನು.

೫. ಸೊಂಟಕ್ಕೆ ಸಣ್ಣ ಕತ್ತಿಯನ್ನು ಕಟ್ಟಿಕೊಂಡಿದ್ದನು. ತನ್ನ ಜೊತೆಯಲ್ಲಿ ಬರುತ್ತಿರುವ ಕಾಲಾಳುಗಳೂ ತನ್ನಂತೆಯೇ ವೇಷಗಳನ್ನು ಧರಿಸುವಂತೆ ಹೇಳಿ ಹಾಗೆ ಮಾಡಿಸಿದ್ದನು.

೬. ಅಂತಹ ಆಳುಗಳೊಡನೆ ಕೂಡಿಕೊಂಡು ನದಿಯನ್ನು ದಾಟಿ ಯುವಕನಾಗಿಯೂ ಸಿಂಹದಂತೆ ಪರಾಕ್ರಮಿಯಾಗಿಯೂ ಇರುವ ಆ ರಾಜನು ಗುಹೆಗಳಲ್ಲಿಯೂ ಅಗಾಧವಾದ ಕಾಡಿನಲ್ಲಿಯೂ ಇರುವ ಮೃಗಗಳನ್ನು ಹೊಡೆಯುತ್ತ ಪೊದರುಗಳಲ್ಲಿರುವ ಮೃಗಗಳನ್ನು ಹುಡುಕುತ್ತ ಆ ಆಳುಗಳೊಡನೆ ಬೇಟೆಯಾಡುತ್ತಿದ್ದನು.

೭. ಹೊಡೆಯಿರಿ. ಹೊಡೆಯಿರಿ. ಈ ಮೃಗವು ವೇಗದಿಂದ ಓಡಿ ಹೋಗುತ್ತಿದೆ. ಎಂಬುದಾಗಿ ತನ್ನ ಆಳುಗಳಿಗೂ ಹೇಳುತ್ತ ತಾನು ಕೂಡ ಮೇಲೆ ಬಿದ್ದು ಹೊಡೆಯುತ್ತ ಬೇಟೆಯಾಡಿದನು.

ಇತಸ್ತತಃ ಪುನರ್ಯಾತಿ ಕ್ವಚಿತ್ಪರ್ಶ್ಯ ವನಸ್ಥಲೀಂ ।
ವಿಟಪ್ರೋಡ್ಡೀನಸಂತ್ರಸ್ತಲೀನಕೇಕಿಕುಲಾಕುಲಾಂ ॥ ೮ ॥

ಹರಿಣೀಗಣವಿತ್ರಸ್ತಾಂ ದ್ರವಚ್ಛಾಪ್ವದದಿಙ್ಮುಖಾಂ ।
ಕ್ವಚಿತ್ಫೇರವಫೇತ್ಕಾರತಾರಾರವವಿಭೀಷಣಾಂ ॥ ೯ ॥

ಖಡ್ಗಯೂಥೈಃ ಕ್ವಚಿಲ್ಲಕ್ಷ್ಮೀಂ ದಧಾನಾಮಿವ ದಂತಿನಾಂ ।
ಕ್ವಚಿದ್ವರಾಹದಂಷ್ಟ್ರಾಗ್ರಸಮುದ್ಧೃತಕಶೇರುಹಾಂ ॥ ೧೦ ॥

ಮೃಗಾರಿನಖನಿರ್ಭಿನ್ನದಂತಿಮೌಕ್ತಿಕಮುದ್ರಿತಾಂ ।
ಶಾರ್ದೂಲನಖನಿರ್ಭಿನ್ನರೋಹಿದ್ರಕ್ತಾರುಣಾಂ ಕ್ವಚಿತ್ ॥ ೧೧ ॥

ಪೀವರಸ್ತನಭಾರಾರ್ತತಪ್ತಕಿನ್ನರಭಾಮಿನೀಂ ।
ಅವರೋಧಾಜಿರಕ್ಷೋಣೀಂ ಸೂಚಯನ್ತೀಂ ಮನಃ ಕ್ವಚಿತ್ ॥ ೧೨ ॥

---

೮–೯. ಆ ರಾಜನು ಆ ವನದ ಜಾಗದಲ್ಲಿ ಹುಡುಕುತ್ತ ಓಡಾಡುತ್ತಿದ್ದನು. ಆಗ ಕಾಡಿನಲ್ಲಿ ಇವರನ್ನು ನೋಡಿ ನವಿಲುಗಳು ಮರಗಳಿಂದ ಹಾರಿ ಹೆದರಿಕೆಯಿಂದ ಅಲ್ಲಲ್ಲಿ ಅವಿತುಕೊಳ್ಳುತ್ತಿದ್ದುವು. ಜಿಂಕೆಗಳು ಹೆದರಿಕೊಂಡು ಓಡುತ್ತಿದ್ದುವು. ದುಷ್ಟಮೃಗಗಳು ದಿಕ್ಕುದಿಕ್ಕಿಗೆ ಓಡುತ್ತಿದ್ದುವು. ಕೆಲವು ಜಾಗದಲ್ಲಿ ನರಿಗಳು ಗೊಳ್ಳೆಂಬುದಾಗಿ ಗಟ್ಟಿಯಾಗಿಯೂ ಹೆದರಿಕೆಯಾಗುವಂತೆಯೂ ಕೂಗುತ್ತಿದ್ದುವು.

೧೦. ಖಡ್ಗಮೃಗಗಳು ಕೆಲವು ಜಾಗದಲ್ಲಿ ಆನೆಗಳಂತೆ ಆ ಕಾಡಿನಲ್ಲಿ ಶೋಭಿಸುತ್ತಿದ್ದುವು. ಕೆಲವು ಜಾಗದಲ್ಲಿ ಹಂದಿಗಳು ಕೋರೆ ಹಲ್ಲುಗಳಿಂದ ಕೊನ್ನಾರಿ ಗೆಡ್ಡೆಗಳನ್ನು ಮೇಲಕ್ಕೆತ್ತುತ್ತಿದ್ದುವು.

೧೧. ಕೆಲವು ಜಾಗಗಳಲ್ಲಿ ಸಿಂಹಗಳು ಆನೆಗಳ ತಲೆಯನ್ನು ಸೀಳಿರುವುದರಿಂದ ಅಲ್ಲಲ್ಲಿಯೇ ಮುತ್ತುಗಳು ಬಿದ್ದಿರುತ್ತಿದ್ದುವು. ಶಾರ್ದೂಲಗಳು ಉಗುರುಗಳಿಂದ ಜಿಂಕೆಗಳನ್ನು ಕೊಂದಿರುವುದರಿಂದ ಅಲ್ಲಲ್ಲಿಯೇ ರಕ್ತವು ಬಿದ್ದು ಭೂಮಿಯು ಕೆಂಪಾಗಿದ್ದಿತು.

೧೨ ದಪ್ಪವಾಗಿರುವ ಸ್ತನಗಳ ಭಾರದಿಂದ ತೊಂದರೆಪಟ್ಟುಕೊಂಡು ಕಷ್ಟಪಡುತ್ತಿರುವ ಕಿನ್ನರಸ್ತ್ರೀಯರು ಕೆಲವು ಜಾಗದಲ್ಲಿದ್ದರು. ಕೆಲವು ಜಾಗದಲ್ಲಿ ಅಂತಃಪುರದ ಸ್ತ್ರೀಯರ ಅಂಗಳದ ಭೂಮಿಯಿದ್ದಂತೆ ಮನಸ್ಸಿಗೆ ಆ ಕಾಡಿನ ಸ್ಥಳವು ಕಾಣುತ್ತಿದ್ದಿತು.

ಕ್ವಚಿದ್ವೃಕ್ಷಘನಚ್ಛಾಯಾಂ ಕ್ವಚಿತ್ಪುಷ್ಪಸುಗಂಧಿನೀಂ ।
ಕ್ವಚಿಲ್ಲತಾಗೃಹದ್ವಾರಾಂ ಭೃಂಗಮಾಲಾಸುತೋರಣಾಂ ॥ ೧೩ ॥

ಅರ್ಧನಿಸ್ಸೃತನಿರ್ಮೋಕನಾಗಭೀಮಮಹದ್ಬಿಲಾಂ ।
ವಿಲೀನಾಜಗರೈರ್ಭೀಮಾಂ ಕ್ವಚಿನ್ನಿರ್ಮುಕ್ತಸರ್ಪಿಣೀಂ ॥ ೧೪ ॥

ಕ್ವಚಿದ್ದಾವಾನಲಜ್ವಾಲಾಶಿಖಾವ್ಯಾಪ್ತಮಹೀರುಹಾಂ ।
ಕ್ವಚಿತ್ಕುಂಜವಿನಿರ್ಗಚ್ಛನ್ಮೃಗವ್ಯಾಘ್ರತ್ರಸದ್ಭಟಾಂ ॥ ೧೫ ॥

ಧಾವಚ್ಛಶಕವೃಂದೇಷು ದ್ರವಚ್ಛ್ವಾನಾರವಾಕುಲಾಂ ।
ವಿಮುಂಚರ್ಚ ಬಾಣನಿಕರಂ ಶಶಕೇಷು ಕ್ವಚಿತ್ ಕ್ವಚಿತ್ ॥ ೧೬ ॥

---

೧೩. ಕೆಲವು ಜಾಗದಲ್ಲಿ ಮರಗಳ ನೆರಳು ನಿಬಿಡವಾಗಿದೆ. ಕೆಲವು ಜಾಗದಲ್ಲಿ ಹೂವಿನ ವಾಸನೆಯಿಂದ ಮನೋಹರವಾಗಿದೆ. ಕೆಲವು ಜಾಗದಲ್ಲಿ ದುಂಬಿಗಳು ತೋರಣದ ಮಾಲೆಗಳಂತೆ ಇವೆ.

೧೪. ಕೆಲವೆಡೆಗಳಲ್ಲಿರುವ ಭೂಮಿಯು ಹಾವು ಅರ್ಧಪೊರೆಯನ್ನು ಬಿಟ್ಟು ಅದು ಬಿಲದಲ್ಲಿಯೇ ಸಿಕ್ಕಿಕೊಂಡಿರುವುದರಿಂದ ಭಯಂಕರವಾಗಿದೆ. ಕೆಲವು ಜಾಗದಲ್ಲಿ ಹೆಬ್ಬಾವುಗಳು ಅವಿತುಕೊಂಡಿವೆ. ಮತ್ತೆ ಕೆಲವು ಜಾಗದಲ್ಲಿ ಹಾವು ಹೊರಗೆಹೋಗಿದೆ.

೧೫. ಕೆಲವೆಡೆಗಳಲ್ಲಿ ಕಾಳ್ಗಿಚ್ಚಿನಿಂದ ಮರಗಳ ಕೊಂಬೆಗಳೆಲ್ಲವೂ ಉರಿಯುತ್ತಿವೆ. ಕೆಲವು ಜಾಗದಲ್ಲಿ ಪೊದರುಗಳಿಂದ ಹುಲಿಯೇ ಮುಂತಾದ ಮೃಗಗಳು ಹೊರಗೆ ಬರುತ್ತಿರುವುದರಿಂದ ಭಟರೆಲ್ಲರೂ ಹೆದುರುತ್ತಿದ್ದಾರೆ.

೧೬. ಕೆಲವೆಡೆಯಲ್ಲಿ ಮೊಲಗಳ ಗುಂಪು ಓಡುತ್ತಿರಲು ಅವುಗಳನ್ನು ಅಟ್ಟಿಸಿಕೊಂಡು ಹೋಗುತ್ತಿರುವ ನಾಯಿಗಳ ಶಬ್ದವು ಕೇಳಿಬರುತ್ತಿದೆ. ಕೆಲವು ಜಾಗದಲ್ಲಿ ಆ ಮೊಲಗಳಮೇಲೆ ಬಾಣಗಳನ್ನು ಬಿಡುತ್ತಿದ್ದಾರೆ.

ಪಲ್ವಲೇಷು ಜ ವಿಶ್ರಾನ್ತಃ ಕ್ವಚಿದ್ಯಾತಿ ವನಾಂತರಂ ।
ಏವಂ ಖೇಲತಿ ರಾಜೇಂದ್ರೇ ವ್ಯಾಧವರ್ಗೇ ಚ ವಲ್ಗತಿ ॥ ೧೭ ॥

ತತ್ರ ಕೋಽಪಿ ಜವಾತ್ತ್ರಸ್ತಃ ಸಾರಂಗೋ ನಿರ್ಗತೋ ವನಾತ್ ।
ಪಾದವೇಗಕ್ರಮಾಕ್ರಾನ್ತದುರ್ಗಮಾರ್ಗಮಹೀತಲಃ ॥ ೧೮ ॥

ಕದಾಚಿದ್ಗಗನಾರೂಢಃ ಕದಾಚಿದ್ಭೂಮಿಗೋ ಮೃಗಃ ।
ನ ತದಾಲಕ್ಷ್ಯತಾಂ ಯಾತಿ ಧನ್ವಿನಾಂ ಪೃಷ್ಠಗಾಮಿನಾಂ ॥ ೧೯ ॥

ಕ್ವಚಿದ್ದೃಷ್ಟಿಪಥಂ ಯಾತಿ ದರ್ಶನಾಗೋಚರಃ ಕ್ವಚಿತ್ ।
ಹಸ್ತಪ್ರಾಪ್ತಿಂ ಗತ ಇವ ಕ್ವಚಿದೇವ ತಿರೋಹಿತಃ ॥ ೨೦ ॥

ಅವ್ಯಗ್ರಚಿತ್ತೋ ನೃಪತಿಃ ಧನುಷ್ಪಾಣಿಸ್ತಮನ್ವಗಾತ್ ।
ಏವಂ ನೃಪಂ ತಮಾಕರ್ಷನ್ನಾಶಾಪಾಶವಶಂಗತಂ ॥ ೨೧ ॥

---

೧೭. ಕೆಲವು ಜಾಗದಲ್ಲಿ ಸ್ವಲ್ಪಹೊತ್ತು ನೀರಿರುವ ಕಟ್ಟೆಗಳ ಬಳಿಯಲ್ಲಿ ವಿಶ್ರಾಂತಿಯನ್ನು ಹೊಂದುತ್ತಿರುವರು. ಮತ್ತೆ ಸ್ವಲ್ಪಹೊತ್ತು ವನದ ಒಳಕ್ಕೆ ಹೋಗುವರು. ಈ ರೀತಿಯಾಗಿ ರಾಜನು ಇಂತಹ ಜಾಗಗಳಲ್ಲಿ ಬೇಟೆ ಯಾಡುತ್ತಿದ್ದನು. ಬೇಡರೂ ಕೂಡ ಅಲ್ಲೆಲ್ಲಾ ಓಡಾಡುತ್ತಿದ್ದರು.

೧೮. ಹೀಗೆ ಬೇಟೆಯಾಡುತ್ತಿರುವಾಗ ಒಂದು ಜಿಂಕೆಯು ಹೆದರಿಕೊಂಡು ಅಲ್ಲಿಂದ ವೇಗವಾಗಿ ಹೊರಟಿತು. ಅದು ಓಡುವಾಗ ತನ್ನ ಕಾಲಿನ ವೇಗದ ಹಾರುವಿಕೆಯಿಂದಲೇ ನಡೆಯಲು ಕಷ್ಟವಾದ ಜಾಗಗಳನ್ನು ದಾಟುತ್ತಿದ್ದಿತು.

೧೯. ಅದು ಒಂದುಸಾರಿ ಮೇಲಕ್ಕೆ ನೆಗೆಯುತ್ತಿದ್ದಿತು. ಒಂದುಸಾರಿ ನೆಲದಮೇಲೆ ಓಡುತ್ತಿದ್ದಿತು. ಹೀಗೆ ಮಾಡುತ್ತಿದ್ದುದರಿಂದ ಹಿಂದೆ ಹೋಗುತ್ತಿದ್ದ ಬಿಲ್ಲಾಳುಗಳ ಬಾಣಕ್ಕೆ ಗುರಿಯು ಸಿಕ್ಕುತ್ತಿರಲಿಲ್ಲ.

೨೦. ಹೀಗೆ ಓಡುತ್ತಿರುವಾಗ ಒಂದೊಂದು ಸಲ ಕಣ್ಣಿಗೆ ಕಾಣುತ್ತಿದ್ದಿತು. ಒಂದೊಂದು ಸಾರಿ ಕಣ್ಣಿಗೆ ಕಾಣುತ್ತಿರಲಿಲ್ಲ. ಒಂದುಸಾರಿ ಕೈಗೆ ಸಿಕ್ಕಿದಂತೆ ಆಗುತ್ತಿದ್ದಿತು. ಒಂದುಸಾರಿ ಹಾಗೆಯೇ ಮರೆಯಾಗುತ್ತಿದ್ದಿತು.

೨೧. ಆ ದಿಲೀಪನೂ ಕೂಡ ಒಂದೇ ಮನಸ್ಸಿನಿಂದ ಧನುಸ್ಸನ್ನು ಹಿಡಿದು ಅದನ್ನು ಅನುಸರಿಸಿ ಓಡುತ್ತಿದ್ದನು. ಆಸೆಗೆ ಒಳಗಾಗಿರುವ ರಾಜನನ್ನು ಆ ಜಿಂಕೆಯು ಹೀಗೆ ಆಸೆಯನ್ನು ತೋರಿಸುತ್ತ ಎಳೆದುಕೊಂಡು ಹೋಯಿತು.

ವಕ್ರಸ್ರೋತೋತಿಗಂಭೀರಂ ಕಂಟಕಿದ್ರುಮಸಂಕುಲಂ |
ಪ್ರವಿಷ್ಟೋ ವಿಷಮಾರಣ್ಯಂ ರಾಜಾಸೌ ತತ್ಪದಾನುಗಃ ॥ ೨೨ ॥

ಮಾಯಾಮಯಸ್ಸ ಸಾರಂಗಃ ಪ್ರಾಪಯನ್ನೃಪತಿಂ ವನಂ |
ಅದರ್ಶನಂ ಗತೋ ರಾಜಾ ವಿಸ್ಮಯಂ ಪರಮಂ ಯಯೌ ॥ ೨೩ ॥

ಶ್ರಾನ್ತೋ ವಿಷಣ್ಣಃ ಖಿನ್ನಶ್ಚ ವಿಸ್ಮಯೋದ್ಭ್ರಾನ್ತಮಾನಸಃ |
ದೂರಾದ್ದೂರಂ ತತೋ ಗತ್ವಾ ದೇಶಾದ್ದೇಶಂ ಚ ನಿರ್ಜಲಂ ॥ ೨೪ ॥

ಮೃಗಾದರ್ಶನಸಂರಂಭಾತ್ ಸಂಶುಷ್ಯದ್ಗಳಕಂಧರಃ |
ತಾಮ್ಯತ್ತಾಲುಮುಖವ್ಯಾಧಃ ಶ್ರಾನ್ತಪತ್ತಿಃ ಸ್ಖಲದ್ಗತಿಃ ॥ ೨೫ ॥

ಅತೀತ್ಯ ದೀರ್ಘಮಾರ್ಗಾನ್ಸ ತೃಷಾರ್ತೋಮಧ್ಯಗೇ ರವೌ |
ದದರ್ಶಾಗ್ರೇ ತು ಕಾಸಾರಂ ಸ್ಪರ್ಧಯಂತಮಪಾಂ ನಿಧಿಂ ॥ ೨೬ ॥

---

೨೨. ಡೊಂಕು ಡೊಂಕಾಗಿ ಹರಿಯುತ್ತಿರುವ ನದಿಯುಳ್ಳ ಹೋಗಲಸಾಧ್ಯವಾದ ಅನೇಕ ಮುಳ್ಳುಗಿಡದಿಂದ ಕೂಡಿರುವ ದುಃಖವನ್ನುಂಟುಮಾಡುವ ಒಂದು ಅರಣ್ಯವನ್ನು ಈ ರಾಜನು ಆ ಮೃಗದ ಹಿಂದೆ ಓಡುತ್ತಾ ಹೊಕ್ಕನು.

೨೩. ಮಾಯಾಮಯವಾದ ಆ ಸಾರಗವು ದೊರೆಯನ್ನು ಆ ದೊಡ್ಡ ಕಾಡಿನೊಳಕ್ಕೆ ಎಳೆದುಕೊಂಡು ಹೋಯಿತು. ಅನಂತರ ಅದು ಕಣ್ಣಿಗೆ ಕಾಣದಂತಾಗಲು ರಾಜನು ಇದೇನೆಂದು ದಿಗ್ಭ್ರಮೆಯನ್ನು ಹೊಂದಿದನು.

೨೪. ಆಗ ರಾಜನು ಆಯಾಸಗೊಂಡನು. ಬಾಡಿಹೋದನು. ಬಹುವಾಗಿ ಆಶ್ಚರ್ಯಪಡುತ್ತಿದ್ದನು. ತಾನು ಬಹುದೂರವಾಗಿ ಉದ್ದೇಶಪಟ್ಟಿದ್ದುದಕ್ಕಿಂತಲೂ ಇನ್ನೂ ಬೇರೆಯಾದ ಜಾಗಕ್ಕೆ ಬಂದುದಕ್ಕೂ ಅಲ್ಲಿ ನೀರು ಇಲ್ಲದಿರುವುದಕ್ಕೂ ಆಶ್ಚರ್ಯಪಟ್ಟನು.

೨೫-೨೬. ಆ ಮೃಗವು ಕಣ್ಮರೆಯಾದುದರಿಂದ ಉಂಟಾದ ದಿಗ್ಭ್ರಮೆಯಿಂದ ಗಂಟಲು ಒಣಗಿಹೋಯಿತು. ತುಟಿಗಳೆಲ್ಲವೂ ಒಣಗಿದುವು. ತನ್ನ ಜೊತೆಯಲ್ಲಿ ಬಂದಿರುವ ಬೇಟೆಗಾರರಿಗೂ ಮೃಗಾವಲಿನವರಿಗೂ ಆಯಾಸವು ಹೆಚ್ಚಾಗಿ ಖೇದಗೊಂಡು ಹೆಜ್ಜೆಯಿಡಲಾರದೆ ಶ್ರಮಪಡುತ್ತಿದ್ದರು. ಈ ರೀತಿಯಾಗಿ ಬಹುದೂರವನ್ನು ಪ್ರಯಾಣಮಾಡಿರಲು ಆಯಾಸವೂ ಆಯಿತು. ಅಷ್ಟರಲ್ಲಿ ಮಧ್ಯಾಹ್ನವೂ ಆಯಿತು. ಸುತ್ತಲೂ ನೋಡುತ್ತಿರಲು ಸಮುದ್ರವನ್ನು ತಿರಸ್ಕರಿಸುವಂತಿದ್ದ ಒಂದು ಸರೋವರವು ಎದುರಿಗೆ ಕಂಡು ಬಂದಿತು.

ಘನಸಾಪಪತೀರಸ್ಥಂ ಸುತೀರ್ಥಂ ಶೀತಲೋದಕಂ ।
ವಿಶದಂ ವಿಚಾಂಭೋಜಂ ಕೇಮಧುಮತ್ತಮಧುವ್ರತಂ ॥ ೨೭ ॥

ವಿಶಾಲಪದ್ಮಿನೀಪತ್ರಚ್ಛನ್ನಂ ಮರಕತೈರಿವ ।
ಸ್ವಚ್ಛಂದಮುಚ್ಛಲನ್ಮತ್ಸ್ಯಂ ಸ್ವಚ್ಛಂ ಸಾಧುಮನೋ ಯಥಾ ॥ ೨೮ ॥

ಚಲಜ್ಜಲಚರೋದ್ಭಿನ್ನವೀಚೀರ್ಝಂಕಾರನಾದಿತಂ ।
ಅಂತರ್ಗ್ರಾಹಗಣಕ್ರೂರಂ ಖಲಾನಿವ ಮಾನಸಂ ॥ ೨೯ ॥

ಕ್ವಚಿಚ್ಛೈವಾಲದುರ್ಗಮ್ಯಂ ಕೃಪಣಸ್ಯೇವ ಮಂದಿರಂ ।
ನಾನಾವಿಹಂಗಂ ಸರ್ವಾರ್ತಿಂ ಶಮಯಂತಂ ದಿವಾನಿಶಂ ॥ ೩೦ ॥

---

೨೭. ಅದರ ತೀರದಲ್ಲಿ ಮರಗಳು ದಟ್ಟವಾಗಿ ಬೆಳೆದಿದ್ದುವು. ನೀರು ಚೆನ್ನಾಗಿದ್ದಿತು. ತಣ್ಣಗೂ ಇದ್ದಿತು. ಶುಭ್ರವಾಗಿಯೂ ಇದ್ದಿತು. ಅದರಲ್ಲಿ ಕಮಲಗಳೂ ಅರಳಿದ್ದುವು. ಆ ಕಮಲಗಳಲ್ಲಿದ್ದ ಮಕರಂದವನ್ನು ಕುಡಿದು ಜೇನುನೊಣವು ಮದಿಸಿ ಕೂಗುತ್ತಿದ್ದಿತು.

೨೮. ಅಗಲವಾಗಿರುವ ಕಮಲದ ಎಲೆಗಳು ಹರಡಿಕೊಂಡಿರುವುದನ್ನು ನೋಡಿದರೆ ಮರಕತಶಿಲೆಗಳನ್ನು ಹಾಸಿರುವಂತಿದ್ದಿತು. ಅದರಲ್ಲಿದ್ದ ಮೀನುಗಳು ತಮಗೆ ಇಷ್ಟಬಂದಂತೆ ಓಡಾಡುತ್ತಿದ್ದುವು. ಸತ್ಪುರುಷರ ಮನಸ್ಸು ನಿರ್ಮಲವಾಗಿರುವಂತೆ ಆ ಕೊಳದ ನೀರೂ ನಿರ್ಮಲವಾಗಿದ್ದಿತು.

೨೯. ನೀರಿನಲ್ಲಿರುವ ಪ್ರಾಣಿಗಳು ಓಡಾಡುತ್ತಿದ್ದುದರಿಂದ ಅಲೆಗಳು ಹುಟ್ಟಿ ಝುಂಕಾರಮಾಡುತ್ತಿದ್ದುವು. ನೀರಿನ ಒಳಗೆ ಮೊಸಳೆಯೇ ಮುಂತಾದುವುಗಳಿದ್ದುದರಿಂದ ದುಷ್ಟರ ಮನಸ್ಸಿನಂತೆ ಕ್ರೂರವಾಗಿದ್ದಿತು.

೩೦. ಕೆಲವು ಕಡೆಗಳಲ್ಲಿ ಪಾಚಿಗಳು ಬೆಳೆದುಕೊಂಡಿದ್ದುದರಿಂದ ಕೃಪಣನ ಮನೆಯಂತೆ ಪ್ರವೇಶಿಸುವುದಕ್ಕೆ ಆಗದುದಾಗಿದ್ದಿತು. ಬಗೆ ಬಗೆಯಾದ ಹಕ್ಕಿಗಳು ಅಲ್ಲಿದ್ದುವು. ಹಗಲಲ್ಲಾಗಲಿ ರಾತ್ರಿಯಲ್ಲಾಗಲಿ ಯಾವ ಬಗೆಯಾದ ಶ್ರಮವಿದ್ದರೂ ಅದನ್ನು ಪರಿಹಾರ ಮಾಡುತ್ತಿದ್ದಿತು.

ದಾತಾರಮಿವ ಸರ್ವಸ್ವಮಾಪನ್ನಾರ್ತಿಹರಂ ಪರಂ ।
ತರ್ಪಯಂತಂ ಹಿಮಾಂಭೋಭಿಃ ಶ್ವಾಪದಾನ್ ಸ್ವಪಿತೄನಿವ ॥ ೩೧ ॥

ಹರನ್ತಂ ಸರ್ವಸಂತಾಪಂ ಹಿಮಾಂಶುಮಿವ ಚಾಹ್ನಿಕಂ ।
ತಂ ದೃಷ್ಟ್ವಾ ಭೂದ್ಗಳದ್ಗ್ಲಾನಿಶ್ಚಾತಕೋ ಜಲದಂ ಯಥಾ ॥ ೩೨ ॥

ತತ್ರ ಪೀತಜಲೋ ರಾಜಾ ಕೃತಮಾಧ್ಯಾಹ್ನಿಕಕ್ರಿಯಃ ।
ಭುಕ್ತ್ವಾ ಖೇಟಕಸಂಪನ್ನಂ ಸಹಾಯೈಸ್ಸಹಿತೋ ನೃಪಃ ॥ ೩೩ ॥

ಉವಾಸ ಸರಸೀತೀರೇ ರಮ್ಯೈಶ್ಚ ಕಥಯನ್ ಕಥಾಃ ।
ತತಃ ಶರಾಸನೇ ಬಾಣಂ ಕೃತ್ವಾ ರಾತ್ರೌ ಸ್ಥಿತಸ್ತರೌ ॥ ೩೪ ॥

---

೩೧. ಆ ಸರೋವರವು ತನ್ನಲ್ಲಿರುವುದನ್ನೆಲ್ಲಾ ದಾನಮಾಡುವ ದಾತೃವಿನಂತಿದ್ದಿತು ಕಷ್ಟಬಂದವರ ಕಷ್ಟವನ್ನೆಲ್ಲಾ ಪರಿಹರಿಸುತ್ತಿದ್ದಿತು. ತಣ್ಣಗಿರುವ ನೀರನ್ನು ಕುಡಿಯುವುದರಿಂದ ಅಲ್ಲಿರುವ ಕಾಡುಮೃಗಳಿಗೆ ಸಂತೋಷಪಡಿಸುತ್ತ ಅವೇ ತಮ್ಮ ಪಿತೃಗಳೋ ಎಂಬಂತೆ ನೀರಿನಿಂದ ತೃಪ್ತಿ ಪಡಿಸುತ್ತಿದ್ದಿತು.

೩೨. ಬಿಸಲಿನ ಬೇಗೆಯಿಂದುಂಟಾದ ತಾಪವನ್ನು ಪರಿಹರಿಸುವ ಚಂದ್ರನಂತೆ ಬಿಸಿಲಿನ ಬೇಗೆಯನ್ನು ನಾಶಮಾಡುತ್ತಿದ್ದಿತು ರಾಜನು ಈ ಸರೋವರವನ್ನು ನೋಡಿದೊಡನೆಯೇ ಚಾತಕಪಕ್ಷಿಗೆ ಮೋಡವನ್ನು ನೋಡಿದೊಡನೆಯೇ ತನ್ನ ಶ್ರಮವು ಹೇಗೆ ಕಳೆದುಹೋಗುವುದೋ ಹಾಗೆ ಶ್ರಮವು ಪರಿಹಾರವಾಯಿತು.

೩೩–೩೪. ಆ ರಾಜನು ಅಲ್ಲಿ ನೀರನ್ನು ಕುಡಿದು ಮಾಧ್ಯಾಹ್ನಿಕಾದಿಗಳನ್ನು ಮಾಡಿ ಬೇಟೆಯಿಂದ ತಾನು ಹೊಂದಿದ್ದ ಪದಾರ್ಥಗಳನ್ನೂ ಅದಕ್ಕೆ ಅನುಗುಣವಾದ ಪದಾರ್ಥಗಳನ್ನೂ ಹಾಕಿಸಿ ಊಟಮಾಡಿದನು. ಅನಂತರ ಆನಂದವಾಗಿ ಮನೋಹರವಾದ ಮಾತುಗಳನ್ನಾಡುತ್ತ ಜೊತೆಯವರೊಡನೆ ಆ ಸರೋವರದ ತೀರದಲ್ಲಿಯೇ ಇದ್ದನು. ಅನಂತರ ಆ ರಾಜನು ಧನುಸ್ಸಿನಲ್ಲಿ ಬಾಣವನ್ನು ಹೂಡಿ ಸಿದ್ಧಪಡಿಸಿಕೊಂಡು ಒಂದು ಮರದಮೇಲೆ ಕುಳಿತನು.

ವ್ಯಾಧಾಃ ಸಂಧಾನಮಾಸ್ಥಾಯ ರುರುಧುಃ ಕಕುಭಾಂ ಪಥಃ ।
ಏವಂ ಸ್ಥಿತೇಷು ವೀರೇಷು ವನೇ ವಿಸ್ತಾರ್ಯ ವಾಗುರಾಃ ॥ ೩೫ ॥

ನಿಶಾಂತೇ ನಿರ್ಗತಂ ಯೂಥಂ ಸೂಕರಾಣಾಂ ತಟೇ ತಟೇ ।
ಚರಿತ್ವಾ ಸರಸಃ ಕಂದಾನ್ ಪ್ರಾಪಾತ ವ್ಯಾಧಸಂಕುಲೇ ॥ ೩೬ ॥

ರಾಜ್ಞಾ ವಿದ್ಧಾಸ್ತಥಾ ಕ್ರೋಡಾ ವ್ಯಾಧೈಶ್ಚ ಬಹವೋ ಹತಾಃ ।
ದಿಕ್ಷು ಸರ್ವಾಸು ಬದ್ಧಾಸು ವಾಗುರಾಭಿಸ್ಸಮನ್ತತಃ ॥ ೩೭ ॥

ಇತಸ್ತತೋ ಭ್ರಮಿತ್ವಾಥ ತಸ್ಥುಃ ಸಾಧ್ವಸಮಾನಸಾಃ ।
ವ್ಯಾಧೈಶ್ಚ ನಿಹತಾಸ್ಸರ್ವೇ ಪ್ರಜಾ ಇವ ಖಲೇ ನೃಪೇ ॥ ೩೮ ॥

---

೩೫–೩೬. ಬೇಡರು ತಮ್ಮ ತಮ್ಮ ಪದಾರ್ಥಗಳನ್ನು ಜೊತೆಯಲ್ಲಿ ತೆಗೆದು ಕೊಂಡು ಹೋಗಿರಾಜನ ಬಳಿಗೆ ಬೇಟೆಯು ಬರುವಂತೆ ಯುಕ್ತಿಯನ್ನು ಮಾಡಿ ಎಲ್ಲಾ ಕಡೆಯಲ್ಲಿಯೂ ತಡೆಗಟ್ಟಿದರು. ಆ ವ್ಯಾಧರೆಲ್ಲರೂ ನೀರಿನಿಂದ ಬಂದ ಮೃಗಗಳು ರಾಜನ ಕಡೆಗೆ ಹೋಗುವಂತೆ ಮಾಡಿ ಬಲೆಯನ್ನು ಒಡ್ಡಿದ್ದರು. ಕಡೆಗೆ ಸಾಯಂಕಾಲದಲ್ಲಿ ಹಂದಿಗಳ ಗುಂಪು ಆ ಸರೋವರದ ದಡದಲ್ಲಿಯೂ ನೀರಿನಲ್ಲಿಯೂ ಬೆಳೆದಿರುವ ಗೆಡ್ಡೆಗಳನ್ನು ತಿನ್ನುತ್ತ ಹೊರಟು ಆ ವ್ಯಾಧರು ಹೂಡಿದ್ದ ಯುಕ್ತಿಗೆ ಒಳಗಾದುವು.

೩೭. ಆ ರೀತಿಯಲ್ಲಿ ಸಿಕ್ಕಿಬಿದ್ದ ಹಂದಿಗಳನ್ನು ರಾಜನೂ ಹೊಡೆದನು. ವ್ಯಾಧರೂ ಅನೇಕವನ್ನು ಕೊಂದರು. ಎಲ್ಲಾ ಕಡೆಗಳಲ್ಲಿಯೂ ಬಲೆಯನ್ನು ಒಡ್ಡಿದ್ದುದರಿಂದ ತಪ್ಪಿಸಿಕೊಂಡು ಹೋಗಲು ಅವಕ್ಕೆ ಆಗುತ್ತಿರಲಿಲ್ಲ.

೩೮. ಈ ಬಲೆಯಿಂದ ತಪ್ಪಿಸಿಕೊಂಡು ಹೋಗಲು ಸುತ್ತಲೂ ಓಡಿಯಾಡಿ ನೋಡಿ ಸಾಧ್ಯವಿಲ್ಲದಿರಲು ಹೆದರಿಕೆಯಿಂದ ಅಲ್ಲಿಯೇ ನಿಂತುಕೊಂಡುವು. ಆಗ ಅವುಗಳನ್ನು ದುಷ್ಟನಾದ ರಾಜನು ಪ್ರಜೆಗಳನ್ನು ಆಳುತ್ತಿರುವಾಗ ಆ ಪ್ರಜೆಗಳನ್ನು ದುಷ್ಟರು ನಾಶಪಡಿಸುವಂತೆ ಈ ಮೃಗಗಳನ್ನು ವ್ಯಾಧರು ಕೊಂದುಹಾಕಿದರು.

ಕ್ಷಣೇನೈವ ವರಾಹಾಸ್ತೇ ವಿದ್ಧಾಃ ಪೇತುರ್ಮಹೀತಲೇ ।
ವಜ್ರಭಿನ್ನಾಂಜನಗಿರೇಃ ಶಕಲಾ ಇವ ವಜ್ರಿಣಾ ॥ ೩೯ ॥

ತಾನ್ ದೃಷ್ಟ್ವಾ ತುಮುಲಂ ನಾದಂ ಚಕ್ರುರ್ವ್ಯಾಧಾಸ್ಸುದರ್ಪಿತಾಃ ।
ವ್ಯಾಧಾಶ್ಚ ಶೃಂಗಿಣಸ್ತತ್ರದಧ್ಮುಃ ಶೃಂಗಾಣ್ಯನೇಕಶಃ ॥ ೪೦ ॥

ಕ್ಷ್ವೇಡಾರವಂ ಭೃಶಂ ಚಕ್ರುಃ ಹೃಷ್ಟಾಸ್ಸತ್ವಬಲೋದ್ಧತಾಃ ।
ಧಾವನ್ತಃ ಪ್ರಮುದಾ ಯುಕ್ತಾ ಮಿಲಿತ್ವಾ ಯತ್ರ ಭೂಮಿಪಃ ॥ ೪೧ ॥

ತಾನಾದಾಯ ಭಟೈರ್ಭೂಪೋ ನಿರ್ಗತಸ್ಸರಸೀತಟಾತ್ ।
ಸ್ವಪುರಂ ಗಂತುಕಾಮೋಽಸೌ ದೃಷ್ಟವಾನ್ ಪಥಿ ತಾಪಸಂ ॥ ೪೨ ॥

ಬ್ರಾಹ್ಮಣಂ ವೃದ್ಧಹಾರೀತಂ ವೈಖಾನಸಮತೇ ಸ್ಥಿತಂ ।
ನಿಯಮೈರ್ದುಷ್ಕರೈರುಗ್ರೈಃ ಪರಿಕ್ಷೀಣಕಳೇಬರಂ ॥ ೪೩ ॥

---

೩೯. ಅವರೆಲ್ಲರೂ ಸೇರಿ ಬಲೆಯಲ್ಲಿ ಸಿಕ್ಕಿಕೊಂಡು ಆ ಹಂದಿಗಳನ್ನು ಕೊಂದುಹಾಕಿದರು. ಸತ್ತುಬಿದ್ದಿರುವ ಈ ಹಂದಿಗಳನ್ನು ನೋಡಿದರೆ ಅಂಜನ ಪರ್ವತವನ್ನು ವಜ್ರಾಯುಧದಿಂದ ಇಂದ್ರನು ಹೊಡೆದಾಗ ಒಡೆದುಬಿದ್ದ ಆ ಬೆಟ್ಟದ ಚೂರುಗಳೋ ಎನ್ನುವಂತೆ ಇದ್ದುವು.

೪೦. ಇದನ್ನು ನೋಡಿ ಹೆಮ್ಮೆಗೊಂಡ ವ್ಯಾಧರು ಕಲಕಲಧ್ವನಿಮಾಡುತ್ತ ಕೂಗಿಕೊಂಡರು. ಕೊಂಬುಗಳನ್ನು ಹಿಡಿದಿದ್ದ ವ್ಯಾಧರು ಅವನ್ನು ಆಗಿಂದಾಗ್ಯೆ ಊದುತ್ತಿದ್ದರು.

೪೧. ಶಕ್ತಿವಂತರಾದ ಅವರು ಬಹು ಸಂತೋಷದಿಂದ ಸಿಂಹನಾದ ಮಾಡುತ್ತಿದ್ದರು. ರಾಜನಿದ್ದಲ್ಲಿಗೆ ಸಂತೋಷದಿಂದ ಓಡಿಬಂದು ಸುತ್ತುಗಟ್ಟಿದರು.

೪೨. ಆ ಬೇಟೆಯನ್ನು ತೆಗೆದುಕೊಂಡು ಅವರನ್ನೂ ಕರೆದುಕೊಂಡು ಆ ಕೊಳದ ದಡದಿಂದ ರಾಜನು ಊರಿಗೆ ಹೋಗಬೇಕೆಂದು ಹೊರಟನು. ಬರುತ್ತಿರುವಾಗ ದಾರಿಯಲ್ಲಿ ಒಬ್ಬ ತಪಸ್ವಿಯನ್ನು ಕಂಡನು.

೪೩-೪೬. ಆ ತಾಪಸನು ಬ್ರಾಹ್ಮಣನಾದ ವೃದ್ಧಹಾರೀತನೆಂಬುವನು ಅವನು ವೈಖಾನಸ ಆಶ್ರಮವನ್ನು ಹೊಂದಿದ್ದನು. ಬಹು ಕಠಿಣಗಳಾದ ನಿಯಮಗಳನ್ನು ಮಾಡಿ ಬಹು ಬಡಕಲಾಗಿದ್ದನು. ಇದನ್ನು ನೋಡಿದರೆ ಅವನಿಗೆ

ಅಸ್ಥಿಶೇಷಂ ಮಹಾದಾನ್ತಂ ವಿಸ್ಫುರತ್ಕರ್ಕಶತ್ವಚಂ |
ದಧಾನಂ ಹಾರಿಣಂ ಚರ್ಮ ವಸಾನಂ ಮೃದುವಲ್ಕಲಂ || ೪೪ ||

ಕುರ್ವಾಣಂ ನೈಗಮಂ ಜಾಪ್ಯಂ ನಖಲೋಮಜಟಾಧರಂ |
ತಂ ವನಾಶ್ರಮಿಣಂ ದೃಷ್ಟ್ವಾ ಮಾರ್ಗಂ ದತ್ವಾ ಸಸಂಭ್ರಮಂ || ೪೫ ||

ಪ್ರಣಮ್ಯ ಶಿರಸಾ ರಾಜಾ ಕೃತಾಂಜಲಿರುಪಸ್ಥಿತಃ || ೪೬ ||

|| ವೃದ್ಧಹಾರೀತ ಉವಾಚ ||

ಕಿಮರ್ಥಂ ಗಮ್ಯತೇ ರಾಜನ್ ಕಾಲೇ ಪುಣ್ಯತಮೋ ಶುಭೇ |
ಮಾಘಮಾಸೇ ವಿಹಾಯೈವ ಮಾಘಸ್ನಾನಂ ಸರೋವರೇ || ೪೭ ||

|| ಸೂತ ಉವಾಚ ||

ಪ್ರತ್ಯುವಾಚ ತತೋ ರಾಜಾ ನಾಹಂ ಜಾನೇ ದ್ವಿಜೋತ್ತಮ |
ಮಾಘಸ್ನಾನಫಲಂ ಕೀದೃಕ್ ತನ್ಮೇ ಕಥಯ ವಿಸ್ತರಾತ್ || ೪೮ ||

---

ಮೂಳೆಮಾತ್ರ ಉಳಿದಿದ್ದಿತು. ಬಹುವಾದ ಇಂದ್ರಿಯನಿಗ್ರಹಿಯು. ಅವನ ದೇಹದ ಚರ್ಮವು ಒರಟಾಗಿ ಹೊಳಪಾಗಿದ್ದಿತು. ಕೃಷ್ಣಾಜಿನವನ್ನು ಹೊದೆದುಕೊಂಡು ವೇದವನ್ನು ಬಾಯಲ್ಲಿ ಹೇಳುತ್ತಿದ್ದನು. ಕೂದಲು ಉಗುರು ಜಡೆಗಳನ್ನು ಧರಿಸಿದ್ದನು. ಆ ವೈಖಾನಸನಾದ ಆ ಬ್ರಾಹ್ಮಣನು ಈ ದಾರಿಗನ ವೇಷಭೂಷಣಗಳನ್ನು ನೋಡಿ ಇವನು ರಾಜನೆಂದು ತಿಳಿದು ಪರೋಪಕಾರ ಬುದ್ಧಿಯಿಂದಲೂ ಆತನಿಗೆ ಒಳ್ಳೆಯದಾಗಬೇಕೆಂಬ ಆಶೆಯಿಂದಲೂ ರಾಜನನ್ನು ಕುರಿತು ಇಂತೆಂದನು.

೪೭. ವೃದ್ಧಹಾರೀತನು ಹೇಳಿದನು-ಎಲೈ ರಾಜನೇ! ಮಾಘಮಾಸದಲ್ಲಿ ಈ ಸರೋವರದಲ್ಲಿ ಸ್ನಾನಮಾಡದೆ ಏಕೆ ಹೋಗುತ್ತೀಯೇ ? ಈ ಸರೋವರವು ಬಹು ಪುಣ್ಯಪ್ರದವಾದುದು. ಮಾಘಮಾಸವೂ ಕೂಡ ಬಂದಿರುವುದು.

೪೮. ಸೂತನು ಹೇಳಿದನು-ಎಲೈ ದ್ವಿಜೋತ್ತಮನೇ! ಈ ವಿಷಯವು ನನಗೆ ಗೊತ್ತಿಲ್ಲ. ಮಾಘಸ್ನಾನದ ಫಲವು ಎಂತಹದು? ಅದನ್ನು ನನಗೆ ವಿಸ್ತಾರವಾಗಿ ಹೇಳು. ಎಂಬುದಾಗಿ ರಾಜನು ಕೇಳಿದನು

॥ ಸೂತ ಉವಾಚ ॥

ಇತಿ ಭೂಪವಚಶ್ಶ್ರುತ್ವಾ ಪ್ರಾಹ ವೈಖಾನಸೋ ಮುನಿಃ ॥ ೪೯ ॥

॥ ವೃದ್ಧಹಾರೀತ ಉವಾಚ ॥

ಭಗವಾನ್ ದ್ಯುಮಣಿಶ್ಶೀಘ್ರಮಭ್ಯುದೇತಿ ತಮೋಹರನ್ ।
ಸ್ನಾನಕಾಲೋಯಮಸ್ಮಾಕಂ ನ ಕಥಾವಸರೋ ನೃಪ ।
ಸ್ನಾತ್ವಾ ಗಚ್ಛ ವಸಿಷ್ಠಂ ತ್ವಮಾಪೃಚ್ಛಸ್ವ ಕುಲಪ್ರಭುಂ ॥ ೫೦ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ತಾಪಸೋ ಮೌನೀ ಮಾಘಸ್ನಾನಾಯ ನಿರ್ಗತಃ ।
ಪ್ರತ್ಯಾವೃತ್ಯ ದಿಲೀಪೋಽಪಿ ತತ್ರ ಸ್ನಾತ್ವಾ ಯಥಾವಿಧಿ ॥ ೫೧ ॥
ಪುನಃ ಸ್ವನಗರಂ ವೀರೋ ಗತೋಽಸೌ ಹರ್ಷಪೂರಿತಃ ।
ಸ್ವಾನ್ತಃಪುರೇ ನಿವೇದ್ಯಾಥ ತಾಪಸಪ್ರೋಕ್ತಕಥಾಂ ನೃಪಃ ॥ ೫೨ ॥
ಶ್ವೇತಾಶ್ವಂ ರಥಮಾರುಹ್ಯ ಸುಶ್ವೇತಚ್ಛತ್ರಚಾಮರಃ ।
ಸಾಲಂಕಾರಃ ಸುವಾಸಾಶ್ಚ ಸುಪುಷ್ಪೋ ಮಂತ್ರಿಭಿಸ್ಸಹ ॥ ೫೩ ॥

---

೪೯ ಸೂತನು ಹೇಳಿದನು-ರಾಜನು ಹೀಗೆ ಹೇಳಿದುದನ್ನು ಕೇಳಿ ಆ ವೈಖಾನಸನು ಇಂತೆಂದು ಹೇಳಿದನು.

೫೦. ವೃದ್ಧಹಾರೀತನು ಹೇಳಿದನು-ಪೂಜ್ಯನಾದ ಸೂರ್ಯನು ಕತ್ತಲೆಯನ್ನು ನಾಶಮಾಡುತ್ತ ಇನ್ನೇನು ಹುಟ್ಟಿಬಿಡುವನು. ಅಷ್ಟರೊಳಗೆ ಸ್ನಾನಮಾಡಿಬಿಡಬೇಕು. ಇದು ನನಗೆ ಸ್ನಾನಕಾಲವು. ನೀನೂ ಕೂಡ ಅಷ್ಟರೊಳಗೆ ಸ್ನಾನಮಾಡಿ ಪಟ್ಟಣಕ್ಕೆ ಹೋಗು. ಅಲ್ಲಿ ನಿನ್ನ ಕುಲಗುರುವಾದ ವಸಿಷ್ಠನನ್ನು ಕೇಳು. ಅವನು ಹೇಳುವನು.

೫೧-೫೪. ಸೂತನು ಹೇಳಿದನು—ಆ ಮೌನವ್ರತವುಳ್ಳ ವೈಖಾನಸನು ಹೀಗೆಂದು ಹೇಳಿ ಮಾಘಸ್ನಾನಕ್ಕೆ ಹೊರಟು ಹೋದನು. ದಿಲೀಪನು ಹಿಂತಿರುಗಿ ಬಂದು ಅಲ್ಲಿ ಕ್ರಮವಾಗಿ ಸ್ನಾನಮಾಡಿ ತನ್ನ ಊರಿಗೆ ಸಂತೋಷದಿಂದ ಹೊರಟು ಹೋದನು. ಊರಿನಲ್ಲಿ ಅಂತಃಪುರದವರಿಗೆಲ್ಲಾ ಆ ವೈಖಾನಸನ ಕಥೆಯನ್ನು

ಜಯಶಬ್ದಾನ್ ಪುರಶ್ಶೃಣ್ವನ್ ಸ್ತುತೋ ಮಾಗಧವಂದಿಭಿಃ ।
ವಸಿಷ್ಠಸ್ಯಾಶ್ರಮಂ ಯಾತಃ ಋಷಿವಾಕ್ಯಮನುಸ್ಮರನ್ ॥ ೫೪ ॥

ನತ್ವಾ ಬ್ರಹ್ಮಋಷಿಂ ತತ್ರ ವಿನಯಾಚಾರಪೂರ್ವಕಂ ।
ದತ್ತಾಸನೋ ಗೃಹೀತಾರ್ಘ್ಯ ಆಶೀರ್ಭಿಃ ಕೃತಮಂಗಲಃ ॥ ೫೫ ॥

ಸಾನಂದಂ ಮುನಿನಾ ಪೃಷ್ಟಃ ಕುಶಲಂ ಭೂಪತೇ ಸದಾ ।
ತದೋಮಿತ್ಯಬ್ರವೀದ್ರಾಜಾ ಹರ್ಷಯನ್ಮುನಿಮಾನಸಂ ।
ಸೋಽಥ ವೈಖಾನಸೇನೋಕ್ತಂ ಪೃಷ್ಟವಾನ್ಮಧುರಾಕೃತಿಃ ॥ ೫೬ ॥

॥ ದಿಲೀಪ ಉವಾಚ ॥

ಭಗವನ್ ತ್ವತ್ಪ್ರಸಾದೇನ ಶ್ರುತೋ ವಿಸ್ತರತೋ ಮಯಾ ।
ಆಚಾರೋ ದಂಡನೀತಿಶ್ಚ ರಾಜಧರ್ಮಾಶ್ಚ ಯೇಽಪರೇ ॥ ೫೭ ॥

---

ತಿಳಿಸಿದನು. ಅನಂತರ ಬಿಳಿಯ ಕುದುರೆಗಳನ್ನು ಕಟ್ಟಿರುವ ರಥದಲ್ಲಿ ಕುಳಿತು ಛತ್ರಿಯನ್ನು ಹಿಡಿಸಿಕೊಂಡು ಚಾಮರವನ್ನು ಬೀಸಿಸಿಕೊಳ್ಳುತ್ತಾ ಅಲಂಕಾರ ಮಾಡಿಕೊಂಡು ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು ಹೂವನ್ನು ಮುಡಿದುಕೊಂಡು ಮುಂದುಗಡೆಯಲ್ಲಿ ಹೊಗಳು ಭಟರು ಜಯಶಬ್ದವನ್ನು ಹೇಳುತ್ತಿರಲು ಅದನ್ನೂ ಸ್ತುತಿಪಾಠಕರ ಸ್ತುತಿಯನ್ನೂ ಕೇಳುತ್ತಾ ಮಂತ್ರಿಗಳೊಡನೆ ಆ ಋಷಿಯ ಮಾತಿನಂತೆ ಮಾಘ ಮಹಿಮೆಯನ್ನು ಕೇಳಲು ವಸಿಷ್ಠನ ಆಶ್ರಮಕ್ಕೆ ಹೋದನು.

೫೫. ಅಲ್ಲಿಗೆ ಹೋಗಿ ಆ ಬ್ರಹ್ಮಋಷಿಯಾದ ವಸಿಷ್ಠನನ್ನು ವಿನಯದಿಂದಲೂ ಆಚಾರಕ್ಕೆ ಅನುಗುಣವಾಗಿಯೂ ನಮಸ್ಕರಿಸಿದನು. ಅನಂತರ ಆ ಋಷಿಯು ರಾಜನಿಗೆ ಅಸನವನ್ನೂ ಅರ್ಘ್ಯವನ್ನೂ ಕೊಡಲು ಸ್ವೀಕರಿಸಿದನು. ಅನಂತರ ಆ ಋಷಿಯು ರಾಜನಿಗೆ ಆಶೀರ್ವದಿಸಿದನು.

೫೬. ಅನಂತರ ಎಲೈ ದೊರೆಯೇ ! ಕುಶಲವೇ ಎಂದು ಕೇಳಲು ಅದಕ್ಕೆ ರಾಜನು ಹೌದು ಎಂದು ಹೇಳಿದನು. ಇವುಗಳಿಂದ ಋಷಿಗೆ ಬಹು ಸಂತೋಷವಾಯಿತು

೫೭. ದಿಲೀಪನು ಹೇಳಿದನು—ಎಲೈ ಭಗವಂತನೇ! ನೀನು ನನಗೆ ಆಚಾರವನ್ನೂ ದಂಡ ನೀತಿಯನ್ನೂ ರಾಜಧರ್ಮಗಳನ್ನೂ ಇನ್ನೂ ಅನೇಕ ನೀತಿಗಳನ್ನೂ ಹೇಳಿದ್ದೀಯೆ.

ಚತುರ್ಣಾಮಪಿ ವರ್ಣಾನಾಮಾಶ್ರಮಾಣಾಂ ಚ ಯಾಃ ಕ್ರಿಯಾಃ ।
ದಾನಾನಿ ತದ್ವಿಧಾನಾನಿ ಯಜ್ಞಾಸ್ತದ್ವಿಧಯಸ್ತಥಾ ॥ ೫೮ ॥

ವ್ರತಾನಿ ತತ್ಪ್ರತಿಷ್ಠಾಶ್ಚ ವಿಷ್ಣೋರಾರಾಧನಂ ತಥಾ ।
ಅಧುನಾ ಶ್ರೋತುಮಿಚ್ಛಾಮಿ ಮಾಘಸ್ನಾನಸ್ಯ ಯತ್ಫಲಂ ।
ವಿಧೇಯಂ ಯದ್ವಿಧಾನೇನ ತನ್ಮೇ ಬ್ರಹ್ಮನ್ಮುನೇ ವದ ॥ ೫೯ ॥

॥ ವಸಿಷ್ಠ ಉವಾಚ ॥

ಸಮ್ಯಗುಕ್ತಂ ಪರಂ ಶ್ರೇಯೋ ಲೋಕತ್ರಯಹಿತಾವಹಂ ।
ನಿರ್ಮಲೀಕರಣಂ ತೇನ ಮುನಿನಾ ವನವಾಸಿನಾ ॥ ೬೦ ॥

ಅಹಂ ಚ ತೇ ವದಾಮ್ಯದ್ಯ ಮಾಘಸ್ನಾನಫಲಂ ಶೃಣು ।
ಋತುಯುಕ್ತಾಮಿನೀನಾಂ ಯೋ ಪ್ರತ್ಯಾಸತ್ತಿಮಖಂಡಿತಾಂ ॥ ೬೧ ॥

---

೫೮–೫೯. ನಾಲ್ಕು ಆಶ್ರಮಗಳ ಮತ್ತು ನಾಲ್ಕು ವರ್ಣಗಳ ಕ್ರಿಯೆಗಳನ್ನು ಹೇಳಿದ್ದೀಯೆ. ಅನೇಕ ದಾನಗಳನ್ನೂ ಅವುಗಳ ವಿಧಾನಗಳನ್ನೂ ಹೇಳಿದ್ದೀಯೆ. ಯಜ್ಞಗಳನ್ನೂ ಅವುಗಳ ಆಚರಣೆಯ ಕ್ರಮವನ್ನೂ ಹೇಳಿದ್ದೀಯೆ. ವಿಷ್ಣುವನ್ನು ಪೂಜಿಸುವ ಬಗೆಯನ್ನೂ ಹೇಳಿದ್ದೀಯೆ. ಈಗ ನಾನು ಮಾಘಸ್ನಾನದ ಫಲವನ್ನೂ ಅದನ್ನು ಮಾಡುವ ಬಗೆಯನ್ನೂ ಕೇಳಲಿಚ್ಛಿಸುತ್ತೇನೆ. ಅದರ ರೀತಿಯನ್ನು ಹೇಳು.

೬೦. ವಸಿಷ್ಠನು ಹೇಳಿದನು–ಎಲೈ ರಾಜನೆ! ಆ ಋಷಿಯು ಮೂರು ಲೋಕಗಳಿಗೂ ಹಿತವಾಗುವ ರೀತಿಯಲ್ಲಿ ಪ್ರಸಿದ್ಧವಾಗಿರುವ ಬಹು ನಿರ್ಮಲವಾದ ವಿಷಯವನ್ನು ಹೇಳಿದ್ದಾನೆ.

೬೧–೬೬. ಎಲೈ ದೊರೆಯೇ! ಮಾಘಸ್ನಾನದ ಫಲವನ್ನು ಹೇಳುತ್ತೇನೆ. ಕೇಳು. ಯಾರು ಹೊಸದಾಗಿ ಋತುಮತಿಯರೂ ಪ್ರೌಢೆಯರೂ ಆಗಿರುವ ಹೆಂಗಸರ ಸಹವಾಸವನ್ನು ಎಡೆಬಿಡದೆ ಅಪೇಕ್ಷಿಸುತ್ತಾರೆಯೋ ಅವರು ಮಾಘ

ಕಾಮಯಂತೇ ಮೃಗಾರ್ಕೇ ತೇ ಸ್ರೋತಸಿ ಸ್ನಾನ್ತು ಸರ್ವದಾ |
ವಿನಾ ವಹ್ನಿಂ ವಿನಾ ಯಜ್ಞಮಿಷ್ಟಾಪೂರ್ತಂ ವಿನಾಪಿ ಯೇ || ೬೨ ||

ವಾಂಛಂತಿ ಸದ್ಗತಿಂ ಸ್ನಾನ್ತು ಪ್ರಾತರ್ಮಾಘೇ ಬಹಿರ್ಜಲೇ |
ಗೋಭೂಮಿತಿಲವಾಸಾಂಸಿ ಸ್ವರ್ಣಧಾನ್ಯಾದಿಕಾನಿ ಚ || ೬೩ ||

ಅದತ್ವೇಚ್ಛಂತಿ ಯೇ ನಾಕಂ ತೇ ಮಾಘೇ ಸ್ನಾಂತು ಸರ್ವದಾ |
ತ್ರಿರಾತ್ರೋಪೋಷಿತೈಃ ಕೃಚ್ಛ್ರೈಃ ಪರಾಕೈಶ್ಚ ನಿಜಾಂ ತನೂಂ || ೬೪ ||

ಅಶೋಷಯಂತಿ ಯೇ ನಾಕಂ ತೇ ಮಾಘೇ ಸ್ನಾಂತು ಸರ್ವದಾ |
ನೀರಾನ್ನಂ ಚೈವ ವೈಶಾಖೇ ತಪಃ ಪೂಜಾ ಚ ಕಾರ್ತಿಕೇ || ೬೫ ||

ಜಪಹೋಮೌ ತಥಾ ದಾನಂ ತ್ರಯಂ ಮಾಘೇ ವಿಶಿಷ್ಯತೇ |
ಸಾನುಬಂಧಃ ಸುಪರ್ಯಾಪ್ತೇ ಧರಾಧೀಶೋ ಭವೇದ್ಧ್ರುವಂ || ೬೬ ||

---

ಸ್ನಾನವನ್ನು ಮಾಡಬೇಕು. ಅಗ್ನಿಹೋತ್ರ ಯಜ್ಞ ಇಷ್ಟಿ ಕೆರೆಕಟ್ಟೆಗಳ ಕಟ್ಟುವಿಕೆಗಳನ್ನು ಮಾಡದೆಯಾರು ಸದ್ಗತಿಯನ್ನು ಅಪೇಕ್ಷಿಸುತ್ತಾರೆಯೋ ಅವರು ಮಾಘಮಾಸದಲ್ಲಿ ಹೊರಗಡೆಯಲ್ಲಿ ನೀರಿನಲ್ಲಿ ಸ್ನಾನಮಾಡಬೇಕು. ಗೋವು ಭೂಮಿ ಎಳ್ಳು ಬಟ್ಟೆ ಚಿನ್ನ ಧಾನ್ಯ ಇವೇ ಮುಂತಾದುವುಗಳನ್ನು ದಾನಮಾಡದೆ ಯಾರು ಸ್ವರ್ಗವನ್ನು ಅಪೇಕ್ಷಿಸುತ್ತಾರೆಯೋ ಅವರು ಮಾಘಮಾಸದಲ್ಲಿ ಯಾವಾಗಲೂ ಬೆಳಗ್ಗೆ ಸ್ನಾನಮಾಡಬೇಕು. ಮೂರುರಾತ್ರಿಗಳ ಕಾಲವೇ ಮುಂತಾದ ಹೆಚ್ಚು ಕಾಲಗಳ ಉಪವಾಸವಿರಲು ಆಗದವರೂ ಕೃಚ್ಛ್ರ ಪರಾಕಗಳಿಂದ ತಮ್ಮ ದೇಹವನ್ನು ಶೋಷಿಸಲು ಯಾರು ಇಚ್ಛೆಪಡುವುದಿಲ್ಲವೋ ಅಥವಾ ಯಾರ ಕೈಯ್ಯಲ್ಲಿ ಆಗುವುದಿಲ್ಲವೋ ಅವರು ಮಾಘಮಾಸದಲ್ಲಿ ಯಾವಾಗಲೂ ಪ್ರಾತಃಸ್ನಾನ ಮಾಡಬೇಕು ಅನ್ನ ನೀರುಗಳ ದಾನವು ವೈಶಾಖಮಾಸದಲ್ಲಿಯೂ ತಪಸ್ಸು ಪೂಜೆಗಳು ಕಾರ್ತಿಕದಲ್ಲಿಯೂ ಜಪ ಹೋಮ ದಾನಗಳು ಮಾಘಮಾಸದಲ್ಲಿಯೂ ಆಚರಿಸಲ್ಪಡತಕ್ಕವು. ಹೀಗೆ ಮಾಡಿದರೆ ಮಿಕ್ಕಕಾಲಗಳಲ್ಲಿ ಮಾಡಿದುದಕ್ಕಿಂತಲೂ ಫಲವು ಹೆಚ್ಚು ಬರುತ್ತದೆ. ಹೀಗೆ ಮಾಡಿದವನು ಪುಷ್ಕಲವಾಗಿರುವ ನೆಂಟರುಳ್ಳ ಸಾಕಾದಷ್ಟು ಸೌಖ್ಯಸಾಮಗ್ರಿಗಳಿರುವ ರಾಜನಾಗಿ ಹುಟ್ಟುತ್ತಾನೆ. ನಿಶ್ಚಯವು.

ಕೇವಲ್ಯೋತ್ಪಾದಕೀ ಬುದ್ಧಿಃ ಪರ್ಯಾಯೇಣ ಭವೇತ್ಪುನಃ |
ಯದಗ್ನೌ ವರಿವಸ್ಯಾ ಸಾ ವಿಹಿತಾ ದಿವ್ಯಲೋಜನೈಃ ॥ ೬೭ ॥

ತದಂತೇ ಋತ್ತಪೋ ದಾನಂ ಮಾಘೇ ಮಾಸಿ ನೃಪೋತ್ತಮ |
ಸಂಪದೇ ಚ ಪ್ರಜಾಯೈ ಚ ದತ್ತಯೇ ಹೂತಯೇಽಪಿ ವಾ ॥ ೬೮ ॥

ಕಾಯಶುದ್ಧಿಃ ಪ್ರೀತಿಭೂಮಿಶ್ಚತುರ್ಧಾ ಸ್ನಾನಜಂ ಫಲಂ |
ನಿರನ್ನಾ ಹ್ಯದಿತಿಃ ಸಸ್ನೌ ಮಾಘಾರ್ ದ್ವಾದಶ ಮಾನಸೇ ॥ ೬೯ ॥

ಇಂದ್ರಾದೀನ್ ದ್ವಾದಶಾದಿತ್ಯಾನ್ ಲೇಭೇ ತ್ರೈಲೋಕ್ಯವಿಶ್ರುತಾನ್ |
ಸುಭಗಾ ರೋಹಿಣೀ ಮಾಘಾದ್ದಯಾಶೀಲಾ ಹ್ಯರುಂಧತೀ ॥ ೭೦ ॥

ಶಚೀ ಚ ರೂಪಸಂಪನ್ನಾ ಪ್ರಾಸಾದೇ ಸಾಪ್ತಭೂಮಿಕೇ |
ವಿಮಲೀಕೃತಶೋಭಾಢ್ಯೇ ನರ್ತಕೀ ಲಲಿತಾಜಿರೇ ॥ ೭೧ ॥

---

೬೭–೭೧. ಅನಂತರವೂ ಕೂಡ ಮೋಕ್ಷಸಾಧಕವಾದ ಕೆಲಸಗಳನ್ನು ಮಾಡುವ ಬುದ್ಧಿಯು ಉಂಟಾಗುತ್ತದೆ. ಅಗ್ನಿಗಳಲ್ಲಿ ಮಾಡುವ ಹೋಮ ಮುಂತಾದುವುಗಳನ್ನು ಪಾರಲೌಕಿಕವಾದ ಒಳ್ಳೆಯ ಬುದ್ಧಿಯಿಂದ ಮಾಡಿ ಆ ಹೋಮಗಳಾದ ಮೇಲೆ ತಪಸ್ಸು ದಾನಗಳನ್ನು ಮಾಡಬೇಕು. ಇದನ್ನು ಮಾಘ ಮಾಸದಲ್ಲಿ ಮಾಡಿದರೆ ಬಹುವಾದ ಫಲವುಂಟು ಮಾಘದಲ್ಲಿ ಸ್ನಾನವನ್ನು ಮಾಡಿದರೆ ಸಂಪತ್ತು ಬರುತ್ತದೆ. ಮಕ್ಕಳಾಗುತ್ತದೆ. ಸುಖವುಂಟಾಗುತ್ತದೆ. ಎಲ್ಲರೂ ಪುರಸ್ಕರಿಸುತ್ತಾರೆ. ಈ ನಾಲ್ಕೂ ಮಾಘಸ್ನಾನದಿಂದ ಉಂಟಾಗುವ ಫಲಗಳು. ಅದಲ್ಲದೆ ದೇಹವು ಕೊಳೆ ಹೋಗಿ ಶುದ್ಧಿಯಾಗುತ್ತದೆ. ಎಲ್ಲರೂ ಪ್ರೀತಿಸುವುದಕ್ಕೆ ಕಾರಣವಾಗಿ ಆಗುತ್ತದೆ. ಅದಿತಿಯು ಉಪವಾಸವಿದ್ದುಕೊಂಡು ಹನ್ನೆರಡು ಮಾಘಮಾಸಗಳ ಕಾಲ ಮಾನಸ ಸರೋವರದಲ್ಲಿ ಸ್ನಾನಮಾಡಿದಳು. ಅದರ ಫಲವಾಗಿ ಇಂದ್ರನನ್ನು ಹನ್ನೆರಡುಜನ ಆದಿತ್ಯರನ್ನೂ ಪಡೆದಳು. ಅವರು ಲೋಕದಲ್ಲಿ ಪ್ರಸಿದ್ಧರಾಗಿರುವರು. ಈ ಮಾಘಮಾಸದ ಸ್ನಾನಮಾಡಿದುದ ರಿಂದಲೇ ರೋಹಿಣಿಯು ಸುಂದರಿಯಾದಳು. ಆದರಿಂದಲೇ ಅರುಂಧತಿಯು ದಯಾವಂತಳಾದಳು. ಶಚೀದೇವಿಯು ರೂಪವತಿಯಾದಳು. ಮಾಘಮಾಸ ವಾಗಿದ್ದು ಮಕರಕ್ಕೆ ಸೂರ್ಯನೂ ಬಂದಿದ್ದಾಗ ಸ್ನಾನಮಾಡಿದರೆ ಅವರು ನಿರ್ಮಲ ವಾಗಿರುವ ಸುಂದರವಾದ ಮನೆಗಳಲ್ಲಿ ವಾಸಿಸುತ್ತಾರೆ. ಮತ್ತು ಅವರ ಮನೆಯ ಅಂಗಳಲ್ಲಿ ಸೂಳೆಯರೂ ಮನೋಹರವಾಗಿ ನರ್ತನ ಮಾಡುತ್ತಿರುತ್ತಾರೆ.

ದ್ವಿಪಕರ್ಣಮರುಚ್ಛನ್ನೇ ರೂಪವತ್ ಸ್ತ್ರೀಜನಾಕುಲೇ ।
ಗೀತಾವಾದಿತ್ರನಿರ್ಘೋಷೇ ಮಂಗಳಾಚಾರಶೋಭಿತೇ ॥ ೭೨ ॥

ವೇದಧ್ವನಿಪವಿತ್ರೇ ಚ ವಿದ್ವದ್ವಿಪ್ರೈರಲಂಕೃತೇ ।
ದ್ವಿಜಾರ್ಚನರತೇ ರಮ್ಯೇ ಸದಾತಿಥಿನಿಷೇವಿತೇ ॥ ೭೩ ॥

ಮುದಿತಾಸ್ತೇ ವಸಂತೀಹ ಯೈಃ ಸ್ನಾನಂ ಮಕರೇ ರವೌ ।
ಯೈರ್ದತ್ತಂ ಬಹುಧಾ ಮಾಘೇ ಮುರಾರಿಶ್ಚ ಪರಿಷ್ಟುತಃ ॥ ೭೪ ॥

ಇಷ್ಟವಸ್ತುಪರಿತ್ಯಾಗಾನ್ನಿಯಮಸ್ಯ ಚ ಪಾಲನಾತ್ ।
ಧರ್ಮಮೂಲಂ ಸದಾ ಮಾಘೋಽಧರ್ಮಮೂಲಂ ನಿಕೃಂತತಿ ॥ ೭೫ ॥

---

೭೨–೭೫. ಆನೆಗಳು ಆ ಮನೆಯಲ್ಲಿದ್ದುಕೊಂಡಿರುತ್ತವೆ. ರೂಪವತಿಯರಾದ ಹೆಂಗಸರು ಅಲ್ಲಿರುತ್ತಾರೆ. ಅನೇಕವಾದ ಗಾನಗಳೂ ವಾದ್ಯಗಳೂ ನಡೆಯುತ್ತಿರುತ್ತವೆ. ಮಂಗಳಕರವಾದ ಆಚಾರವು ಅಲ್ಲಿರುತ್ತದೆ. ವೇದದ ಧ್ವನಿಯಿಂದ ಪವಿತ್ರವಾಗಿರುತ್ತದೆ. ವಿದ್ವಾಂಸರೂ ಬ್ರಾಹ್ಮಣರೂ ಅಲ್ಲಿ ಬಹುವಾಗಿರುತ್ತಾರೆ. ಅಲ್ಲಿ ಯಾವಾಗಲೂ ಬ್ರಾಹ್ಮಣರ ಪೂಜೆಯು ನಡೆಯುತ್ತಿರುತ್ತದೆ. ಅತಿಥಿಗಳು ಯಾವಾಗಲೂ ಅಲ್ಲಿ ಬಂದಿರುತ್ತಾರೆ. ಇಂತಹ ಮನೆಗಳಲ್ಲಿ ಸಂತೋಷಗೊಂಡು ವಾಸಮಾಡುತ್ತಾರೆ. ಸ್ನಾನಮಾಡುವವರು ತಮಗೆ ಪ್ರೀತಿಪಾತ್ರವಾದ ಪದಾರ್ಥವನ್ನು ಬಿಟ್ಟುಬಿಡಬೇಕು. ನಿಯಮವನ್ನು ಸರಿಯಾಗಿ ಕಾಪಾಡಿಕೊಂಡಿರಬೇಕು. ಈ ರೀತಿಯಾಗಿ ಮಾಡುತ್ತ ಮಾಘಮಾಸದಲ್ಲಿ ಪ್ರಾತಃಸ್ನಾನ ಮಾಡಿಕೊಂಡು ದಾನಾದಿಗಳನ್ನು ಮಾಡುತ್ತ ಮುರಾರಿಯಾದ ವಿಷ್ಣುವನ್ನು ಪೂಜಿಸುತ್ತಿದ್ದರೆ ಮೇಲೆ ಹೇಳಿದಂತಹ ಮನೆಯಲ್ಲಿ ವಾಸವು ಲಭಿಸುತ್ತದೆ ಮಾಘಮಾಸವು ಧರ್ಮಕ್ಕೆ ಮೂಲವಾದುದು. ಅಧರ್ಮವನ್ನು ನಾಶಮಾಡುತ್ತದೆ.

ಕಾಮಮೂಲಫಲದ್ವಾರೋ ನಿಷ್ಕಾಮೋ ಮೋಕ್ಷದಸ್ಸದಾ ।
ಯೇ ಲೋಕಾ ದಾನಶೀಲಾನಾಂ ಯೇ ಲೋಕಾವಿಪಿನೌಕಸಾಂ ॥ ೭೬ ॥

ಲೋಕಾ ಯೇತಿಥಿಭಕ್ತಾನಾಂ ತೇ ಮಾಘಸ್ನಾಯಿನಾಂ ಸದಾ ।
ದೇವಲೋಕಾನ್ನಿವರ್ತಂತೇಪುಣ್ಯೈರನ್ಯೈಃಪರಂತಪ ॥ ೭೭ ॥

ಕದಾಚಿನ್ನನಿವರ್ತಂತೇಮಾಘಸ್ನಾನರತಾನರಾಃ ।
ನಾತಃ ಪರತರಂ ಕಿಂಚಿತ್ಪವಿತ್ರಂ ಪಾಪನಾಶನಂ ॥ ೭೮ ॥

ಏತದೇವ ಪರಂ ಪಥ್ಯಂ ಸದ್ಯೋದುರಿತನಾಶನಂ ।
ವಿದ್ಯಾಧರಾಯ ಸಂಗೀತಂ ಭೃಗುಣಾ ಮಣಿಪರ್ವತೇ ॥ ೭೯ ॥

---

೭೬–೭೮. ಕಾಮಕ್ಕೆ ಮೂಲವು. ಫಲಕ್ಕೆ ಬಾಗಿಲು. ನಿಷ್ಕಾಮವುಳ್ಳವನಾಗಿ ಸ್ನಾನಮಾಡಿದರೆ ಮೋಕ್ಷವು ಸಿಕ್ಕುತ್ತದೆ. ದಾನಮಾಡುವವರಿಗೂ ಕಾಡಿನಲ್ಲಿ ವಾಸಮಾಡಿಕೊಂಡು ತಪಸ್ಸು ಮಾಡುವವರಿಗೂ ಅತಿಥಿಪೂಜೆ ಮಾಡುವವರಿಗೂ ಯಾವ ಲೋಕಗಳು ಬರುತ್ತವೆಯೋ ಆ ಲೋಕಗಳು ಈ ಮಾಘ ಸ್ನಾನಮಾಡುವವರಿಗೆ ಬರುತ್ತವೆ. ಬೇರೆಯ ರೀತಿಯಾದ ಪುಣ್ಯಗಳನ್ನು ಮಾಡಿದವರು ದೇವಲೋಕದಲ್ಲಿ ಸುಖವನ್ನು ಅನುಭವಿಸಿ ಅನಂತರ ಮತ್ತೆ ಈ ಲೋಕಕ್ಕೆ ಬರುತ್ತಾರೆ. ಆದರೆ ಈ ಮಾಘಸ್ನಾನ ಮಾಡಿದವರು ಯಾವಾಗಲೂ ಹಿಂದಿರುಗುವುದೇ ಇಲ್ಲ. ಈ ಮಾಘಸ್ನಾನಕ್ಕಿಂತಲೂ ಪವಿತ್ರವಾದುದು ಮತ್ತೊಂದಿಲ್ಲ. ಪಾಪನಾಶಕವೂ ಮತ್ತೊಂದಿಲ್ಲ. ಇದಕ್ಕಿಂತಲೂ ಬೇರೆ ತಪಸ್ಸಿಲ್ಲ. ಇದಕ್ಕಿಂತ ಉತ್ತಮವಾದುದು ಮತ್ತೊಂದು ಬೇರೆ ಇಲ್ಲವೇ ಇಲ್ಲ.

೭೯. ಇದೇ ಬಹು ಉತ್ತಮವಾದುದು. ಒಡನೆಯೇ ಪಾಪಗಳನ್ನು ನಾಶಮಾಡುತ್ತದೆ. ಇದನ್ನು ಭೃಗು ಮಹರ್ಷಿಯು ವಿದ್ಯಾಧರನಿಗೆ ಮಣಿ ಪರ್ವತದಲ್ಲಿ ಹೇಳಿದನು.

**ಯೋ ಮಾಘಮಾಸ್ಯುಷಸಿ ಸೂರ್ಯಕರಾತಿತಾಮ್ರೇ।**
**ಸ್ನಾನಂ ಸದಾ ಚರತಿ ಬಾಹ್ಯನದೀತಟಾಕೇ।**
**ಉದ್ಧೃತ್ಯ ಸಪ್ತಪುರುಷಾನ್ ಪಿತೃಮಾತೃವಂಶೇ।**
**ಸ್ವರ್ಗಂ ಪ್ರಯಾತ್ಯಮರದೇಹಧರೋ ನರೋಽಸೌ ॥೮೦॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಮಾಘೇ ಸ್ನಾನ ಮಹಿಮಾ ವರ್ಣನಂ ನಾಮ ವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೮೦. ಮಾಘಮಾಸದ ಪ್ರಾತಃಕಾಲದಲ್ಲಿ ಆಕಾಶವು ಸೂರ್ಯನ ಕಿರಣಗಳಿಂದ ಕೆಂಪಗಾಗಿರುವಾಗ ಯಾವನು ಹೊರಗಡೆಯಿರುವ ನದಿಯಲ್ಲಿಯಾಗಲಿ ಕೆರೆಯಲ್ಲಿಯಾಗಲಿ ಕೊಳದಲ್ಲಿಯಾಗಲಿ ಯಾವುದರಲ್ಲಿಯೇ ಆಗಲಿ ಸ್ನಾನ ಮಾಡಿದರೆ ಅವನು ತನ್ನ ತಂದೆಯ ವಂಶದಲ್ಲಿ ಹತ್ತು ತಲೆಯವರನ್ನೂ ತಾಯಿಯ ವಂಶದಲ್ಲಿ ಹತ್ತು ತಲೆಯವರನ್ನೂ ಸ್ವರ್ಗವನ್ನು ಸೇರುವಂತೆ ಮಾಡಿ ತಾನೂ ದೇವತೆಗಳ ದೇಹವನ್ನು ಧರಿಸಿ ಸ್ವರ್ಗವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪ ಸಂವಾದದ ಮಾಘ ಮಹಿಮೆಯಲ್ಲಿ ಮಾಘ ಸ್ನಾನದ ಮಹಿಮೆಯ ವರ್ಣನೆ ಎಂಬ ಇನ್ನೂರ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥



॥ ದಿಲೀಪ ಉವಾಚ ॥

ಬ್ರಹ್ಮನ್ ಕದಾ ಭೃಗುರ್ವಿಪ್ರೋ ನಿಜಗಾದ ಮಹೀಧರೇ ।
ತಸ್ಮೈ ಧರ್ಮೋಪದೇಶಂ ತತ್ಕಥ್ಯತಾಂ ಮೇ ಕುತೂಹಲಾತ್ ॥ ೧ ॥

॥ ಶ್ರೀವಸಿಷ್ಠ ಉವಾಚ ॥

ದ್ವಾದಶಾಬ್ದಂ ಪುರಾ ರಾಜನ್ನ ವವರ್ಷ ಬಲಾಹಕಃ ।
ತೇನೋದ್ವಿಗ್ನಾಃ ಪ್ರಜಾಸ್ಸರ್ವಾ ಗತಾಃ ಕ್ಷೀಣಾ ದಿಶೋ ದಶ ॥ ೨ ॥

ಖಿಲೀಭೂತೇ ತದಾ ಮಧ್ಯೇ ಹಿಮವತ್ಸಹ್ಯಯೋರ್ನೃಪ ।
ಸ್ವಾಹಾ ಸ್ವಧಾ ವಷಟ್ಕಾರವೇದಾಧ್ಯಯನವರ್ಜಿತೇ ॥ ೩ ॥

---

### ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯವು



೧. ದಿಲೀಪನು ಹೇಳಿದನು–ಎಲೈ ಗುರುವೇ! ಆ ಭೃಗುವು ಯಾವಾಗ ಆ ಮಣಿಪರ್ವತದಲ್ಲಿ ವಿದ್ಯಾಧರನಿಗೆ ಧರ್ಮೋಪದೇಶವನ್ನು ಮಾಡಿದನು? ಎಂಬುದನ್ನು ತಿಳಿಸು. ನನಗೆ ಬಹು ಕುತೂಹಲವಿದೆ.

೨. ಶ್ರೀ ವಸಿಷ್ಠನು ಹೇಳಿದನು–ಎಲೈ ರಾಜನೆ! ಪೂರ್ವದಲ್ಲಿ ಹನ್ನೆರಡು ವರ್ಷಗಳ ಕಾಲ ಮಳೆಯು ಬರಲೇ ಇಲ್ಲ. ಅದರಿಂದ ಹೆದರಿದ ಬಹು ಜನರು ಕೆಟ್ಟೂ ಸತ್ತೂ ಕಳೆದುಳಿದವರು ಎಲ್ಲೆಲ್ಲೋ ಹೊರಟು ಹೋದರು.

೩-೪. ಆ ಕಾಲದಲ್ಲಿ ಹಿಮವತ್ಪರ್ವತ ಸಹ್ಯಪರ್ವತಗಳ ಮಧ್ಯಭಾಗವು ಕ್ಷೀಣವಾಯಿತು. ಸ್ವಾಹಾ ಸ್ವಧಾ ವಷಟ್ಕಾರಗಳನ್ನು ಮಾಡುವವರಿಲ್ಲದೆ

ಸೋಽಪಪ್ಲವೇ ತದಾ ಲೋಕೇ ಲುಪ್ತಧರ್ಮೇ ಚ ನಿಷ್ಪ್ರಭೇ ।
ಫಲಮೂಲಾನ್ನಪಾನೀಯಶೂನ್ಯೇ ವೈ ಭೂತಲೇ ತದಾ ॥ ೪ ॥

ನಾನಾವಿಧತರುಚ್ಛನ್ನರಮ್ಯರೇವಾತಟಾಶ್ರಮಾತ್ ।
ಸಹಶಿಷ್ಯೈರ್ವಿನಿಷ್ಕ್ರಮ್ಯ ಹಿಮಾದ್ರಿಂ ಸಂಶ್ರಿತೋ ಭೃಗುಃ ॥ ೫ ॥

ತತ್ರ ತಿಷ್ಠತಿ ಕೈಲಾಸಗಿರೇಃ ಪಶ್ಚಿಮತೋ ಗಿರಿಃ ।
ಮಣಿಕೂಟ ಇತಿಖ್ಯಾತೋ ಹೇಮರತ್ನಶಿಲೋಚ್ಚಯಃ ॥ ೬ ॥

ಅಧೋರ್ಧ್ವಸ್ಫಟಿಕಶ್ವೇತೋ ಮಧ್ಯೇ ನೀಲಶಿಲೋ ಗಿರಿಃ ।
ಭೂತಿಭಿಸ್ಸರ್ವತಶ್ಶುಭ್ರೋ ನೀಲಕಂಠ ಇವಾಬಭೌ ॥ ೭ ॥

ಇಂದ್ರನೀಲಶಿಲಾಢ್ಯಸ್ತು ಹೇಮರೇಖಾನ್ತರಾನ್ತರಃ ।
ಸ್ಫುರದ್ವಿದ್ಯುಲ್ಲತಃ ಕೃಷ್ಣಜೀಮೂತ ಇವ ರಾಜತೇ ॥ ೮ ॥

---

ಹೋದರು. ಎಂದರೆ ಯಾಗಗಳೂ ಶ್ರಾದ್ಧಗಳೂ ನಡೆಯದೆ ಹೋದುವು. ಅಧ್ಯಯನ ಮಾಡುವವರೂ ಇಲ್ಲದೆ ಹೋದರು. ಎಲ್ಲಿಯೂ ಕಳೆಯೆಂಬುದೇ ಇಲ್ಲವಾಯಿತು. ಹಣ್ಣು ಗೆಡ್ಡೆ ನೀರು ಇವು ಒಂದೂ ಭೂಮಿಯಲ್ಲಿ ಎಲ್ಲಿಯೂ ಸಿಕ್ಕದೆ ಹೋಯಿತು.

೫. ಬಗೆಬಗೆಯಾದ ಮರಗಳಿಂದ ಸೊಂಪಾಗಿ ಮನೋಹರವಾಗಿದ್ದ ಆ ರೇವಾನದಿಯಲ್ಲಿರುವ ಆಶ್ರಮವೂ ಕೂಡ ಈ ತೊಂದರೆಗೆ ಒಳಗಾಗಲು ಭೃಗು ಋಷಿಯು ಅದನ್ನು ಬಿಟ್ಟು ಶಿಷ್ಯರೊಡನೆ ಹೊರಟು ಹಿಮವತ್ಪರ್ವತಕ್ಕೆ ಹೋದನು.

೬. ಕೈಲಾಸಪರ್ವತದ ಪಶ್ಚಿಮಕ್ಕೆ ಮಣಿಕೂಟವೆಂಬುದೊಂದು ಪ್ರಸಿದ್ಧ ನಾದ ಪರ್ವತವಿರುವುದು. ಅದು ಚಿನ್ನದ ಮತ್ತು ರತ್ನಗಳ ಕಲ್ಲುಗಳಿಂದಲೇ ತುಂಬಿರುವುದು.

೭. ಆ ಪರ್ವತದ ಮೇಲುಗಡೆಯಲ್ಲಿ ಚಿನ್ನದಂತೆ ಇದ್ದುದಲ್ಲದೆ ತಳಭಾಗ ದಲ್ಲಿ ಸ್ಫಟಿಕಶಿಲೆಗಳಿಂದ ಬೆಳ್ಳಗೂ ಮಧ್ಯಭಾಗದಲ್ಲಿ ನೀಲಶಿಲೆಯಿಂದ ಕಪ್ಪಗೂ ಇದ್ದುಕೊಂಡಿದೆ. ಸುತ್ತಲೂ ಸಂಪತ್ತಿನಿಂದ ತುಂಬಿ ಶುಭ್ರವಾಗಿ ನೀಲಿಯ ಕತ್ತುಳ್ಳ ಈಶ್ವರನಂತಿದ್ದಿತು.

೮-೯. ಇಂದ್ರನೀಲಶಿಲೆಯಿಂದ ಕೂಡಿಕೊಂಡು ಮಧ್ಯದಲ್ಲಿ ಚಿನ್ನದ ರೇಖೆಯಿಂದ ಕೂಡಿದ್ದ ಆ ಪರ್ವತವು ಮಿಂಚನ್ನು ಹೊಂದಿರುವ ಆ ಕರಿಯ

**ಮೂರ್ಧ್ನಿ ನೀಲಶಿಲಃ ಶೈಲಃ ಸೌಧಕಾಂಚನಮೇಖಲಃ ।**
**ನಾರಾಯಣ ಇವಾಭಾತಿ ಪರಿಪೀತಾಂಬರಾಂಚಿತಃ ॥ ೯ ॥**

**ಆಮೇಖಲಸುನೀಲಾಭೋ ಮಧ್ಯೇ ಮಧ್ಯೇ ಸಿತೋಪಲಃ ।**
**ಸತಾರಕಮಿವ ವ್ಯೋಮ ರರಾಜ ಸ ಮಹೀಧರಃ ॥ ೧೦ ॥**

**ರತ್ನೋಪಲಸ್ಫುರದ್ದೀಪ್ತಿ ದೀಪ್ತಿದಿವ್ಯೌಷಧೀಧರಃ ।**
**ಬಹುದ್ಯೋತಕರೋ ಭಾತಿ ದ್ವಿತೀಯ ಇವ ಚಂದ್ರಮಾಃ ॥ ೧೧ ॥**

**ಅಧಿತ್ಯಕಾಸು ಸಂಗೀತೈಃ ಕಿನ್ನರೀಣಾಂ ಸಕೀಚಕೈಃ ।**
**ಯುಕ್ತೋ ರಂಭಾಪತಾಕಾಭಿರುತ್ಸವೀವ ಸದಾಚಲಃ ॥ ೧೨ ॥**

---

ಮೋಡದಂತಿದ್ದಿತು. ತಲೆಯಮೇಲೆ ಕಪ್ಪು ಕಲ್ಲುಗಳೂ ತಪ್ಪಲಿನಲ್ಲಿ ಚಿನ್ನದ ಕಲ್ಲುಗಳೂ ಇದ್ದುದರಿಂದ ನಾರಾಯಣನಂತೆ ಕಾಣುತ್ತಿದ್ದಿತು. ಮತ್ತು ಕೃಷ್ಣನಂತೆ ಸುತ್ತಲೂ ಪೀತವರ್ಣದ ಬಟ್ಟೆಯನ್ನು ಹೊದ್ದುಕೊಂಡು ಇದ್ದಂತೆ ಇದ್ದಿತು.

೧೦. ಮಧ್ಯಭಾಗದವರೆಗೂ ನೀಲಿಯ ಬಣ್ಣವನ್ನು ಹೊಂದಿದ್ದು ಮಧ್ಯಮಧ್ಯದಲ್ಲಿ ಚಂದ್ರಕಾಂತಶಿಲೆಯಿದ್ದುದರಿಂದ ನಕ್ಷತ್ರದಿಂದ ಕೂಡಿಕೊಂಡಿದ್ದ ಆಕಾಶದಂತೆ ಪ್ರಕಾಶಿಸುತ್ತಿದ್ದಿತು.

೧೧. ರತ್ನಗಳ ಕಲ್ಲುಗಳ ಕಾಂತಿಯಿಂದಲೂ ದೀಪದಂತೆ ಉರಿಯುತ್ತಿರುವ ಮಹೌಷಧಿ ಎಂಬ ಲತೆಗಳಿಂದಲೂ ಕೂಡಿಕೊಂಡಿರುವುದು. ಹೀಗಿರುವುದರಿಂದ ಬಹು ಕಾಂತಿಯುಳ್ಳದ್ದಾಗಿ ಎರಡನೆಯ ಚಂದ್ರನಂತೆ ಪ್ರಕಾಶಿಸುತ್ತಾ ಇರುವುದು.

೧೨. ಈ ಪರ್ವತದ ಮೇಲುಗಡೆಯಲ್ಲಿ ಬಿರುಗಾಳಿಗೆ ಕೂಗುತ್ತಿರುವುದರಿಂದಲೂ ಬಾಳೆಯ ಮರಗಳು ಎತ್ತರವಾಗಿ ಬೆಳೆದಿರುವುದರಿಂದಲೂ ಕೂಡ ರಂಭೆಯೇ ಮುಂತಾದವರು ಪತಾಕೆ ಮುಂತಾದ ಕೈಕರಣಗಳಿಂದ ನಾಟ್ಯವಾಡುತ್ತ ಸಂಗೀತವನ್ನು ಹಾಡುತ್ತಿರುವರೋ ಎಂಬಂತಿದ್ದು ಯಾವಾಗಲೂ ತನ್ನಲ್ಲಿ ಉತ್ಸವವನ್ನು ಹೊಂದಿರುವಂತಿದ್ದಿತು.

ಹರಿತೋಪಲವೈಡೂರ್ಯಪದ್ಮರಾಗಸಿತಾಶ್ಮನಾಂ |
ಇಂದ್ರಾಶ್ಮಮಂಡಲೈಃ ಸೋಽಥ ಇಂದ್ರಚಾಪೈರಿವಾವೃತಃ || ೧೩ ||

ಸರ್ವಧಾತುಮಯೈರ್ಹೇಮೈರ್ನಾನಾರತ್ನಪ್ರಭಾಸಿತೈಃ ।
ಸೋಽಗ್ನಿಜ್ವಾಲೈರಿವೋಚ್ಛ್ರಸ್ರೈಃ ಶೃಂಗೈಸ್ಸರ್ವತ್ರ ವೇಷ್ಟಿತಃ || ೧೪ ||

ತಸ್ಯಾಗತ್ಯ ನಿತಂಬೇಷು ಶಿಲಾಸು ಮಸೃಣಾಸು ಚ |
ವಿದ್ಯಾಧರ್ಯಃ ಪ್ರಸೇವಂತೇ ಸ್ವಪತೀನ್ಕಾಮವಿಕ್ಲಬಾಃ || ೧೫ ||

ನಿರುದ್ಧಾನ್ತರ್ಮರುನ್ಮಾರ್ಗಾ ಜಿತಕ್ಲೇಶಾ ವಿರಾಗಿಣಃ |
ಧ್ಯಾಯಂತ್ಯಹರ್ನಿಶಂ ಬ್ರಹ್ಮ ಹ್ಯಸ್ಯ ಸಾನುಗುಹಾಸು ಚ || ೧೬ ||

ಸಾಕ್ಷಸೂತ್ರಕರಾಸ್ಸಿದ್ಧಾ ಅರ್ಧೋನ್ಮೀಲಿತಲೋಚನಾಃ ।
ಆರಾಧಯಂತಿ ಭೂತೇಶಂ ಸುಂದರೀಷು ದರೀಷು ಚ || ೧೭ ||

---

೧೩. ಪಚ್ಚೆಯಮಣಿ ವೈಡೂರ್ಯ ಪದ್ಮರಾಗ ವಜ್ರದಕಲ್ಲು ಇಂದ್ರನೀಲ ಮಣಿಗಳ ಗುಂಪಿನಿಂದ ಹೊರಡುವ ಕಾಂತಿಗಳಿಂದ ಈ ಪರ್ವತವು ಕಾಮನ ಬಿಲ್ಲನ್ನು ಹೊಂದಿದಂತೆ ಇರುತ್ತಿದ್ದಿತು.

೧೪. ಎಲ್ಲಾ ಧಾತುಗಳಲ್ಲಿಯೂ ಕೂಡಿಕೊಂಡಿರುವ ಚಿನ್ನವು ಬಗೆಬಗೆಯಾದ ರತ್ನಗಳ ಕಾಂತಿಯಿಂದ ಪ್ರಕಾಶಿಸಿ ತನ್ನ ಕಾಂತಿಯನ್ನು ಹೊರಕ್ಕೆ ಸೂಸುತ್ತಿದ್ದುದನ್ನು ನೋಡಿದರೆ ಬೆಂಕಿಯ ಜ್ವಾಲೆಯಿಂದ ಕೂಡಿರುವ ಕೋಡುಗಲ್ಲುಗಳನ್ನು ಈ ಪರ್ವತವು ಹೊಂದಿದೆ ಎಂಬಂತಿದ್ದಿತು.

೧೫. ಈ ಪರ್ವತದ ತಪ್ಪಲು ಪ್ರದೇಶದಲ್ಲಿ ಮೃದುವಾಗಿರುವ ಚಪ್ಪಡಿಗಳ ಮೇಲೆ ಕಾಮುಕಿಯರಾದ ಈ ವಿದ್ಯಾಧರಿಯರು ಬಂದು ತಮ್ಮ ಪತಿಗಳೊಡನೆ ಸುಖಿಸುತ್ತಾ ಇರುವರು.

೧೬ ಈ ಪರ್ವತದ ತಪ್ಪಲು ಪ್ರದೇಶದಲ್ಲಿ ಯೋಗಿಗಳು ಜಿತೇಂದ್ರಿಯರಾಗಿಯೂ ಕಷ್ಟಸಹಿಷ್ಣುಗಳಾಗಿಯೂ ಇದ್ದುಕೊಂಡು ಶ್ವಾಸಧಾರಣೆಯನ್ನು ಮಾಡಿಕೊಂಡು ಯಾವಾಗಲೂ ಬ್ರಹ್ಮಪದಾರ್ಥವನ್ನು ಧ್ಯಾನಮಾಡುತ್ತಿರುವರು.

೧೭. ಸಿದ್ಧಪುರುಷರು ಕೈಯ್ಯಲ್ಲಿ ಜಪದ ಸರವನ್ನು ಹಿಡಿದುಕೊಂಡು ಸುಂದರವಾದ ಗುಹೆಗಳಲ್ಲಿದ್ದುಕೊಂಡು ಅರ್ಧಕಣ್ಣುಗಳನ್ನು ಬಿಟ್ಟುಕೊಂಡು ಈಶ್ವರನನ್ನು ಭಕ್ತಿಯಿಂದ ಧ್ಯಾನಮಾಡುತ್ತಿರುವರು.

ಮಂದಾರಕುಸುಮಾಮೋದಸುರಭೀಕೃತದಿಙ್ಮುಖಃ ।
ಪತನ್ನಿರ್ಝರಿಣೀವಾರಿರ್ಝುಂಕಾರಮುಖರಸ್ಸದಾ ॥ ೧೮ ॥

ಉಪತ್ಯಕಾಸು ಖೇಲದ್ಭಿಃ ವನಾಶ್ವೈಃ ಕಲಭೈರ್ಗಜೈಃ ।
ಕಸ್ತೂರೀಮೃಗಯೂಥೈಶ್ಚ ಚಾರುಚಿತ್ರಮೃಗೈಸ್ತಥಾ ॥ ೧೯ ॥

ವಿಲಸಂಶ್ಚಮರೀವೃಂದೈರ್ವಿಚಿತ್ರೈಃ ಶ್ವಾಪದೈಸ್ತಥಾ ।
ನದತ್ಪಾರಾವತೈಃ ಶ್ವೇತೈಶ್ಚಕೋರೈಃ ಕಲಕೋಕಿಲೈಃ ॥ ೨೦ ॥

ರಾಜಹಂಸೈರ್ಮಯೂರೈಶ್ಚ ಸದಾ ರಮ್ಯಃ ಸ ಪರ್ವತಃ ।
ಸೇವ್ಯಮಾನಸ್ಸದಾ ದೇವೈಃ ಗುಹ್ಯಕೈರಪ್ಸರೋಗಣೈಃ ॥ ೨೧ ॥

॥ ದಿಲೀಪ ಉವಾಚ ॥

ಸರ್ವಾಶ್ಚರ್ಯಮಯಶ್ಶೈಲಃ ಸರ್ವಸಿದ್ಧಸಮಾಶ್ರಯಃ ।
ಭಗವನ್ ಕಿಯದುಚ್ಛ್ರಾಯಃ ಕಿಯದಾಯಾಮವಿಸ್ತರಃ ॥ ೨೨ ॥

---

೧೮. ಈ ಪರ್ವತದಲ್ಲಿ ಮಂದಾರ ವೃಕ್ಷಗಳಿರುವುದರಿಂದ ಅದರ ಹೂವು ಎಲ್ಲಾ ಕಡೆಯನ್ನೂ ವಾಸನೆಯನ್ನಾಗಿ ಮಾಡುತ್ತದೆ. ಮತ್ತು ಗಿರಿನದಿಗಳು ಎಲ್ಲಾ ಕಡೆಯಲ್ಲಿಯೂ ಕೆಳಕ್ಕೆ ಬೀಳುತ್ತಿರುವುದರಿಂದ ಆ ಝುಂಕಾರದ ಶಬ್ದವೂ ದಿಕ್ಕುಗಳನ್ನು ತುಂಬುತ್ತಿರುವುದು.

೧೯–೨೧. ಕಾಡುಕುದುರೆ ಆನೆ ಆನೆಯಮರಿ ಕಸ್ತೂರಿಮೃಗ ಚಿತ್ರವಾದ ವರ್ಣವುಳ್ಳ ಜಿಂಕೆಗಳು ಚಮರೀಮೃಗ ಅನೇಕ ಬಗೆಯಾದ ಕ್ರೂರಮೃಗಗಳು ಬಿಳಿಯ ಪಾರಿವಾಳಗಳು ಚಕೋರಗಳು ಕೋಕಿಲೆಗಳು ರಾಜಹಂಸಗಳು ನವಿಲುಗಳು ಇವು ಪರ್ವತದ ತಪ್ಪಲು ಪ್ರದೇಶದಲ್ಲಿದ್ದುಕೊಂಡು ಯಾವಾಗಲೂ ರಮಿಸುತ್ತಿರುತ್ತವೆ. ದೇವತೆಗಳು ಗುಹ್ಯಕರು ಅಪ್ಸರರು ಇವರು ಈ ಪರ್ವತವನ್ನು ಸೇವಿಸುತ್ತಿರುವುದರಿಂದ ಬಹು ರಮ್ಯವಾದುದಾಗಿ ಇರುತ್ತದೆ.

೨೨. ದಿಲೀಪನು ಹೇಳಿದನು–ಎಲೈ ಪೂಜ್ಯನೇ ! ಈ ಪರ್ವತವು ನಾನಾ ಬಗೆಯಾದ ಆಶ್ಚರ್ಯಗಳಿಗೆ ನೆಲೆಯಾಗಿದೆ. ಅನೇಕ ಬಗೆಯಾದ ಅದ್ಭುತಗಳಿಗೂ ಬೀಡಾಗಿದೆ. ಇಂತಹ ಈ ಪರ್ವತವು ಎಷ್ಟು ಎತ್ತರವಿರುವುದು ? ಮತ್ತು ಎಷ್ಟು ಅಗಲಕ್ಕೆ ಹರಡಿಕೊಂಡಿರುವುದು ?

॥ ವಸಿಷ್ಠ ಉವಾಚ ॥

ಷಟ್ ತ್ರಿಂಶದ್ಯೋಜನೋಚ್ಛ್ರಾಯೋ ಮಸ್ತಕೇ ದಶ ಯೋಜನಃ ।
ಆಯಾಮವಿಸ್ತರಾಭ್ಯಾಂ ಸ ಮೂಲೇ ಷೋಡಶ ಯೋಜನಃ ॥ ೨೩ ॥

ಹರಿಚಂದನಮಂದಾರಚೂತರಾಜಿವಿರಾಜಿತಃ ।
ದೇವದಾರುದ್ರುಮಾಕೀರ್ಣಃ ಸರಳಾರ್ಜುನಶೋಭಿತಃ ॥ ೨೪ ॥

ಕಾಲಾಗುರುಲವಂಗೈಲಾನಿಕುಂಜೈಶ್ಚ ಲತಾಗೃಹೈಃ ।
ವಿರಾಜತೇ ಗಿರಿಶ್ರೇಷ್ಠಃ ಸದಾ ಪುಷ್ಪಃ ಸದಾ ಫಲಃ ॥ ೨೫ ॥

ತಂ ದೃಷ್ಟ್ವಾ ಪರ್ವತಶ್ರೇಷ್ಠಂ ರಮ್ಯಂ ದುರ್ಭಿಕ್ಷಪೀಡಿತಃ ।
ಭೃಗುಶ್ಚಕಾರ ತತ್ರೈವ ವಸತಿಂ ಹೃಷ್ಟಮಾನಸಃ ॥ ೨೬ ॥

ತಸ್ಮಿನ್ ಮನೋಹರೇ ಶೈಲೇ ವನೇಷೂಪವನೇಷು ಚ ।
ಚಿರಕಾಲಂ ವಸಂಸ್ತೇಪೇ ತಪಸ್ಸುಚರಿತೋ ಭೃಗುಃ ॥ ೨೭ ॥

---

೨೩. ವಸಿಷ್ಠನು ಹೇಳಿದನು-ಈ ಪರ್ವತವು ಮೂವತ್ತಾರು ಯೋಜನಗಳು ಎತ್ತರವಿದೆ. ಮೇಲುಭಾಗದ ಅಗಲವು ಹತ್ತು ಯೋಜನವಿದೆ. ಬುಡದ ಸುತ್ತಳತೆಯು ಹದಿನಾರು ಯೋಜನಗಳಿವೆ.

೨೪-೨೫. ಹರಿಚಂದನ ಮಂದಾರ ಮಾವು ದೇವದಾರು ಮತ್ತಿ ಸರಳದ ಮರ ಕಾಲಾಗರುವೃಕ್ಷ ಲವಂಗದ ಬಳ್ಳಿ ಏಲಕ್ಕಿ ಗಿಡ ಅನೇಕವಾದ ಪೊದರುಗಳು ಬಳ್ಳಿಗಳು ಇವುಗಳಿಂದ ಈ ಪರ್ವತವು ಪ್ರಕಾಶಿಸುತ್ತಿದೆ.

೨೬. ದುರ್ಭಿಕ್ಷದಿಂದ ತೊಂದರೆಪಟ್ಟಿರುವ ಈ ಭೃಗುವು ಈ ಪರ್ವತವು ಬಹು ಫಲವತ್ತಾಗಿಯೂ ಸುಂದರವಾಗಿಯೂ ಇರುವುದನ್ನು ನೋಡಿ ಅಲ್ಲಿಯೇ ಆಶ್ರಮವನ್ನು ಮಾಡಿಕೊಂಡನು.

೨೭. ಇಂತಹ ಮನೋಹರವಾದ ಆ ಪರ್ವತದಲ್ಲಿರುವ ವನಗಳಲ್ಲಿಯೂ ಉಪವನಗಳಲ್ಲಿಯೂ ಆ ಭೃಗುವು ವಾಸಮಾಡಿಕೊಂಡು ಬಹುಕಾಲ ತಪಸ್ಸು ಮಾಡುತ್ತಲಿದ್ದನು.

ಏವಂ ತಿಷ್ಠತಿ ರಾಜೇಂದ್ರ ದ್ವಿಜೇ ಸ್ವಾಶ್ರಮವಾಸಿನಿ ।
ಅವತೀರ್ಣಾಗತೌ ಶೈಲಾತ್ಸ್ವವಿದ್ಯಾಧರದಂಪತೀ ॥ ೨೮ ॥

ಸಮಾಗಮ್ಯ ಮುನಿಂ ನತ್ವಾ ಸ್ಥಿತೌ ತಾವತಿದುಃಖಿತೌ ।
ತಥಾವಿಧೌ ಚ ತೌ ದೃಷ್ಟ್ವಾ ಮಂಜುವಾಕ್ಯಂ ದ್ವಿಜೋಽವದತ್ ॥ ೨೯ ॥

॥ ಭೃಗುರುವಾಚ ॥

ವದ ವಿಧ್ಯಾಧರ ಪ್ರೀತ್ಯಾ ಯುವಾಂ ಕಿಮಿತಿ ದುಃಖಿತೌ ॥ ೩೦ ॥

॥ ವಸಿಷ್ಠ ಉವಾಚ ॥

ಶ್ರುತ್ವಾ ತಸ್ಯ ಮುನೇರ್ವಾಕ್ಯಂ ಪ್ರಾಹ ವಿದ್ಯಾಧರೋ ದ್ವಿಜಂ ॥ ೩೧ ॥

॥ ವಿದ್ಯಾಧರ ಉವಾಚ ॥

ಶ್ರೂಯತಾಂ ತದ್ದ್ವಿಜಶ್ರೇಷ್ಠ ಮಮ ದುಃಖಸ್ಯ ಕಾರಣಂ ।
ಸುಕೃತಸ್ಯ ಫಲಂ ಪ್ರಾಪ್ಯ ಪ್ರಾಪ್ತವಾಂಸ್ತ್ರಿದಶಾಲಯಂ ॥ ೩೨ ॥

---

೨೮. ಎಲೈ ರಾಜೇಂದ್ರನಾದ ದಿಲೀಪನೇ ! ಭೃಗುವು ಅಲ್ಲಿ ಆಶ್ರಮವನ್ನು ಕಟ್ಟಿಕೊಂಡು ಈ ರೀತಿಯಾಗಿ ಇರುತ್ತಿರಲು ಒಂದುಸಾರಿ ವಿದ್ಯಾಧರ ದಂಪತಿಗಳಿಬ್ಬರು ಆ ಪರ್ವತದ ಮೇಲಿನಿಂದ ಇಳಿದು ಕೆಳಗೆ ಬಂದರು.

೨೯. ಅವರಿಬ್ಬರೂ ಅಲ್ಲಿಗೆ ಬಂದು ಆ ಋಷಿಗೆ ನಮಸ್ಕರಿಸಿ ಅತಿ ದುಃಖದಿಂದ ನಿಂತುಕೊಂಡರು. ಅವರು ಹಾಗೆ ನಿಂತಿರುವುದನ್ನು ಈ ಋಷಿಯು ನೋಡಿ ಒಳ್ಳೆಯ ಮಾತಿನಿಂದ ಇಂತೆಂದನು.

೩೦. ಭೃಗುವು ಹೇಳಿದನು-ಎಲೈ ವಿದ್ಯಾಧರನೇ ! ನಿನಗೆ ಬಂದಿರುವ ಕಷ್ಟವೇನೆಂಬುದನ್ನು ನಿಸ್ಸಂಕೋಚವಾಗಿ ನನಗೆ ತಿಳಿಸು.

೩೧. ವಸಿಷ್ಠನು ಹೇಳಿದನು-ಆ ಋಷಿಯು ಹೀಗೆ ಹೇಳಿದುದನ್ನು ಕೇಳಿ ವಿದ್ಯಾಧರನು ಆ ಋಷಿಯನ್ನು ಕುರಿತು ಇಂತೆಂದು ಹೇಳಿದನು.

೩೨. ವಿದ್ಯಾಧರನು ಹೇಳಿದನು-ಎಲೈ ಬ್ರಾಹ್ಮಣಶ್ರೇಷ್ಠನೇ ! ನನ್ನ ದುಃಖಕ್ಕೆ ಕಾರಣವನ್ನು ಕೇಳು ! ನಾನು ಮಾಡಿದ ಪುಣ್ಯಕ್ಕೆ ಫಲರೂಪವಾಗಿ ಸ್ವರ್ಗವನ್ನು ಹೊಂದಿದೆನು.

ಲಬ್ಧ್ವಾಪಿ ದೇವತಾದೇಹಂ ದಿವ್ಯಯೋಷಿತ್ಸುಖಂ ತಥಾ ।
ದಿವ್ಯಸೌಖ್ಯಾನುಭೂತಿಂ ಚ ಮುಖಂ ವ್ಯಾಘ್ರಸ್ಯ ಮೇಽಭವತ್ ॥ ೩೩ ॥

ನ ಜಾನೇ ಕರ್ಮಣಃ ಕಸ್ಯ ವಿಪಾಕಸ್ಸಮುಪಸ್ಥಿತಃ ।
ಇತಿ ಸಂಸ್ಮೃತ್ಯ ಸಂಸ್ಮೃತ್ಯ ನ ಲೇಭೇ ಶರ್ಮ ಮೇ ಮನಃ ॥ ೩೪ ॥

ಅನ್ಯಚ್ಚ ಶ್ರೂಯತಾಂ ವಿಪ್ರ ಯೇನ ಮೇ ವ್ಯಾಕುಲಂ ಮನಃ ।
ಜಾಯೇಯಂ ಮಮ ಕಲ್ಯಾಣೀ ಮಂಜುವಾಣೀ ಸುರೂಪಿಣೀ ॥ ೩೫ ॥

ನೃತ್ಯಗೀತಕಲಾಭಿಜ್ಞಾ ಸರ್ವಸದ್ಗುಣಶಾಲಿನೀ ।
ಯಸ್ಮಿನ್ ಕಾಲೇ ಕುಮಾರೀಯಂ ತದೈವಾಬಲಯಾನಯಾ ॥ ೩೬ ॥

ವಿಪಂಚೀಂ ಪರಿವಾದಿನ್ಯಾ ತನ್ತ್ರೀಭಿಸ್ಸಪ್ತಭಿರ್ಭೃಶಂ ।
ವೀಣಾವಾದರಸಾಭಿಜ್ಞಃ ತೋಷಿತೋ ನಾರದೋ ಮುನಿಃ ॥ ೩೭ ॥

---

೩೩. ಅಲ್ಲಿ ನಾನು ದೇವಲೋಕಕ್ಕೆ ಯೋಗ್ಯವಾದ ದೇವತಾ ದೇಹವನ್ನು ಹೊಂದಿದೆನು. ಮತ್ತು ಎಲ್ಲರಂತೆಯೂ ಅಲ್ಲಿರುವ ಅಪ್ಸರಸ್ತ್ರೀಯರ ಸೌಖ್ಯವನ್ನು ಹೊಂದಿದೆನು ಇನ್ನೂ ಅನೇಕವಾದ ಸೌಖ್ಯಗಳ ಅನುಭವವೂ ಸಿಕ್ಕಿತು. ಆದರೆ ನನ್ನ ಮುಖವು ಹುಲಿಯ ಮುಖದಂತೆ ಆಯಿತು.

೩೪. ಆದರೆ ಈ ದುಃಖವು ಯಾವ ಪಾಪಶೇಷದಿಂದ ಬಂದಿತೆಂಬುದು ನನಗೆ ಗೊತ್ತಾಗುವುದಿಲ್ಲವಲ್ಲ! ಎಂಬುದಾಗಿ ಯೋಚಿಸುತ್ತ ಯೋಚಿಸುತ್ತ ನನ್ನ ಮನಸ್ಸಿಗೆ ಶಾಂತಿಯೇ ಉಂಟಾಗುವುದಿಲ್ಲ.

೩೫ ೩೬. ನನಗೆ ದುಃಖ ಬರಲು ಕಾರಣವೇನೆಂಬುದನ್ನು ಕೇಳು. ನನ್ನ ಹೆಂಡತಿಯು ಒಳ್ಳೆಯ ಗುಣವತಿಯು. ಕಂಠಧ್ವನಿಯನ್ನು ಚೆನ್ನಾಗಿ ಉಳ್ಳವಳು. ಸುಂದರಿಯು. ನೃತ್ಯಗೀತ ಕಲೆಗಳನ್ನು ಬಲ್ಲವಳು. ಸದ್ಗುಣಗಳೆಲ್ಲವೂ ಆಕೆಯಲ್ಲಿದ್ದುವು. ಹೀಗಿರುತ್ತಿರುವಲ್ಲಿ ಒಂದು ಸಾರಿ ನಾರದನು ಬರಲು ಈಕೆಯು ವೀಣೆಯನ್ನು ನುಡಿಸಿ ಗಾನವನ್ನು ಮಾಡಿ ಆತನನ್ನು ಸಂತೋಷಪಡಿಸಿದಳು.

ಮುಗ್ಧಭಾವೇಪಿ ಗಾಯಂತ್ಯಾ ತ್ವನಯಾ ರಕ್ತವರ್ಣಯಾ ।
ವಿಚಿತ್ರಸ್ವರಗಾನಜ್ಞೋ ದೇವರಾಜೋಪಿ ತೋಷಿತಃ ॥ ೩೮ ॥

ಅಸ್ಯಾಃ ಕೌತುಕಭಿನ್ನಾಂಗ್ಯಾ ವಾದಯಂತ್ಯಾ ವಿಪಂಚಿಕಾಂ ।
ನಾನಾವಕ್ರಗತಿಸ್ನಿಗ್ಧಂ ತಂ ಶ್ರುತ್ವಾ ಪಂಚಮಂ ಧ್ವನಿಂ ॥ ೩೯ ॥

ಉತೋಷೋದ್ಭಿನ್ನರೋಮಾಂಚೋ ಧುನ್ವನ್ಮೌಳಿಂ ಮಹೇಶ್ವರಃ ।
ಶೀಲೌದಾರ್ಯಗುಣಗ್ರಾಮರೂಪಯೌವನಸಂಪದಾ ॥ ೪೦ ॥

ನಾನಯಾ ಸದೃಶೀ ನಾಕೇ ಕಾಚಿದಸ್ತಿ ನಿತಂಬಿನೀ ।
ಕ್ವೇಯಂ ದೇವಮುಖೀ ರಾಮಾ ಕ್ವಾಹಂ ವ್ಯಾಘ್ರಮುಖಃ ಪುಮಾನ್ ।
ಇತಿ ಬ್ರಾಹ್ಮಣ ಸಂಚಿಂತ್ಯ ದಹ್ಯಾಮಿ ಹೃದಯೇ ಸದಾ ॥ ೪೧ ॥

॥ ವಸಿಷ್ಠ ಉವಾಚ ॥

ಇತಿ ವಿದ್ಯಾಧರಪ್ರೋಕ್ತಂ ಶ್ರುತ್ವಾ ಚೇಕ್ಷ್ವಾಕುನಂದನ ।
ತ್ರಿಕಾಲಜ್ಞೋ ಭೃಗುಃ ಪ್ರಾಹ ಪ್ರಹಸನ್ ದಿವ್ಯಲೋಚನಃ ॥ ೪೨ ॥

---

೩೮. ಇನ್ನೂ ಚಿಕ್ಕವಳಾಗಿರುವಾಗಲೇ ಸುಂದರಿಯಾಗಿ ಕೆಂಪಗಿದ್ದ ಈಕೆಯು ನಾನಾವಿಧವಾದ ಸಂಗೀತಸ್ವರಗಳನ್ನು ಬಲ್ಲ ದೇವೇಂದ್ರನನ್ನು ಸಂತೋಷಪಡಿಸಿದಳು.

೩೯-೪೧. ಈಕೆಯು ಆಶ್ಚರ್ಯದಿಂದ ವೀಣೆಯನ್ನು ನುಡಿಸುತ್ತಿರಲು ಅದರಲ್ಲಿ ನುಡಿಸುತ್ತಿರುವ ವಕ್ರಗತಿಗಳನ್ನು ಕೇಳಿ ಆ ಪಂಚಮದಲ್ಲಿ ನುಡಿಸುತ್ತಿರುವುದನ್ನೂ ಕೇಳಿ ಪರಮೇಶ್ವರನು ತಲೆಯನ್ನು ಅಲ್ಲಾಡಿಸುತ್ತಾ ಸಂತೋಷಪಟ್ಟನಲ್ಲದೆ ಆದರಿಂದ ಅವನ ಮೈಯ್ಯೆಲ್ಲವೂ ರೋಮಾಂಚವಾಯಿತು. ಶೀಲ ಔದಾರ್ಯ ಗುಣಗಳಿಂದಲೂ ರೂಪ ಯೌವನಗಳಿಂದಲೂ ಕೂಡಿಕೊಂಡು ಇರುವ ಈಕಗೆ ಸಮರಾದವರು ಸ್ವರ್ಗದಲ್ಲಿ ಒಬ್ಬರೂ ಇಲ್ಲವೇ ಇಲ್ಲ. ಓೀಗಿರುವಲ್ಲಿ ದೇವತೆಗಳಂತೆ ರಮ್ಯವಾದ ಮುಖವುಳ್ಳ ಈಕೆಯೆಲ್ಲಿ? ಹುಲಿಯ ಮುಖದಂತೆ ಮುಖವುಳ್ಳ ನಾನೆಲ್ಲಿ? ನಮ್ಮಿಬ್ಬರಿಗೂ ಅನುರೂಪ್ಯವಿಲ್ಲವಲ್ಲ ಎಂದು ಯೋಚಿಸಿ ನಾನು ಯಾವಾಗಲೂ ಮನಸ್ಸಿನಲ್ಲಿಯೇ ಸುಟ್ಟುಹೋಗುತ್ತಿದ್ದೇನೆ.

೪೨. ವಸಿಷ್ಠನು ಹೇಳಿದದು-ವಿದ್ಯಾಧರನು ಹೀಗೆ ಹೇಳಿದುದನ್ನು ಕೇಳಿ ಆ ಭೃಗುವು ಅಪರೋಕ್ಷಜ್ಞಾನದಿಂದ ಅವೆಲ್ಲವನ್ನೂ ತಿಳಿದು ನಗುತ್ತ ಇಂತೆಂದನು.

॥ ಭೃಗುರುವಾಚ ॥

ಶೃಣು ವಿದ್ಯಾಧರಶ್ರೇಷ್ಠ ಪೂರ್ವಜನ್ಮನಿ ಯತ್ಕೃತಂ ।
ಕ್ರಿಯಾ ಹಿ ವಿಹಿತಾಲ್ಪಾಪಿ ವಿಪಾಕೇ ದಾರುಣಾ ಭವೇತ್ ॥ ೪೩ ॥

ಊಪೋಷ್ಯೈಕಾದಶೀಂ ಮಾಘೇ ತೈಲಾಭ್ಯಂಗಃ ಕೃತಸ್ತ್ವಯಾ ।
ದ್ವಾದಶ್ಯಾಂ ಪ್ರಾಗ್ಭವೇ ದೇಹೇ ತೇನ ವ್ಯಾಘ್ರಮುಖೋ ಭವಾನ್ ॥ ೪೪ ॥

ಉಪೋಷ್ಯೈಕಾದಶೀಂ ಪುಣ್ಯಾಂ ದ್ವಾದಶ್ಯಾಂ ತೈಲಸೇವನಾತ್ ।
ಏಕಾದಶ್ಯಾಮುಪೋಷ್ಯಾಥ ಭಾವಿಕರ್ಮಪ್ರಚೋದಿತಃ ॥ ೪೫ ॥

ಅಲ್ಪದ್ವಾದಶೀವೇಳಾಯಾಂ ಕೃತ್ವಾ ಪಾರಣಮಾದಿತಃ ।
ಕುಶಾಸ್ತ್ರಜ್ಞಾನಸಂಪನ್ನಸ್ತ್ರಯೋದಶ್ಯಾಂ ಸುರೇಶ್ವರ ॥ ೪೬ ॥

---

೪೩. ಭೃಗುವು ಹೇಳಿದನು-ಎಲೈ ವಿದ್ಯಾಧರ ಶ್ರೇಷ್ಠನೇ ! ನೀನು ಪೂರ್ವ ಜನ್ಮದಲ್ಲಿ ಮಾಡಿದ ಕೆಲಸವನ್ನು ಹೇಳುತ್ತೇನೆ ಕೇಳು. ಮೊದಲು ಸ್ವಲ್ಪವೆಂದು ತಿಳಿದು ಅದನ್ನು ಮಾಡಿದರೂ ಅದೇ ಕೊನೆಗೆ ಬಹು ದೊಡ್ಡದಾಗಿ ಪರಿಣಮಿಸುತ್ತದೆ.

೪೪. ನೀನು ಪೂರ್ವಜನ್ಮದಲ್ಲಿ ಮಾಘಮಾಸದಲ್ಲಿ ಏಕಾದಶಿಯ ದಿವಸ ಉಪವಾಸಮಾಡಿ ದ್ವಾದಶಿಯ ದಿವಸ ಎಣ್ಣೆಯನ್ನು ತೊಡೆದುಕೊಂಡು ಸ್ನಾನ ಮಾಡಿದೆ. ಆದ್ದರಿಂದ ಈ ರೀತಿಯಾದ ಹುಲಿಯ ಮುಖವು ನಿನಗೆ ಬಂದಿದೆ.

೪೫-೪೬. ಪುಣ್ಯಪ್ರದವಾದ ಏಕಾದಶಿಯ ದಿವಸ ಉಪವಾಸ ಮಾಡಿ ದ್ವಾದಶಿಯಲ್ಲಿ ಎಣ್ಣೆಯನ್ನು ಸೇವಿಸಿದುದರಿಂದ ನಿನಗೆ ಹೀಗಾಯಿತು. ನೀನು ಏಕಾದಶಿಯ ದಿವಸ ಉಪವಾಸಮಾಡಿದರೂ ಮುಂದಿನ ಕರ್ಮವು ನಿನ್ನನ್ನು ಹಾಗೆ ಪ್ರೇರೇಪಿಸಿತು. ಆದ್ದರಿಂದ ನೀನು ಏಕಾದಶಿಯ ದಿವಸ ಉಪವಾಸವಿದ್ದು ಅಲ್ಪವಾದ ದ್ವಾದಶಿಯಲ್ಲಿ ಪಾರಣೆಯನ್ನು ಮಾಡಿದೆ. ಅದರಿಂದ ಕೆಟ್ಟ ಅಯೋಗ್ಯವಾದ ಶಾಸ್ತ್ರದಲ್ಲಿ ಜ್ಞಾನವನ್ನು ಪಡೆಯುತ್ತೀಯೆ. ಕಾಲಾತಿಕ್ರಮವಾಗಿ ತ್ರಯೋದಶಿಯು ಬಂದು ಇದ್ದಾಗ ನೀನು ತೈಲಾಭ್ಯಂಜನ ಮಾಡಿದುದರಿಂದ

ಕಾಲಾತಿಕ್ರಮಮಾಪನ್ನಃ ಕೃತವಾಂಸ್ತೈಲಸೇವನಂ ।
ಮುಖಮಾತ್ರಂ ವ್ಯಾಘ್ರಮುಖೋ ನೋ ಚೇದ್ವ್ಯಾಘ್ರೋ ಭವಿಷ್ಯತಿ॥೪೭॥

ಉಪೋಷ್ಯೈಕಾದಶೀಂ ಮಾಘೇ ದ್ವಾದಶ್ಯಾಂ ತೈಲಸೇವನಾತ್ ।
ಕುರೂಪಂ ಪ್ರಾಪ್ತವಾನ್ ದೇಹಂ ಪುರಾಹ್ಯೈಲಃ ಪುರೂರವಾಃ ॥ ೪೮ ॥

ದೃಷ್ಟ್ವಾತ್ಮನಃ ಕುಕಾಯಂ ಸ ತೇನ ದುಃಖೇನ ದುಃಖಿತಃ ।
ಗಿರಿರಾಜಂ ಸಮಾಗತ್ಯ ದೇವತಾಸರಿತಸ್ತಟೇ ॥ ೪೯ ॥

ಸ್ಥಿತ್ವಾ ಸ ಪರಮಪ್ರೀತಃ ಶುಚಿಸ್ಸ್ನಾತಃ ಕುಶಾಸನೇ ।
ನವನೀಲಘನಶ್ಯಾಮಂ ನಲಿನಾಯತಲೋಚನಂ ॥ ೫೦ ॥

ಶಾರ್ಙ್ಗಚಕ್ರಗದಾಪದ್ಮಧರಂ ಪೀತಾಂಬರಾವೃತಂ ।
ಕೌಸ್ತುಭೇನ ವಿರಾಜಂತಂ ವನಮಾಲಾಧರಂ ಹರಿಂ ॥ ೫೧ ॥

ಚಿಂತಯನ್ ಹೃದಯೇ ರಾಜಾ ನಿಗೃಹೀತಾಖಿಲೇಂದ್ರಿಯಃ ।
ನಿರುದ್ಧಾಂತರ್ಮರುನ್ಮಾರ್ಗೋ ನಾಸಾಗ್ರನ್ಯಸ್ತಲೋಚನಃ ॥ ೫೨ ॥

---

ಮುಖಮಾತ್ರ ಹುಲಿಯ ಮುಖದಂತಾಯಿತು. ದ್ವಾದಶಿಯು ಇದ್ದು ನೀನು ತೈಲಾಭ್ಯಂಜನವನ್ನು ಮಾಡಿದ್ದರೆ ನೀನು ಖಂಡಿತವಾಗಿಯೂ ಹುಲಿಯೇ ಆಗುತ್ತಲಿದ್ದೆ.

೪೮–೫೩. ಹಿಂದೆ ಐಲನ ಮಗನಾದ ಪುರೂರವನು ಮಾಘದ ಏಕಾದಶಿಯ ದಿವಸ ಉಪವಾಸಮಾಡಿ ದ್ವಾದಶಿಯ ದಿವಸ ಎಣ್ಣೆಯನ್ನು ಸೇವಿಸಿದುದರಿಂದ ದೇಹದಲ್ಲಿ ವಿಕಾರವನ್ನು ಹೊಂದಿದನು. ಈರೀತಿ ತಾನಾದುದನ್ನು ನೋಡಿ ಬಹು ದುಃಖಗೊಂಡನು. ಆಗ ಅವನು ಹಿಮವತ್ಪರ್ವತಕ್ಕೆ ಬಂದು ಗಂಗಾನದಿಯ ದಡದಲ್ಲಿ ಆಶ್ರಮವನ್ನು ಮಾಡಿಕೊಂಡು ಅಲ್ಲಿ ಪ್ರಶಸ್ತವಾಗಿರಲು ಸ್ನಾನಮಾಡಿ ಶುಚಿಯಾಗಿ ದರ್ಭಾಸನವನ್ನು ಹಾಕಿಕೊಂಡು ನೀಲಮೇಘಶ್ಯಾಮನೂ ಕಮಲಾಕ್ಷನೂ ಶಾಂರ್ಗ ಚಕ್ರ, ಗದಾ ಪದ್ಮಧರನೂ ಪೀತಾಂಬರಧಾರಿಯೂ ಕೌಸ್ತುಭದಿಂದ ವಿರಾಜಮಾನನೂ ವನಮಾಲೆಯನ್ನು ಹಾಕಿಕೊಂಡು ಇರುವನೂ ಆದ ಆ ಹರಿಯನ್ನು ಧ್ಯಾನಮಾಡುತ್ತಲಿದ್ದನು. ಆಗ ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿದ್ದನು. ಉಸಿರನ್ನು ಕಟ್ಟಿ ಶ್ವಾಸಧಾರಣೆಯನ್ನು ಮಾಡಿದ್ದನು. ಮೂಗಿನ ತುದಿಯಲ್ಲಿ ದೃಷ್ಟಿಯನ್ನಿಟ್ಟಿದ್ದನು. ಆಗ ಪ್ರಾಣವಾಯುವು ಕುಂಡಲಿಯೆಂಬ

ಕುಂಡಲೀಮುಖಮುಲ್ಲಾಸ್ಯ ಸುಷುಮ್ನಾನಾಡಿಗೋಭವತ್ ।
ಮಾಸಮಾತ್ರಂ ನಿರಾಹಾರಃ ತಪಸ್ತೇಪೇ ಸುದುಷ್ಕರಂ ॥ ೫೩ ॥

ಅಲ್ಪೇನ ತಪಸಾ ತುಷ್ಟಃ ಸಪ್ತ ಜನ್ಮಕೃತಾರ್ಚನಂ ।
ಸಂಸ್ಮರ್ನ್ ತಸ್ಯ ಭೂಪಸ್ಯ ತದಾ ಪ್ರಾದುರಭೂತ್ ಸ್ವಯಂ ॥ ೫೪ ॥

ಮಾಘಸ್ಯ ಶುಕ್ಲಪಕ್ಷೇ ತು ದ್ವಾದಶ್ಯಾಂ ಮಕರೇ ರವೌ ।
ಶಂಖಾದ್ಭಿರಭಿಷಿಚ್ಯಾಥ ಮುದಾ ತಂ ಚಕ್ರವರ್ತಿನಂ ॥ ೫೫ ॥

ವಾಸುದೇವೋ ದದೌ ತಸ್ಮೈ ಸ್ಮಾರಯಂಸ್ತೈಲಸೇವನಂ ।
ಅತೀವ ಸುಂದರಂ ರೂಪಂ ಕಮನೀಯಂ ಮನೋಹರಂ ॥ ೫೬ ॥

ಯೇನ ತಂ ಚಕಮೇ ದೇವೀ ಉರ್ವಶೀ ದೇವನಾಯಿಕಾ ।
ಇತ್ಥಂ ಲಬ್ಧವರೋ ಭೂತ್ವಾ ಕೃತಕೃತ್ಯಃ ಪುರಂ ಗತಃ ॥ ೫೭ ॥

---

ನಾಡಿಯನ್ನು ಹೊಕ್ಕಿತು. ಈ ರೀತಿಯಲ್ಲಿ ಒಂದು ತಿಂಗಳವರೆವಿಗೂ ಆಹಾರವನ್ನು ತೆಗೆದುಕೊಳ್ಳದೆ ಬಹು ಉಗ್ರವಾದ ತಪಸ್ಸನ್ನು ಮಾಡಿದನು.

೫೪. ಈ ಪುರೂರವನು ಹಿಂದಿನ ಏಳು ಜನ್ಮಗಳಲ್ಲಿಯೂ ತನ್ನನ್ನು ಪೂಜಿಸಿದ್ದುದರಿಂದ ಈ ಜನ್ಮದಲ್ಲಿ ಅವನ ಸ್ವಲ್ಪ ತಪಸ್ಸಿಗೇ ಸಂತೋಷಗೊಂಡು ಸ್ವಾಮಿಯು ಅದನ್ನು ಸ್ಮರಿಸುತ್ತ ಅವನಿಗೆ ಪ್ರಸನ್ನನಾಗಿ ಎದುರಿಗೆ ಬಂದನು.

೫೫–೫೭ ಮಕರ ರಾಶಿಯಲ್ಲಿ ಸೂರ್ಯನಿದ್ದು ಮಾಘ ಶುಕ್ಲ ದ್ವಾದಶಿಯ ದಿವಸ ಆ ಪೂರೂರವನಿಗೆ ಸ್ವಾಮಿಯು ಪ್ರತ್ಯಕ್ಷನಾಗಿ ಶಂಖದ ನೀರಿನಿಂದ ಅವನಿಗೆ ಅಭಿಷೇಕಮಾಡಿ ನೀನು ದ್ವಾದಶಿಯ ದಿವಸ ತೈಲಸೇವನೆಯನ್ನು ಮಾಡಿದುದರಿಂದ ಕೆಟ್ಟ ರೂಪವನ್ನು ಹೊಂದಿದೆ. ಎಂಬುದಾಗಿ ಜ್ಞಾಪಿಸುತ್ತ ಪ್ರೋಕ್ಷಿಸಿದನು. ಅನಂತರ ಆ ಪುರೂರವನು ಊರ್ವಶಿಯೆಂಬ ಅಪ್ಸರಸ್ತ್ರೀಯು ಮೋಹಿಸುವಂತಹ ರೂಪವನ್ನು ಹೊಂದಿದನು. ಈ ರೀತಿಯಾಗಿ ಆ ಪುರೂರವನು ಉತ್ತಮವಾದ ರೂಪವನ್ನು ಆ ಸ್ವಾಮಿಯಿಂದ ಹೊಂದಿ ಕೃತಕೃತ್ಯನಾಗಿ ಪಟ್ಟಣಕ್ಕೆ ಹೋದನು.

ಇತಿ ಕರ್ಮಗತಿಂ ಜ್ಞಾತ್ವಾ ಕಿಂ ವಿದ್ಯಾಧರ ಖಿದ್ಯಸೇ ।
ಭವಾನ್ ಪರಿಜಿಹೀರ್ಷುಶ್ಚೇದಾನನಸ್ಯ ವಿರೂಪತಾಂ ॥ ೫೮ ॥

ಶೀಘ್ರಂ ಮದ್ವಚನಾದೇವ ಪ್ರಾಚೀನಾಘವಿನಾಶನಂ ।
ಮಾಘಮಾಸೇ ಕುರು ಸ್ನಾನಂ ಮಣಿಕೂಟನದೀಜಲೇ ॥ ೫೯ ॥

ಋಷಿಸಿದ್ಧಸುರೈರ್ಜುಷ್ಟೇ ಕಥಯಿಷ್ಯಾಮಿ ತದ್ವಿಧಿಂ ।
ತವ ಭಾಗ್ಯವಶಾನ್ಮಾಘೋ ನಿಕಟೇ ಪಂಚಮೇ ದಿನೇ ॥ ೬೦ ॥

ಪೌಷಸ್ಯೈಕಾದಶೀಂ ಶುಕ್ಲಾಮಾರಭ್ಯ ಸ್ಥಂಡಿಲೇಶಯಃ ।
ಮಾಸಮೇಕಂ ನಿರಾಹಾರಃ ತ್ರಿಕಾಲಂ ಸ್ನಾನಮಾಚರ ॥ ೬೧ ॥

ತ್ರಿಕಾಲಮರ್ಚಯನ್ ವಿಷ್ಣುಂ ತ್ಯಕ್ತಭೋಗೋ ಜಿತೇಂದ್ರಿಯಃ ।
ಮಾಘಸ್ಯೈಕಾದಶೀ ಶುಕ್ಲಾ ಯದಾ ವಿದ್ಯಾಧರೋತ್ತಮ ॥ ೬೨ ॥

---

೫೮-೫೯. ಈ ರೀತಿಯಾಗಿ ಕರ್ಮದ ಗತಿಯನ್ನು ತಿಳಿದು ಎಲೈ ವಿದ್ಯಾಧರನೇ ! ನೀನೇಕೆ ದುಃಖಪಡುತ್ತೀಯೆ ? ನೀನು ನಿನ್ನ ಮುಖದ ಕುರೂಪವನ್ನು ನಾಶಮಾಡಿಕೊಳ್ಳಬೇಕಾದರೆ ನನ್ನ ಮಾತಿನಂತೆ ಹಿಂದಿನ ಜನ್ಮದ ಪಾಪವನ್ನು ನಾಶಪಡಿಸುವ ಮಾಘಸ್ನಾನವನ್ನು ಈ ಮಣಿಕೂಟಪರ್ವತದ ನದಿಯಲ್ಲಿ ಮಾಡು.

೬೦-೬೧. ಈ ಮಣಿಕೂಟನದಿಯು ಋಷಿಗಳು ಸಿದ್ಧರು ಸುರರುಗಳಿಂದ ಸೇವಿತವಾದುದು. ಅದರಲ್ಲಿ ಸ್ನಾನಮಾಡುವ ವಿಧಿಯನ್ನು ಹೇಳುತ್ತೇನೆ. ನಿನ್ನ ಅದೃಷ್ಟದಿಂದಲೇ ಇಂದಿನ ದಿನದ ಐದನೆಯ ದಿನಕ್ಕೆ ಮಾಘವು ಬರುತ್ತದೆ. ಅದು ಹತ್ತಿರವಾಯಿತು. ಪುಷ್ಯಶುದ್ಧ ಏಕಾದಶಿಯಿಂದ ಮೊದಲು ಮಾಡಿಕೊಂಡು ಒಂದು ತಿಂಗಳಕಾಲ ನೆಲದಮೇಲೆ ಮಲುಗುತ್ತ ನಿರಾಹಾರವಾಗಿದ್ದುಕೊಂಡು ಬೆಳಗ್ಗೆ ಮಧ್ಯಾಹ್ನ ಸಾಯಂಕಾಲ ಈ ಮೂರುಹೊತ್ತೂ ಸ್ನಾನವನ್ನು ಮಾಡು.

೬೨-೬೩. ಆ ಮೂರು ಹೊತ್ತಿನಲ್ಲಿಯೂ ವಿಷ್ಣುವನ್ನು ಪೂಜಿಸು. ಆಗ ನೀನು ಭೋಗಗಳನ್ನು ಬಿಟ್ಟುಬಿಡು. ಜಿತೇಂದ್ರಿಯನಾಗಿರು. ಮಾಘಶುಕ್ಲ

ತದಾ ನಿರ್ದಗ್ಧಪಾಪಂ ತ್ವಾಂ ದ್ವಾದಶ್ಯಾಂ ಪುಣ್ಯವಾಸರೇ ।
ಅಭಿಷಿಚ್ಯ ಶಿವೈಸ್ತೋಯೈಃ ಮಂತ್ರಪೂತೈರಹಂ ಸುರ ॥ ೬೩ ॥

ಕಾಮವಕ್ತ್ರೋಪಮಂ ವಕ್ತ್ರಂ ಕರಿಷ್ಯಾಮಿ ತವಾನಘ ।
ದೇವತಾವದನೋ ಭೂತ್ವಾ ತ್ವಂ ವಿದ್ಯಾಧರಸತ್ತಮ ॥ ೬೪ ॥

ಜ್ಞಾತಮಾಘಪ್ರಭಾವಸ್ತ್ವಂ ಮಾಘಸ್ನಾನಂ ಸದಾ ಕುರು ।
ಯಥಾ ಮನೋರಥಾವಾಪ್ತಿರ್ಜಾಯತೇ ತವ ಸರ್ವದಾ ॥ ೬೫ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವಾ ಭೃಗುಣಾ ತಸ್ಮೈ ಧರ್ಮಜ್ಞೇನ ಮಹಾತ್ಮನಾ ।
ವಿದ್ಯಾಧರಾಯ ರಾಜೇಂದ್ರ ಪುನರ್ಗಾಥಾ ಉದಾಹೃತಾಃ ॥ ೬೬ ॥

---

ಏಕಾದಶಿಯು ಬರುವ ವೇಳೆಗೆ ನಿನಗೆ ಪಾಪವೆಲ್ಲವೂ ಹೋಗುತ್ತದೆ. ಮಾರನೆಯ ಪುಣ್ಯಕರವಾದ ದ್ವಾದಶಿಯ ದಿವಸ ಮಂಗಳಕರವಾದ ನೀರಿನಿಂದ ಮಂತ್ರಗಳನ್ನು ಹೇಳುತ್ತ ನಾನು ನಿನಗೆ ಅಭಿಷೇಕ ಮಾಡುತ್ತೇನೆ.

೬೪. ಆ ದಿನ ನಿನಗೆ ಮನ್ಮಥನ ಮುಖದಂತೆ ಮುಖವು ಬರುವಂತೆ ಮಾಡುತ್ತೇನೆ. ಅನಂತರ ದೇವತೆಗಳ ಮುಖವುಳ್ಳಂತೆ ಮುಖವನ್ನು ಹೊಂದಿ ನಿನ್ನ ಹೆಂಡತಿಯೊಡನೆ ಸುಖವಾಗಿ ಕ್ರೀಡಿಸು.

೬೫. ಅನಂತರ ಮಾಘಮಾಸದ ಪ್ರಭಾವವು ನಿನಗೆ ಗೊತ್ತಾಗುವುದರಿಂದ ಆ ಮಾಘಸ್ನಾನವನ್ನು ಯಾವಾಗಲೂ ಮಾಡು. ಅದರಿಂದ ನಿನ್ನ ಮನಸ್ಸಿನಲ್ಲಿ ರುವುದೆಲ್ಲವೂ ಸಿದ್ಧಿಸುತ್ತವೆ.

೬೬. ವಸಿಷ್ಠನು ಹೇಳಿದನು-ಭೃಗುವು ಆ ವಿದ್ಯಾಧರನಿಗೆ ಇದೆಲ್ಲವನ್ನೂ ತಿಳಿಸಿ ಮತ್ತೆ ಅನೇಕವಾದ ಅದರ ಫಲವು ಬರುವ ಮಹಿಮೆಯನ್ನು ಹೇಳತೊಡಗಿದನು.

॥ ಭೃಗುರುವಾಚ ॥

ಮಾಘಸ್ನಾನೈರ್ವಿಪನ್ನಾಶೋ ಮಾಘಸ್ನಾನೈರಘಕ್ಷಯಃ ।
ಸರ್ವವ್ರತಾಧಿಕೋ ಮಾಘಃ ಸರ್ವದಾನಫಲಪ್ರದಃ ॥ ೬೭ ॥

ಮಾಘೋ ಗರ್ಜತಿ ಯಜ್ಞೇಭ್ಯೋ ಮಾಘೋ ಯೋಗಾಚ್ಚ ಗರ್ಜತಿ ।
ತೀವ್ರಾಚ್ಚ ತಪಸೋ ಮಾಘೋ ಭೋ ವಿದ್ಯಾಧರ ಗರ್ಜತಿ ॥ ೬೮ ॥

ಪುಷ್ಕರೇ ಚ ಕುರುಕ್ಷೇತ್ರೇ ಬ್ರಹ್ಮಾವರ್ತೇ ಪೃಥೂದಕೇ ।
ಅವಿಮುಕ್ತೇ ಪ್ರಯಾಗೇ ಚ ಗಂಗಾಸಾಗರಸಂಗಮೇ ॥ ೬೯ ॥

ಯತ್ಫಲಂ ದಶಭಿರ್ವರ್ಷೈಃ ಪ್ರಾಪ್ಯತೇ ನಿಯಮೈರ್ನರೈಃ ।
ತತ್ಫಲಂ ಪ್ರಾಪ್ಯತೇ ಮಾಘೇ ತ್ರ್ಯಹಸ್ನಾನಾನ್ನ ಸಂಶಯಃ ॥ ೭೦ ॥

ಸ್ವರ್ಗಭೋಗೇ ಚಿರಂ ವಾಸೋ ಯೇಷಾಂ ಮನಸಿ ವರ್ತತೇ ।
ಯತ್ರ ಕ್ವಾಪಿ ಜಲೇ ತೈಸ್ತು ಸ್ನಾತವ್ಯಂ ಮೃಗಭಾಸ್ಕರೇ ॥ ೭೧ ॥

---

೬೭. ಭೃಗುವು ಹೇಳಿದನು–ಮಾಘ ಸ್ನಾನದಿಂದ ವಿಪತ್ತುಗಳು ಹೋಗುತ್ತವೆ. ಮಾಘಸ್ನಾನದಿಂದ ಪಾಪಗಳು ಹೋಗುತ್ತವೆ. ಮಾಘಸ್ನಾನವು ಎಲ್ಲಾ ವ್ರತಗಳಿಗಿಂತಲೂ ದೊಡ್ಡದು. ಮಾಘಸ್ನಾನವು ಎಲ್ಲಾ ದಾನಗಳ ಫಲವನ್ನೂ ಕೊಡುತ್ತದೆ.

೬೮. ಮಾಘವು ಯಜ್ಞಗಳಿಗಿಂತಲೂ ತಾನು ದೊಡ್ಡದೆಂದು ಗರ್ಜಿಸುತ್ತದೆ. ಮಾಘವು ಬಹು ಉಗ್ರವಾದ ತಪಸ್ಸುಗಳಿಗಿಂತಲೂ ನಾನು ದೊಡ್ಡದೆಂದು ಎನ್ನುತ್ತದೆ.

೬೯–೭೦. ಪುಷ್ಕರ ಕುರುಕ್ಷೇತ್ರ ಬ್ರಹ್ಮಾವರ್ತ ಪೃಥೂದಕ ಕಾಶಿ ಪ್ರಯಾಗ ಗಂಗಾಸಾಗರಸಂಗಮ ಈ ಸ್ಥಳಗಳಲ್ಲಿ ಹತ್ತು ವರ್ಷ ಸ್ನಾನಮಾಡಿಕೊಂಡಿರುವುದರಿಂದ ಮನುಷ್ಯನಿಗೆ ಯಾವ ಫಲವು ಬರುತ್ತದೆಯೋ ಆ ಫಲವು ಆಯಾ ಕ್ಷೇತ್ರಗಳಲ್ಲಿ ಮಾಘಮಾಸದಲ್ಲಿ ಮೂರು ದಿನಗಳಿದ್ದು ಸ್ನಾನ ಮಾಡಿದರೆ ಲಭಿಸುತ್ತದೆ. ಸಂಶಯವಿಲ್ಲ.

೭೧. ಸ್ವರ್ಗದಲ್ಲಿ ಭೋಗವನ್ನು ಅನುಭವಿಸುತ್ತಾ ಬಹುಕಾಲ ಸುಖಪಡಬೇಕೆನ್ನುವವನು ಮಕರರಾಶಿಯಲ್ಲಿ ಸೂರ್ಯನಿರುವಾಗ ಯಾವ ನೀರಿನಲ್ಲಾದರೂ ಆಗಲಿ ಪ್ರಾತಃಸ್ನಾನವನ್ನು ಮಾಡಬೇಕು.

ಆಯುರಾರೋಗ್ಯಸಂಪತ್ತ್ಯೈ ರೂಪೇ ಸುಭಗತಾ ಗುಣೇ ।
ಯೇಷಾಂ ಮನೋರಥಸ್ತ್ಯೈಸ್ತು ಸ್ನಾತವ್ಯಂ ಮೃಗಭಾಸ್ಕರೇ ॥ ೭೨ ॥

ಯೇ ತು ಬಿಭ್ಯತಿ ನರಕಾದ್ದಾರಿದ್ರ್ಯಾಬ್ಧೇಸ್ತ್ರಸಂತಿ ಯೇ ।
ಸರ್ವಥಾ ತ್ಯೈಃ ಪ್ರಯತ್ನೇನ ಸ್ನಾತವ್ಯಂ ಮೃಗಭಾಸ್ಕರೇ ॥ ೭೩ ॥

ದಾರಿದ್ರ್ಯಪಾಪದೌರ್ಭಾಗ್ಯಪಂಕಪ್ರಕ್ಷಾಲನಾಯ ವೈ ।
ಮಾಘಸ್ನಾನಾನ್ನ ಚಾನ್ಯೋಽಸ್ತಿ ಹ್ಯುಪಾಯುಸ್ಸುರಸತ್ತಮ ॥ ೭೪ ॥

ಶ್ರದ್ಧಾಹೀನಾನಿ ಕರ್ಮಾಣಿ ಕೃತಾನ್ಯಲ್ಪಫಲಾನಿ ವೈ ।
ಫಲಂ ದದಾತಿ ಸಂಪೂರ್ಣಂ ಮಾಘಸ್ನಾನಂ ಯಥಾವಿಧಿ ॥ ೭೫ ॥

ಅಕಾಮೋ ವಾ ಸಕಾಮೋ ವಾ ಯತ್ರ ಕ್ವಾಪಿ ಬಹಿರ್ಜಲೇ ।
ಇಹಾಮುತ್ರ ಚ ದುಃಖಾನಿ ಮಾಘಸ್ನಾಯೀ ನ ಪಶ್ಯತಿ ॥ ೭೬ ॥

---

೭೨. ಆಯುಸ್ಸು ಆರೋಗ್ಯ ಸಂಪತ್ತು ರೂಪು ಒಳ್ಳೆಯ ಗುಣಗಳು ಬೇಕೆಂದು ಯಾರ ಮನಸ್ಸಿನಲ್ಲಿದೆಯೋ ಅವರು ಮಕರರಾಶಿಯಲ್ಲಿ ಸೂರ್ಯನಿರುವಾಗ ಪ್ರಾತಸ್ನಾನವನ್ನು ಮಾಡಬೇಕು.

೭೩. ಯಾರು ನರಕದಿಂದ ಭಯಪಡುತ್ತಾರೆಯೋ. ಯಾರು ದಾರಿದ್ರ್ಯವೆಂಬ ಸಮುದ್ರದ ದೆಸೆಯಿಂದ ಹೆದರುವರೋ ಅವರು ಖಂಡಿತವಾಗಿಯೂ ಮಕರಮಾಸದಲ್ಲಿ ಪ್ರಯತ್ನಪಟ್ಟು ಪ್ರಾತಸ್ನಾನವನ್ನು ಮಾಡಬೇಕು.

೭೪. ದಾರಿದ್ರ್ಯ ಪಾಪ ದೌರ್ಭಾಗ್ಯಗಳೆಂಬ ಕೆಸರನ್ನು (ಪಾಪವನ್ನು) ತೊಳೆದುಕೊಳ್ಳಲು ಮಾಘಸ್ನಾನಕ್ಕಿಂತಲೂ ಬೇರೆಯಾದ ಉಪಾಯವು ಮತ್ತೊಂದಿಲ್ಲ.

೭೫. ಶ್ರದ್ಧೆಯಿಲ್ಲದೆ ನಾವು ಯಾವ ಕೆಲಸವನ್ನು ಮಾಡಿದರೂ ಅವು ಸ್ವಲ್ಪವಾದ ಫಲವನ್ನೇ ಕೊಡುತ್ತವೆ. ಆದರೆ ಈ ಮಾಘಸ್ನಾನವನ್ನು ಶ್ರದ್ಧೆಯಿಲ್ಲದಿದ್ದರೂ ಕ್ರಮವಾಗಿ ಮಾಡಿದರೆ ಪೂರ್ಣ ಫಲವನ್ನು ಕೊಡುತ್ತದೆ.

೭೬. ಅಪೇಕ್ಷೆಯಿದ್ದಾಗಲಿ ಅಪೇಕ್ಷೆಯಿಲ್ಲದೇನೇ ಆಗಲಿ ಹೊರಗಡೆಯ ನೀರಿನಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದರೆ ಅವನು ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ದುಃಖಗಳನ್ನು ಹೊಂದುವುದಿಲ್ಲ.

**ಪಕ್ಷದ್ವಯೇ ಯಥಾ ಚಂದ್ರಃ ಕ್ಷೀಯತೇ ವರ್ಧತೇ ತಥಾ ।**
**ಪಾತಕಂ ಕ್ಷೀಯತೇ ಮಾಘೇ ಪುಣ್ಯರಾಶಿರ್ವಿವರ್ಧತೇ ॥ ೩೭ ॥**

**ಯಥಾಬ್ಧೌ ಖಲು ಜಾಯನ್ತೇ ರತ್ನಾನಿ ವಿವಿಧಾನಿ ಚ ।**
**ಆಯುರ್ವಿತ್ತಂ ಕಲತ್ರಾದಿ ಸಂಪದೋ ಮಾಘತಸ್ತಥಾ ॥ ೩೮ ॥**

**ಕಾಮಧೇನುರ್ಯಥಾ ಕಾಮಂ ಚಿಂತಾಮಣಿಶ್ಚ ಚಿಂತಿತಂ ।**
**ಮಾಘಸ್ನಾನಂ ದದಾತೀಹ ತದ್ವತ್ಸರ್ವಮನೋರಥಾನ್ ॥ ೩೯ ॥**

**ಕೃತೇ ತಪಃ ಪರಂ ಜ್ಞಾನಂ ತ್ರೇತಾಯಾಂ ಯಜನಂ ತಥಾ ।**
**ದ್ವಾಪರೇ ಚ ಕಲೌ ದಾನಂ ಮಾಘಸ್ಸರ್ವಯುಗೇಷು ಚ ॥ ೪೦ ॥**

**ಸರ್ವೇಷಾಂ ಸರ್ವವರ್ಣಾನಾಮಾಶ್ರಮಾಣಾಂ ಚ ಭೂಪತೇ ।**
**ಮಾಘಸ್ನಾನಂ ಹಿ ಧರ್ಮಸ್ಯ ಧಾರಾಭಿಃ ಖಲು ವರ್ಷತಿ ॥ ೪೧ ॥**

---

೩೭. ಚಂದ್ರನು ಒಂದುಪಕ್ಷದಲ್ಲಿ ಹೇಗೆ ಕ್ಷಯಿಸಿ ಮತ್ತೊಂದು ಪಕ್ಷದಲ್ಲಿ ಹೇಗೆ ವರ್ಧಿಸುತ್ತಾನೆಯೋ ಹಾಗೆ ಮಾಘಸ್ನಾನ ಮಾಡುವವನ ಪಾಪವು ಕ್ಷಯವನ್ನು ಹೊಂದುತ್ತದೆ. ಪುಣ್ಯವು ವೃದ್ಧಿಯಾಗುತ್ತದೆ.

೩೮. ಸಮುದ್ರದಲ್ಲಿ ಹುಟ್ಟಿದ ರತ್ನಗಳು ವೃದ್ಧಿಹೊಂದುವಂತೆ ಈ ಮಾಘ ಸ್ನಾನದಿಂದ ಆಯುಸ್ಸು ಹಣ ಹೆಂಡಿರು ಸಂಪತ್ತುಗಳು ವೃದ್ಧಿಹೊಂದುತ್ತವೆ.

೩೯. ಕಾಮಧೇನುವು ಇಷ್ಟಾರ್ಥಗಳನ್ನೂ ಚಿಂತಾಮಣಿಯು ಚಿಂತಿಸಿ ದುದನ್ನೂ ಹೇಗೆ ಕೊಡುತ್ತವೆಯೋ ಹಾಗೆ ಮಾಘಸ್ನಾನವು ಸರ್ವ ಮನೋರಥ ಗಳನ್ನೂ ಕೊಡುತ್ತದೆ.

೪೦. ಕೃತಯುಗದಲ್ಲಿ ತಪಸ್ಸೇ ಜ್ಞಾನವು. ಎಂದರೆ ತಪಸ್ಸೇ ಶ್ರೇಷ್ಠ ವಾದುದು ತ್ರೇತಾಯುಗದಲ್ಲಿ ಯಾಗ ಮಾಡುವಿಕೆಯು ಬಹು ಉತ್ತಮ ವಾದುದು. ಅದೇ ಜ್ಞಾನವು. ದ್ವಾಪರ ಕಲಿಯುಗಗಳಲ್ಲಿ ದಾನವೇ ಜ್ಞಾನವು. ಎಂದರೆ ಸರ್ವೋತ್ತಮವಾದುದು. ಮಾಘಸ್ನಾನವು ಎಲ್ಲಾ ಯುಗಗಳಲ್ಲಿಯೂ ಜ್ಞಾನಪ್ರದವೂ ಪವಿತ್ರವೂ ಆದುದು. ಎಂದು ತಿಳಿ.

೪೧. ಎಲ್ಲರಿಗೂ ಎಲ್ಲಾ ಜಾತಿಯವರಿಗೂ ಎಲ್ಲಾ ಆಶ್ರಮದವರಿಗೂ ಯಾವಾಗಲೂ ಮಾಘಸ್ನಾನವು ಧರ್ಮದ ಮಳೆಯನ್ನೇ ಸುರಿಸುತ್ತದೆ.

॥ ವಸಿಷ್ಠ ಉವಾಚ ॥

ಇತಿ ವಾಕ್ಯಂ ಭೃಗೋಃಶ್ರುತ್ವಾ ತಸ್ಮಿನ್ನೇವಾಶ್ರಮೇ ಸುರಃ ।
ಸಹೈವ ಭೃಗುಣಾ ಮಾಘೇ ಗಿರಿನಿರ್ಝರಿಣೀಹ್ರದೇ ॥ ೮೨ ॥

ಯಥೋಕ್ತವಿಧಿನಾ ಸ್ನಾನಮಕರೋದ್ಭಾರ್ಯಯಾ ಸಹ ।
ಭೃಗೋರನುಗ್ರಹಾತ್ಸೋಽಥ ಸಂಪ್ರಾಪ್ಯ ಮನಸೇಪ್ಸಿತಂ ॥ ೮೩ ॥

ದೇವತಾವದನೋ ಭೂತ್ವಾ ಮುಮುದೇ ಮಣಿಪರ್ವತೇ ।
ಆಜಗಾಮ ಭೃಗುರ್ವಿಂಧ್ಯಂ ತಮನುಗ್ರಾಹ್ಯ ಹರ್ಷಿತಃ ॥ ೮೪ ॥

ಮಣಿಮಯಗಿರಿಸಿಂಧೌ ಸ್ನಾನಮಾತ್ರೇಣ ಮಾಘೇ ।
ಮದನವದನತುಲ್ಯಸ್ತತ್ರ ವಿದ್ಯಾಧರೋಽಭೂತ್ ॥
ಕ್ಷಪಿತನಿಯಮದೇಹೋ ವಿಂಧ್ಯಪಾದಾವತೀರ್ಣೋ ।
ಭೃಗುರಪಿ ಸಹ ಶಿಷ್ಯೈರಾಜಗಾಮಾಥ ರೇವಾಂ ॥ ೮೫ ॥

---

೮೨–೮೪. ವಸಿಷ್ಠನು ಹೇಳಿದನು-ಭೃಗುವು ಹೀಗೆ ಹೇಳಿದುದನ್ನು ಕೇಳಿ ಆ ಆಶ್ರಮದಲ್ಲಿಯೇ ಆ ವಿದ್ಯಾಧರನು ಭೃಗುವಿನೊಡನೆ ಆ ಮಣಿಗಿರಿನದಿಯಲ್ಲಿ ವಿಧಿಯಂತೆ ಹೆಂಡತಿಯೊಡನೆ ಸ್ನಾನ ಮಾಡಿದನು. ಈ ರೀತಿಯಾಗಿ ಸ್ನಾನಮಾಡಿ ಭೃಗುಋಷಿಯ ಅನುಗ್ರಹದಿಂದ ಆ ವಿದ್ಯಾಧರನು ತನ್ನ ಮನಸ್ಸಿಗೆ ಬೇಕಾದ ದೇವತಾಮುಖವನ್ನು ಹೊಂದಿ ಸಂತೋಷಪಟ್ಟನು. ಇತ್ತ ಭೃಗುವು ಆ ವಿದ್ಯಾಧರನಿಗೆ ಈ ರೀತಿಯಾಗಿ ಅನುಗ್ರಹಿಸಿ ಸಂತೋಷಗೊಂಡು ವಿಂಧ್ಯಪರ್ವತಕ್ಕೆ ಬಂದನು.

೮೫. ಮಣಿಮಯ ಪರ್ವತದಲ್ಲಿರುವ ನದಿಯಲ್ಲಿ ಮಾಘಮಾಸದ ಸ್ನಾನ ಮಾತ್ರದಿಂದ ಆ ವಿದ್ಯಾಧರನಿಗೆ ವ್ಯಾಘ್ರಮುಖವು ಹೋಗಿ ಮನ್ಮಥಮುಖದಂತಹ ಮುಖವು ಬಂದಿತು. ಭೃಗುವು ಮಾಘದ ನಿಯಮದಿಂದ ಕೃಶನಾಗಿ ಶಿಷ್ಯರೊಡನೆ ವಿಂಧ್ಯಪರ್ವತದ ತಳಗಡೆಯಲ್ಲಿ ಹರಿಯುವ ರೇವಾನದಿಯ ದಡಕ್ಕೆ ಬಂದನು.

ಅಖಿಲಭುವನಸಾರಂ ಮಾಘಮಾಹಾತ್ಮ್ಯಮೇತತ್ ।
ದ್ವಿಜವರಭೃಗುಣೋಕ್ತಂ ಭೂಪ ವಿದ್ಯಾಧರಾಯ ॥
ವಿವಿಧಫಲವಿಚಿತ್ರಂ ಯಶ್ಶೃಣೋತೀಹ ನಿತ್ಯಂ ।
ರುಚಿರಸಕಲಕಾಮಾರ್ ದೇವವತ್ಪ್ರಾಪ್ನುಯಾತ್ಸಃ ॥ ೮೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಮಾಘ ಸ್ನಾನ ಮಹಿಮಾ ವರ್ಣನಂ ನಾಮ ಏಕವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೮೬. ಪ್ರಪಂಚಕ್ಕೆಲ್ಲಾ ಸಾರಭೂತವಾದ ಈ ಮಾಘದ ಮಹಿಮೆಯನ್ನು ಬ್ರಾಹ್ಮಣ ಶ್ರೇಷ್ಠನಾದ ಈ ಭೃಗುವು ವಿದ್ಯಾಧರನಿಗೆ ಹೇಳಿದನು. ನಾನಾ ಬಗೆಯ ಫಲಗಳಿಂದ ಕೂಡಿರುವ ಇದನ್ನು ದಿನವೂ ಯಾವನು ಕೇಳುವನೋ ಅವನು ಅನೇಕ ಮನೋಹರವಾದ ಇಷ್ಟಾರ್ಥಗಳನ್ನು ದೇವತೆಗಳಿಂದ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪ ಸಂವಾದದ ಮಾಘ ಮಹಿಮೆಯಲ್ಲಿ ಮಾಘ ಸ್ನಾನದ ಮಹಿಮೆಯ ವರ್ಣನೆ ಎಂಬ ಇನ್ನೂರ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವಾವಿಂಶತ್ಯಧಿಕದ್ವಿಶತತಮೋಽಧ್ಯಾಯಃ ||



|| ವಸಿಷ್ಠ ಉವಾಚ ||

ಶೃಣು ರಾಜನ್ ಪ್ರವಕ್ಷ್ಯಾಮಿ ಪ್ರಭಾವಂ ಮಾಘಮಾಸಜಂ ।
ಯಮಾಕರ್ಣ್ಯ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ || ೧ ||

ಪುರಾ ರಥಂತರೇ ಕಲ್ಪೇ ವರ್ತಮಾನೇ ಕೃತೇ ಯುಗೇ ।
ಕುತ್ಸೋ ನಾಮ ಮುನಿಶ್ರೇಷ್ಠೋ ಬ್ರಹ್ಮಸೂನುರಕಲ್ಮಷಃ || ೨ ||

ಸ ಕರ್ದಮಸುತಾಂ ಸುಭ್ರೂಮುಪಯೇಮೇ ವಿಧಾನತಃ ।
ತಸ್ಯಾಂ ತಸ್ಯ ಚ ಪುತ್ರೋಽಭೂದ್ವತ್ಸೋ ವಂಶವಿವರ್ಧನಃ || ೩ ||

---

### ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಎಲೈ ದೊರೆಯೆ ! ಮಾಘಮಾಸದ ಮಹಿಮೆಯನ್ನು ಹೇಳುತ್ತೇನೆ. ಕೇಳು. ಇದನ್ನು ಕೇಳಿದರೆ ಮನುಷ್ಯನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ.

೨. ಪೂರ್ವದಲ್ಲಿ ರಥಂತರ ಕಲ್ಪದ ಕೃತಿಯುಗದಲ್ಲಿ ಕುತ್ಸನೆಂಬ ಬ್ರಾಹ್ಮಣನಿದ್ದನು. ಅವನು ಬಹು ಶ್ರೇಷ್ಠನಾದವನು.

೩. ಆತನು ಕರ್ದಮ ಋಷಿಯ ಮಗಳಾದ ಸುಭ್ರುವೆಂಬುವಳನ್ನು ಮದುವೆಯಾದನು. ಅವನಿಗೆ ಆಕೆಯಲ್ಲಿ ವಂಶವನ್ನು ಬೆಳೆಸತಕ್ಕ ಮಗನಾದನು. ಅವನಿಗೆ ವತ್ಸನೆಂದು ಹೆಸರು.

ಪಂಚಮಾಬ್ದೇ ಪಿತಾ ತಸ್ಯ ಮಂತ್ರಂ ಸ ಉಪದಿಷ್ಟವಾನ್ ।
ಕೃತೋಪನಯನಃ ಪಿತ್ರಾ ಬ್ರಹ್ಮಚರ್ಯಪರಾಯಣಃ ॥ ೪ ॥

ವರ್ಸನ್ ಭೃಗುಕುಲೇ ನಿತ್ಯಮಗ್ನಿಕಾರ್ಯಂ ಚ ಸಂಧ್ಯಯೋಃ ।
ಕುರ್ವಂ ಸ್ತ್ರಿಷವಣಂ ಸ್ನಾನಂ ಭಿಕ್ಷಾಶೀ ವಿಜಿತೇಂದ್ರಿಯಃ ॥ ೫ ॥

ಕೃಷ್ಣಾಜಿನಧರೋ ನಿತ್ಯಂ ನಿತ್ಯಂ ಸ್ವಾಧ್ಯಾಯತತ್ಪರಃ ।
ಕೇಶಾಂತಮುನ್ನಹಂ ಧತ್ತೇ ಪಲಾಶಂ ದಂಡಮವ್ರಣಂ ॥ ೬ ॥

ಕಟೀತಟಲಸನ್ಮೌಂಜಿಃ ಕಮಂಡಲುಧರಸ್ಸದಾ ।
ಶುಭ್ರಕೌಪೀನವಾನ್ ಶುದ್ಧಃ ಶುಭ್ರ ಯಜ್ಞೋಪವೀತವಾನ್ ॥ ೭ ॥

---

೪. ಅವನು ಆ ಮಗನಿಗೆ ಐದನೆಯ ವರ್ಷದಲ್ಲಿಯೇ ಉಪನಯನವನ್ನು ಮಾಡಿ ಮಂತ್ರವನ್ನು ಉಪದೇಶಿಸಿದನು. ಆ ಹುಡುಗನು ಬ್ರಹ್ಮಚರ್ಯವನ್ನು ಆಚರಿಸುತ್ತಾ ಪಾಲಿಸುತ್ತ ಬಂದನು.

೫. ಅವನು ಭೃಗುವಿನ ಆಶ್ರಮದಲ್ಲಿದ್ದುಕೊಂಡು ಅಗ್ನಿಕಾರ್ಯವನ್ನು ಸಂಧ್ಯೆಗಳಲ್ಲಿ ಮಾಡುತ್ತ ಮೂರು ಹೊತ್ತೂ ಸ್ನಾನವನ್ನು ಮಾಡುತ್ತ ಭಿಕ್ಷಾನ್ನವನ್ನು ಮಾಡಿಕೊಂಡು ಜಿತೇಂದ್ರಿಯನಾಗಿದ್ದನು.

೬. ನಿತ್ಯವೂ ಕೃಷ್ಣಾಜಿನವನ್ನು ಹೊದ್ದುಕೊಂಡಿರುತ್ತಿದ್ದನು. ವೇದಾಧ್ಯಯನ ಮಾಡುತ್ತಿದ್ದನು. ಕೇಶದ ಪರ್ಯಂತದವರೆಗೂ ಬರುವಷ್ಟು ಉದ್ದವಾದ ಮುತ್ತುಗದ ದಂಡು ಕೋಲನ್ನು ಹಿಡಿದಿದ್ದನು. ಅದು ಗಾಯಗಂಟುಗಳಿಲ್ಲದೆ ಚೆನ್ನಾಗಿದ್ದಿತು.

೭. ಸೊಂಟಕ್ಕೆ ಒಳ್ಳೆಯ ಮೌಂಜಿಯನ್ನು ಕಟ್ಟಿಕೊಂಡಿದ್ದನು. ಕಮಂಡಲುವನ್ನು ಹಿಡಿದುಕೊಂಡಿದ್ದನು. ಶುಭ್ರವಾದ ಕೌಪೀನ ಶುಭ್ರವಾದ ಜನಿವಾರಗಳನ್ನು ಧರಿಸಿ ಶುದ್ಧನಾಗಿದ್ದನು

**ಸಮಿದ್ಧಭಸ್ಮಲಸನ್ಮೂರ್ಧಾ ಸರ್ವೇಷಾಂ ನಯನಪ್ರಿಯಃ ।**
**ನಮಸ್ಕರೋತ್ಯಹರಹರ್ಮಾತರಂ ಪಿತರಂ ಗುರುಂ ॥ ೮ ॥**

**ಆಚಾರ್ಯಮನ್ಯಾನ್ ವೃದ್ಧಾಂಶ್ಚ ಯತೀಂದ್ರಾನ್ ಬ್ರಹ್ಮವಾದಿನಃ ।**
**ಬ್ರಹ್ಮಯಜ್ಞರತೋ ಧೀಮಾನ್ ನಿತ್ಯಾನುಷ್ಠಾನತತ್ಪರಃ ॥ ೯ ॥**

**ಪವಿತ್ರಪಾಣಿಃ ಕುರುತೇ ದೇವರ್ಷಿಪಿತೃತರ್ಪಣಂ ।**
**ಪುಷ್ಪಚಂದನಗಂಧಾದಿ ಕದಾಚಿದಪಿ ನ ಸ್ಪೃಶೇತ್ ॥ ೧೦ ॥**

**ಮೌನಭುಕ್ ಮಧುಪಿಣ್ಯಾಕಲವಣಕ್ಷಾರವರ್ಜಿತಃ ।**
**ಪಾದುಕಾವಾಹನಾರೋಹದರ್ಪಣಾಲೋಕವರ್ಜಿತಃ ॥ ೧೧ ॥**

**ದಂತಧಾವನತಾಂಬೂಲಶಿರೋವೇಷ್ಟನವರ್ಜಿತಃ ।**
**ನೀಲಂ ರಕ್ತಂ ತಥಾ ವಸ್ತ್ರಂ ಪೀತಂ ಖಟ್ವಾಂ ಚ ಭೂಷಣಂ ॥ ೧೨ ॥**

---

೮. ಸಮಿತ್ತನ್ನು ಹೋಮ ಮಾಡುವುದರಿಂದ ಬಂದ ವಿಭೂತಿಯನ್ನು ಹಣೆಗೆ ಹಚ್ಚಿಕೊಂಡಿರುತ್ತಿದ್ದನು. ಎಲ್ಲರಿಗೂ ನೋಡಲು ಮನೋಹರನಾಗಿದ್ದನು ದಿನದಿನವೂ ತಾಯಿತಂದೆಗಳಿಗೆ ನಮಸ್ಕರಿಸುತ್ತಿದ್ದನು. ಗುರುವಿಗೂ ಅಂತೆಯೇ ನಮಸ್ಕರಿಸುತ್ತಿದ್ದನು.

೯. ಆಚಾರ್ಯ ಇನ್ನೂ ಉಳಿದ ವೃದ್ಧರು ಯತಿಗಳು ಬ್ರಹ್ಮವಾದಿಗಳು ಇವರನ್ನೂ ಯಥೋಚಿತವಾಗಿ ನಮಸ್ಕರಿಸುತ್ತಿದ್ದನು. ಬ್ರಹ್ಮಯಜ್ಞವನ್ನು ಮಾಡುತ್ತ ನಿತ್ಯಾನುಷ್ಠಾನವನ್ನು ಆಸಕ್ತಿಯಿಂದ ಮಾಡುತ್ತಿದ್ದನು.

೧೦. ಬೆರಳಿಗೆ ಪವಿತ್ರವನ್ನು ಹಾಕಿಕೊಂಡು ದೇವತೆಗಳ ಪಿತೃಗಳ ಋಷಿಗಳ ತರ್ಪಣವನ್ನು ಮಾಡುತ್ತಿದ್ದನು. ಹೂವು ಗಂಧ ಚಂದನಗಳನ್ನು ಯಾವಾಗಲೂ ಮುಟ್ಟುತ್ತಲೇ ಇರಲಿಲ್ಲ.

೧೧–೧೨. ಮೌನದಿಂದ ಊಟಮಾಡುತ್ತಿದ್ದನು. ಜೇನು ಹಿಂಡಿ ಉಪ್ಪು ಕಾರಗಳೆಲ್ಲವನ್ನೂ ಬಿಟ್ಟಿದ್ದನು. ಕೆರವನ್ನು ಹಾಕಿಕೊಂಡು ನಡೆಯುವುದು. ವಾಹನದ ಮೇಲೆ ಕುಳಿತುಕೊಳ್ಳುವುದು ಕನ್ನಡಿ ನೋಡಿಕೊಳ್ಳುವುದು ಇವುಗಳನ್ನು ಬಿಟ್ಟಿದ್ದನು. ಹಲ್ಲುಜ್ಜುತ್ತಿರಲಿಲ್ಲ. ತಾಂಬೂಲವನ್ನು ಸೇವಿಸುತ್ತಿರಲಿಲ್ಲ. ತಲೆಗೆ ಬಟ್ಟೆ ಮುಂತಾದುವುಗಳನ್ನು ಸುತ್ತಿಕೊಳ್ಳುತ್ತಿರಲಿಲ್ಲ. ನೀಲಿ ಬಣ್ಣದ ಹೊಂಬಣ್ಣದ ಬಟ್ಟೆಗಳನ್ನು ಧರಿಸುತ್ತಿರಲಿಲ್ಲ. ಒಡವೆಗಳನ್ನು ಹಾಕಿಕೊಳ್ಳುತ್ತಿರಲಿಲ್ಲ.

ಅನ್ಯಾನಿ ಯಾನ್ಯನರ್ಹಾಣಿ ಬ್ರಹ್ಮಚರ್ಯಾಶ್ರಮಸ್ಯ ಚ ।
ಸದಾಚಾರರತಶ್ಶಾನ್ತಃ ತಾನಿ ಸರ್ವಾಣಿ ನಾಸ್ಪೃಶೇತ್ ॥ ೧೩ ॥

ಈದೃಶಾಚಾರಸಂಪನ್ನೋ ವಿಶೇಷಾದ್ಬ್ರಹ್ಮಚಾರ್ಯಸೌ ।
ಮಜ್ಜನಂ ಕುರುತೇ ಭಕ್ತ್ಯಾ ಮಕರಸ್ಥೇ ದಿವಾಕರೇ ॥ ೧೪ ॥

ಮಾಘೇ ಮಾಸಿ ವಿಶೇಷೇಣ ದೇಹಶುದ್ಧಿಂ ಕರೋತ್ಯಲಂ ।
ವಿಚೇಯತಾರಕೇ ಕಾಲೇ ನಿತ್ಯಸ್ನಾನಂ ಸಮಾಚರೇತ್ ॥ ೧೫ ॥

ಪುನರರ್ಧೋದಿತೇ ಸೂರ್ಯೇ ಮಾಘಸ್ನಾನಂ ಸಮಾಚರೇತ್ ।
ಚಂದ್ರಾಯಣಾದಿಭಿಃ ಕೃಚ್ಛ್ರೈಃ ಸ ವತ್ಸಃ ಪ್ರಥಮಾಶ್ರಮೀ ॥ ೧೬ ॥

ಚಿತ್ತಶುದ್ಧಿಂ ಪರಾ ಪ್ರಾಪ್ಯ ಮಕರಾದಿತ್ಯಮಜ್ಜನಾತ್ ।
ಅಸ್ಯಾಂ ಪಶ್ಚಿಮವಾಹಿನ್ಯಾಂ ಕಾವೇರ್ಯಾಂ ದುರ್ಲಭಂ ನೃಣಾಂ ।
ಮಜ್ಜನಂ ಮಕರಾದಿತ್ಯೇಽಹೋ ಲಬ್ಧಂ ಭಾಗ್ಯವಾನಹಂ ॥ ೧೭ ॥

---

ಬ್ರಹ್ಮಚರ್ಯಾಶ್ರಮಕ್ಕೆ ನಿಷಿದ್ಧವಾದುವುಗಳೆಲ್ಲವನ್ನೂ ಬಿಟ್ಟಿದ್ದನು. ಮತ್ತು ಸದಾಚಾರಶೀಲನಾಗಿಯೂ ಶಾಂತನಾಗಿಯೂ ಇದ್ದನು.

೧೪-೧೫. ಈತನು ಈ ರೀತಿಯಾದ ಸದಾಚಾರಗಳಿಂದ ಕೂಡಿದ್ದನು. ಈತನಲ್ಲಿ ಮತ್ತೊಂದು ಹೆಚ್ಚಿನ ವಿಷಯವೇನೆಂದರೆ ಮಕರರಾಶಿಯಲ್ಲಿ ಸೂರ್ಯನಿರುವಾಗ ಭಕ್ತಿಯಿಂದ ಸ್ನಾನವನ್ನು ಮಾಡುತ್ತಿದ್ದನು. ಅಂತೆಯೇ ಮಾಘಮಾಸದಲ್ಲಿಯೂ ದೇಹ ಶುದ್ಧಿಯನ್ನು ಮಾಡಿಕೊಳ್ಳುತ್ತಿದ್ದನು. ನಕ್ಷತ್ರಗಳು ಮಂಕಾಗಿ ಕಂಡೂ ಕಾಣದಂತೆಯೂ ಇರುವಾಗ ಬೆಳಗಿನ ಜಾವದಲ್ಲಿ ನಿತ್ಯ ಸ್ನಾನ ಮಾಡುತ್ತಿದ್ದನು.

೧೬-೧೭ ಪ್ರಾತಃಸ್ನಾನವನ್ನು ಆ ರೀತಿಯಾಗಿ ಮಬ್ಬಾಗಿರುವಾಗಮಾಡಿ ಅನಂತರ ಸೂರ್ಯನು ಅರ್ಧ ಉದಯಿಸುತ್ತಿರುವಾಗ ಮಾಘಸ್ನಾನವನ್ನು ಮಾಡುತ್ತಿದ್ದನು. ಚಾಂದ್ರಾಯಣವೇ ಮುಂತಾದ ಕೃಚ್ಛ್ರಗಳಿಂದ ಆ ಬ್ರಹ್ಮಚಾರಿಯು ಮನಶುದ್ಧಿಯನ್ನೂ ದೇಹ ಶುದ್ಧಿಯನ್ನೂ ಹೊಂದಿದ್ದನಲ್ಲದೆ ಮಕರ ರಾಶಿಯನ್ನು ಸೂರ್ಯನು ಹೊಂದಿದಾಗಲೂ ಸ್ನಾನಮಾಡಿ ಶುದ್ಧವಾಗಿದ್ದನು. ಪಶ್ಚಿಮ ವಾಹಿನಿಯಾದ ಕಾವೇರಿಯಲ್ಲಿ ಮಕರದಲ್ಲಿ ಸೂರ್ಯನಿರುವಾಗ ಸ್ನಾನವು ಸಿಕ್ಕುವುದು ಕಷ್ಟವು. ಅದು ನನಗೆ ಸಿಕ್ಕಿದೆ. ಆದ್ದರಿಂದ ನಾನೇ ಭಾಗ್ಯವಂತನು.

ಸಮುದ್ರಗಾನಾಂ ಸಕಲಾಪಗಾನಾಂ
ಪ್ರತ್ಯಕ್ ಪ್ರವಾಹಂ ಚ ಉದಕ್ ಪ್ರವಾಹಂ ।
ಪ್ರಯಾಗತೀರ್ಥಾದಧಿಕಂ ವದಂತಿ
ಮಯಾದ್ಯ ಲಬ್ಧಂ ಕೃತಪೂರ್ವಪುಣ್ಯೈಃ ॥ ೧೮ ॥

ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮೀತಿ ಹೃಷ್ಟಧೀಃ ।
ತತ್ರ ತ್ರಿಷವಣಸ್ನಾನಂ ಕುರುತೇ ಸಹ್ಯಜಾಜಲೇ ॥ ೧೯ ॥

ತೇನ ಮಾಘತ್ರಯಂ ಸ್ನಾತಂ ಕಾವೇರೀಪಶ್ಚಿಮೌಘಸಿ ।
ತೇನ ಪುಣ್ಯೇನ ಶುದ್ಧಾತ್ಮಾ ನಿರ್ಮಮೋ ನಿಸ್ಪೃಹೋ ನೃಪ ॥ ೨೦ ॥

ಮಾತಾಪಿತೃಭ್ಯಾಂ ಗುರುಣಾ ವಿಸೃಷ್ಟಸ್ತಪಸೇ ಯಯೌ ।
ಏಕಯೋಜನಮಾತ್ರೇಣ ಕಾವೇರ್ಯಾಮುತ್ತರೇ ತಟೇ ॥ ೨೧ ॥

ನಾರಾಯಣಗಿರಾವೇಷಃ ನಾಮ್ನ್ಯಾವಾಘೌಘನಾಶಿನೇ ।
ತುಂಗೈಶ್ಶೃಂಗೈರ್ದಿವಸ್ಸ್ಪೃಗ್ಭಿಃ ಸಾನುಭಿಶ್ಚ ವಿರಾಜಿತೇ ॥ ೨೨ ॥

---

೧೮. ಸಮುದ್ರವನ್ನು ಸೇರುವ ಎಲ್ಲಾ ನದಿಗಳಲ್ಲಿಯೂ ಪಶ್ಚಿಮಕ್ಕೆ ಹರಿಯುವ ಮತ್ತು ಉತ್ತರಕ್ಕೆ ಹರಿಯುವ ನದಿಗಳಲ್ಲಿ ಸ್ನಾನ ಮಾಡಿದರೆ ಪ್ರಯಾಗದ ತೀರ್ಥಕ್ಕಿಂತಲೂ ಅದು ಅಧಿಕ ಪುಣ್ಯವೆಂದು ಹೇಳುತ್ತಾರೆ. ಅಹೋ! ನಾನು ಮಾಡಿದ ಪೂರ್ವ ಪುಣ್ಯಗಳಿಂದ ಈ ರೀತಿಯಾದ ಸ್ನಾನವು ಸಿಕ್ಕಿದೆ

೧೯–೨೨. ಕೃತಾರ್ಥನಾದೆನು. ಕೃತಾರ್ಥನಾದೆನು. ಕೃತಾರ್ಥನಾದೆನು ಎಂಬುದಾಗಿ ಹೇಳುತ್ತ ಸಂತೋಷಗೊಂಡವನಾಗಿ ಆ ಸಹ್ಯಪರ್ವತದಲ್ಲಿ ಹುಟ್ಟಿದ ಕಾವೇರಿನದಿಯಲ್ಲಿ ಮೂರುಹೊತ್ತೂ ಸ್ನಾನಮಾಡುವನು. ಈ ಕಾವೇರಿಯ ಪಶ್ಚಿಮವಾಹಿನಿಯಲ್ಲಿ ಮೂರು ಮಾಘಸ್ನಾನವನ್ನು ಈ ರೀತಿಯಾಗಿ ಮಾಡಿದನು. ಈ ರೀತಿಯಾದ ಆಚರಣೆಯಿಂದ ಶುದ್ಧನಾಗಿ ಮಮತೆ ಅಹಂಕಾರಗಳನ್ನು ಬಿಟ್ಟು ತಾಯಿತಂದೆ ಗುರುಗಳ ಅನುಜ್ಞೆಯನ್ನು ಪಡೆದು ತಪಸ್ಸಿಗೆ ಹೊರಟನು. ಕಾವೇರಿಗೆ ಉತ್ತರದಡದ ಕಡೆಗೆ ನಾರಾಯಣಗಿರಿಯೆಂಬುದೊಂದು ಬೆಟ್ಟವಿರುವುದು (ಇದನ್ನು ಕರಿಘಟ್ಟವೆಂದು ಹೇಳುತ್ತಾರೆ) ಅದು ಪಾಪನಾಶಕವಾದುದು ಅಂತರಿಕ್ಷವನ್ನು ಮುಟ್ಟುವಂತಹ ಶಿಖರಗಳಿಂದ ಅದು ಕೂಡಿಕೊಂಡುಡಿರುವುದು. ಒಳ್ಳೆಯ ತಪ್ಪಲು ಪ್ರದೇಶವೂ ಅಲ್ಲಿರುವುದು.

ದ್ರುಮೈಶ್ಶೈಲನಿಭೈಶ್ಚಾಪಿ ಶೋಭಿತೇ ಶುಭದರ್ಶನೇ ।
ಮೃಗವ್ಯಾಘ್ರಮಹಾವ್ಯಾಳದ್ವಿಜಯಕ್ಷನಿಷೇವಿತೇ ॥ ೨೩ ॥

ಬಹುಪುಷ್ಪಫಲಾಭಿಶ್ಚ ಸಮ್ಯಕ್ ಪ್ರಚ್ಛನ್ನಭೂತಲೇ ।
ಸುಖವಾತಾನುಚರಿತೇ ಶೀತಲೋದಕಟಾಂಕಿತೇ ॥ ೨೪ ॥

ಭ್ರಮರೈರ್ಗಾಯಮಾನೈಶ್ಚ ಪಿಬದ್ಭಿಃ ಪುಷ್ಪಜಂ ಮಧು ।
ಶೈಲಕಂದರನಿಷ್ಕ್ರಾಂತೈಃ ಕೋಕಿಲೈರ್ಮಧುರಸ್ವರೈಃ ॥ ೨೫ ॥

ಸುಸ್ವರಂ ಗಾಯಮಾನೈಶ್ಚ ಗಂಧರ್ವೈಶ್ಚ ನಿಷೇವಿತೇ ।
ನೃತ್ಯದ್ಭಿಶ್ಚ ಮಹಾಬರ್ಹೈಃ ಮಯೂರೈರುಪಶೋಭಿತೇ ॥ ೨೬ ॥

ಕಿನ್ನರೇಂದ್ರೈಶ್ಚ ಗಾಯದ್ಭಿಃ ಶೋಭಿತೇ ಧೃತಕುಂಡಲೈಃ ।
ಅಶ್ವತ್ಥವೃಕ್ಷಬಿಲ್ವೈಶ್ಚ ಶೋಭಿತೇ ಬಹುಶಾಖಿಭಿಃ ॥ ೨೭ ॥

---

೨೩-೨೪. ಬಹುವಾಗಿ ದಪ್ಪ ದಪ್ಪವಾದ ಮರಗಳು ಅಲ್ಲಿ ಪ್ರಕಾಶಿಸುತ್ತಿದ್ದುವು. ನೋಡುವುದಕ್ಕೆ ಮನೋಹರವಾಗಿದ್ದಿತು. ಜಿಂಕೆ, ಹುಲಿ, ಹೆಬ್ಬಾವುಗಳೂ ಅಲ್ಲಿದ್ದವು. ಬ್ರಾಹ್ಮಣರೂ ಯಕ್ಷರೂ ಆ ಜಾಗದಲ್ಲಿರುತ್ತಿದ್ದರು. ಹೂವು, ಹಣ್ಣು ಮುಂತಾದುವುಗಳಿಂದ ಆ ಜಾಗವು ಸಮೃದ್ಧಿಯಾಗಿದ್ದಿತು. ಗಾಳಿಯು ಸುಖವಾಗಿ ಬೀಸುತ್ತಿದ್ದಿತು. ಶೀತಳವಾದ ನೀರು ಅಲ್ಲಿದ್ದಿತು.

೨೫-೨೬. ಅಲ್ಲಿ ದುಂಬಿಗಳು ಹೂಗಳಲ್ಲಿ ಮಕರಂದವನ್ನು ಕುಡಿಯುತ್ತಾ ಮಧುರವಾಗಿ ಗಾನಮಾಡುತ್ತಿದ್ದುವು. ಕೋಗಿಲೆಗಳು ಆ ಬೆಟ್ಟದ ಗುಹೆಗಳಲ್ಲಿದ್ದುಕೊಂಡು ಮಧುರವಾಗಿ ಕೂಗುತ್ತಿದ್ದವು. ಗಂಧರ್ವರು ಅಲ್ಲಿದ್ದು ಕೊಂಡು ಚೆನ್ನಾಗಿ ಗಾನಮಾಡುತ್ತಿದ್ದರು. ನವಿಲು ರೆಕ್ಕೆಗಳನ್ನು ಕೆದರಿಕೊಂಡು ಕುಣಿಯುತ್ತಾ ಅಲಂಕಾರವನ್ನುಂಟುಮಾಡುತ್ತಿದ್ದುವು.

೨೭-೩೦ ಕಿವಿಗೆ ಕುಂಡಲಗಳನ್ನು ಹಾಕಿಕೊಂಡು ಕಿನ್ನರರು ಅಲ್ಲಿ ಗಾನ ಮಾಡುತ್ತಿರುವರು. ಅರಳಿ, ಬಿಲ್ವಪತ್ರೆ, ಮುಂತಾದ ಮರಗಳು ಅಲ್ಲಿ ಅನೇಕವಾಗಿ

ತಿಲಕೈಃ ಪುಷ್ಪಿತೈಶ್ಚಾಪಿ ಕೃತಮಾಲೈಶ್ಚ ಪುಷ್ಪಿತೈಃ ।
ಅಶೋಕೈರ್ನಕ್ತಮಾಲೈಶ್ಚ ಚಂದನೈಶ್ಚಂಪಕೈಸ್ತಥಾ ॥ ೨೮ ॥

ಖರ್ಜೂರೈಃ ಪುಷ್ಪಿತೈಶ್ಚಾಪಿ ಭ್ರಾಜದ್ಭಿಶ್ಚ ಮಹೀ ರುಹೈಃ ।
ಪುನ್ನಾಗನಾರಿಕೇಳಾಮ್ರಪನಸಾರ್ಜುನಪಾಟಲೈಃ ॥ ೨೯ ॥

ಕಪಿತ್ಥತಿಂತ್ರಿಣೀನಿಂಬಲಿಕುಚಾಸಿತದಾಡಿಮೈಃ ।
ಶೋಭಮಾನೇ ಗಿರೌ ತಸ್ಮಿನ್ ನಾನಾಶ್ಚರ್ಯರಸಾಕುಲೇ ॥ ೩೦ ॥

ತಸ್ಮಿನ್ ಸರೋಸ್ತಿ ಕಲಿಕಲ್ಮಷಹಾರಿವಾರಿ ।
ಕಲ್ಯಾಣತೀರ್ಥಮಿತಿ ಕಾಂಕ್ಷಿತಸಿದ್ಧಿದಾಯಿ ।
ಕಲ್ಲೋಲಲೋಲಕಮಲಾಂತಿಕಸನ್ನಿವಿಷ್ಟ ।
ಹಸಾವಲೀಭಿರನಿಶಂ ಪರಿಶೋಭಮಾನಂ ॥ ೩೧ ॥

ನಿಮಜ್ಜ್ಯ ತಸ್ಮಿನ್ನಪಿ ಮಾಘಮೇಕಂ ।
ತತ್ಪಶ್ಚಿಮೇ ರೋಧಸಿ ಸನ್ನಿವಿಷ್ಟಃ ।
ಚಕ್ರೇ ತಪೋ ನಿಶ್ಚಲಗಾತ್ರಯಷ್ಟಿಃ ।
ನಿವಾತನಿಷ್ಕಂಪ ಇವ ಪ್ರದೀಪಃ ॥ ೩೨ ॥

---

ಬೆಳೆದಿವೆ. ಅಶೋಕ, ಕರಿಯ ಹೊಂಗೆ, ಚಂದನ, ಸಂಪಿಗೆ, ಖರ್ಜೂರ ಇವು ಕೂಡ ಹೂಬಿಟ್ಟುಕೊಂಡು ಅಲ್ಲಲ್ಲಿ ಗುಂಪು ಗುಂಪಾಗಿವೆ. ಸುರಹೊನ್ನೆ ತೆಂಗು ಮಾವು ಹಲಸು ಮತ್ತಿ ಪಾದರಿ ಬೇಲ ಹುಣಿಸೆ ಬೇವು ಕಿತ್ತಲೆ ದಾಳಿಂಬೆ ಇವೆಲ್ಲವೂ ಆ ಬೆಟ್ಟದಲ್ಲಿವೆ. ನಾನಾಬಗೆಯಾದ ಆಶ್ಚರ್ಯಕರವಾದ ಮರಗಳೆಲ್ಲವೂ ಅಲ್ಲ ಬೆಳೆದಿವೆ.

೩೧. ಆ ಬೆಟ್ಟದಲ್ಲಿ ಕಲ್ಯಾಣಿ ಎಂಬುದಾಗಿ ಒಂದು ಕೊಳವಿದೆ. ಅದರಲ್ಲಿ ರುವ ನೀರು ಕಲಿಯ ದೆಸೆಯಿಂದ ಉಂಟಾಗುವ ಪಾಪಗಳನ್ನು ನಾಶ ಮಾಡು ತ್ತದೆ. ಇಷ್ಟಾರ್ಥಗಳನ್ನು ಕೊಡುತ್ತದೆ. ಅದರಲ್ಲಿ ಬಹುವಾಗಿ ಕಮಲಗಳು ಬೆಳೆದು ಹೂ ಬಿಟ್ಟಿವೆ. ಆ ಹೂವಿನ ಹತ್ತಿರದಲ್ಲಿ ಹಂಸಗಳು ಸಾಲು ಸಾಲಾಗಿ ಕೂತಿವೆ. ಈ ರೀತಿಯಾಗಿ ಯಾವಾಗಲೂ ಆ ಕೊಳವು ಪ್ರಕಾಶಿಸುತ್ತದೆ.

೩೨. ಆ ಕಲ್ಯಾಣಿಯಲ್ಲಿ ಒಂದು ಮಾಘ ಮಾಸದಲ್ಲಿ ಸ್ನಾನ ಮಾಡಿ ಅದರ ಪಶ್ಚಿಮಕ್ಕಿರುವ ದಡದಲ್ಲಿ ಕುಳಿತು ಗಾಳಿಯಿಲ್ಲದ ಜಾಗದಲ್ಲಿ ದೀಪವನ್ನು ಹತ್ತಿಸಿಟ್ಟರೆ ಅದು ಹೇಗೆ ಅಲ್ಲಾಡದಂತೆ ಇರುವುದೋ ಅದರಂತೆ ಈತನು ತಪಸ್ಸು ಮಾಡುತ್ತ ಶರೀರವನ್ನು ಅಲ್ಲಾಡಿಸದೆ ಇದ್ದನು.

ವಿಸ್ಮೃತ್ಯ ವಿಷಯಾನ್ ಬಾಹ್ಯಾನ್ ಸ್ಥಿತಃ ಪಾಷಾಣಕಾಷ್ಠವತ್ ।
ಅಂತರ್ಯಚ್ಚ ಬಹಿರ್ಯಚ್ಚ ಊರ್ಧ್ವಂ ಯಚ್ಚಾಪ್ಯಧಶ್ಚ ಯತ್ ॥ ೩೩ ॥

ತಿಷ್ಠಾಮಿ ವ್ಯಾಪ್ಯ ತತ್ಸರ್ವಮಹಮೇವೇತ್ಯಚಿಂತಯತ್ ।
ಪಿಪಾಸಯಾ ಸಮಾಗತ್ಯ ಮೃಗಾಸ್ತಸ್ಯ ಜಲಾಶಯೇ ॥ ೩೪ ॥

ಕಂಡೂಯಂತೇ ಸ್ವಶೃಂಗೇಣ ಕಾಷ್ಠಬುದ್ಧ್ಯಾ ದಿನೇ ದಿನೇ ।
ತತೋ ವಿಷ್ಣುರಮೇಯಾತ್ಮಾ ಜಗನ್ಮೂರ್ತಿರ್ಜನಾರ್ದನಃ ॥ ೩೫ ॥

ಹೃದಯಸ್ಥೋ ಯಥಾಸ್ಯೈವ ತಥೈವಾಗ್ರೇ ಸ್ಥಿತೋಭವತ್ ।
ಏವಂ ಶತಯುಗಂ ರಾಜನ್ ತಸ್ಯತಸ್ತಪ ಉತ್ತಮಂ ।
ವ್ಯತೀಯಾಯ ತತಃ ಪ್ರೀತೋ ಹರಿರಸ್ಯ ಪುರೋಭವತ್ ॥ ೩೬ ॥

॥ ಶ್ರೀಹರಿರುವಾಚ ॥

ಮೃಗಶೃಂಗ ಮಹಾಪ್ರಾಜ್ಞ ತವ ಪ್ರೀತೋಸ್ಮ್ಯಹಂ ಹರಿಃ ॥ ೩೭ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವಾ ಬ್ರಹ್ಮರಂಧ್ರೇ ತಂ ಪಸ್ಪರ್ಶ ಪುರುಷೋತ್ತಮಃ ॥ ೩೮ ॥

---

೩೩-೩೬. ಆಗ ಆತನು ಹೊರಗಿನ ವಿಷಯಗಳೆಲ್ಲವನ್ನೂ ಮರೆತು ಕಲ್ಲು ಮರಗಳಂತೆ ಇದ್ದುಬಿಟ್ಟನು. ಆಗ ಒಳಗೆ ಹೊರಗೆ ಮೇಲೆ ಕೆಳಗೆ ಎಲ್ಲಾ ಕಡೆ ಯಲ್ಲಿಯೂ ಎಲ್ಲವನ್ನೂ ನಾನೇ ವ್ಯಾಪಿಸಿಕೊಂಡು ಇದ್ದೇನೆ. ಎಂಬುದಾಗಿ ತಿಳಿದು ಧ್ಯಾನಿಸಿದನು. ಜಿಂಕೆಗಳು ಬಾಯಾರಿ ನೀರು ಕುಡಿಯಲು ಆ ಕಲ್ಯಾಣಿಗೆ ಬಂದು ನೀರು ಕುಡಿದಾದ ಮೇಲೆ ಅವನೂ ಒಂದು ಮರವೆಂದು ತಿಳಿದು ದಿನ ದಿನವೂ ತಮ್ಮ ಕೊಂಬುಗಳನ್ನು ಅವನಲ್ಲಿ ತಿಕ್ಕುತ್ತಿದ್ದುವು. ಆಗ ಜಗನ್ಮೂರ್ತಿಯೂ ಅಳಿ ಯಲೂ ಆಗದ ಜನಾರ್ದನನಾದ ವಿಷ್ಣುವು ಹೃದಯದಲ್ಲಿ ಹೇಗೆ ಕಂಗೊಳಿಸು ತ್ತಿದ್ದನೋ ಹಾಗೆಯೇ ಇವನ ಎದುರಿಗೂ ಬಂದು ನಿಂತುಕೊಳ್ಳುತ್ತಿದ್ದನು. ಈ ರೀತಿಯಾಗಿ ಅವನು ನೂರು ಯುಗಗಳವರೆಗೆ ಉತ್ತಮವಾದ ತಪಸ್ಸನ್ನು ಮಾಡುತ್ತ ಕಳೆಯಲು ಅನಂತರ ಸುಪ್ರೀತನಾದ ಹರಿಯು ಅವನಿಗೆಪ್ರತ್ಯಕ್ಷನಾದನು.

೩೭. ಶ್ರೀ ಹರಿಯು ಹೇಳಿದನು–ಮಹಾಪ್ರಾಜ್ಞನಾದ ಮೃಗಶೃಂಗನೆ! ನಾನು ಹರಿಯು. ನಿನ್ನ ತಪಸ್ಸಿಗೆ ಪ್ರಸನ್ನನಾಗಿ ಬಂದಿದ್ದೇನೆ.

೩೮. ವಸಿಷ್ಠನು ಹೇಳಿದನು–ಹೀಗೆಂದು ಹೇಳುತ್ತಾ ಆ ಹರಿಯು ಅವನ ಬ್ರಹ್ಮರಂಧ್ರದ ಬಳಿ ಮುಟ್ಟಿದನು.

ಅಥ ಪ್ರಬುದ್ಧೋ ವಿರತಸ್ಸಮಾಧಿನಾ
ವಿಲೋಕಯಾಮಾಸ ಪುರಸ್ಥಿತಂ ಹರಿಂ ।
ಸಹಸ್ರಸೂರ್ಯಪ್ರತಿಮೇನ ರಾಜತಾ
ಮಹಾಭಿಷೇಕಾಭರಣೇನ ಭಾಸ್ವರಂ ॥ ೩೯ ॥

ಸಸಂಭ್ರಮಸ್ತತೋ ನತ್ವಾ ಸ್ತೋತುಂ ಸಮುಪಚಕ್ರಮೇ ॥ ೪೦ ॥

॥ ಮೃಗಶೃಂಗ ಉವಾಚ ॥

ನಾರಾಯಣಾಯ ನಳಿನಾಯತಲೋಚನಾಯ
ನಾಥಾಯ ಪತ್ರರಥನಾಯಕವಾಹನಾಯ ।
ನಾಲೀಕಸದ್ಮರಮಣೀಯಭುಜಾಂತರಾಯ
ನವ್ಯಾಂಬುದಾಭರುಚಿರಾಯ ನಮಃ ಪರಸ್ಮೈ ॥ ೪೧ ॥

ಓಂ ನಮೋ ವಾಸುದೇವಾಯ ಲೋಕಾನುಗ್ರಹಕಾರಿಣೇ ।
ಧರ್ಮಸ್ಯ ಸ್ಥಾಪನಾರ್ಥಾಯ ಯಥೇಚ್ಛವಪುಷೇ ನಮಃ ॥ ೪೨ ॥

---

೩೯. ಆಗ ಆ ಋಷಿಕುಮಾರನು ಸಮಾಧಿಯನ್ನು ಬಿಟ್ಟು ಎಚ್ಚೆತ್ತು ಎದುರಿಗಿದ್ದ ಸಾವಿರಸೂರ್ಯರ ತೇಜಸ್ಸಿನಿಂದ ಪ್ರಕಾಶಿಸುತ್ತ ಮಹಾಭಿಷೇಕವನ್ನು ಹೊಂದಿ ಆಭರಣಗಳನ್ನು ಹಾಕಿಕೊಂಡು ಕಂಗೊಳಿಸುತ್ತಿರುವ ಹರಿಯನ್ನು ನೋಡಿದನು.

೪೦. ಕಣ್ಣುಬಿಟ್ಟು ಎದುರಿಗಿರುವ ಹರಿಯನ್ನು ನೋಡಿ ಅವಸರಪಟ್ಟು ಕೊಂಡು ನಮಸ್ಕರಿಸಿ ಸ್ತೋತ್ರ ಮಾಡಲು ಉಪಕ್ರಮಿಸಿದನು.

೪೧. ಮೃಗಶೃಂಗನು ಹೇಳಿದನು-ನಾರಾಯಣನೂ ಕಮಲದಂತೆ ಅಗಲ ವಾದ ಕಣ್ಣುಳ್ಳವನೂ ನಾಥನೂ ಪಕ್ಷಿರಾಜನಾದ ಗರುಡವಾಹನನೂ ಒಂದೂಕದ ಮರದಂತೆ ವಿಶಾಲವಾದ ಎದೆಯುಳ್ಳವನೂ ಕಾರ್ಮುಗಿಲಿನಂತೆ ರಮಣೀಯವಾದ ಕಾಂತಿಯುಳ್ಳವನೂ ಆದ ಸ್ವಾಮಿಗೆ ನಮಸ್ಕಾರವು.

೪೨. ಲೋಕಕ್ಕೆಲ್ಲಾ ಅನುಗ್ರಹ ಮಾಡತಕ್ಕ ಧರ್ಮವನ್ನು ಸ್ಥಾಪಿಸುವ ಇಚ್ಛೆಬಂದಂತೆ ರೂಪವನ್ನು ಹೊಂದುವ ವಾಸುದೇವನಾದ ನಿನಗೆ ನಮಸ್ಕಾರವು.

ಸೃಷ್ಟಿಸ್ಥಿತ್ಯನುಸಂಹಾರಾನ್ಮನಸಾ ಕುರ್ವತೇ ನಮಃ ।
ಸಂಹೃತ್ಯ ಸಕಲಾನ್ ಲೋಕಾನ್ ಶಾಯಿನೇ ವಟಪಲ್ಲವೇ ॥ ೪೩ ॥

ಸದಾನಂದಾಯ ಶಾನ್ತಾಯ ಚಿತ್ಸ್ವರೂಪಾಯ ವಿಷ್ಣವೇ ।
ಸ್ವೇಚ್ಛಾಧೀನಚರಿತ್ರಾಯ ನಿರೀಶಾಯೇಶ್ವರಾಯ ಚ ॥ ೪೪ ॥

ಮುಕ್ತಿಪ್ರದಾಯಿನೇ ಸದ್ಯೋ ಮುಮುಕ್ಷೂಣಾಂ ಮಹಾತ್ಮನಾಂ ।
ವಸತೇ ಭಕ್ತಚಿತ್ತೇಸು ಹೃದಯೇ ಯೋಗಿನಾಮಪಿ ॥ ೪೫ ॥

ಚರಾಚರಮಿದಂ ಕೃತ್ಸ್ನಂ ತೇಜಸಾ ವ್ಯಾಪ್ಯ ತಿಷ್ಠತೇ ।
ವಿಶ್ವಾಧಿಕಾಯ ಮಹತೋ ಮಹತೇಣೋರಣೀಯಸೇ ॥ ೪೬ ॥

ಸ್ತೂಯಮಾನಾಯ ದಾನ್ತಾಯ ವಾಕ್ಯೈರುಪನಿಷದ್ಭವೈಃ ।
ಅಪಾರಘೋರಸಂಸಾರಸಾಗರೋತ್ತಾರಹೇತವೇ ॥ ೪೭ ॥

---

೪೩. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮನಸ್ಸಿನಿಂದಲೇ ಮಾಡುವ ನಿನಗೆ ನಮಸ್ಕಾರವು. ಸಕಲ ಲೋಕಗಳನ್ನೂ ನಾಶಮಾಡಿ ಆಲದ ಎಲೆಯ ಮೇಲೆ ಮಲಗುವ ನಿನಗೆ ನಮಸ್ಕಾರವು.

೪೪-೪೫. ಸದಾಕಾಲದಲ್ಲಿಯೂ ಆನಂದಸ್ವರೂಪನಾದ ಶಾಂತನಾದ ಚಿತ್ ಸ್ವರೂಪನಾದ ವಿಷ್ಣುವಿಗೆ ನಮಸ್ಕಾರವು. ತನಗೆ ಬೇಕಾದಂತೆ ಚರಿತ್ರೆಯನ್ನೂ ಮಾಡಿಕೊಳ್ಳುವ ಯಜಮಾನನಿಲ್ಲದಿರುವ ತಾನೇ ಎಲ್ಲಕ್ಕೂ ಈಶ್ವರನಾದ ಮೋಕ್ಷವನ್ನು ಅಪೇಕ್ಷಿಸುವ ಮಹಾತ್ಮರಿಗೆ ಕೂಡಲೇ ಮುಕ್ತಿಯನ್ನು ಕೊಡುವ ಭಕ್ತರ ಚಿತ್ತದಲ್ಲಿ ಯಾವಾಗಲೂ ವಾಸಮಾಡುತ್ತಿರುವ ಯೋಗಿಗಳ ಹೃದಯದಲ್ಲಿಯೂ ವಾಸಿಸುವ ಸ್ವಾಮಿಯಾದ ನಿನಗೆ ನಮಸ್ಕಾರವು.

೪೬-೪೭. ಚರಾಚರರೂಪವಾದ ಈ ಪ್ರಪಂಚವನ್ನು ತನ್ನ ತೇಜಸ್ಸಿನಿಂದಲೇ ವ್ಯಾಪಿಸಿಕೊಂಡು ನಿಂತಿರುವ ಪ್ರಪಂಚಕ್ಕೇ ದೊಡ್ಡವನಾದ ದೊಡ್ಡದೆಲ್ಲಕ್ಕಿಂತಲೂ ದೊಡ್ಡವನಾದ ಚಿಕ್ಕದೆಲ್ಲಕ್ಕಿಂತಲೂ ಚಿಕ್ಕ ಪದಾರ್ಥವಾದ ಸ್ತುತಿಸಿಕೊಳ್ಳುತ್ತಿರುವ ಇಂದ್ರಿಯ ನಿಗ್ರಹಿಯಾದ ಉಪನಿಷತ್ತಿನ ವಾಕ್ಯಗಳಿಂದ ಸ್ತುತಿಸಲ್ಪಡುತ್ತಿರುವ ಅಪಾರವಾದ ಈ ಸಂಸಾರವೆಂಬ ಸಮುದ್ರವನ್ನು ದಾಟಿಸಲು ಕಾರಣಭೂತನಾದ ಸ್ವಾಮಿಗೆ ನಮಸ್ಕಾರವು.

ನಮಸ್ತೇ ಲೋಕನಾಥಾಯ ಲೋಕಾತೀತಾಯ ತೇ ನಮಃ ।
ನಮಃ ಪರಮಕಲ್ಯಾಣನಿಧಯೇ ಪರಮಾತ್ಮನೇ ॥ ೪೮ ॥

ಅಚ್ಯುತಾಯಾಪ್ರಮೇಯಾಯ ನಿರ್ಗುಣಾಯ ನಮೋ ನಮಃ ।
ನಮಸ್ಸಹಸ್ರಶಿರಸೇ ನಮಸ್ಸತತಭಾಸ್ವತೇ ॥ ೪೯ ॥

ನಮಃ ಕಮಲನೇತ್ರಾಯ ನಮೋಽನಂತಾಯ ವಿಷ್ಣವೇ ।
ನಮಸ್ತ್ರಿಮೂರ್ತಯೇ ಧಾತ್ರೇ ನಮಸ್ತ್ರಿಯುಗಶಕ್ತಯೇ ॥ ೫೦ ॥

ನಮಸ್ಸಮಸ್ತಸುಹೃದೇ ನಮಸ್ಸತತಜಿಷ್ಣವೇ ।
ಶಂಖಚಕ್ರಗದಾಪದ್ಮಧಾರಿಣೇ ಲೋಕಧಾರಿಣೇ ॥ ೫೧ ॥

ಸ್ಫುರತ್ಕಿರೀಟಕೇಯೂರಮುಕುಟಾಂಗದಧಾರಿಣೇ ।
ನಿರ್ದ್ವಂದ್ವಾಯ ನಿರೀಹಾಯ ನಿರ್ವಿಕಾರಾಯ ವೈ ನಮಃ ॥ ೫೨ ॥

---

೪೮-೪೯. ಲೋಕನಾಥನಾದ ನಿನಗೆ ನಮಸ್ಕಾರವು. ಲೋಕಕ್ಕಿಂತ ವ್ಯತಿರಿಕ್ತನಾದ ನಿನಗೆ ನಮಸ್ಕಾರವು. ಕಲ್ಯಾಣಗಳಿಗೆಲ್ಲಾ ಸ್ಥಾನನಾದ ನಿನಗೆ ನಮಸ್ಕಾರವು. ಪರಮಾತ್ಮನಾದ ನಿನಗೆ ನಮಸ್ಕಾರವು. ನಾಶರಹಿತನೂ ಅಳೆಯಲು ಆಗದವನೂ ಆದ ನಿನಗೆ ನಮಸ್ಕಾರವು. ಗುಣಗಳನ್ನು ಹೊಂದಿಲ್ಲದ ನಿನಗೆ ನಮಸ್ಕಾರವು. ಸಾವಿರ ತಲೆಗಳುಳ್ಳ ನಿನಗೆ ನಮಸ್ಕಾರವು. ಯಾವಾಗಲೂ ಪ್ರಕಾಶಮಾನನಾದ ನಿನಗೆ ನಮಸ್ಕಾರವು.

೫೦-೫೧. ಕಮಲಾಕ್ಷನಾದ ನಿನಗೆ ನಮಸ್ಕಾರವು. ಅನಂತನೂ ವಿಷ್ಣುವೂ ಆದ ನಿನಗೆ ನಮಸ್ಕಾರವು. ತ್ರಿಮೂರ್ತಿ ಸ್ವರೂಪನಾದ ನಿನಗೆ ನಮಸ್ಕಾರವು. ಬ್ರಹ್ಮಸ್ವರೂಪನಾದ ನಿನಗೆ ನಮಸ್ಕಾರವು. ಸೃಷ್ಟಿ ಸ್ಥಿತಿ ಸಂಹಾರಗಳು ಮೂರನ್ನೂ ಮಾಡುವ ಶಕ್ತಿಯುಳ್ಳ ನಿನಗೆ ನಮಸ್ಕಾರವು. ಎಲ್ಲರಿಗೂ ಸ್ನೇಹಿತನಾದ ನಿನಗೆ ನಮಸ್ಕಾರವು. ಯಾವಾಗಲೂ ಜಯಶಾಲಿಯಾದ ನಿನಗೆ ನಮಸ್ಕಾರವು. ಲೋಕಗಳನ್ನು ಧರಿಸಿರುವ ನಿನಗೆ ನಮಸ್ಕಾರವು.

೫೨. ಪ್ರಕಾಶಮಾನವಾದ ಕಿರೀಟ ಭುಜಕೀರ್ತಿ ಮುಕುಟ ಅಂಗದಗಳನ್ನು ಧರಿಸಿರುವ ಶೀತೋಷ್ಣಾದಿಗಳಿಗೆ ಸಿಲುಕದ ಆಸೆಯಿಲ್ಲದ ವಿಕಾರವನ್ನು ಹೊಂದದ ನಿನಗೆ ನಮಸ್ಕಾರವು.

ಪಾಹಿ ಮಾಂ ಪುಂಡರೀಕಾಕ್ಷ ಶರಣ್ಯ ಶರಣಾಗತಂ |
ತ್ವಮೇವ ಸರ್ವಭೂತಾನಾಮಾಶ್ರಯಃ ಪರಮಾ ಗತಿಃ ॥ ೫೩ ॥

ತ್ವಯಿ ಸ್ಥಿತಂ ಯಥಾ ಚಿತ್ತಂ ನ ಮೇ ಚಂಚಲತಾಂ ವ್ರಜೇತ್ |
ತಥಾ ಪ್ರಸೀದ ದೇವೇಶ ಶರಣ್ಯಂ ತ್ವಾಗತೋಽಸ್ಮ್ಯಹಂ |
ನಮಸ್ತುಭ್ಯಂ ನಮಸ್ತುಭ್ಯಂ ಭೂಯೋ ಭೂಯೋ ನಮೋ ನಮಃ ॥ ೫೪ ॥

॥ ವಸಿಷ್ಠ ಉವಾಚ ॥

ಇತಿ ಸ್ತುತ್ವಾ ಹೃಷೀಕೇಶಂ ನಮಸ್ಕೃತ್ಯ ಪುನಃ ಪುನಃ |
ಆನಂದಬಾಷ್ಪನಯನಃ ಪುಲಕಾಂಕಿತವಿಗ್ರಹಃ |
ಶಿರಸ್ಯಂಜಲಿಮಾಸ್ಥಾಯ ತೂಷ್ಣೀಂ ತತ್ಪುರತಃ ಸ್ಥಿತಃ ॥ ೫೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಮಾಘ ಸ್ನಾನ ಮಹಿಮಾ ವರ್ಣನಂ ನಾಮ ದ್ವಾವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೩. ಪುಂಡರೀಕಾಕ್ಷನೇ ! ಶರಣಾಗತರನ್ನು ರಕ್ಷಿಸುವವನೇ ! ಶರಣಾಗತನಾದ ನನ್ನನ್ನು ರಕ್ಷಿಸು. ನೀನೇನೆ ಎಲ್ಲಾ ಪ್ರಾಣಿಗಳಿಗೂ ಆಶ್ರಯಭೂತನು. ನೀನೇ ಅವಕ್ಕೆಲ್ಲಾ ಗತಿಯು.

೫೪. ಎಲೈ ಸ್ವಾಮಿಯೆ ! ನನ್ನ ಮನಸ್ಸು ನಿನ್ನಲ್ಲಿಯೇ ಸ್ಥಿರವಾಗಿರುತ್ತ ಚಂಚಲವಾಗಿರದಂತೆ ಮಾಡಬೇಕು. ಆ ರೀತಿಯಾಗಿ ಪ್ರಸನ್ನನಾಗು, ರಕ್ಷಕನಾದ ನಿನ್ನನ್ನು ಮರೆಬಿದ್ದಿದ್ದೇನೆ. ನಿನಗೆ ನಮಸ್ಕಾರವು. ನಿನಗೆ ನಮಸ್ಕಾರವು. ನಿನಗೆ ಬಾರಿಬಾರಿಗೂ ನಮಸ್ಕಾರವು.

೫೫. ವಸಿಷ್ಠನು ಹೇಳಿದನು—ಈ ರೀತಿಯಾಗಿ ಆ ಸ್ವಾಮಿಯನ್ನು ಸ್ತುತಿಸಿ ಮತ್ತೆ ಮತ್ತೆ ನಮಸ್ಕಾರಮಾಡಿ ಆನಂದದ ನೀರನ್ನು ಕಣ್ಣಿನಿಂದ ಸುರಿಸುತ್ತಾ ರೋಮಾಂಚವನ್ನು ಹೊಂದಿ ತಲೆಯ ಮೇಲೆ ಕೈಯನ್ನು ಮುಗಿದುಕೊಂಡು ಆ ಸ್ವಾಮಿಯ ಮುಂದೆ ಸುಮ್ಮನೆ ನಿಂತುಕೊಂಡನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಮಾಘ ಸ್ನಾನದ ಮಹಿಮೆಯ ವರ್ಣನೆ ಎಂಬ ಇನ್ನೂರ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ಭಗವಾನುವಾಚ ॥

ಮೃಗಶೃಂಗಾನಯಾ ಸ್ತುತ್ಯಾ ಪರಾ ಪ್ರೀತಿರಜಾಯತ ।
ಮಾಘಮಾಸೇ ಸರಸ್ಯಸ್ಮಿನ್ ಯತ್ತ್ವಯಾ ಸ್ನಾಪಿತೇನ ಚ ॥ ೧ ॥

ತಪಸಾ ಚ ಪ್ರಸ್ವಪ್ನೋ ಸ್ನಿ ಶ್ರಾಂತೋಸಿ ನಿತರಾಂ ಮುನೇ ।
ಯಜ್ಞೈಃ ಸದಕ್ಷಿಣೈರ್ದಾನೈರನ್ಯೈಶ್ಚ ನಿಯಮೈರ್ಯಮೈಃ ॥
ಅಹಂ ತಥಾ ನ ತುಷ್ಯಾಮಿ ಯಥಾಮಾಘನಿಮಜ್ಜನಾತ್ ॥ ೨ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವಾ ತಂ ತತಃ ಪ್ರಾಹ ಮೋಕ್ಷೇಚ್ಛುಂ ಮುದಿತಾನನಂ ॥ ೩ ॥

---

### ಇನ್ನೂರ ಇಪ್ಪತ್ತಮೂರನೆಯ ಅಧ್ಯಾಯವು



೧-೨. ಶ್ರೀ ಭಗವಂತನು ಹೇಳಿದನು-ಎಲೈ ಮೃಗಶೃಂಗನೇ ! ಈ ಸ್ತುತಿಯಿಂದ ನನಗೆ ಬಹುವಾದ ಪ್ರೀತಿಯು ಉಂಟಾಗಿದೆ. ಮಾಘಮಾಸದಲ್ಲಿ ಈ ಸರೋವರದಲ್ಲಿ ಸ್ನಾನಮಾಡಿ ತಪಸ್ಸುಮಾಡಿ ನೀನು ಬಹುವಾಗಿ ಬಳಲಿದ್ದೀಯೆ. ನಾನು ಮಾಘಮಾಸದಲ್ಲಿ ಸ್ನಾನಮಾಡುವುದರಿಂದ ಸಂತೋಷ ಗೊಳ್ಳುವ ಹಾಗೆ ಯಾಗದಿಂದಾಗಲಿ ದಕ್ಷಿಣೆಯಿಂದಾಗಲಿ ದಾನದಿಂದಾಗಲಿ ವ್ರತದಿಂದಾಗಲಿ ನಿಯಮದಿಂದಾಗಲಿ ಸಂತೋಷಗೊಳ್ಳುವುದಿಲ್ಲ.

೩. ವಸಿಷ್ಠನು ಹೇಳಿದನು-ಆತನಿಗೆ ಈ ರೀತಿಯಾಗಿ ಹೇಳಿ ಮೋಕ್ಷವನ್ನು ಅಪೇಕ್ಷಿಸುತ್ತ ಸಂತೋಷಗೊಂಡು ನಿಂತಿರುವ ಆತನನ್ನು ನೋಡಿ ಮತ್ತೆ ಸ್ವಾಮಿಯು ಇಂತೆಂದನು.

|| ಶ್ರೀ ಹರಿರುವಾಚ ||

ವರಂ ಚ ವರಯಾತ್ರ ತ್ವಂ ಪಶ್ಚಾದ್ದಾಸ್ಯಾಮಿ ವಾಂಛಿತಂ |
ಮೃಗಶೃಂಗ ಮಮ ಪ್ರೀತ್ಯೈ ಮದಾಜ್ಞಾಂ ಪರಿಪಾಲಯ || ೪ ||

ಬ್ರಹ್ಮಚರ್ಯೇಣ ಋಷಯೋ ಯಥಾ ತುಷ್ಟಾಸ್ತ್ವಯಾಧುನಾ |
ಯಜ್ಞೇನ ದೇವಾಸ್ಸಂತೋಷ್ಯಾಃ ಪ್ರಜಯಾ ಪಿತರಃ ಪುನಃ || ೫ ||

ಸರ್ವಥಾ ಮಮ ತುಷ್ಟ್ಯರ್ಥಂ ಕರಣೀಯಮಿದಂ ತ್ವಯಾ |
ಭಾವಿಜನ್ಮನಿ ವಿಪ್ರಸ್ತ್ವಂ ಜೀವನ್ಮುಕ್ತೋ ಭವಿಷ್ಯಸಿ || ೬ ||

ಬ್ರಹ್ಮಸೂನುರ್ಮಹಾಜ್ಞಾನೀ ಋಭುನಾಮಾ ಭವಿಷ್ಯಸಿ |
ವೇದಾಂತವಾಕ್ಯಜಂ ಜ್ಞಾನಂ ನಿದಾಘಾಯೋಪದಿಶ್ಯ ಚ ||
ಪುನಸ್ತ್ವಂ ಪರಮಂ ಧಾಮ ಸಮೇಷ್ಯಸಿ ನ ಸಂಶಯಃ || ೭ ||

---

೪. ಶ್ರೀ ಹರಿಯು ಹೇಳಿದನು–ಎಲೈ ಮೃಗಶೃಂಗನೇ ! ನೀನು ಮೊದಲು ವರವನ್ನು ಕೇಳಿಕೋ. ಅನಂತರ ನೀನು ಕೇಳಿದುದನ್ನು ಕೊಡುತ್ತೇನೆ. ನನ್ನಲ್ಲಿರುವ ಪ್ರೀತಿಗೋಸ್ಕರ ಮೊದಲು ನನ್ನ ಅಪ್ಪಣೆಯನ್ನು ಪಾಲಿಸು.

೫. ನೀನು ಬ್ರಹ್ಮಚರ್ಯದಿಂದ ಋಷಿಗಳನ್ನು ಹೇಗೆ ಸಂತೋಷಪಡಿಸಿದೆಯೋ ಅದರಂತೆಯೇ ಯಜ್ಞದಿಂದ ದೇವತೆಗಳನ್ನೂ ಪ್ರಜೆಗಳಿಂದ ಪಿತೃಗಳನ್ನೂ ತೃಪ್ತಿಪಡಿಸಬೇಕು.

೬. ನೀನು ನನಗೆ ತೃಪ್ತಿಯನ್ನುಂಟುಮಾಡಲು ಇದನ್ನು ಮಾಡಿಯೇ ತೀರಬೇಕು. ಮುಂದಿನ ಜನ್ಮದಲ್ಲಿ ನೀನು ಜೀವನ್ಮುಕ್ತನಾಗುತ್ತೀಯೆ.

೭. ಆ ಜನ್ಮದಲ್ಲಿ ಬ್ರಾಹ್ಮಣನ ಹೊಟ್ಟೆಯಲ್ಲಿ ಹುಟ್ಟಿ ಋಭು ಎಂಬ ಹೆಸರಿನಿಂದ ಪ್ರಸಿದ್ಧನಾಗುತ್ತೀಯೆ. ವೇದಾಂತವನ್ನು ನಿದಾಘನಿಗೆ ಉಪದೇಶ ಮಾಡುತ್ತೀಯೆ. ಅನಂತರ ವೈಕುಂಠವನ್ನು ಹೊಂದುತ್ತೀಯೆ. ಸಂಶಯವಿಲ್ಲ.

॥ ವಸಿಷ್ಠ ಉವಾಚ ॥

ಇತಿ ವಿಷ್ಣೋರ್ವಚಶ್ಶ್ರುತ್ವಾ ಮೃಗಶೃಂಗೋ ಮಹಾಮತಿಃ ।
ಪುನರನ್ಯಂ ವರಂ ವವ್ರೇ ದೇವದೇವಂ ಘೃಣಾನಿಧಿಂ ॥ ೮ ॥

॥ ಮೃಗಶೃಂಗ ಉವಾಚ ॥

ದೇವದೇವ ಜಗನ್ನಾಥ ಸರ್ವದೇವ ನಮಸ್ಕೃತ ।
ಅತ್ರ ಸನ್ನಿಹಿತೋ ನಿತ್ಯಂ ಸರ್ವೇಷಾಂ ಸರ್ವಕಾಮದಃ ॥ ೯ ॥

ಸರ್ವದಾ ಸರ್ವಜಂತೂನಾಂ ಸರ್ವಸಂಪತ್ಪ್ರದೋ ಭವ ।
ಇದಮೇಕಂ ವರಂ ದೇಹಿ ಯದ್ಯನುಗ್ರಹಭಾಗಹಂ ॥ ೧೦ ॥

ಪ್ರಸೀದ ಪುಂಡರೀಕಾಕ್ಷ ಪ್ರಣತಾರ್ತಿಹರಾಚ್ಯುತ ।
ಶರಣಂ ತ್ವಾಂ ಪ್ರಸನ್ನೋಽಸ್ಮಿ ಶರಣಾಗತವತ್ಸಲ ॥ ೧೧ ॥

॥ ವಸಿಷ್ಠ ಉವಾಚ ॥

ಇತಿ ಬ್ರುವಾಣಮಾಹೇದಂ ಕೃಪಯಾ ಗರುಡಧ್ವಜಃ ॥ ೧೨ ॥

---

೮. ವಸಿಷ್ಠನು ಹೇಳಿದನು-ಈ ರೀತಿಯಾಗಿ ವಿಷ್ಣುವು ಹೇಳಿದುದನ್ನು ಮೃಗಶೃಂಗನು ಕೇಳಿ ಆ ಮೇಲೆ ಕೃಪಾನಿಧಿಯಾದ ಆ ಸ್ವಾಮಿಯನ್ನು ಕುರಿತು ಮತ್ತೊಂದು ವರವನ್ನು ಕೇಳಿಕೊಂಡನು.

೯-೧೦. ಮೃಗಶೃಂಗನು ಹೇಳಿದನು-ದೇವದೇವನೆ ! ಜಗನ್ನಾಥನೆ ! ಎಲ್ಲಾ ದೇವತೆಗಳಿಂದಲೂ ನಮಸ್ಕಾರವನ್ನು ಹೊಂದುವವನೇ ! ನೀನು ಈ ಜಾಗದಲ್ಲಿಯೇ ಇದ್ದುಕೊಂಡು ಎಲ್ಲಾ ಪ್ರಾಣಿಗಳಿಗೂ ಕೇಳಿದುದೆಲ್ಲವನ್ನೂ ಕೊಡು. ಸಂಪತ್ತೆಲ್ಲವನ್ನೂ ಅನುಗ್ರಹಿಸು. ನನಗೆ ನೀನು ಅನುಗ್ರಹ ಮಾಡುವಂತಿದ್ದರೆ ಈ ಒಂದು ವರವನ್ನು ನಾನು ಕೇಳುತ್ತೇನೆ. ಅನುಗ್ರಹಿಸು.

೧೧. ಎಲೈ ಪುಂಡರೀಕಾಕ್ಷನೆ ! ಪ್ರಣತರ ಕಷ್ಟವನ್ನು ತಪ್ಪಿಸುವ ಅಚ್ಯುತನೆ ! ಪ್ರಸನ್ನನಾಗು. ಶರಣಾಗತ ವತ್ಸಲನೇ ! ನಿನ್ನನ್ನು ಶರಣು ಹೊಕ್ಕಿದ್ದೇನೆ.

೧೨. ವಸಿಷ್ಠನು ಹೇಳಿದನು-ಮೃಗಶೃಂಗನು ಈ ರೀತಿ ಹೇಳಿದುದನ್ನು ಕೇಳಿ ಆ ಗರುಡಧ್ವಜನು ಕೃಪೆಯಿಂದ ಇಂತೆಂದನು.

॥ ಶ್ರೀ ವಿಷ್ಣುರುವಾಚ॥

ತಥಾಸ್ತು ಮೃಗಶೃಂಗಾತ್ರ ಸರ್ವದಾ ನಿವಸಾಮ್ಯಹಂ ।
ಯೇಽರ್ಚಯನ್ತಿ ನರಾಸ್ತೇಷಾಂ ಕರಸ್ಥಾಸ್ಸರ್ವಸಂಪದಃ ॥ ೧೩ ॥

ವಿಶೇಷೇಣ ಸರಸ್ಯಸ್ಮಿನ್ ಮಕರಸ್ಥೇ ದಿವಾಕರೇ ।
ನಿಮಜ್ಯ ನಿಖಿಲೈಃ ಪಾಪೈಃ ಪ್ರಮುಕ್ತಾ ಯಾನ್ತಿ ಮತ್ಪದಂ ॥ ೧೪ ॥

ವ್ಯತೀಪಾತೇಽಯನೇ ವಾಪಿ ಸಂಕ್ರಮೇ ವಿಷುವೇಪಿ ಚ ।
ಪೂರ್ಣಿಮಾಯಾಮಮಾಯಾಂ ಚ ಗ್ರಹಣೇ ಚಂದ್ರಸೂರ್ಯಯೋಃ ॥ ೧೫ ॥

ಸ್ನಾತ್ವಾ ದತ್ವಾ ಯಥಾಶಕ್ತಿ ಮಮ ಲೋಕೇ ಮಹೀಯತೇ ।
ತ್ವಯೋಕ್ತಮೇತತ್ ಸ್ತೋತ್ರಂ ಮೇ ಪಠಿತ್ವಾ ಚಾಗ್ರತಃ ಸ್ಥಿತಃ ॥ ೧೬ ॥

॥ ವಸಿಷ್ಠ ಉವಾಚ ॥

ದೃಢವ್ರತಂ ಮಹಾತ್ಮಾನಂ ಜ್ಞಾನನಿರ್ಧೂತಕಲ್ಮಷಂ ।
ಋಷಿಪುತ್ರಮುವಾಚೇದಂ ಭಗವಾನ್ ಭೂತಭಾವನಃ ॥ ೧೭ ॥

---

೧೩. ಶ್ರೀ ವಿಷ್ಣುವು ಹೇಳಿದನು–ಎಲೈ ಮೃಗಶೃಂಗನೆ! ಹಾಗೆಯೇ ಆಗಲಿ. ಇಲ್ಲಿಯೇ ಯಾವಾಗಲೂ ವಾಸಮಾಡುತ್ತೇನೆ. ಇಲ್ಲಿ ಯಾರು ನನ್ನನ್ನು ಪೂಜಿಸುತ್ತಾರೆಯೋ ಅವರಿಗೆ ಎಲ್ಲಾ ಸಂಪತ್ತುಗಳೂ ಕೈಯ್ಯಲ್ಲಿವೆಯೆಂದು ತಿಳಿ.

೧೪. ಮಕರರಾಶಿಯಲ್ಲಿ ಸೂರ್ಯನಿರುವಾಗ ಕಲ್ಯಾಣಿಯಲ್ಲಿ ಯಾರು ಸ್ನಾನ ಮಾಡುತ್ತಾರೆಯೋ ಅವರ ಪಾಪಗಳೆಲ್ಲವೂ ಹೋಗಿ ಮುಕ್ತರಾಗಿ ನನ್ನ ಸ್ಥಾನವನ್ನು ಹೊಂದುತ್ತಾರೆ.

೧೫–೧೬. ವ್ಯತೀಪಾತ ಉತ್ತರಾಯಣ ದಕ್ಷಿಣಾಯನ ಸಂಕ್ರಮಣಗಳು ವಿಷ್ಣುವತ್ಪುಣ್ಯಕಾಲಗಳು ಹುಣ್ಣಿಮೆ ಅಮಾವಾಸ್ಯೆ ಗ್ರಹಣಗಳು ಈ ಕಾಲಗಳಲ್ಲಿ ಇಲ್ಲಿ ಸ್ನಾನಮಾಡಿ ಶಕ್ತಿಗನುಗುಣವಾಗಿ ದಾನ ಮಾಡಿದರೆ ಅವನು ನನ್ನ ಲೋಕದಲ್ಲಿ ಸುಖಿಸುತ್ತಾನೆ. ನೀನು ಹೇಳಿದ ಸ್ತೋತ್ರವನ್ನು ಹೇಳಬೇಕು.

೧೭. ವಸಿಷ್ಠನು ಹೇಳಿದನು–ವ್ರತಗಳನ್ನು ಮಾಡಿ ಮಹಿಮವಂತನಾಗಿರುವ ಜ್ಞಾನದಿಂದ ಪಾಪಗಳನ್ನು ನಾಶಮಾಡಿಕೊಂಡಿರುವ ಆ ಮೃಗಶೃಂಗನನ್ನು ಕುರಿತು ಆ ಸ್ವಾಮಿಯು ಇಂತೆಂದನು.

ಏವಂ ಬ್ರುವತಿ ಗೋವಿಂದೇ ಪ್ರಣಮ್ಯ ಸ ಪುನರ್ದ್ವಿಜಃ ।
ಅಪೃಚ್ಛತ್ಪುನರಪ್ಯೇಕಂ ಭಕ್ತವಶ್ಯಂ ಹರಿಂ ತದಾ ॥ ೧೮ ॥

॥ ಮೃಗಶೃಂಗ ಉವಾಚ ॥

ಕುತ್ಸಸೂನುರಹಂ ವತ್ಸಃ ಕಥಂ ಮೇ ಮೃಗಶೃಂಗತಾ ।
ಏತದಾ ಚಕ್ಷ್ವ ದೇವೇಶ ತ್ವದ್ಭಕ್ತಸ್ಯ ಕೃಪಾನಿಧೇ ॥ ೧೯ ॥

॥ ಶ್ರೀ ಭಗವಾನುವಾಚ ॥

ಕಲ್ಯಾಣಸರಸಸ್ತೀರೇ ತ್ವಯ್ಯತ್ರ ತಪಸಿ ಸ್ಥಿತೇ ।
ಮೃಗಾಃ ಪಿಬಂತಿ ಪಾನೀಯಂ ಪ್ರತಿವಾಸರಮತ್ರ ವೈ ॥ ೨೦ ॥

ಅಕಂಡೂಯನ್ತ ಶೃಂಗೇಣ ಶರೀರಂ ತವ ನಿರ್ಭಯಾಃ ।
ತೇನ ತ್ವಾಂ ಮೃಗಶೃಂಗಾಖ್ಯಂ ವದಂತಿ ಪರಮರ್ಷಯಃ ॥
ಅದ್ಯ ಪ್ರಭೃತಿ ಲೋಕೋಽಯಂ ಮೃಗಶೃಂಗೇತಿ ವಕ್ಷ್ಯತಿ ॥ ೨೧ ॥

---

೧೮. ಗೋವಿಂದನು ಹೀಗೆ ಹೇಳುತ್ತಿರಲು ಆ ಮೃಗಶೃಂಗನು ಸ್ವಾಮಿಗೆ ನಮಸ್ಕರಿಸಿ ಭಕ್ತರ ವಶನಾದ ಆ ಗೋವಿಂದನನ್ನು ಕುರಿತು ಮತ್ತೆ ಇಂತೆಂದನು.

೧೯. ಮೃಗಶೃಂಗನು ಹೇಳಿದನು–ಎಲೈ ಸ್ವಾಮಿಯೆ ! ನಾನು ಕುತ್ಸನ ಮಗನಾದ ವತ್ಸನೆಂಬುವನು. ನನಗೆ ಈ ಮೃಗಶೃಂಗನೆಂದು ಹೆಸರು ಬರಲು ಕಾರಣವೇನು ? ಎಲೈ ಕೃಪಾನಿಧಿಯೆ ! ನಿನಗೆ ಭಕ್ತನಾದ ನನಗೆ ಇದೆಲ್ಲವನ್ನೂ ಹೇಳು.

೨೦–೨೧. ಶ್ರೀ ಭಗವಂತನು ಹೇಳಿದನು–ನೀನು ಕಲ್ಯಾಣಿ ಸರೋವರದ ತೀರದಲ್ಲಿ ತಪಸ್ಸನ್ನು ಮಾಡುತ್ತಿರಲು ಜಿಂಕೆಗಳು ನೀರು ಕುಡಿಯಲು ಸರೋವರಕ್ಕೆ ಬರುತ್ತಿದ್ದುವು. ಆಗ ಅವು ನೀರು ಕುಡಿದು ಮೇಲೆ ಬಂದು ನಿನ್ನ ಶರೀರವನ್ನು ನಿರ್ಭಯವಾಗಿ ಕೊಂಬಿನಿಂದ ತಿಕ್ಕುತ್ತ ತಮ್ಮ ನವೆಯನ್ನು ಹೋಗಲಾಡಿಸಿಕೊಳ್ಳುತ್ತಿದ್ದುವು. ಅದರಿಂದ ಋಷಿಗಳು ನಿನ್ನನ್ನು ಮೃಗಶೃಂಗನೆಂದು ಕರೆದರು.

|| ವಸಿಷ್ಠ ಉವಾಚ ||

ಇತಿವ್ಯಾಹೃತ್ಯ ಸರ್ವೇಶಃ ಸರ್ವೇಷಾಂ ಸರ್ವದೋ ನೃಣಾಂ ।
ನಾರಾಯಣಗಿತಾ ತಸ್ಮಿನ್ ಹರಿರದ್ಯಾಪಿ ದೃಶ್ಯತೇ || ೨೨ ||

ಅಥ ಸಮೃಗವಿಷಾಣಸ್ತತ್ರ ಸಂಪೂಜ್ಯ ದೇವಂ ।
ನಿರಗಮುದಥ ತಸ್ಮಾತ್ತನ್ನಿದೇಶೇನ ಶೈಲಾತ್ ||
ಜಗದುಪಕೃತಿಹೇತೋರ್ಗೃಹ್ಯ ಧರ್ಮೇ ಧೃತಾತ್ಮಾ ।
ಕಮಲನಯನಮಾದ್ಯಂ ಭಾವಯನ್ನಂತರಂತಃ || ೨೩ ||

ಮೌಂಜಿಕೃಷ್ಣ ಮೃಗಚರ್ಮ ದಂಡಧೃಕ್
ಪಾಣಿ ಪಲ್ಲವಲಸತ್ಕಮಂಡಲುಃ ।
ಜನ್ಮಭೂಮಿಮುವಿಶಜ್ಜಿತೇಂದ್ರಿಯೋ
ಭೋಜರಾಜಪುಟಭೇದನಂ ನಿಜಂ || ೨೪ ||

ಮೃಗಶೃಂಗಮುನಿರ್ಯಾವದಾಯಾತಿ ನಿಜಮಂದಿರಂ ।
ತತ್ಪೂರ್ವಮೇವ ತನ್ನಾಮ ಪ್ರಥಿತಂ ಭುವಿ ಕೇವಲಂ || ೨೫ ||

---

೨೨. ವಸಿಷ್ಠನು ಹೇಳಿದನು-ಈ ರೀತಿಯಾಗಿ ಎಲ್ಲರಿಗೂ ಎಲ್ಲವನ್ನೂ ಕೊಡುವ ಹರಿಯು ಆ ಮೃಗಶೃಂಗನಿಗೆ ಹೀಗೆಂದು ಹೇಳಿದನು. ಅದೇ ಕಾರಣದಿಂದ ನಾರಾಯಣಗಿರಿಯಲ್ಲಿ ಹರಿಯು ಈಗಲೂ ಇದ್ದಾನೆ.

೨೩. ಅನಂತರ ಆ ಮೃಗಶೃಂಗನು ಅಲ್ಲಿ ಆ ಸ್ವಾಮಿಯನ್ನು ಪೂಜಿಸಿ ಅನಂತರ ಆ ಸ್ವಾಮಿಯ ಅಪ್ಪಣೆಯನ್ನು ಪಡೆದು ಆ ಬೆಟ್ಟದಿಂದ ಹೊರಟು ಹೋದನು. ಹೋಗುವಾಗ ಜಗತ್ತಿಗೆ ಉಪಕಾರಮಾಡಲು ಹೊರಟು ಧರ್ಮದಲ್ಲಿಯೇ ನೆಟ್ಟ ಬುದ್ಧಿಯುಳ್ಳವನಾಗಿ ಆ ಸ್ವಾಮಿಯನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತ ಹೋಗುತ್ತಿದ್ದನು.

೨೪. ಮೌಂಜಿ ಕೃಷ್ಣಾಜಿನ ದಂಡುಕೋಲು ಕೈಯ್ಯಲ್ಲಿ ಕಮಂಡಲುಗಳನ್ನು ಧರಿಸಿ ಆ ಮೃಗಶೃಂಗನು ತನ್ನ ಹುಟ್ಟಿದ ದೇಶವೂ ಭೋಜರಾಜನ ಪಟ್ಟಣವೂ ಆದ ಧಾರಾಪುರಕ್ಕೆ ಹೋದನು.

೨೫. ಆ ಮೃಗಶೃಂಗನು ತನ್ನ ಊರಿಗೆ ಬರುವುದಕ್ಕೆ ಮೊದಲೇ ಆತನ ಹೆಸರು ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾಗಿದ್ದಿತು.

ಪ್ರಣಾಮಂ ವಿದಧೇ ಸಮ್ಯಗ್ಜನನ್ಯೈ ಭುವಿ ದಂಡವತ್ ।
ಪಿತ್ರೇ ಚ ವಿಧಿವನ್ನಾತ್ವಾ ಸ್ವಮುದಂತಂ ನ್ಯವೇದಯತ್ ॥ ೨೬ ॥

ಗಾಢಮಾಲಿಂಗಿತೋ ಮೂರ್ಧ್ನಿ ಸಮಾಘ್ರಾತೋ ಮುಹುರ್ಮುಹುಃ ।
ಹರ್ಷಾದಶ್ರುಪರೀತಾಭ್ಯಾಂ ಪಿತೃಭ್ಯಾಮಭಿನಂದಿತಃ ॥ ೨೭ ॥

ಗುರುಂ ತಮಭಿವಾದ್ಯಾಥ ಪುನಃ ಸ್ವಾಧ್ಯಾಯತತ್ಪರಃ ।
ಪಿತುರ್ಮಾತುರ್ಗುರೋರ್ನಿತ್ಯಂ ಶುಶ್ರೂಷಣಪರಾಯಣಃ ॥ ೨೮ ॥

ಅಧೀತಾಖಿಲವೇದೋಽಯಂ ಗುರುಣಾನುಮತಸ್ತತಃ ।
ವ್ರತಸ್ನಾನಂ ತದೋತ್ಸರ್ಗಂ ಸಮಾಪ್ಯ ವಿಧಿಪೂರ್ವಕಂ ।
ಅವೋಚತ್ಪಿತರಂ ಕುತ್ಸಂ ಮೃಗಶೃಂಗೋ ಮಹಾಮನಾಃ ॥ ೨೯ ॥

---

೨೬. ತಾಯಿಗೆ ಭೂಮಿಯಲ್ಲಿ ಮಲಗಿ ಚೆನ್ನಾಗಿ ದೀರ್ಘದಂಡನಮಸ್ಕಾರವನ್ನು ಮಾಡಿ ತಂದೆಗೂ ಶಾಸ್ತ್ರದಲ್ಲಿ ಹೇಳಿರುವಂತೆ ನಮಸ್ಕರಿಸಿ ಅವರಿಗೆ ತನ್ನ ವಿಚಾರವೆಲ್ಲವನ್ನೂ ತಿಳಿಸಿದನು.

೨೭. ಆಗ ತಾಯಿತಂದೆಗಳು ಅವನ ತಲೆಯನ್ನು ಪದೇ ಪದೇ ಪ್ರೀತಿಯಿಂದ ಮೂಸಿನೋಡಿ ಹರ್ಷದಿಂದ ಕಣ್ಣೀರನ್ನು ಸುರಿಸುತ್ತಾ ಶ್ಲಾಘಿಸಿದರು.

೨೮. ಅಲ್ಲಿಂದ ಗುರುವಿನ ಬಳಿಗೆ ಹೋಗಿ ಆತನಿಗೆ ನಮಸ್ಕರಿಸಿ ಅವನಿಗೆ ತನ್ನ ವಿಷಯಗಳೆಲ್ಲವನ್ನೂ ತಿಳಿಸಿ ಮತ್ತೆ ಅಧ್ಯಯನಮಾಡಲು ಮೊದಲು ಮಾಡಿದನು. ಅಲ್ಲದೆ ನಿತ್ಯವೂ ತಾಯಿತಂದೆಗಳ ಶುಶ್ರೂಷೆಯಲ್ಲಿಯೂ ಆಸಕ್ತನಾಗಿದ್ದನು.

೨೯. ಅನಂತರ ಇವನು ವೇದವೆಲ್ಲವನ್ನೂ ಅಧ್ಯಯನಮಾಡಿ ಗುರುವಿನ ಅಪ್ಪಣೆಯನ್ನು ಪಡೆದು ವ್ರತಸ್ನಾನ ಉತ್ಸರ್ಗಗಳನ್ನು ವಿಧಿವತ್ತಾಗಿ ಮಾಡಿದನು. ಆಗ ತಂದೆಯಾದ ಕುತ್ಸನನ್ನು ಕುರಿತು ಇಂತೆಂದನು.

|| ಮೃಗಶೃಂಗ ಉವಾಚ ||

ಸುತಸ್ಯ ಸಂಭವೇ ಕ್ಲೇಶಂ ಸಹೇತೇ ಪಿತರೌ ಚ ಯಂ |
ಶಕ್ಯಂ ವರ್ಷಶತೇನಾಪಿ ನೋ ಕರ್ತುಂ ತಸ್ಯ ನಿಷ್ಕೃತಿಂ || ೩೦ ||

ಅತಸ್ತಯೋಃ ಪ್ರಿಯಂ ಕುರ್ಯಾತ್ ಗುರೋರಪಿ ಚ ಸರ್ವದಾ |
ತ್ರಿಷು ತೇಷು ಸುತುಷ್ಟೇಷು ತಪಸ್ಸರ್ವಂ ಸಮಾಪ್ಯತೇ || ೩೧ ||

ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ |
ತಾನತಿಕ್ರಮ್ಯ ಯತ್ಕುರ್ಯಾತ್ತನ್ನ ಸಿದ್ಧ್ಯೇತ್ಕದಾಚನ || ೩೨ ||

ತ್ರೀನೇವಾಮೂನ್ಸಮಾರಾಧ್ಯ ತ್ರೀಂಲ್ಲೋಕಾನ್ಸ ಜಯೇತ್ಸುಧೀಃ |
ಏತದೇವ ನೃಣಾಂ ಪ್ರೋಕ್ತಂ ಪುರುಷಾರ್ಥಚತುಷ್ಟಯಂ || ೩೩ ||

ಯದೇತೇಷಾಂ ಹಿ ಸಂತೋಷ ಉಪಧರ್ಮೋಽನ್ಯ ಉಚ್ಯತೇ |
ಅಧೀತ್ಯ ವೇದಾನ್ ವೇದೌ ವಾ ವೇದಂ ವಾ ಕ್ರಮತಃ ಪಿತುಃ || ೩೪ ||

---

೩೦. ಮೃಗಶೃಂಗನು ಹೇಳಿದನು–ತಾಯಿತಂದೆಗಳು ಮಗನನ್ನು ಹೊಂದಿ ಕಾಪಾಡುವುದರಲ್ಲಿ ಯಾವ ಕ್ಲೇಶವನ್ನು ಹೊಂದುತ್ತಾರೆಯೋ ಅದಕ್ಕೆ ಪ್ರತ್ಯುಪಕಾರವನ್ನು ಮಾಡಲು ಮಗನ ಕೈಯ್ಯಲ್ಲಿ ನೂರು ವರ್ಷಗಳಾದರೂ ಆಗುವುದಿಲ್ಲ.

೩೧. ಆದ್ದರಿಂದ ಆ ತಾಯಿತಂದೆಗಳಿಬ್ಬರಿಗೂ ಗುರುವಿಗೂ ಕೂಡ ಯಾವಾಗಲೂ ಇಷ್ಟವಾದುದನ್ನು ಮಾಡುತ್ತಿರಬೇಕು. ಆ ಮೂವರು ಸಂತೋಷಗೊಂಡರೆ ಅಲ್ಲಿಗೆ ಆತನ ತಪಸ್ಸೆಲ್ಲವೂ ಮುಗಿದಂತಾಯಿತು.

೩೨. ಆ ತಾಯಿ, ತಂದೆ, ಗುರುಗಳ ಶುಶ್ರೂಷೆಯೇ ಉತ್ತಮವಾದ ತಪಸ್ಸು ಎನ್ನಿಸಿಕೊಳ್ಳುತ್ತದೆ. ಅವರನ್ನು ಬಿಟ್ಟು ಏನುಮಾಡಿದರೂ ಅದು ಅವನಿಗೆ ಸಿದ್ಧಿಸುವುದೇ ಇಲ್ಲ.

೩೩. ಈ ಮೂವರನ್ನು ಸೇವಿಸಿದರೇನೇ ಮನುಷ್ಯನು ಮೂರು ಲೋಕವನ್ನು ಬೇಕಾದರೂ ಜಯಿಸಬಹುದು. ಈ ಮೂರು ಜನಗಳ ಸೇವೆಯೇ ಮನುಷ್ಯನಿಗೆ ಧರ್ಮಕಾಮಾರ್ಥ ಮೋಕ್ಷಗಳೂ ಆಗಿರುತ್ತವೆ.

೩೪–೩೬. ಈ ಮೂವರ ಸಂತೋಷವೇನೇ ಉಳಿದ ಧರ್ಮಗಳೂ ಕೂಡ ಆಗಿರುತ್ತವೆ. ಋಗ್ಯಜುಸ್ಸಾಮವೆಂಬ ಮೂರು ವೇದಗಳನ್ನಾಗಲಿ ಇವುಗಳಲ್ಲಿ ಎರಡನ್ನಾಗಲಿ ಅಥವಾ ತನ್ನ ಶಾಖೆಯಾದ ಒಂದೇ ವೇದವನ್ನಾಗಲಿ ತಂದೆಯಿಂದ

ಅಪ್ರಸ್ತಲಬ್ದ್ವಬ್ರಹ್ಮಚರ್ಯೋ ಗೃಹಾಶ್ರಮಮಥಾಶ್ರಯೇತ್ ।
ಗೃಹಾಶ್ರಮಾತ್ಪರೋ ನಾಸ್ತಿ ಯದಿ ಪತ್ನೀ ವಶಂ ಗತಾ ॥ ೩೫ ॥

ಅನುಕೂಲ್ಯಂ ಹಿ ದಂಪತ್ಯೋಃ ತ್ರಿವರ್ಗೋದಯಹೇತವೇ ।
ಅನುಕ್ಯೂಂ ಕಳತ್ರಂ ಚ ತ್ರಿದಿವೇನ ಹಿ ಕಿಂ ತತಃ ॥ ೩೬ ॥

ಪ್ರತಿಕೂಲಂ ಕಳತ್ರಂ ಚೇನ್ನರಕೇಣ ಹಿ ಕಿಂ ತತಃ ।
ಗೃಹಾಶ್ರಮಃ ಸುಖಾರ್ಥಾಯ ಭಾರ್ಯಾಮೂಲಂ ಹಿ ತತ್ಸುಖಂ ॥ ೩೭ ॥

ಸ್ವಭಾರ್ಯಾಯಾಂ ವಿನೀತಾಯಾಂ ತ್ರಿವರ್ಗೋಽಪಿ ಭವೇದ್ಧ್ರುವಂ ।
ಜಲೂಕಯೋಪಮೀಯಂತೇ ಪ್ರಮದಾ ಮಂದಬುದ್ಧಿಭಿಃ ॥ ೩೮ ॥

---

ಅಧ್ಯಯನಮಾಡಿ ಬ್ರಹ್ಮಚರ್ಯಾಶ್ರಮವನ್ನು ಸರಿಯಾಗಿ ಕಾಪಾಡಿಕೊಂಡಿದ್ದು ಅನಂತರ ಗೃಹಸ್ಥಾಶ್ರಮವನ್ನು ಹೊಂದಬೇಕು. ಹೆಂಡತಿಯು ಗಂಡನ ಮಾತನ್ನು ಕೇಳಿಕೊಂಡು ಅನ್ಯೋನ್ಯತೆಯಿಂದ ಇದ್ದರೆ ಗೃಹಸ್ಥಾಶ್ರಮಕ್ಕಿಂತಲೂ ಬೇರೆ ಆಶ್ರಮವು ಬೇಕಿರುವುದಿಲ್ಲ. ದಂಪತಿಗಳು ಅನುಕೂಲವಾಗಿರುವಿಕೆಯು ಧರ್ಮ, ಅರ್ಥ, ಕಾಮಗಳಿಗೆ ಕಾರಣವಾಗಿರುತ್ತದೆ. ಹೆಂಡತಿಯು ಅನುಕೂಲಳಾಗಿದ್ದರೆ ಸ್ವರ್ಗಸುಖಕ್ಕೆ ಆಸೆಪಡಬೇಕಾದ ಅಗತ್ಯವೇ ಇರುವುದಿಲ್ಲ.

೩೭. ಹೆಂಡತಿಯು ತಾನು ಹೇಳಿದಂತೆ ಕೇಳದೆ ವಿರುದ್ಧಳಾಗಿದ್ದರೆ ಆತನಿಗೆ ಬೇರೆಯಾದ ನರಕವು ಬೇಕಿರುವುದೇ ಇಲ್ಲ. ಇಲ್ಲಿಯೇ ಆ ಕಷ್ಟಗಳನ್ನೆಲ್ಲಾ ಅನುಭವಿಸಬಹುದು ಗ್ರಹಸ್ಥಾಶ್ರಮವೆಂಬುದು ಸುಖದ ಅನುಭವಕ್ಕೋಸ್ಕರವಾಗಿರತಕ್ಕದ್ದು ಆ ಸುಖವು ಹೆಂಡತಿಯು ತನಗೆ ಅನುಕೂಲಳಾಗಿದ್ದರೇನೇ ಸಿಕ್ಕತಕ್ಕದ್ದಾಗಿರುತ್ತದೆ.

೩೮. ತನ್ನ ಹೆಂಡತಿಯು ತನಗೆ ವಿನೀತಳಾಗಿ ಹೇಳಿದಂತೆ ಕೇಳಿಕೊಂಡು ಇದ್ದರೆ ಧರ್ಮಾರ್ಥಗಳು ಹೆಚ್ಚುವುದರಲ್ಲಿ ಸಂದೇಹವೇ ಇಲ್ಲ. ಆದರೆ ದಡ್ಡರಾದವರು ಕೆಲವರು ಜಿಗಣೆಯು ಮನುಷ್ಯನನ್ನು ಕಚ್ಚಿಕೊಂಡು ದೇಹದ ರಕ್ತವನ್ನು ಕುಡಿಯುವಂತೆ ಹೆಂಡಿರು ಒಬ್ಬ ಮನುಷ್ಯನನ್ನು ಮದುವೆಯೆಂಬ ನೆವದಿಂದ ಕಚ್ಚಿಕೊಂಡು ಅವನ ಸಂಪತನ್ನೆಲ್ಲಾ ಅನುಭವಿಸಿ ನಾಶಮಾಡುವರು ಎಂದೆನ್ನುತ್ತಾರೆ. ಇದು ಕೇವಲ ದಡ್ಡತನದ ಮಾತು.

ಮೃಗೀದೃಶಾಂ ಜಲೂಕಾನಾಂ ವಿಚಾರಾನ್ಮಹದಂತರಂ ।
ಜಲೂಕಾ ಕೇವಲಂ ರಕ್ತಂ ಗೃಹ್ಣಾತಿ ಪುನರಂಗನಾ　　॥ ೩೯ ॥

ಗೃಹ್ಣಾತಿ ಸರ್ವಮಪ್ಯುಗ್ರಾ ಚಿತ್ತಂ ವಿತ್ತಂ ಸುಖಂ ಬಲಂ ।
ದಕ್ಷಾ ಪ್ರಜಾವತೀ ಸಾಧ್ವೀ ಪ್ರಿಯವಾಕ್ಚ ವಶಂ ವದಾ　　॥ ೪೦ ॥

ಗುಣೈರಮೀಭಿಸ್ಸಂಯುಕ್ತಾ ಸಾ ಶ್ರೀಃ ಸ್ತ್ರೀರೂಪಧಾರಿಣೀ ।
ಉದ್ವಹೇತ ತತೋ ಭಾರ್ಯಾಂ ಸವರ್ಣಾಂ ಸಾಧುಲಕ್ಷಣಾಂ　　॥ ೪೧ ॥

ಜನಕಸ್ಯಾಸಗೋತ್ರಾ ಯಾ ಮಾತುರ್ಯಾಪ್ಯಸಪಿಂಡಕಾ ।
ದಾರಕರ್ಮಣಿ ಯೋಗ್ಯಾ ಸಾ ದ್ವಿಜಾನಾಂ ಧರ್ಮವೃದ್ಧಯೇ　　॥ ೪೨ ॥

---

೩೯–೪೨. ಹಾಗೆ ಅವರಂತೆ ಯೋಚನೆಮಾಡಿ ನೋಡಿದರೂ ಬಹು ವ್ಯತ್ಯಾಸವು ಕಂಡುಬರುತ್ತದೆ. ಜಿಗಣೆಯೆಂಬುದು ಮನುಷ್ಯನ ರಕ್ತವನ್ನು ಮಾತ್ರ ಹೀರುತ್ತದೆ. ಕ್ರೂರಳಾದ ಹೆಂಗಸಾದರೋ ಗಂಡಸಿನ ಮನಸ್ಸು ಹಣ ಸುಖ ಬಲ ಕೊನೆಗೆ ಇರತಕ್ಕದ್ದೆಲ್ಲವನ್ನೂ ಸೂರೆಗೊಳ್ಳುತ್ತಾಳೆ. ಆದ್ದರಿಂದ ವಿವೇಕಿನಿಯಾದ ಮಕ್ಕಳನ್ನು ಹೊಂದಲು ಯೋಗ್ಯತೆಯುಳ್ಳ ಸಾಧ್ವಿಯಾದ ಒಳ್ಳೆಯ ಮಾತುಗಳನ್ನಾಡುವ ಯಾವಾಗಲೂ ತನಗೆ ಅನುಕೂಲಳಾಗಿರುವ ಇಂತಹ ಇನ್ನೂ ಅನೇಕವಾದ ಸದ್ಗುಣಗಳುಳ್ಳ ಹೆಂಗಸನ್ನು ಮದುವೆಯಾಗಬೇಕು ಆಕೆಯು ಹೆಂಗಸಿನ ರೂಪವನ್ನು ಹೊಂದಿ ಬಂದಿರುವ ಲಕ್ಷ್ಮಿಯೇ ಆಗಿರುತ್ತಾಳೆ. ತಾನು ಮದುವೆಯಾಗುವ ಹೆಂಗಸು ಈ ರೀತಿ ಗುಣಗಳುಳ್ಳವಳಾಗಿರಬೇಕು. ಅಲ್ಲದೆ ತನ್ನ ಜಾತಿಗೆ ಸಮಾನವಾದ ಜಾತಿಯುಳ್ಳವಳಾಗಿರಬೇಕು ಸುಂದರಿಯಾಗಿರಬೇಕು. ಒಳ್ಳೆಯ ಲಕ್ಷಣಗಳಿರಬೇಕು. ತನ್ನ ತಂದೆಯ ಗೋತ್ರದವಳಾಗಿರಬಾರದು. ತಾಯಿಯ ಮನೆಯವರಿಗೆ ಸಪಿಂಡದ ಗುಂಪಿಗೆ ಸೇರಿದ ಮಗಳಾಗಿರಬಾರದು ಇಂತಹವಳೇ ಬ್ರಾಹ್ಮಣರಿಗೆ ಮದುವೆಯಾಗಲು ಯೋಗ್ಯಳು ಹಾಗಾದರೆ ಧರ್ಮವು ವೃದ್ಧಿಯಾಗುತ್ತದೆ.

ಸ್ತ್ರೀಸಂಬಂಧೇಸ್ಯಪಸ್ಮಾರಿ ಕ್ಷಯಿ ಶ್ವಿತ್ರಿ ಕುಲಂ ತ್ಯಜೇತ್ ।
ಅಭಿಶಸ್ತಿಸಮಾಯುಕ್ತಾಂ ತಥಾ ಕನ್ಯಾಪ್ರಸೂಂ ತ್ಯಜೇತ್ ॥ ೪೩ ॥

ರೋಗಹೀನಾಂ ಭ್ರಾತೃಮತೀಂ ಸ್ವಸ್ಮಾತ್ಕಿಂಚಿಲ್ಲಘೀಯಸೀಂ ।
ಉದ್ವಹೇತ ದ್ವಿಜೋ ಭಾರ್ಯಾಂ ಸೌಮ್ಯಾಸ್ಯಾಂ ಮೃದುಭಾಷಿಣೀಂ ॥ ೪೪ ॥

ನ ಪರ್ವತರ್ಕ್ಷವೃಕ್ಷಾಹ್ವಾಂ ನ ನದೀಸರ್ಪನಾಮಿಕಾಂ ।
ನ ಪಕ್ಷ್ಯಭಿಃ ಪ್ರೇಷ್ಯನಾಮ್ನೀಂ ಸೌಮ್ಯಾಖ್ಯಾಮುದ್ವಹೇತ್ಸುಧೀಃ ॥ ೪೫ ॥

ನ ಚಾತಿರಿಕ್ತಹೀನಾಂಗೀಂ ನಾತಿದೀರ್ಘಾಂ ನ ವಾ ಕೃಶಾಂ ।
ನಾಲೋಮಿಕಾಂ ನಾತಿಲೋಮಾಂ ನಾಸ್ನಿಗ್ಧಸ್ಥೂಲಮೂರ್ಧಜಾಂ ॥ ೪೬ ॥

---

೪೩. ನಾವು ಮದುವೆಯಾಗುವ ಕುಲದಲ್ಲಿ ಕ್ಷಯರೋಗದವರಾಗಲಿ ಅಪಸ್ಮಾರವೆಂಬ ಮೂರ್ಛೆಬರುವ ರೋಗದವರಾಗಲಿ ಕುಷ್ಠರೋಗದವರಾಗಲಿ ಇರಬಾರದು. ಅಂತಹ ವಂಶದವರನ್ನು ಬಿಟ್ಟು ಬಿಡಬೇಕು. ಅಪವಾದವಿರುವ ವಂಶದವಳನ್ನು ಮದುವೆಯಾಗಬಾರದು. ಬರಿಯಹೆಣ್ಣು ಮಕ್ಕಳನ್ನೇ ಹೆರುವ ವಂಶದ ಹುಡುಗಿಯನ್ನು ಮದುವೆಯಾಗಬಾರದು.

೪೪. ರೋಗವಿಲ್ಲದಿರುವ ಅಣ್ಣ ತಮ್ಮಂದಿರಿರುವ ತನಗಿಂತಲೂ ಸ್ವಲ್ಪ ಚಿಕ್ಕವಳಾಗಿರುವ ಸೌಮ್ಯಮುಖವುಳ್ಳ ಮೃದುವಾಗಿ ಮಾತನಾಡುವ ಹುಡುಗಿಯನ್ನು ಮದುವೆಯಾಗಬೇಕು.

೪೫. ಆಕೆಗೆ ಬೆಟ್ಟಗಳ ಹೆಸರನ್ನಿಟ್ಟಿರಬಾರದು. ನಕ್ಷತ್ರಗಳ ಹೆಸರನ್ನಾಗಲಿ ಮರಗಳ ಹೆಸರನ್ನಾಗಲಿ ಇಟ್ಟಿರಬಾರದು. ನದಿಗಳ ಅಥವಾ ಸರ್ಪಗಳ ಹೆಸರನ್ನಿಟ್ಟಿರಬಾರದು. ಪಕ್ಷಿಗಳ ಹೆಸರನ್ನಾಗಲಿ ಆಳುಗಳಿಗಿಡುವ ಹೆಸರನ್ನಾಗಲಿ ಇಟ್ಟಿರಬಾರದು. ಸೌಮ್ಯವಾದ ಒಳ್ಳೆಯ ಹೆಸರನ್ನಿಟ್ಟಿರಬೇಕು.

೪೬. ಆಕೆಯು ದಪ್ಪವಾಗಿರಬಾರದು ಕೃಶಳೂ ಆಗಿರಬಾರದು. ಉದ್ದವಾಗಿಯೂ ಇರಬಾರದು. ಕುಳ್ಳಗೂ ಇರಬಾರದು. ಆಕೆಯು ಮೈಯ್ಯಲ್ಲಿ ಕೂದಲಿಲ್ಲದೆಯೂ ಇರಬಾರದು. ಹೆಚ್ಚುಕೂದಲೂ ಇರಬಾರದು. ತಲೆಗೂದಲು ಒರಟೊರಟಾಗಿ ದಪ್ಪದಪ್ಪವಾಗಿರಬಾರದು ಅಂತಹವಳನ್ನು ಮದುವೆಯಾಗ ಬೇಕು.

ಮೋಹಾತ್ಸಮುಪಯುಚ್ಛೇತ ಕುಲಹೀನಾಂ ಸ ಕನ್ಯಕಾಂ ।
ಹೀನೋಪಯಮನಾದ್ಯಾತಿ ಸಂತಾನಸ್ಯಾಪಿ ಹೀನತಾಂ ॥ ೪೭ ॥

ಲಕ್ಷಣಾನಿ ಪರೀಕ್ಷ್ಯೈವಂ ಶತಃ ಕನ್ಯಾಂ ಸಮುದ್ವಹೇತ್ ।
ಸುಲಕ್ಷಣಾ ಸದಾಚಾರಾ ಪತ್ಯುರಾಯುಃ ಪ್ರವರ್ಧಯೇತ್ ॥ ೪೮ ॥

ಇತಿ ಪ್ರಾಹ ಮನುಃ ಪೂರ್ವಮಗಸ್ತ್ಯೋಽಪಿ ತಥಾಬ್ರವೀತ್ ।
ಅನ್ಯೇ ಚ ಋಷಯಸ್ಸರ್ವೇಪ್ಯೇವಮಾಹುಸ್ತ್ವಮಪ್ಯೃತ ॥
ಈದೃಶೀ ಕುತ್ರ ಭಾರ್ಯಾ ಮೇ ಲಭ್ಯತೇ ಜನಕಾಧುನಾ ॥ ೪೯ ॥

॥ ವಸಿಷ್ಠ ಉವಾಚ ॥

ಮೃಗಶೃಂಗಸ್ಯ ತದ್ವಾಕ್ಯಂ ಮಧುರಂ ವೇದಸಮ್ಮಿತಂ ।
ಶ್ರುತ್ವಾ ಕುತ್ಸಃ ಪ್ರಹೃಷ್ಟಾತ್ಮಾ ಪುನಃ ಪುತ್ರಮಭಾಷತ ॥ ೫೦ ॥

---

೪೭. ಕುಲಹೀನಳಾದ ಕನ್ಯೆಯನ್ನು ಒಂದು ವೇಳೆ ಬುದ್ಧಿಯಿಲ್ಲದೆ ಆಸೆಯಿಂದ ಮದುವೆಯಾದರೆ ಅಯೋಗ್ಯಳನ್ನು ಮದುವೆಯಾಗುವುದರಿಂದ ಅವಳಲ್ಲಿ ಹುಟ್ಟುವವರೂ ಅಯೋಗ್ಯರಾಗಿಯೇ ಆಗುತ್ತಾರೆ.

೪೮. ಈ ರೀತಿಯಾದ ಲಕ್ಷಣಗಳನ್ನು ಪರೀಕ್ಷೆಮಾಡಿ ಸರಿಯಾಗಿರುವ ಕನ್ಯೆಯನ್ನು ಮದುವೆಯಾಗಬೇಕು. ಒಳ್ಳೆಯ ಲಕ್ಷಣವುಳ್ಳ ಸದಾಚಾರದಿಂದ ಕೂಡಿರುವ ಹೆಂಗಸು ಗಂಡನ ಆಯುಸ್ಸನ್ನು ಹೆಚ್ಚುಸುತ್ತಾಳೆ.

೪೯. ಈ ರೀತಿಯಾಗಿ ಮನುವು ಪೂರ್ವದಲ್ಲಿ ಹೇಳಿದ್ದಾನೆ. ಅಗಸ್ತ್ಯನೂ ಹೇಳಿದ್ದಾನೆ. ಮಿಕ್ಕಋಷಿಗಳೂ ಹೇಳಿದ್ದಾರೆ. ನೀನೂ ಕೂಡ ಹೀಗೆಯೇ ಹೇಳಿದ್ದೀಯೆ. ಎಲೈ ತಂದೆಯೇ ! ಈ ರೀತಿಯಾದ ಕನ್ನಿಕೆಯು ನನಗೆ ಈಗ ಎಲ್ಲಿ ದೊರೆಕಾಳು ?

೫೦. ವಸಿಷ್ಠನು ಹೇಳಿದನು–ಮೃಗಶೃಂಗನ ಆ ವೇದಸಮಾನವೂ ಮಧುರವೂ ಆದ ಮಾತನ್ನು ಕೇಳಿ ತಂದೆಯಾದ ಕುತ್ಸನು ಸಂತೋಷಪಟ್ಟು ಮಗನನ್ನು ಕುರಿತು ಇಂತೆಂದನು.

|| ಕುತ್ಸ ಉವಾಚ ||

ಮಾ ವಿಚಾರಂ ಕುರುಷ್ವಾತ್ರ ಮೃಗಶೃಂಗ ಮಹಾಮತೇ ।
ಈದೃಶಾಚಾರಯುಕ್ತಸ್ಯ ತವಾಪ್ರಾಪ್ಯಂ ನ ವಿದ್ಯತೇ || ೫೧ ||

ಅನಾಚಾರವತಾಂ ನೃಣಾಮಾಲಸ್ಯೋಪಹತಾತ್ಮನಾಂ ।
ಅಮಾಘಸ್ನಾಯಿನಾಂ ನೃಣಾಂ ತಾದೃಶಾ ದುರ್ಲಭಾಃ ಸ್ತ್ರಿಯಃ || ೫೨ ||

ಅಕೃತಾತಿಥಿಪೂಜಾನಾಮನೇಕಾದಶ್ಯುಪೋಷಿಣಾಂ ।
ಅಮಹಾದೇವಭಕ್ತಾನಾಂ ತಾದೃಶಾ ದುರ್ಲಭಾಃ ಸ್ತ್ರಿಯಃ || ೫೩ ||

ಅಮಾತಾಪಿತೃಭಕ್ತಾನಾಮಗುರುಪ್ರೀತಿಕಾರಿಣಾಂ ।
ಅಗೋಶುಶ್ರೂಷಕಾಣಾಂ ಚ ಅಬ್ರಾಹ್ಮಣಹಿತೈಷಿಣಾಂ || ೫೪ ||

ಅದೈವಪಿತೃಕಾರ್ಯಾಣಾಮದತ್ತ್ವಾ ಭುಂಜತಾಮಪಿ ।
ಅದಾನಧರ್ಮಶೀಲಾನಾಮಹುತ್ವಾ ಚಾನ್ನಮಶ್ನತಾಂ || ೫೫ ||

---

೫೧. ಕುತ್ಸನು ಹೇಳಿದನು-ಎಲೈ ಬುದ್ಧಿವಂತನಾದ ಮೃಗಶೃಂಗನೇ ! ಈ ವಿಷಯದಲ್ಲಿ ಯೋಚಿಸಬೇಡ. ಈ ರೀತಿಯಾದ ಆಚಾರಶೀಲನಾದ ನಿನಗೆ ಅಸಾಧ್ಯವಾದುದಾವುದೂ ಇರುವುದಿಲ್ಲ.

೫೨. ಆಚಾರಹೀನರಾದ ಸೋಮಾರಿಗಳಾದ ಮಾಘಸ್ನಾನವನ್ನು ಮಾಡದವರಿಗೆ ನೀನು ಹೇಳಿದಂತಹ ಸ್ತ್ರೀಯರು ಸಿಕ್ಕುವುದು ದುರ್ಲಭವು.

೫೩. ಅತಿಥಿಪೂಜೆಮಾಡದ ಏಕಾದಶಿಯ ದಿನ ಉಪವಾಸಮಾಡದ ಮಹಾದೇವನಲ್ಲಿ ಭಕ್ತರಲ್ಲದವರಿಗೆ ನೀನು ಹೇಳಿದ ರೀತಿಯ ಕನ್ಯೆಯರು ಸಿಕ್ಕುವುದಿಲ್ಲ.

೫೪-೫೫. ತಾಯಿತಂದೆಯರಲ್ಲಿ ಭಕ್ತರಲ್ಲದ ಗುರುಗಳಲ್ಲಿ ಪ್ರೀತಿಯಿಡದ ಗೋವಿನ ಶುಶ್ರೂಷಣೆಯನ್ನು ಮಾಡದ ಬ್ರಾಹ್ಮಣರ ಹಿತವನ್ನು ಬಯಸದ ದೇವಪಿತೃಕಾರ್ಯವನ್ನು ಮಾಡದೆ ಊಟಮಾಡುವ ಜನರಿಗೆ ನೀನು ಹೇಳಿದ ಲಕ್ಷಣಗಳುಳ್ಳ ಕನ್ಯೆಯರು ಸಿಕ್ಕುವುದು ಕಷ್ಟವು.

ಅಗೋಪೀಚಂದನಾಂಕಾನಾಮಮೌಲಿತುಲಸೀಭೃತಾಂ ।
ಅಕಾವೇರೀಜಲಾದ್ರಾರ್ಣಾಮಮಾಘವ್ರತಚಾರಿಣಾಂ ।
ಅಮಾಘಮಹಿಮಜ್ಞಾನಾಂ ತಾದೃಶಾ ದುರ್ಲಭಾಃ ಸ್ತ್ರಿಯಃ ॥ ೫೬ ॥

ದದಾತಿ ವಿದ್ಯಾಮಮಲಾಂ ಚ ಕೀರ್ತಿಂ
ಆರೋಗ್ಯಮಾಯುರ್ಧನಮಕ್ಷಯಂ ಚ ।
ಸಮಸ್ತಪಾಪಕ್ಷಯಮಿಂದ್ರಲೋಕಂ
ಕಿಂ ಕಿಂ ನ ದದ್ಯಾತ್ಸುತ ಮಾಘಮಾಸಃ ॥ ೫೭ ॥

ಸೌಭಾಗ್ಯಮಾಚಾರಮಪತ್ಯವೃದ್ಧಿಂ
ಸತ್ಸಂಗತಿಂ ಸತ್ಯಮುದಾರಭಾವಂ ।
ಖ್ಯಾತಿಂ ಚ ಶೌರ್ಯಂ ಚ ಬಲಂ ದದಾತಿ
ಕಿಂ ಕಿಂ ನ ದದ್ಯಾತ್ಸುತ ಮಾಘಮಾಸಃ ॥ ೫೮ ॥

ಮಾಘಸ್ನಾನೇನ ಸುಪ್ರೀತೋ ಮಾಧವಸ್ತೇ ಮನೋರಥಂ ।
ಪೂರಯಿಷ್ಯತಿ ಪುಣ್ಯಾತ್ಮ ಪುಂಡರೀಕಾಯತೇಕ್ಷಣಃ ॥ ೫೯ ॥

---

೫೬. ಗೋಪೀಚಂದನವನ್ನು ಧರಿಸದ ತಲೆಯಲ್ಲಿ ತುಲಸಿಯನ್ನು ಧರಿಸದ ಕಾವೇರಿ ನೀರಿನಲ್ಲಿ ಸ್ನಾನಮಾಡದ ಮಾಘವ್ರತವನ್ನು ಆಚರಿಸದ ಮತ್ತು ಮಾಘ ಮಹಿಮೆಯನ್ನು ತಿಳಿಯದವರಿಗೆ ನೀನು ಹೇಳಿದ ರೀತಿಯ ಕನ್ಯೆಯರು ಸಿಕ್ಕುವುದು ಕಷ್ಟವು.

೫೭. ಎಲೈ ಮಗನೇ ! ಮಾಘಮಾಸವು ಕೀರ್ತಿಯನ್ನೂ ಒಳ್ಳೆಯ ವಿದ್ಯೆಯನ್ನೂ ಆರೋಗ್ಯ ಆಯುಸ್ಸು ನಾಶವಾಗದ ಧನ ಎಲ್ಲವನ್ನೂ ಕೊಡುತ್ತದೆ. ಎಲ್ಲಾ ಪಾಪಗಳನ್ನೂ ನಾಶಮಾಡಿ ಇಂದ್ರಲೋಕವಾದ ಸ್ವರ್ಗವನ್ನು ಕೊಡುತ್ತದೆ. ಮಾಘಮಾಸವು ಏನನ್ನು ತಾನೆ ಕೊಡಲಾರದು !

೫೮. ಸೌಭಾಗ್ಯ ಆಚಾರ ಮಕ್ಕಳವೃದ್ಧಿ ಸಜ್ಜನರ ಸಹವಾಸ ಸತ್ಯವನ್ನು ಹೇಳುವಿಕೆ ಉದಾರ ಸ್ವಭಾವ ಖ್ಯಾತಿ ಶೌರ್ಯ ಬಲ ಎಲ್ಲವನ್ನೂ ಈ ಮಾಘಮಾಸವು ಕೊಡುತ್ತದೆ.

೫೯. ಈ ಮಾಘಸ್ನಾನದಿಂದ ಸುಪ್ರೀತನಾದ ವಿಷ್ಣುವು ನಿನ್ನ ಇಷ್ಟಾರ್ಥಗಳೆಲ್ಲವನ್ನೂ ಕೊಡುವನು. ಯೋಚಿಸಬೇಡ.

॥ ವಸಿಷ್ಠ ಉವಾಚ ॥

ಇತಿ ಪಿತೃವಚನಂ ನಿಶಮ್ಯ ಸತ್ಯಂ
ಮುದಿತಮನಾ ಮೃಗಶೃಂಗನಾಮಧೇಯಃ ।
ಮುನಿರಪಿ ಪಿತರಂ ಪ್ರಣಮ್ಯ ಮೂರ್ಧ್ನಾ
ಹೃದಿ ಹರಿಮೇವ ದಿವಾನಿಶಂ ನಿದಧ್ಯೌ ॥ ೬೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಮಾಘ ಸ್ನಾನ ಮಹಿಮಾ ವರ್ಣನಂ ನಾಮ ತ್ರಯೋವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೬೦. ವಸಿಷ್ಠನು ಹೇಳಿದನು–ತಂದೆಯು ಹೀಗೆ ಹೇಳಿದುದನ್ನು ಋಷ್ಯಶೃಂಗನು ಕೇಳಿ ಸಂತೋಷಗೊಂಡು ತಂದೆಗೆ ನಮಸ್ಕರಿಸಿ ಹಗಲೂ ರಾತ್ರಿಯೂ ಹರಿಯನ್ನೇ ಧ್ಯಾನಮಾಡುತ್ತಿದ್ದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಮಾಘ ಸ್ನಾನದ ಮಹಿಮೆಯ ವರ್ಣನೆ ಎಂಬ ಇನ್ನೂರ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಃ ||



|| ವಸಿಷ್ಠ ಉವಾಚ ||

**ಅಥ ಭೋಜಪುರೇ ತಸ್ಮಿನ್ನುಚಥ್ಯೋ ಮುನಿಪುಂಗವಃ |**
**ಸುವ್ರತಾ ನಾಮ ತಸ್ಯಾಸೀತ್ಕನ್ಯಾ ಕಮಲಲೋಚನಾ || ೧ ||**

**ಸಾ ಮಾಘಮಾಸೇ ಕನ್ಯಾಭಿಃ ಸಖೀಭಿಸ್ಸಹ ಮಜ್ಜತಿ |**
**ಪ್ರಾತರೇವ ಸಮುತ್ಥಾಯ ಕಾವೇರ್ಯಾಃ ಪಶ್ಚಿಮೌಘಸಿ || ೨ ||**

**ಸಹ್ಯಪಾದೋದ್ಭವೇ ದೇವಿ ಶ್ರೀರಂಗೋತ್ಸಂಗಗಾಮಿನಿ |**
**ಶ್ರೀಕಾವೇರಿ ನಮಸ್ತುಭ್ಯಂ ಮಮ ಪಾಪಂ ವಿನಾಶಯ || ೩ ||**

---

### ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು–ಆ ಭೋಜನ ಪಟ್ಟಣವಾದ ಧಾರಾನಗರದಲ್ಲಿ ಉಚಥ್ಯನೆಂಬ ಒಬ್ಬ ಋಷಿಯಿದ್ದನು. ಅವನಿಗೆ ಒಬ್ಬಳು ಲಕ್ಷಣವತಿಯಾದ ಸುಕನ್ಯೆಯೆಂಬ ಮಗಳಿದ್ದಳು.

೨. ಆಕೆಯು ಮಾಘಮಾಸದಲ್ಲಿ ಪ್ರತಿದಿನವೂ ಸಖಿಯರೊಡನೆ ಬೆಳಗ್ಗೆ ಎದ್ದು ಹೋಗಿ ಕಾವೇರಿಯ ಪಶ್ಚಿಮವಾಹಿನಿಯಲ್ಲಿ ಪ್ರಾತಃಸ್ನಾನಮಾಡುತ್ತಿದ್ದಳು.

೩. ಸಹ್ಯ ಪರ್ವತದ ತಪ್ಪಲಿನಲ್ಲಿ ಹುಟ್ಟಿದ ಶ್ರೀರಂಗದಮೇಲೆ ರಂಗಸ್ವಾಮಿಯನ್ನು ಸುತ್ತುವರಿಯುವ ಎಲೈ ಕಾವೇರಿಯೇ! ನಿನಗೆ ನಮಸ್ಕಾರವು. ನನ್ನ ಪಾಪವನ್ನು ನಾಶಮಾಡು.

ಮರುದ್ವೃಧೇ ಮಹಾಭಾಗೇ ಮಾಘಮಾಸಿ ನಿಮಜ್ಜನಾತ್ |
ಮಹಾಪಾಪಹರೇ ಮಾತಃ ಮಂಗಳಾನಿ ಪ್ರಯಚ್ಛ ಮೇ || ೪ ||

ಪತಿಂ ದೇಹಿ ಧನಂ ದೇಹಿ ಸುತಂ ದೇಹಿ ಮನೋರಥಾನ್ |
ಪಾತಿವ್ರತ್ಯಂ ತಥಾ ದೇಹಿ ಮಹ್ಯಂ ಪಶ್ಚಿಮವಾಹಿನಿ || ೫ ||

ಇತ್ಥಂ ಮಂತ್ರಂ ಸಮುಚ್ಚಾರ್ಯ ನಮಸ್ಕೃತ್ಯ ಕವೇರಜಾಂ |
ವಿವಸ್ವತ್ಯುದಿತೇ ಕಿಂಚಿತ್ ಸುವೃತ್ತಾ ಸ್ನಾತಿ ನಿತ್ಯಶಃ || ೬ ||

ಇತ್ಥಮಬ್ದತ್ರಯಂ ಮಾಘೇ ಸ್ನಾನಮೇಷಾ ಚಕಾರ ವೈ |
ಅಸ್ಯಾಶ್ಚರಿತ್ರಂ ನಿತ್ಯಂ ಚ ಕೌಶಲಂ ಗೃಹಕರ್ಮಣಿ || ೭ ||

---

೪. ಬೆಂಗಾಡು ಪ್ರದೇಶವನ್ನು ಫಲವತ್ತಾಗಿ ಮಾಡುವ ಪುಣ್ಯಾತ್ಮಳೆ! ಮಾಘಮಾಸದಲ್ಲಿ ನಿನ್ನಲ್ಲಿ ಸ್ನಾನಮಾಡುತ್ತೇನೆ. ಪಾಪಹಾರಕಳಾದ ತಾಯಿಯೆ! ಆದ್ದರಿಂದ ನನಗೆ ಮಂಗಳವನ್ನುಂಟುಮಾಡು.

೫. ಎಲೈ ಪಶ್ಚಿಮವಾಹಿನಿಯೆ! ನನಗೆ ಗಂಡನನ್ನು ಕೊಡು. ಹಣವನ್ನು ಕೊಡು. ಮಕ್ಕಳನ್ನು ಕೊಡು. ಇಷ್ಟಾರ್ಥಗಳೆಲ್ಲವನ್ನೂ ಕೊಡು. ಮತ್ತು ಪಾತಿವ್ರತ್ಯವನ್ನೂ ಕೊಡು.

೬. ಈ ರೀತಿಯಾಗಿ ಮಂತ್ರಗಳನ್ನು ಹೇಳುತ್ತ ಕಾವೇರಿಯನ್ನು ನಮಸ್ಕರಿಸಿ ಸೂರ್ಯನು ಸ್ವಲ್ಪ ಹುಟ್ಟಿದೊಡನೆಯೇ ನಿತ್ಯವೂ ಸ್ನಾನಮಾಡುವಳು.

೭. ಈ ರೀತಿಯಾಗಿ ಮೂರು ವರ್ಷಗಳು ಆಕೆಯು ನಿತ್ಯವೂ ಮಾಘಸ್ನಾನವನ್ನು ಮಾಡಿದಳು. ಈಕೆಯ ನಡತೆಯನ್ನೂ ಮನೆಗೆಲಸದಲ್ಲಿ ಜಾಣತನವನ್ನೂ ತಂದೆಯು ನಿತ್ಯವೂ ನೋಡುತ್ತಿದ್ದನು.

ದೃಷ್ಟ್ವಾ ಪಿತಾ ಪ್ರಹೃಷ್ಟಾತ್ಮಾ ಕಸ್ಮೈ ದೇಯೇತ್ಯಚಿಂತಯತ್ ।
ಅಥ ಸೂನೋರ್ವಿವಾಹಾರ್ಥಂ ವತ್ಸಸ್ಯ ಬ್ರಹ್ಮಚಾರಿಣಃ ॥
ಉಚಥ್ಯಸ್ಯ ಸುತಾಮೈಚ್ಛತ್ ಕುತ್ಸೋ ವರ್ತುಂ ವರಾನನಾಂ ॥ ೮ ॥

ಉತ್ಕೃಷ್ಟರೂಪಾಮುರುಲಕ್ಷಣಾಢ್ಯಾಂ
ಉಪಾಧಿಶೂನ್ಯಾಮುಭಯತ್ರ ಶುದ್ಧಾಂ ।
ಉಚಥ್ಯಕನ್ಯಾಮುಪಮಾನಹೀನಾಂ
ಉದ್ವೋಢುಮೇನಾಂ ಚಕಮೇ ಸ ವತ್ಸಃ ॥ ೯ ॥

ಕದಾಚಿತ್ತು ಸುವೃತ್ತಾ ಸಾ ಸಖೀಭಿಸ್ತಿಸೃಭಿಸ್ಸಹ ।
ಮಾಘಸ್ನಾನಾಯ ಕಾವೇರೀಕೂಲಮಾಪಾರುಣೋದಯೇ ॥ ೧೦ ॥

ತದಾ ವನದ್ವಿಪಃ ಕಶ್ಚಿದ್ವಾಸಿತಾಭಿರ್ಮದೋದ್ಧತಃ ।
ಉತ್ತಸ್ಥೌ ಬೃಂಹಿತಂ ಕುರ್ವನ್ ಶುಂಡಾಫೂತ್ಕಾರಭೀಷಣಃ ॥ ೧೧ ॥

---

೮. ಈ ರೀತಿಯಾದ ಆ ಕನ್ಯೆಯನ್ನು ತಂದೆಯು ನೋಡುತ್ತಾ ಈಕೆಯನ್ನು ಯಾರಿಗೆ ಮದುವೆಮಾಡಲಿ ? ಎಂದು ಯೋಚಿಸುತ್ತಿದ್ದನು. ಹೀಗಿರುತ್ತಿರಲು ಕುತ್ಸನು ಬ್ರಹ್ಮಚಾರಿಯಾದ ವತ್ಸನಿಗೆ ಮದುವೆಮಾಡಲು ಈ ಉಚಥ್ಯನಬಳಿಗೆ ಬಂದು ಆ ಹುಡುಗಿಯನ್ನು ಕೇಳಬೇಕೆಂದು ಮನಸ್ಸುಮಾಡಿಕೊಂಡನು.

೯. ಒಳ್ಳೆಯ ರೂಪವತಿಯಾದ ಒಳ್ಳೆಯ ಲಕ್ಷಣಗಳುಳ್ಳ ರೋಗಾದಿಗಳಿಲ್ಲದ ತಾಯಿತಂದೆಯರ ವಂಶದಿಂದ ಶುದ್ಧಳಾಗಿರುವ ಹೋಲಿಕೆಯಿಲ್ಲದಷ್ಟು ಉತ್ಕೃಷ್ಟಳಾದ ಆ ಉಚಥ್ಯನ ಮಗಳಾದ ಈ ಸುವೃತ್ತೆಯನ್ನು ವತ್ಸನು ಮದುವೆಯಾಗಲು ಅಪೇಕ್ಷಿಸಿದನು.

೧೦. ಒಂದುಸಾರಿ ಈ ಸುವೃತ್ತೆಯು ಮಾಘಮಾಸದ ಅರುಣೋದಯ ಕಾಲದಲ್ಲಿ ಮೂರು ಜನ ಸಖಿಯರೊಂದಿಗೆ ಮಾಘಸ್ನಾನ ಮಾಡಲು ಕಾವೇರಿಯ ದಡಕ್ಕೆ ಹೋದಳು.

೧೧. ಆಗ ಅಲ್ಲಿದ್ದ ಒಂದು ಕಾಡಾನೆಯು ಅವರು ಮುಡಿದುಕೊಂಡಿದ್ದ ಮತ್ತು ತಂದಿದ್ದ ಗಂಧವುಳ್ಳ ಹೂವುಗಳ ವಾಸನೆಯನ್ನು ತಿಳಿದು ಮದವು ಉದ್ರೇಕವಾಗಿ ಗರ್ಜನೆಮಾಡುತ್ತ ತನ್ನ ಉದ್ದವಾದ ಸೊಂಡಲನ್ನು ಮೇಲಕ್ಕೆ ಎತ್ತಿಕೊಂಡು ಅದರಲ್ಲಿ ಫೂತ್ಕಾರಮಾಡುತ್ತ ಹೊರಟಿತು.

ತಂ ದೃಷ್ಟ್ವಾ ಭಯವಿತ್ರಸ್ತಾಃ ಸುವೃತ್ತಾದ್ಯಾಸ್ಸುಲೋಚನಾಃ ।
ದುದ್ರುವುರ್ದೂರಮಧ್ವಾನಂ ಗಜೋಽಪ್ಯನುಯಯೌ ಚ ತಾಃ ॥ ೧೨ ॥

ಕನ್ಯಾಶ್ಚತಸ್ರೋ ವೇಗೇನ ನಿಶ್ವಾಸೋಚ್ಛ್ವಾಸಪೀಡಿತಾಃ ।
ತೃಣಚ್ಛನ್ನೇ ಮಹಾಕೂಪೇ ನ್ಯಪತನ್ ಜಲವರ್ಜಿತೇ ॥ ೧೩ ॥

ನಿಪತ್ಯ ವಿಹ್ವಲಾಸ್ಸದ್ಯೋ ಗತಪ್ರಾಣಾಸ್ತದಾಭವನ್ ।
ಅನಾಗತಾಸು ತಾಸ್ವೇವಂ ದೇಶಕಾಲೇಷು ತಾಸು ಚ ॥ ೧೪ ॥

ಮಾತರಃ ಪಿತರಸ್ತಾಸಾಂ ವಿಚಿನ್ವನ್ತೋಽಥ ಬಭ್ರಮುಃ ।
ವನಾದ್ವನಂ ಪರಿಭ್ರಾಮ್ಯ ಗುಲ್ಮಾದ್ಗುಲ್ಮಂ ವ್ಯಲೋಕಯನ್ ॥ ೧೫ ॥

ಕ್ವಚಿತ್ಕ್ವಚಿತ್ಪರಿಭ್ರಷ್ಟವಸ್ತ್ರಾಣ್ಯಾಭರಣಾನಿ ಚ ।
ದೃಷ್ಟ್ವಾ ತದನುಸಾರೇಣ ಗಚ್ಛನ್ತೋ ದೀನಚೇತಸಃ ॥ ೧೬ ॥

---

೧೨ ಆ ಕಾಡಾನೆಯನ್ನು ನೋಡಿ ಭಯಹೊಂದಿದ ಆ ಸುವೃತ್ತೆಯೇ ಮೊದಲಾದ ಹೆಂಗಸರು ದೂರಕ್ಕೆ ಓಡಲು ಮೊದಲು ಮಾಡಿದರು. ಆ ಆನೆಯೂ ಕೂಡ ಅವರನ್ನೇ ಅನುಸರಿಸಿಕೊಂಡು ಓಡಿತು.

೧೩. ಆ ನಾಲ್ಕುಜನ ಕನ್ಯೆಯರೂ ಏದುಸಿರುಬಿಡುತ್ತ ಶ್ರಾನ್ತರಾಗಿ ಓಡುತ್ತಿರುವಾಗ ಒಂದು ಹುಲ್ಲಿನಿಂದ ಕಾಣದಂತಾಗಿದ್ದ ಬಾವಿಗೆ ಬಿದ್ದರು. ಆ ಬಾವಿಯಲ್ಲಿ ನೀರಿರಲಿಲ್ಲ.

೧೪-೧೫. ಅವರೆಲ್ಲರೂ ಆ ಬಾವಿಗೆ ಬಿದ್ದು ಪ್ರಾಣವನ್ನು ಬಿಟ್ಟು ಬಿಟ್ಟರು. ಅನಂತರ ಆ ಕನ್ಯೆಯರು ಕಾಲದೇಶಾನುಗುಣವಾಗಿ ಮನೆಗೆ ಬಾರದೆ ಹೋಗಲು ಅವರ ತಾಯಿತಂದೆಗಳು ಅವರನ್ನು ಹುಡುಕುತ್ತಾ ಸುತ್ತುತ್ತಿದ್ದರು. ಕಾಡು ಕಾಡುಗಳಲ್ಲಿಯೂ ಅವುಗಳಲ್ಲಿರುವ ಪೊದರುಗಳಲ್ಲಿಯೂ ಹುಡುಕುತ್ತಿದ್ದರು.

೧೬-೧೭. ಓಡುತ್ತಿರುವಾಗ ಅಲ್ಲಲ್ಲಿಯೇ ಅವರು ಕೆಡವಿಕೊಂಡು ಹೋಗಿರುವ ಬಟ್ಟೆಗಳನ್ನೂ ಒಡವೆಗಳನ್ನೂ ನೋಡುತ್ತ ದುಃಖಿತರಾಗಿ ಅದನ್ನು ಅನುಸರಿಸಿಕೊಂಡು ಹುಡುಕುತ್ತಿರಲು ಮುಂದುಗಡೆಯಲ್ಲಿ ತಳೆಗಡೆಯಲ್ಲಿ

ಪಾತಾಲಸನ್ನಿಭಂ ಕೂಪಂ ದದೃಶುರ್ದೃಗಗೋಚರಂ |
ಗತಾಃ ಸೂರಪಿ ತಾ ವೀಕ್ಷ್ಯ ಕನ್ಯಾಃ ಕಮಲಲೋಚನಾಃ |
ರುರುದುರ್ದುಸ್ಸ್ವರಂ ಘೋರಂ ಕುರರ್ಯ ಇವ ದುಃಖಿತಾಃ ॥ ೧೭ ॥

ವಿಮಲೇ ಕಮಲೇ ಸುವೃತ್ತಕೇ
ಸುರಸೇತ್ಯಾದಿಭಿರೇವ ನಾಮಭಿಃ |
ಉಪಗೃಹ್ಯ ಮುಹುರ್ಮುಹುರ್ವಿಷಣ್ಣಾ
ವಿಲಪಂತಿ ಸ್ಮ ತದೀಯಮಾತರಃ ॥ ೧೮ ॥

ಮೃಗಭಾಸ್ಕರಮಾಸಿ ನಿತ್ಯಶಃ
ಪ್ರತಿಬುದ್ಧಾಭಿರತೀವ ಕೌತುಕಾತ್ |
ಭವತೀಭಿರಿಯಂ ಮರುದ್ವೃಥಾ
ಫಲಮುದ್ದಿಶ್ಯ ಕಿಮೇತದರ್ಥಿತಾ ॥ ೧೯ ॥

---

ನೆಲವು ಕಾಣದೆ ಪಾತಾಳಲೋಕದಂತಿರುವ ಒಂದು ಬಾವಿಯನ್ನು ಕಂಡರು. ಅದರೊಳಗೆ ನೋಡಲು ಈ ಕನ್ಯೆಯರು ಸತ್ತು ಬಿದ್ದಿರುವುದನ್ನು ಅವರ ತಾಯಿ ತಂದೆಯರು ನೋಡಿದರು. ಆಗ ಅವರೆಲ್ಲರೂ ದುಃಖದಿಂದ ಬಹುವಾಗಿಯೂ ಗಟ್ಟಿಯಾಗಿಯೂ ಅಳತೊಡಗಿದರು.

೧೮. ವಿಮಲೇ ಕಮಲೇ ಸುವೃತ್ತಕೇ ಸುರಸೇ ಎಂಬುದಾಗಿ ಅವರ ಹೆಸರುಗಳನ್ನು ಹಿಡಿದು ಅವರವರ ತಾಯಿಯರು ಕೂಗುತ್ತ ಕಂಗೆಟ್ಟು ಅಳತೊಡಗಿದರು.

೧೯. ನೀವು ಈ ಮಾಘಮಾಸದಲ್ಲಿ ಬಹು ಆಸೆಯಿಂದ ನಿತ್ಯವೂ ಬೆಳಗಿನ ಜಾವಕ್ಕೆ ಎದ್ದು ಕಾವೇರಿಯಲ್ಲಿ ಫಲವನ್ನೂ ಉದ್ದೇಶಿಸಿ ಸ್ನಾನಕ್ಕೆ ಬರುತ್ತಿದ್ದಿರಷ್ಟೆ! ನೀವು ಎಲ್ಲವನ್ನೂ ಬಿಟ್ಟು ಇದೇನನ್ನು ಕೇಳಿಕೊಂಡಿರಿ? ಇಂತಹ ಸಾವು ನಿಮಗೆ ಬರಬಹುದೆ ?

ಭವನೇ ಬಹುಶಾಕಸಂಯುತಂ
ಪರಿಪಕ್ವಂ ಕಮನೀಯಮೋದನಂ ।
ಪಿತರಃ ಕ್ಷುಧಿತಾಃ ಸಮಾಸತೇ
ದ್ರುತಮುತ್ತಿಷ್ಠತ ಭೋಕ್ತುಮಾತ್ಮಜಾಃ ॥ ೨೦ ॥

ಅಘರೋಗವಿಪದ್ಭಯಾದಯೋ
ನ ಭವಂತೀತಿ ವಿಪಶ್ಚಿತೋ ವಿದುಃ ।
ಮೃಗಭಾಸ್ಕರಮಾಸಿ ಮಜ್ಜತಾಂ
ವಿಪರೀತೇ ಹಿ ವಿಧೌ ಕಿಮುತ್ತರಂ ॥ ೨೧ ॥

ಚರಣಂ ಪುರತಃ ಪ್ರಸಾರ್ಯ ನೋ
ಮುಹುರಾಹ್ವಾನಕೃತೋಽವಮತ್ಯ ಚ ।
ಭವತೀಭಿರುಪೇಕ್ಷಿತಂ ಕೃತಂ
ನ ಹಿ ಪಶ್ಯಾಮ ವಿರೋಧಕಾರಣಂ ॥ ೨೨ ॥

---

೨೦. ಮನೆಯಲ್ಲಿ ಬಹಳವಾಗಿ ಕಾಯಿಪಲ್ಯಗಳನ್ನು ತಂದು ಅಡಿಗೆ ಮಾಡಿದ್ದೇವೆ. ಬಗೆ ಬಗೆಯ ಅನ್ನವನ್ನು ಮಾಡಿದ್ದೇವೆ. ಅವು ರುಚಿಯಾಗಿವೆ. ನಿಮ್ಮ ತಂದೆಯುವರೂ ಹಸಿದುಕೊಂಡು ನಿಮ್ಮನ್ನು ಕಾದುಕೊಂಡಿದ್ದಾರೆ. ಬೇಗನೆ ಏಳಿರಿ. ಹೊತ್ತಾಯಿತು. ಊಟಮಾಡುವಿರಂತೆ.

೨೧. ಈ ಮಾಘಮಕರ ಮಾಸದಲ್ಲಿ ಕಾವೇರಿಯಲ್ಲಿ ಪ್ರಾತಸ್ನಾನ ಮಾಡುವವರಿಗೆ ಪಾಪ ರೋಗ ಭಯ ವಿಪತ್ತು ಇವುಗಳೊಂದೂ ಬರುವುದಿಲ್ಲ. ಎಂಬುದಾಗಿ ತಿಳಿದವರು ಹೇಳುತ್ತಾರೆ. ಹಾಗೆ ನೀವು ಸ್ನಾನಮಾಡುತ್ತಿದ್ದರೂ ಈ ರೀತಿಯಾದ ದುಃಖಕ್ಕೀಡಾದಿರಲ್ಲ! ದೈವವೇ ಪ್ರತಿಕೂಲವಾಗಿರುವಾಗ ಏನೆಂದು ಹೇಳೋಣ?

೨೨. ನಾವು ನಿಮ್ಮ ಎದುರಿಗಿದ್ದರೂ ಕಾಲನ್ನು ನೀಡಿಕೊಂಡಿದ್ದೀರಿ! ನಾವು ಬಾರಿಬಾರಿಗೂ ಕರೆಯುತ್ತಿದ್ದರೂ ಅದನ್ನು ತಿರುಸ್ಕರಿಸುತ್ತಲಿದ್ದೀರಿ. ಈ ರೀತಿಯಾಗಿ ನೀವು ನಮ್ಮನ್ನು ಉಪೇಕ್ಷೆಮಾಡಲು ನಾವು ನಿಮಗೆ ಯಾವರೀತಿಯಾದ ಅಸಮಾಧಾನಕರವಾದ ಕೆಲಸವನ್ನೂ ಮಾಡಿಲ್ಲವಲ್ಲ!

॥ ಉಚಥ್ಯ ಉವಾಚ ॥

ಮೃಗಶೃಂಗಮುನಿಸ್ತಪೋನಿಧಿಃ ಪರಿಣೇತುಂ ಭವತೀಮಯಾಚತ।
ಶುಭಮಸ್ತು ತಥಾಸ್ತ್ವಿತೀರಿತಂ ಪುನರಸ್ಮೈ ಕಥಯಾಮಿ ಕಿಂ ತ್ವಹಂ॥೨೩॥

॥ ವಸಿಷ್ಠ ಉವಾಚ ॥

ಇತಿ ಕನ್ಯಾಜನಿತ್ರೀಷು ಕ್ರೋಶಂತೀಷ್ವತಿದಾರುಣಂ।
ಮೃಗಶೃಂಗಮುನಿಸ್ತತ್ರಾನಾಗತಸ್ತಪಸಾಂ ನಿಧಿಃ ॥ ೨೪ ॥

ವಿಲೋಕ್ಯ ತಾಸಾಂ ದುಃಖಂ ಚ ಕನ್ಯಾಸ್ತಾ ವಿವಶಾಸ್ತಥಾ।
ದುಃಖಿತಾನಪಿ ತದ್ಬಂಧೂನ್ ಮನಸ್ಯೇಕಮಚಿಂತಯತ್ ॥ ೨೫ ॥

ತಚ್ಚಿಂತಯಿತ್ವಾ ತಾನಾಹ ದ್ಯುತಿಮಾನ್ ಧೃತಿಮಾನ್ ವಶೀ।
ಉತ್ಥಾಪಯಿಷ್ಯೇ ವಃ ಕನ್ಯಾ ದಿನೈಃ ಕತಿಪಯೈರಿತಿ ॥ ೨೬ ॥

---

೨೩. ಉಚಥ್ಯನು ಹೇಳಿದನು–ತಪೋನಿಧಿಯಾದ ಮೃಗಶೃಂಗ ಋಷಿಯು ನಿನ್ನನ್ನು ಮದುವೆಯಾಗಲು ಕೇಳಿದನಲ್ಲ! ನಾನು ಕೂಡ ಶುಭವಾಗಲಿ. ಹಾಗೇ ಆಗಲಿ ಎಂದೆನಲ್ಲ! ಮತ್ತೆ ಅವನು ಬಂದು ಕೇಳಿದರೆ ಏನೆಂದು ಹೇಳಲಿ ?

೨೪. ವಸಿಷ್ಠನು ಹೇಳಿದನು–ಈ ರೀತಿಯಾಗಿ ಆ ಕನ್ಯೆಯರ ತಾಯಿಯರು ದೀನತೆಯಿಂದ ಅಳುತ್ತಿರಲು ಆ ತಪೋನಿಧಿಯಾದ ಮೃಗಶೃಂಗ ಋಷಿಯು ಆ ದಾರಿಯಲ್ಲಿ ಬಂದನು.

೨೫. ಅವನು ಅವರ ತಾಯಿಯರ ಆ ಭಯಂಕರವಾದ ದುಃಖವನ್ನೂ ಆ ಕನ್ನಿಕೆಯರು ಸತ್ತಿರುವುದನ್ನೂ ನೋಡಿ ಮನಸ್ಸಿನಲ್ಲಿ ಒಂದಾನೊಂದು ಯೋಚನೆಯನ್ನು ಮಾಡಿದನು.

೨೬. ಆ ರೀತಿಯಾಗಿ ಯೋಚನೆಯನ್ನು ಮಾಡಿ ತೇಜೋವಂತನೂ ಧೈರ್ಯವಂತನೂ ಇಂದ್ರಿಯ ನಿಗ್ರಹಿಯೂ ಆದ ಆತನು ಅವರನ್ನು ಕುರಿತು ಕೆಲವು ದಿನಗಳಲ್ಲಿಯೇ ನಿಮ್ಮ ಈ ಕನ್ಯೆಯರನ್ನು ಬದುಕಿಸುತ್ತೇನೆ. ಚಿಂತಿಸಬೇಡಿ. ಎಂದನು.

ಶನೈರಾಶ್ವಾಸಿತಾ ನಾರ್ಯೋ ನಿವಾರ್ಯಾಹ ಚ ರೋದನಂ ।
ಯಾವದುಜ್ಜೀವಯಿಷ್ಯಾಮಿ ಕನ್ಯಾಃ ಕಮಲಲೋಚನಾಃ ।
ತಾವದಾಸಾಂ ಮನೋಜ್ಞಾನಿ ಪಾಲ್ಯಂತಾಂ ಚ ವಪೂಂಷಿ ವೈ ॥ ೨೭ ॥

॥ ವಸಿಷ್ಠ ಉವಾಚ ॥

ಇತ್ಯುದೀರ್ಯ ಮುನಿಶ್ರೇಷ್ಠಃ ಕಾವೇರೀಮೇತ್ಯ ಪಾವನೀಂ ।
ಕಂಠದಘ್ನೇ ಜಲೇ ತಿಷ್ಠನ್ನಾದಿತ್ಯಮವಲೋಕಯನ್ ॥ ೨೮ ॥

ಊರ್ಧ್ವವಕ್ತ್ರೋರ್ಧ್ವಬಾಹುಸ್ಸನ್ ಮೃತ್ಯುಂ ತುಷ್ಟಾವ ನಿತ್ಯಶಃ ।
ತಂ ಹಂತುಮೇಕದಾ ವಿಪ್ರಂ ಜಲಮಧ್ಯಾತ್ಸ ಕುಂಜರಃ ॥ ೨೯ ॥

ಹಸ್ತಮುದ್ಧೃತ್ಯ ವೇಗೇನ ಮುನೇರಂತಿಕಮಾಯಯೌ ।
ವಿಲೋಕ್ಯ ತಸ್ಯ ಸಂರಂಭಂ ಕರಿಣೋ ಮುನಿಪುಂಗವಃ ॥ ೩೦ ॥

ನ ಚಚಾಲ ಜಲಾತ್ಸೋಥ ಚಿತ್ರಾರ್ಪಿತ ಇವ ದ್ವಿಜಃ ।
ಗತಮನ್ಯುಃ ಕ್ಷಣಾದೇವ ಶಾನ್ತೋಭೂತ್ಸ ಗಜೇಶ್ವರಃ ॥ ೩೧ ॥

---

೨೭. ಈ ರೀತಿಯಾಗಿ ಅವರ ಅಳುವನ್ನು ನಿಲ್ಲಿಸಿ ಅವರನ್ನು ಕುರಿತು ನಾನು ಇವರನ್ನು ಬದುಕಿಸುವವರೆಗೂ ಇವರ ದೇಹವನ್ನು ಕಾಪಾಡಿಕೊಂಡಿರಿ. ಎಂದು ಹೇಳಿದನು.

೨೮-೩೦. ವಸಿಷ್ಠನು ಹೇಳಿದನು—ಆ ಋಷಿಯು ಹೀಗೆಂದು ಹೇಳಿ ಆ ಪಾವನವಾದ ಕಾವೇರಿಗೆ ಬಂದು ಕತ್ತಿನಷ್ಟುದ್ದ ನೀರಿನಲ್ಲಿ ನಿಂತುಕೊಂಡು ಸೂರ್ಯನನ್ನು ಮೇಲಿಕ್ಕೆ ನೋಡುತ್ತ ತಲೆಯನ್ನೂ ಕೈಗಳನ್ನೂ ಮೇಲಕ್ಕೆತ್ತಿಕೊಂಡು ನಿತ್ಯವೂ ಮೃತ್ಯುವನ್ನು ಸ್ತುತಿಸಿದನು. ಒಂದುಸಾರಿ ಈ ಋಷಿಯನ್ನು ಕೊಲ್ಲಲು ಆ ಆನೆಯು ನೀರಿನ ಮಧ್ಯದಿಂದ ಎದ್ದು ಸೊಂಡಿಲನ್ನು ಮೇಲಕ್ಕೆತ್ತಿಕೊಂಡು ಇವನ ಬಳಿಗೆ ವೇಗದಿಂದ ಬಂದಿತು. ಆ ಋಷಿಯು ಆನೆಯ ಈ ರಭಸವನ್ನು ನೋಡಿ ಚಿತ್ರದಲ್ಲಿ ಬರೆದಂತೆ ನೀರಿನಲ್ಲಿದ್ದನೇ ಹೊರತು ಅಲ್ಲಾಡಲೇ ಇಲ್ಲ.

೩೧-೩೩. ಆ ಆನೆಯು ಕ್ಷಣಕಾಲದಲ್ಲಿಯೇ ತನ್ನ ಕೋಪವನ್ನು ಬಿಟ್ಟು ಸಮಾಧಾನವನ್ನು ಹೊಂದಿ ಸೊಂಡಲಿನ ತುದಿಯಿಂದ ಆತನನ್ನು ತೆಗೆದುಕೊಂಡು

**ಶುಂಡಾಗ್ರೇಣ ಗೃಹೀತ್ವಾ ತಂ ಸ್ವಮೂರ್ಧ್ನಿ ಸ್ಥಾಪ್ಯ ಸಂಸ್ಥಿತಃ |**
**ತಸ್ಯ ಭಾವಂ ಮುನಿರ್ಜ್ಞಾತ್ವಾ ಜಪಂ ತಾವತ್ಸಮಾಪ್ಯ ಚ || ೩೨ ||**

**ಸುಖಾಸೀನೋ ಗಜಸ್ಕಂಧೇ ಸಂತೋಷಂ ಪರಮಂ ಯಯೌ |**
**ಏತತ್ಸಂತಃ ಪ್ರಶಂಸಂತಿ ಗಜಸ್ಕಂಧಾಧಿರೋಹಣಂ || ೩೩ ||**

**ತಸ್ಮಾಚ್ಛೋಭನಮೇವೈತದಿತಿ ಮತ್ವಾ ಕೃಪಾನಿಧಿಃ |**
**ಏನಮುತ್ತಾರಯಿಷ್ಯಾಮಿ ತಿರ್ಯಂಚಂ ದುಃಖಿತಂ ಚಿರಾತ್ || ೩೪ ||**

**ಇತಿ ನಿಶ್ಚಿತ್ಯ ಮನಸಾ ವಿಚಾರ್ಯ ಸುಚಿರಂ ಮುನಿಃ ।**
**ಮಾಘಾಷ್ಟದಿನಜಂ ಪುಣ್ಯಂ ತುಭ್ಯಂ ದತ್ತಮಿತಿ ದ್ವಿಜಃ || ೩೫ ||**

**ಆದಾಯ ಪಾಣಿನಾ ಶೀಘ್ರಂ ತೋಯಂ ತನ್ಮೂರ್ಧ್ನಿ ದತ್ತವಾನ್ |**
**ಜಾನನ್ನಿವ ಕರೀಂದ್ರೋಽಸೌ ತದಾ ಪಾಪವಿವರ್ಜಿತಃ || ೩೬ ||**

---

ತನ್ನ ತಲೆಯಮೇಲೆ ಕೂರಿಸಿಕೊಂಡಿತು. ಆ ಆನೆಯ ಅಭಿಪ್ರಾಯವನ್ನು ಋಷಿಯು ತಿಳಿದುಕೊಂಡು ಜಪವನ್ನು ಅಲ್ಲಿಗೆ ಮುಗಿಸಿ ಅದರ ತಲೆಯಮೇಲೆ ಕುಳಿತುಕೊಂಡು ಬಹು ಸಂತೋಷಪಟ್ಟನು. ಈ ಆನೆಯ ಮೇಲೆ ಕುಳಿತುಕೊಳ್ಳುವಿಕೆಯನ್ನು ಸತ್ಪುರುಷರು ಒಳ್ಳೆಯದೆಂದು ಹೇಳುತ್ತಾರೆ.

೩೪. ಆದ್ದರಿಂದ ಈ ಆನೆಯು ತನ್ನ ಮೇಲೆ ಕೂರಿಸಿಕೊಂಡಿರುವುದು ನನಗೆ ಮಂಗಳಕರವೇ ಆಯಿತು. ಎಂದು ಆ ಕೃಪಾಶಾಲಿಯಾದ ಮುನಿಯು ಯೋಚಿಸಿ ಆನೆಯಾಗಿದ್ದುಕೊಂಡು ಕೀಳುಜನ್ಮದಲ್ಲಿ ಇರುವ ಇದನ್ನು ಈ ದುಃಖದಿಂದ ಬಿಡುಗಡೆ ಮಾಡುತ್ತೇನೆ ಎಂದುಕೊಂಡನು.

೩೫-೩೬. ಹೀಗೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಮನಸ್ಸಿನಲ್ಲಿಯೇ ಯೋಚಿಸಿ ಮಾಘಮಾಸದ ಎಂಟು ದಿನದ ಪುಣ್ಯವನ್ನು ನಿನಗೆ ಕೊಟ್ಟಿದ್ದೇನೆ. ಎಂದು ಹೇಳುತ್ತಾ ಕೈಯಲ್ಲಿ ನೀರನ್ನು ತೆಗೆದುಕೊಂಡು ಅದರ ತಲೆಯ ಮೇಲೆ ಬಿಟ್ಟನು. ಆ ಆನೆಯು ತನ್ನ ಪಾಪವನ್ನು ಇದರಿಂದ ಕಳೆದುಕೊಂಡುದನ್ನು

ಪ್ರಲಯಾಂಬುದನಿರ್ಘೋಷಸದೃಶಂ ಬೃಂಹಿತಂ ವ್ಯಧಾತ್ ।
ತೇನಾಪಿ ಸಂತುಷ್ಟಮನಾ ಮೃಗಶೃಂಗಸ್ಸ್ವಪಾಣಿನಾ ॥ ೩೭ ॥

ಪಸ್ಪರ್ಶ ಸಾಂದ್ರಕೃಪಯಾ ವೀಕ್ಷ್ಯ ದೃಷ್ಟ್ಯಾ ಗಜೇಶ್ವರಂ ।
ಮುನಿಪಾಣಿತಲಸ್ಪರ್ಶಾದ್ಗಜರೂಪಂ ವಿಹಾಯ ಸಃ ॥ ೩೮ ॥

ವಿಸ್ಮಿತೇನ ಮುನೀಂದ್ರೇಣ ದದೃಶೇ ದಿವಿ ದೇವವತ್ ।
ಪ್ರಭಾಮಂಡಲಮಧ್ಯಸ್ಥಸ್ತೇಜೋನಿಧಿರಕಲ್ಮಷಃ
ನಿಜರೂಪಂ ಸಮಾಸಾದ್ಯ ಪ್ರಣಮ್ಯ ಮುನಿಮಬ್ರವೀತ್ ॥ ೩೯ ॥

॥ ದಿವ್ಯದೇಹ್ಯುವಾಚ ॥

ಕೃತಾರ್ಥೋಽಹಂ ಕೃತಾರ್ಥೋಽಹಂ ಕೃತಾರ್ಥೋಽಹಂ ಮುನೀಶ್ವರ ।
ಯತ್ತ್ವಯಾ ತಾರಿತಃ ಪಾಪಾತ್ ತಿರ್ಯಕ್ತ್ವಾಚ್ಚ ವಿಗರ್ಹಿತಾತ್ ॥ ೪೦ ॥

---

ತಿಳಿದುಕೊಂಡಿತೋ ಎಂಬಂತೆ ಪ್ರಳಯ ಕಾಲದ ಮೇಘದಂತೆ ಒಂದುಸಾರಿ ಗಟ್ಟಿಯಾಗಿ ಕೂಗಿತು ಅದರಿಂದ ಆ ಮೃಗಶೃಂಗನು ಸಂತೋಷಗೊಂಡು ತನ್ನ ಕೈಯ್ಯಿಂದ ತಟ್ಟುತ್ತ ಆ ಆನೆಯ ತಲೆಯನ್ನು ಚಪ್ಪರಿಸಿದನು. ಮತ್ತು ಕೃಪಾದೃಷ್ಟಿಯಿಂದ ಆ ಆನೆಯನ್ನು ನೋಡಿದನು. ಈ ಮುನಿಯು ಕೈಯ್ಯಿಂದ ತಟ್ಟದೊಡನೆಯೇ ಆ ಆನೆಯು ತನ್ನ ಆ ಆನೆಯ ರೂಪವನ್ನು ಬಿಟ್ಟು ಬಿಟ್ಟು ದೇವರೂಪವನ್ನು ಹೊಂದಿತು. ಆಗ ಋಷಿಯು ದೇವರೂಪವನ್ನು ಧರಿಸಿರುವ ಆತನನ್ನು ಅಂತರಿಕ್ಷದಲ್ಲಿ ನೋಡಿದನು. ಆತನು ತನ್ನ ನಿಜರೂಪವನ್ನು ಹೊಂದಿ ಪಾಪವನ್ನು ಕಳೆದುಕೊಂಡು ತೇಜಸ್ಸಿಗೆ ನಿಧಿಯಾಗಿ ಪ್ರಭಾಮಂಡಲದ ಮಧ್ಯದಲ್ಲಿದ್ದನು. ಒಡನೆಯೇ ಈ ಋಷಿಯನ್ನು ನೋಡಿ ನಮಸ್ಕರಿಸಿ ಇಂತೆಂದನು.

೪೦. ದಿವ್ಯದೇಹಿಯು ಹೇಳಿದನು.-ಎಲೈ ಮುನೀಶ್ವರನೇ! ಈ ತಿರಸ್ಕೃತವಾದ ಕೀಳುಜಾತಿಯಲ್ಲಿದ್ದ ನನ್ನನ್ನು ಪಾಪದದೆಸೆಯಿಂದ ಉದ್ಧಾರ ಮಾಡಿದೆಯಲ್ಲ! ಆದ್ದರಿಂದ ನಾನು ಕೃತಾರ್ಥನಾಗಿದ್ದೇನೆ. ಕೃತಾರ್ಥನಾಗಿದ್ದೇನೆ. ಖಂಡಿತವಾಗಿ ಮೂರು ಬಾರಿಗೂ ಕೃತಾರ್ಥನಾಗಿದ್ದೇನೆ.

ಮಮ ವೃತ್ತಂ ವಿಶೇಶೇಣ ಪ್ರವಕ್ಷ್ಯಾಮಿ ಕೃಪಾನಿಧೇ |
ಶೃಣುಷ್ವ ಮುನಿಶಾರ್ದೂಲ ಸರ್ವಭೂತಹಿತೇ ರತ || ೪೧ ||

ನೈಷಧೇ ನಗರೇ ಪೂರ್ವಂ ವಿಶ್ವಗುಪ್ತ ಇತಿ ಶ್ರುತಃ |
ವೈಶ್ಯಃ ಪರಮಧರ್ಮಾತ್ಮಾ ನಿಜಧರ್ಮಪರಾಯಣಃ || ೪೨ ||

ತಸ್ಯ ಸೂನುರಹಂ ನಾಮ್ನಾ ಧರ್ಮಗುಪ್ತ ಇತಿ ಶ್ರುತಃ |
ಸ್ವಾಧ್ಯಾಯಂ ಯಜನಂ ದಾನಂ ಕುಸೀದಂ ಪಶುಪಾಲನಂ || ೪೩ ||

ಗೋರಕ್ಷಾಂ ಕೃಷಿವಾಣಿಜ್ಯಂ ಕೃತಂ ಹಿ ದ್ವಿಜಪುಂಗವ |
ಕಾಮದಂಭವಿನಿರ್ಮುಕ್ತಃ ಸತ್ಯವಾಗನಸೂಯಕಃ || ೪೪ ||

ಸ್ವದಾರನಿರತೋ ದಾಂತಃ ಪರದಾರವಿವರ್ಜಿತಃ |
ವೀತರಾಗಭಯಕ್ರೋಧೋ ಲೋಭಮತ್ಸರವರ್ಜಿತಃ || ೪೫ ||

---

೪೧. ಸರ್ವಪ್ರಾಣಿಗಳಲ್ಲಿಯೂ ಉಪಕಾರ ಬುದ್ಧಿಯುಳ್ಳ ಮುನಿಯೇ ! ಕೇಳು. ನನ್ನ ವಿಷಯಗಳನ್ನು ಹೇಳುತ್ತೇನೆ.

೪೨. ಪೂರ್ವದಲ್ಲಿ ನಿಷಧ ದೇಶದ ಪಟ್ಟಣದಲ್ಲಿ ವಿಶ್ವಗುಪ್ತನೆಂಬ ಒಬ್ಬ ವೈಶ್ಯನಿದ್ದನು. ಬಹು ಧರ್ಮಿಷ್ಠನೂ ತನ್ನ ಧರ್ಮವನ್ನು ತಾನು ಪಾಲಿಸುವವನೂ ಆಗಿದ್ದನು.

೪೩-೪೬. ನಾನು ಅವನ ಮಗನು. ನನ್ನ ಹೆಸರು ಧರ್ಮಗುಪ್ತನು. ಅಧ್ಯಯನ ಯಾಗ ದಾನ ಬಡ್ಡಿಗೆ ಹಣವನ್ನು ಕೊಡುವುದು, ಗೋಶುಶ್ರೂಷೆ ವ್ಯವಸಾಸಾಯ, ಪದಾರ್ಥಗಳನ್ನು ಕೊಳ್ಳುವುದು ಮತ್ತು ಮಾರುವುದು, ಇವನ್ನು ಮಾಡುತ್ತಿದ್ದೆನು. ಕಾಮದಂಭಾಚಾರಗಳೂ ಹೊಟ್ಟೆಗಿಚ್ಚೂ ಇಲ್ಲದೆ ಸತ್ಯವನ್ನೇ ಆಡುತ್ತಿದ್ದೆನು. ನನ್ನ ಹೆಂಡತಿಯಲ್ಲಿಯೇ ಆಸಕ್ತನಾಗಿದ್ದುಕೊಂಡು ಆಕೆಯಲ್ಲಿಯೇ ತೃಪ್ತಿಯನ್ನು ಹೊಂದುತ್ತ ಪರಸ್ತ್ರೀಯರ ಸಹವಾಸವನ್ನು ಮಾಡುತ್ತಿರಲಿಲ್ಲ. ಭಯ ಕೋಪಗಳೆಂಬುದನ್ನು ಬಿಟ್ಟಿದೇನೆ. ಲೋಭವೂ ಮತ್ಸರವೂ ನನ್ನಲ್ಲಿರಲಿಲ್ಲ.

ದಾತಾ ಯಜ್ವಾ ದೇವಭಕ್ತೋ ಗೋಬ್ರಾಹ್ಮಣಹಿತೇ ರತಃ ।
ತ್ರಿವರ್ಗಸೇವೀ ಸತತಂ ವಣಿಕ್ಕರ್ಮಣ್ಯವಂಚಕಃ ॥ ೪೬ ॥

ಧನಂ ದದಾಮಿ ವಿಪ್ರಾಣಾಂ ಯಜ್ಞಕಾಲೇಷ್ವಯಾಚಿತಃ ।
ಪಿತೃಕಾರ್ಯಂ ಚ ತತ್ಕಾಲೇ ಸರ್ವದೇವಾರ್ಚನಂ ತಥಾ ॥ ೪೭ ॥

ಗಂಧದ್ರವ್ಯಾಣ್ಯನೇಕಾನಿ ವಿಕ್ರೀಣಾಮಿ ಪಶೂನ್ ಬಹೂನ್ ।
ಪಯೋದಧೀನಿ ತಕ್ರಾಣಿ ಗೋಮಯಾನಿ ತೃಣಾನಿ ಚ ॥ ೪೮ ॥

ಕಾಷ್ಠಾನಿ ಫಲಮೂಲಾನಿ ಲವಣಂ ಜಾತಿಪಿಪ್ಪಲೀಃ ।
ಧಾನ್ಯಾನಿ ಶಾಕಮೂಲಾನಿ ವಸ್ತ್ರಾಣಿ ವಿವಿಧಾನಿ ಚ ॥ ೪೯ ॥

ಧಾತೂನಿಕ್ಷುವಿಕಾರಾಂಶ್ಚ ವಿಕ್ರೀಣಾಮಿ ರಸಾನ್ ಬಹೂನ್ ।
ಯದ್ದದಾಮಿ ನ ತನ್ನ್ಯೂನಂ ಯದ್ಗೃಹ್ಣಾಮಿ ನ ಚಾಧಿಕಂ ॥ ೫೦ ॥

---

ದಾನ ಮಾಡುತ್ತಿದ್ದೆನು. ಯಾಗಗಳನ್ನೂ ಮಾಡುತ್ತಿದ್ದೆನು. ದೇವರಲ್ಲಿ ಭಕ್ತಿಯನ್ನಿಟ್ಟಿದ್ದೆನು. ಬ್ರಾಹ್ಮಣರು ಮತ್ತು ಗೋವುಗಳಿಗೆ ಹಿತವನ್ನು ಮಾಡುತ್ತಿದ್ದೆನು. ವ್ಯಾಪಾರದಲ್ಲಿ ವಂಚನೆಯನ್ನು ಮಾಡದೆ ಇದ್ದೆನು. ಧರ್ಮಾರ್ಥಕಾಮಗಳನ್ನು ಯಥಾಯೋಗ್ಯವಾಗಿ ಸೇವಿಸುತ್ತಿದ್ದೆನು.

೪೭. ಯಜ್ಞಮಾಡುತ್ತಿರುವಾಗ ಯಾಚನೆಮಾಡದಿದ್ದರೂ ಬ್ರಾಹ್ಮಣರಿಗೆ ಹಣವನ್ನು ದಾನಮಾಡುತ್ತಿದ್ದೆನು. ಆಯಾಯ ಕಾಲದಲ್ಲಿ ಮೀರದೆ ಪಿತೃಕಾರ್ಯಗಳನ್ನು ದೇವತಾಕಾರ್ಯಗಳನ್ನೂ ಮಾಡುತ್ತಿದ್ದೆನು. ಎಲ್ಲಾ ದೇವರನ್ನೂ ಭೇಧವಿಲ್ಲದೆ ಪೂಜಿಸುತ್ತಿದ್ದೆನು.

೪೮–೫೧. ವಾಸನಾದ್ರವ್ಯಗಳು ಹಸುಗಳು ಹಾಲು ಮೊಸರು ಮಜ್ಜಿಗೆ ಬೆರಣಿ ಹುಲ್ಲು ಸೌದೆ ಕಾಯಿಪಲ್ಯಗಳು ಗೆಡ್ಡೆ ಗೆಣಸುಗಳು ಹಿಪ್ಪಲಿ ಜಾಯಿಕಾಯಿ ಧಾನ್ಯಗಳು ಹಣ್ಣುಗಳು ಬಟ್ಟೆ ದಾರಗಳು ಸಕ್ಕರೆ ಬೆಲ್ಲ ಮುಂತಾದುವನ್ನೆಲ್ಲಾ ಅನೇಕವಾಗಿ ಆಯಾಕಾಲದಲ್ಲಿ ವ್ಯಾಪಾರಮಾಡುತ್ತಿದ್ದೆನು. ಮಾರುವಾಗ ಅಳತೆಯಲ್ಲಿ ಕಡಿಮೆಯಾಗಿ ಮಾರುತ್ತಿರಲಿಲ್ಲ. ಕೊಳ್ಳುವಾಗ ಅಳತೆಯಲ್ಲಿ ಹೆಚ್ಚಾಗಿ ತೆಗೆದುಕೊಳ್ಳುತ್ತಿರಲಿಲ್ಲ. ರಸಗಳನ್ನು ಕೂಡ ವ್ಯಾಪಾರಮಾಡುತ್ತಿರುವಾಗ ಪಾಪ ಬರದಂತೆಯೂ ವಂಚನೆಯಿಲ್ಲದಂತೆಯೂ ನಡೆದುಕೊಳ್ಳುತ್ತಿದ್ದೆನು.

ವಿಕ್ರೀಣಾಮಿ ರಸಾಂಶ್ಚಾಹಮುಷವರ್ಜಮಮಾಯಯಾ |
ಕ್ರೀತ್ವಾ ವೈ ಪ್ರತಿವಿಕ್ರೀಣೇ ಪರಹಸ್ತಾದ್ದಿನಂ ಬಹು ॥ ೫೧ ॥

ಯಃ ಕರೋತಿ ಜನಾನ್ ಸಾಧೂನ್ ವಣಿತ್ಕರ್ಮಣಿ ವಂಚಿತಾನ್ |
ಸ ಯಾತಿ ನರಕಂ ಘೋರಂ ಧನಂ ಚ ಪರಿಹೀಯತೇ ॥ ೫೨ ॥

ಸರ್ವೇಷಾಮಪಿ ದೇವಾನಾಂ ಬ್ರಾಹ್ಮಣಾನಾಂ ಗವಾಂ ತಥಾ |
ಕರೋಮಿ ನಿತ್ಯಂ ಶುಶ್ರೂಷಾಂ ಪಾಷಂಡಾನಾಮುಪೇಕ್ಷಕಃ ॥ ೫೩ ॥

ಅದ್ರೋಹೇಣೈವ ಭೂತಾನಾಂ ಕರ್ಮಣಾ ಮನಸಾ ಗಿರಾ |
ಯಾ ವೃತ್ತಿಃ ಪರಮೋ ಧರ್ಮಃ ತೇನ ಜೀವಾಮಿ ಭೂಸುರ ॥ ೫೪ ॥

ಏವಂ ಧರ್ಮೇಣ ಮಾರ್ಗೇಣ ಕೋಟಿನಿಷ್ಕಮುಪಾರ್ಜಿತಂ |
ಆತ್ಮಜಸ್ತ್ವೇವ ಮೇ ಏಕಃ ಆಸೀತ್ಸರ್ವಗುಣೋತ್ತರಃ ॥ ೫೫ ॥

---

ಒಬ್ಬನಿಂದ ಕೊಂಡುಕೊಂಡು ದಲ್ಲಾಲಿಯ ವ್ಯಾಪಾರಮಾಡುತ್ತಾ ಅಲ್ಲಿಯೇ ಹಾಗೆಯೇ ಮತ್ತೊಬ್ಬನಿಗೆ ಮಾರಿಬಿಡುತ್ತಿದ್ದೆನು.

೫೨. ಸಾಧುಗಳಾಗಿರುವವರನ್ನೂ ತಿಳಿವಳಿಕೆಯಿಲ್ಲದವರನ್ನೂ ವ್ಯಾಪಾರದಲ್ಲಿ ವಂಚನೆಮಾಡುವವನು ಘೋರವಾದ ನರಕವನ್ನು ಹೊಂದುತ್ತಾನೆ. ಅವನ ಹಣವೂ ಕೂಡ ಕ್ಷಯಿಸಿ ಹೋಗುತ್ತದೆ.

೫೩. ಎಲ್ಲ ದೇವರನ್ನೂ ಪೂಜಿಸುತ್ತಿದ್ದೆನು. ಬ್ರಾಹ್ಮಣರನ್ನೂ ಗೋವುಗಳನ್ನೂ ಪೂಜಿಸುತ್ತ ಅವರ ಸೇವೆಯನ್ನು ಮಾಡುತ್ತಿದ್ದೆನು. ನಾಸ್ತಿಕರನ್ನು ಉಪೇಕ್ಷಿಸುತ್ತಿದ್ದೆನು.

೫೪. ಪ್ರಾಣಿಗಳಿಗೆ ದ್ರೋಹವನ್ನು ಕಾಯ ವಾಚಾ ಮನಸಾ ಮಾಡದೆ ಜೀವಿಸುವುದೇ ಉತ್ತಮವಾದ ಧರ್ಮವು. ನಾನು ಆ ರೀತಿಯಾಗಿ ಮಾಡುತ್ತ ಅದರಿಂದ ಜೀವಿಸುತ್ತಿದ್ದೆನು.

೫೫. ಈ ರೀತಿಯಾಗಿ ಧರ್ಮದಿಂದ ಒಂದು ಕೋಟಿ ನಿಷ್ಕಗಳನ್ನು ಸಂಪಾದಿಸಿದೆನು. ನನಗೆ ಒಬ್ಬನೇ ಮಗನಿದ್ದನು. ಅವನು ಬಹು ಗುಣವಂತನು.

ದ್ವಿಧಾ ವಿಭಜ್ಯ ತತ್ಸರ್ವಮರ್ಧಂ ಪುತ್ರಾಯ ಚಾದಿಶಂ ।
ಮದೀಯಂ ಭಾಗಮಾದಾಯ ತಟಾಕಂ ಕಾರಿತಂ ಮಯಾ ॥ ೫೬ ॥

ಉದ್ಯಾನಂ ಚ ಮಯಾಕಾರಿ ನಾನಾವೃಕ್ಷಸಮಾಕುಲಂ ।
ದೇವಾಲಯಂ ಮಯಾಕಾರಿ ನಾನಾಮಂಡಪಸಂಕುಲಂ ॥ ೫೭ ॥

ಮರುಭೂಮಿಷು ಮಾರ್ಗೇಷು ಪ್ರಪಾಕೂಪಾ ಮಯಾ ಕೃತಾಃ ।
ವಿಶ್ರಾಮಮಂಡಪಂ ಚಾಪಿ ಮಾರ್ಗೇ ಮಾರ್ಗೇ ಕೃತಂ ಮಯಾ ॥ ೫೮ ॥

ಕನ್ಯಾದಾನಂ ಚ ಗೋದಾನಂ ಭೂಮಿದಾನಂ ಮಯಾ ಕೃತಂ ।
ತಿಲತಂಡೂಲಗೋಧೂಮಮುದ್ಗದಾನಾನ್ಯಕಾರಿಷಂ ॥ ೫೯ ॥

ಮಾಷವ್ರೀಹಿತಿಲಾಜ್ಯಾದಿ ದಾನಂ ದತ್ತಂ ಮಯಾ ಬಹು ।
ಅಧುನಾ ಕಿಂ ಬಹೂಕ್ತೇನ ತ್ವಂ ಶೃಣುಷ್ವ ವಿಧೇರ್ಬಲಂ ॥ ೬೦ ॥

---

೫೬. ಆ ಹಣ ಮತ್ತು ಆ ಆಸ್ತಿಯೆಲ್ಲವನ್ನೂ ಎರಡು ಭಾಗವಾಗಿ ಮಾಡಿ ಒಂದು ಭಾಗವನ್ನು ಮಗನಿಗೆ ಕೊಟ್ಟೆನು. ಮತ್ತೊಂದು ಪಾಲನ್ನು ತೆಗೆದು ಕೊಂಡು ಅದರಿಂದ ಕೆರೆಯನ್ನು ಕಟ್ಟಿಸಿದೆನು.

೫೭-೫೮. ಉದ್ಯಾನವನಗಳನ್ನು ಮಾಡಿಸಿದೆನು. ಅಲ್ಲಿ ಅನೇಕ ಮರಗಳನ್ನು ಹಾಕಿಸಿದೆನು. ಅನೇಕವಾದ ದೇವಸ್ಥಾನಗಳನ್ನೂ ಅವುಗಳೊಳಗೆ ಬಹುವಾಗಿ ಮಂಡಪಗಳನ್ನೂ ಕಟ್ಟಿಸಿದೆನು. ದಾರಿಯಿದ್ದು ನೀರಿಲ್ಲದ ಜಾಗದಲ್ಲಿ ಅರವಟ್ಟಿಗೆಗಳನ್ನಿಡಿಸಿದೆನು. ಬಾವಿಗಳನ್ನು ತೋಡಿಸಿದೆನು. ಜನರು ಇಳಿದು ಕೊಳ್ಳಲು ಅಲ್ಲಲ್ಲಿಯೇ ಮಂಡಪಗಳನ್ನು ದಾರಿಯಲ್ಲಿ ಉದ್ದಕ್ಕೂ ಕಟ್ಟಿಸಿದೆನು.

೫೯-೬೦. ಕನ್ಯಾದಾನ, ಗೋದಾನ, ಭೂಮಿದಾನಗಳನ್ನು ಮಾಡಿದೆನು ಎಳ್ಳು ಅಕ್ಕಿ ಗೋಧಿ ಹೆಸರು ಉದ್ದು ಭತ್ತ ತುಪ್ಪ ಇವೇ ಮೊದಲಾದುವುಗಳನ್ನು ಬಹುವಾಗಿ ದಾನಮಾಡಿದೆನು. ಅವೆಲ್ಲವನ್ನೂ ಈಗ ಹೇಳಿದುದರಿಂದ ಪ್ರಯೋಜನವೇನು ? ದುರದೃಷ್ಟದ ಬಲವನ್ನು ನೋಡು.

**ಹರಿಣಾಪಿ ಹರೇಣಾಪಿ ಬ್ರಹ್ಮಣಾಪಿ ಸುರೈರಪಿ ।**
**ಲಲಾಟಲಿಖಿತಾ ರೇಖಾ ಪರಿಮಾರ್ಷ್ಟುಂ ನ ಶಕ್ಯತೇ ॥ ೬೧ ॥**

**ಭವಿತವ್ಯಂ ಭವತ್ಯೇವ ನಾರಿಕೇಳಫಲಾಂಬುವತ್ ।**
**ಗನ್ತವ್ಯಂ ಗಚ್ಛತಿ ಯಥಾ ಗಜಭುಕ್ತಕಪಿತ್ಥವತ್ ॥ ೬೨ ॥**

**ಅಥ ಕಾಪಾಲಿಕಃ ಕಶ್ಚಿದ್ರಸವಾದೀ ಕುತೂಹಲಾತ್ ।**
**ಯುಕ್ಕಿಂಚಿನ್ಮೇ ಪ್ರದರ್ಶ್ಯೈವಂ ವಂಚಯಾಮಾಸ ಮಾಯಯಾ ॥ ೬೩ ॥**

**ತದ್ದೃಷ್ಟ್ವಾ ಪ್ರತ್ಯಯೋ ಜಾತೋ ಮಮ ತಸ್ಮಿನ್ ಮಹೀಸುರ ।**
**ರಸವಾದಾಪದೇಶೇನ ಧನಂ ಸರ್ವಂ ಲಯಂ ಗತಂ ॥ ೬೪ ॥**

**ಇತ್ಥಂ ಪ್ರತಾರಿತಸ್ತೇನ ತದ್ಭ್ರಾನ್ತ್ಯಾ ಭ್ರಾಮಿತಶ್ಚಿರಂ ।**
**ತನ್ನಿಮಿತ್ತೇ ಧನಂ ದತ್ವಾ ದರಿದ್ರೋ ಹ್ಯಭವಂ ಶಠಃ ॥ ೬೫ ॥**

---

೬೧-೬೨. ಹರಿಯಾಗಲೀ ಹರನಾಗಲೀ ಬ್ರಹ್ಮನಾಗಲೀ ದೇವತೆಗಳಾದರೂ ಆಗಲೀ ಹಣೆಯಲ್ಲಿ ಬರೆದಿರುವುದನ್ನು ಅಳಿಸಲಾರರು. ಅಥವಾ ಮಾರ್ಪಡಿಸಲಾರರು. ತೆಂಗಿನಕಾಯೊಳಕ್ಕೆ ನೀರು ಬರುವಂತೆ ಬರತಕ್ಕದ್ದು ಬಂದೇ ಬರುತ್ತದೆ. ಆನೆಯು ತಿಂದ ಬೇಲದಹಣ್ಣಿನಂತೆ ಹೋಗತಕ್ಕದ್ದು ಹೋಗಿಯೇ ಹೋಗುತ್ತದೆ. (ಆನೆಯು ಬೇಲದ ಹಣ್ಣನ್ನು ಕರಟದೊಡನೆ ನುಂಗಿಬಿಡುತ್ತದೆ. ಅದು ಲದ್ದಿಯಲ್ಲಿ ಬೀಳುವಾಗ ಒಡೆಯದೇ ಉಂಡೆಯಾಗಿ ಬೀಳುತ್ತದೆ. ಆದರೆ ಅದರೊಳಗೆ ಏನೂ ಇರುವುದಿಲ್ಲ.)

೬೩. ಹೀಗಿರುತ್ತಿರಲು ಒಬ್ಬ ರಸವಾದಿಯಾದ ಕಾಪಾಲಿಕನು ನನಗೆ ಆಸೆಹುಟ್ಟುವಂತೆ ತನ್ನ ರಥದಿಂದ ಶಕ್ತಿಯನ್ನು ತೋರಿಸಿ ನನ್ನನ್ನು ಅವನು ತನ್ನ ಮಾಯೆಯಿಂದ ವಂಚಿಸಿದನು.

೬೪. ಆತನು ಮಾಡಿದುದನ್ನು ನೋಡಿ ಅವನಲ್ಲಿ ನಂಬಿಕೆಯು ಹುಟ್ಟಿತು. ಈ ರಸವಾದದ ನೆವದಿಂದ ಅದರಂತೆ ಮಾಡುತ್ತಾ ನಾನು ಹಣವನ್ನೆಲ್ಲಾ ನಾಶ ಮಾಡಿದೆನು.

೬೫. ಹೀಗೆ ಅವನಿಂದ ಮೋಸಪಡಿಸಲ್ಪಟ್ಟು ಆ ರಸವಾದದ ಭ್ರಾನ್ತಿಯಿಂದ ಸುತ್ತುತ್ತಿದ್ದೆನು. ಅದಕ್ಕೋಸ್ಕರವೇ ಹಣವೆಲ್ಲವನ್ನೂ ವ್ಯಯಮಾಡುತ್ತ ಕೊನೆಗೆ ದರಿದ್ರನಾದೆನು.

ಜರಾಜರ್ಜರಸರ್ವಾಂಗೋ ವ್ಯಾಧಿಭಿಃ ಪರಿಪೀಡಿತಃ ।
ಯಃಕ್ಕಿಂಚಿದಪಿ ವೈ ಕರ್ತುಂ ನ ಶಕ್ಯಂ ದ್ವಿಜಸತ್ತಮ ॥ ೬೬ ॥

ಸಂಪ್ರಾಪ್ತೇ ಮಾಘಮಾಸೇ ತು ಮಹಾನದ್ಯಾಮಿನೋದಯೇ ।
ಸ್ನಾತಂ ಮಯಾ ದಶದಿನಂ ವಾರ್ಧಿಕ್ಯಾತ್ಪುನರಕ್ಷಮಃ ॥ ೬೭ ॥

ಏತಸ್ಮಿನ್ನೇವ ಕಾಲೇ ತು ಪುತ್ರೋ ದೇಶಾನ್ತರಂ ಗತಃ ।
ಅಶ್ವಾ ಮೃತಾಃ ಕೃಷಿರ್ನಷ್ಟಾ ಪುತ್ರೋ ವೇಶ್ಯಾಪತಿಸ್ತ್ವಭೂತ್ ॥ ೬೮ ॥

ವೇಶ್ಯಾವ್ಯಾಜೇನ ರಾಜ್ಞಾ ಚ ದೇಶಾನ್ನಿರ್ವಾಸಿತಾ ವಯಂ ।
ತಥಾಪಿ ವೃದ್ಧೋ ಧರ್ಮಾತ್ಮಾ ಪುಣ್ಯವಾನಿತಿ ಬಾಂಧವಾಃ ॥ ೬೯ ॥

ದಿಶಂತಿ ಧರ್ಮಾನುದ್ದಿಶ್ಯ ಯತ್ಕಿಂಚಿದ್ಧಾನ್ಯನೋದನಂ ।
ಸ್ವಧರ್ಮವಿಕ್ರಯಂ ಕೃತ್ವಾ ಕುಟುಂಬಭರಣಂ ಕೃತಂ ॥ ೭೦ ॥

---

೬೬. ಮುಪ್ಪಿನಿಂದ ಸಡಿಲವಾದ ಅವಯುವಗಳುಳ್ಳವನಾಗಿ ರೋಗಗಳುಳ್ಳವನಾಗಿ ಏನುಮಾಡುವುದಕ್ಕೂ ಕೈಲಾಗದೆ ಹೋಗುತ್ತಾ ಬಂದಿತು.

೬೭. ಆಗ ಮಾಘಮಾಸವು ಬರಲು ಮುಪ್ಪಿನಿಂದ ನನ್ನ ಕೈಲಾಗದಿದ್ದರೂ ಮಹಾನದಿಯಲ್ಲಿ ಸೂರ್ಯೋದಯ ಕಾಲದಲ್ಲಿ ಹತ್ತು ದಿನಗಳವರೆಗೂ ಸ್ನಾನ ಮಾಡಿದೆನು. ಅನಂತರ ಮುಪ್ಪಿನಿಂದ ಸಾಧ್ಯವಾಗಲಿಲ್ಲ.

೬೮. ಈ ಸಮಯದಲ್ಲಿಯೇ ಮಗನು ದೇಶಾಂತರಕ್ಕೆ ಹೋದನು ಆ ನನ್ನ ಬಳಿಯಲ್ಲಿದ್ದ ಕುದುರೆಗಳು ಸತ್ತುಹೋದವು. ವ್ಯವಸಾಯವೆಲ್ಲವೂ ನಾಶವಾಯಿತು. ಆ ಮಗನೂ ಕೂಡ ಸೂಳೆಯ ಸಹವಾಸ ಮಾಡಿಕೊಂಡಿರುತ್ತಿದ್ದನು.

೬೯–೭೦. ಈ ಸೂಳೆಯ ನೆವದಿಂದ ರಾಜನು ನಮ್ಮನ್ನು ತನ್ನ ದೇಶದಿಂದ ಹೊರಕ್ಕೆ ಓಡಿಸಿಬಿಟ್ಟನು ಆದರೂ ನನ್ನ ಬಾಂಧವರು ಇವನು ಧರ್ಮಾತ್ಮನು ಮತ್ತು ಮುದುಕನು. ಎಂದು ಕನಿಕರಪಡುತ್ತ ನನಗೆ ಯಾವುದಾದರೂ ಬೇಯಿಸಿದ ಕಾಳನ್ನಾಗಲೀ ಅನ್ನವನ್ನಾಗಲೀ ಕೊಡುತ್ತಿದ್ದರು. ಈ ರೀತಿಯಾಗಿ ನನ್ನ ಧರ್ಮವನ್ನೇ ನಾನು ಮಾರಿಕೊಂಡು ಜೀವನ ಮಾಡಿಕೊಂಡಿದ್ದೆನು.

ಯಾನಿ ಯಾನಿ ಮಯಾ ಪೂರ್ವಂ ದಾನಾನಿ ವಿವಿಧಾನಿ ಚ ।
ತಾನಿ ತಾನ್ಯಪಿ ಸರ್ವಾಣಿ ವಿಕ್ರೀತಾನಿ ಮುನೀಶ್ವರ ॥ ೭೧ ॥

ಕುಟುಂಬಭರಣಾರ್ಥಾಯ ಮಾಘಸ್ನಾನಫಲಂ ವಿನಾ ।
ಜಿಹ್ವಾಚಾಪಲ್ಯವಶತಸ್ತ್ವೇಕದಾ ಪರವೇಶ್ಮನಿ ॥ ೭೨ ॥

ಭುಕ್ತವಾನಾಗಲಂ ಮೃಷ್ಟಮಜೀರ್ಣಮಭವತ್ತತಃ ।
ಅತಿಸಾರಸ್ತತೋ ಜಾತಸ್ತೇನಾಹಂ ಮರಣಂ ಗತಃ ॥ ೭೩ ॥

ತೇನ ಮಾಘಪ್ರಭಾವೇನ ದೇವೇಂದ್ರಸ್ಯೈವ ಸನ್ನಿಧೌ ।
ತತ್ರ ಮನ್ವಂತರಂ ಸ್ಥಿತ್ವಾ ತತ್ಪುಣ್ಯಾಂತೇ ಗಜೋಭವಂ ॥ ೭೪ ॥

ಯೇ ಧರ್ಮವಿಕ್ರಯಂ ಕುರ್ಯುಸ್ತೇ ಭವಂತಿ ಮತಂಗಜಾಃ ।
ಇದಾನೀಮಪಿ ವಿಪ್ರೇಂದ್ರ ತ್ವಯಾಹಂ ತಾರಿತೋಭವಂ ॥ ೭೫ ॥

---

೭೧. ನಾನು ಪೂರ್ವದಲ್ಲಿ ಯಾವ ಯಾವ ದಾನಗಳನ್ನು ಮಾಡಿದ್ದೆನೋ ಅವೆಲ್ಲವನ್ನೂ ಮಾರಿಬಿಟ್ಟೆನು.

೭೨–೭೩. ಕುಟುಂಬವನ್ನು ಕಾಪಾಡಲು ಆ ಧರ್ಮವನ್ನೆಲ್ಲಾ ಮಾರಿದರೂ ಮಾಘಸ್ನಾನದ ಫಲವೊಂದನ್ನೂ ಮಾರಲಿಲ್ಲ. ಒಂದುಸಾರಿ ನಾಲಗೆಯ ಚಪಲದಿಂದ ಹೆರರ ಮನೆಯಲ್ಲಿ ಮೃಷ್ಟಾನ್ನವನ್ನು ಕತ್ತಿನವರೆಗೆ ಬರುವಂತೆ ಊಟಮಾಡಿದೆನು. ಅದರಿಂದ ಜೀರ್ಣಿಸದೆ ಅಜೀರ್ಣವಾಗಿ ಅತಿಸಾರವು ಬಂದಿತು. ಅದರಿಂದಲೇ ಕೊನೆಗೆ ಸತ್ತುಹೋದನು.

೭೪. ಆ ಮಾಘಮಾಸದ ಪುಣ್ಯದ ಮಹಿಮೆಯಿಂದ ದೇವೇಂದ್ರನ ಬಳಿಯಲ್ಲಿ ಒಂದು ಮನ್ವಂತರಗಳ ಕಾಲವಿದ್ದೆನು. ಆ ಪುಣ್ಯವು ಮುಗಿದಮೇಲೆ ಆನೆಯಾಗಿ ಹುಟ್ಟಿದೆನು.

೭೫. ಯಾರು ತಾವುಮಾಡಿದ ಧರ್ಮವನ್ನು ಮಾರಿಕೊಳ್ಳುತ್ತಾರೆಯೋ ಅವರು ಆನೆಯಾಗಿ ಹುಟ್ಟುತ್ತಾರೆ. ಎಲೈ ಬ್ರಾಹ್ಮಣನೆ! ಈಗ ನಾನು ನಿನ್ನಿಂದ ಆನೆಯ ಜನ್ಮದಿಂದ ಪಾರಾದೆನು.

ಪುಣ್ಯದಾನಂ ಕೃತಂ ಮಹ್ಯಂ ತ್ವಯಾ ಸ್ವರ್ಗೋಽಪಲಬ್ಧಯೇ ।
ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಮುನೀಶ್ವರ ।
ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋ ನಮಃ ॥ ೭೬ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವಾ ಸ ಯಯೌ ಸ್ವರ್ಗಂ ಸತ್ಸಂಗಸ್ಸದ್ಗತಿಪ್ರದಃ ॥ ೭೭ ॥

ಮಹಾನುಭಾವೋ ಮೃಗಶೃಂಗನಾಮಾ ।
ಮತಂಗಜತ್ವಾತ್ಪರಿಮೋಚ್ಯ ವೈಶ್ಯಂ ।
ಸ್ವಯಂ ಪುನಸ್ತದ್ಗಲದಘ್ನತೋಯೇ ।
ತುಷ್ಟಾವ ತಿಷ್ಠನ್ ದಿನನಾಥಸೂನುಂ ॥ ೭೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಗಜೇಂದ್ರಮೋಕ್ಷೋ ನಾಮ ಚತುರ್ವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೬. ನೀನು ಪುಣ್ಯವನ್ನು ದಾನಮಾಡಿದೆ. ಅದರಿಂದ ನನಗೆ ಸ್ವರ್ಗವು ಸಿಕ್ಕುತ್ತದೆ. ನಾನು ಕೃತಾರ್ಥನಾದೆನು. ಕೃತಾರ್ಥನಾದೆನು. ಮೂರು ಬಾರಿಗೂ ಕೃತಾರ್ಥನಾದೆನು ಇಂತಹ ಪರೋಪಕಾರಿಯಾದ ನಿನಗೆ ನಮಸ್ಕಾರವು. ನಮಸ್ಕಾರವು. ಮೂರುಬಾರಿಗೂ ನಮಸ್ಕಾರವು. ನಿನಗೆ ನಮೋನಮಃ.

೭೭. ವಸಿಷ್ಠನು ಹೇಳಿದನು–ಹೀಗೆಂದು ಹೇಳಿ ಆತನು ಸ್ವರ್ಗಕ್ಕೆ ಹೊರಟು ಹೋದನು. ಈ ರೀತಿಯಾಗಿ ಸಜ್ಜನರ ಸಹವಾಸವು ಉತ್ತಮವಾದ ಗತಿಯನ್ನು ಕೊಡುತ್ತದೆ.

೭೮. ಮಹಾನುಭಾವನಾದ ಈ ಮೃಗಶೃಂಗ ಋಷಿಯು ಆ ವೈಶ್ಯನನ್ನು ಆನೆಯ ಜನ್ಮದಿಂದ ಬಿಡುಗಡೆಯನ್ನು ಹೊಂದಿಸಿ ಮತ್ತೆ ಕತ್ತಿನುದ್ದ ನೀರಿನಲ್ಲಿ ನಿಂತುಕೊಂಡು ಸೂರ್ಯನ ಮಗನಾದ ಯಮನನ್ನು ಉದ್ದೇಶಿಸಿಕೊಂಡು ಸ್ತೋತ್ರ ಮಾಡಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಗಜೇಂದ್ರಮೋಕ್ಷ ಎಂಬ ಇನ್ನೂರ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀಃ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥



**॥ ಮೃಗಶೃಂಗ ಉವಾಚ ॥**

**ಓಂ ಯಮಾಯ ಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ ।**
**ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥ ೧ ॥**

**ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।**
**ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮಃ ॥ ೨ ॥**

**ದಂಷ್ಟ್ರಾಕರಾಳವಕ್ತ್ರಾಯ ಭೃಕುಟೀಕ್ರೂರಚಕ್ಷುಷೇ ।**
**ಊರ್ಧ್ವರೋಮ್ಣೇ ಮಹಾರೋಮ್ಣೇ ಪ್ರಾಲಂಬೋಷ್ಠಾಯ ತೇ ನಮಃ ॥೩॥**

---

**ಇನ್ನೂರ ಇಪ್ಪತ್ತೈದನೆಯ ಅಧ್ಯಾಯವು**



೧-೨. ಮೃಗಶೃಂಗನು ಹೇಳಿದನು-ಇಂದ್ರಿಯ ನಿಗ್ರಹವುಳ್ಳ ಧರ್ಮಕ್ಕೆಲ್ಲಾ ಒಡೆಯನಾದ ಎಲ್ಲಕ್ಕೂ ನಾಶಕನಾದ ಕೊನೆಗಾಣಿಸುವ ಸೂರ್ಯಪುತ್ರನಾದ ಕಾಲ ಸ್ವರೂಪನಾದ ಎಲ್ಲಾ ಪ್ರಾಣಿಗಳೂ ಕ್ಷಯಿಸುವಂತೆ ಮಾಡುವ ಔದುಂಬರ ರೂಪನಾದ ಎಲ್ಲವನ್ನೂ ಧರಿಸಬಲ್ಲ ನೀಲರೂಪನಾದ ಉಚ್ಚಸ್ಥಾನದಲ್ಲಿರುವ ಹೊಟ್ಟೆಯು ತೋಳನ ಹೊಟ್ಟೆಯಂತೆ ಸಣ್ಣಗಿರುವ ಚಿತ್ರರೂಪನಾದ ಜನಗಳ ಚರಿತ್ರೆಯನ್ನು ಗೋಪ್ಯವಾಗಿಟ್ಟುಕೊಂಡಿರುವ ನಿನಗೆ ನಮಸ್ಕಾರವು.

೩. ಕೋರೆದಾಡೆಗಳನ್ನಿಟ್ಟುಕೊಂಡು ಭಯಂಕರವಾದ ಮುಖವುಳ್ಳ ಹುಬ್ಬನ್ನು ಗಂಟಿಕ್ಕಿಕೊಂಡು ಕ್ರೂರವಾದ ಕಣ್ಣುಗಳನ್ನು ಹೊಂದಿರುವ ಮೇಲಕ್ಕೆದ್ದುಕೊಂಡಿರುವ ರೋಮಗಳುಳ್ಳ ಜೋಲಾಡುತ್ತಿರುವ ತುಟಿಗಳುಳ್ಳ ನಿನಗೆ ನಮಸ್ಕಾರವು.

**ಅನೇಕಬಾಹವೇ ತುಭ್ಯಂ ನಮೋಽನಂತನಖಾಯ ಚ |**
**ಅಂಜನಾದ್ರಿಸಮಚ್ಛಾಯಾವಿಗ್ರಹಾಯೋಗ್ರರೂಪಿಣೇ ॥ ೪ ॥**

**ನಮೋ ಭೀಷಣವೇಷಾಯ ಪಾಪಿನಾಂ ಭಯದಾಯಿನೇ |**
**ತರ್ಜತೇ ಕಾಲದಂಡೇನ ಸರ್ವಾಯುಧ ಧರಾಯ ಚ ॥ ೫ ॥**

**ಮಹಾಮಹಿಷವಾಹಾಯ ದೀಪ್ತಾಗ್ನಿ ಸಮಚಕ್ಷುಷೇ |**
**ಮಹತೇ ಮೇರುರೂಪಾಯ ರಕ್ತಮಾಲ್ಯಾಂಬರಾಯ ಚ ॥ ೬ ॥**

**ಪ್ರಲಯಾಂಬುದಘೋಷಾಯ ಪ್ರಲಯಾನಿಲರಂಹಸೇ |**
**ಪಿಬತೇ ಸಾಗರಮಪಿ ಗ್ರಸತೇ ಚಾಖಿಲಂ ಜಗತ್ ॥ ೭ ॥**

**ಅಶ್ನತೇ ಪರ್ವತಾನಾಸ್ಯಾದಗ್ನಿಮುದ್ಗಿರತೇ ನಮಃ |**
**ಮೃತ್ಯುನಾ ಕಾಲರೂಪೇಣ ಘೋರೇಣಾನಲವರ್ಚಸಾ ॥ ೮ ॥**

---

೪. ಅನೇಕವಾದ ತೋಳುಗಳುಳ್ಳ ಬಹುವಾದ ಉಗುರುಗಳುಳ್ಳ ಅಂಜನ ಪರ್ವತದಂತೆ ವರ್ಣವುಳ್ಳ ಉಗ್ರರೂಪಿಯಾದ ನಿನಗೆ ನಮಸ್ಕಾರವು.

೫ ಭಯಂಕರವಾದ ವೇಷಗಳುಳ್ಳ ನಿನಗೆ ನಮಸ್ಕಾರವು. ಪಾಪಿಗಳಿಗೆ ಭಯವನ್ನುಂಟುಮಾಡುವ ನಿನಗೆ ನಮಸ್ಕಾರವು. ಕಾಲದಂಡದಿಂದ ಹೆದರಿಸುವ ನಿನಗೆ ನಮಸ್ಕಾರವು. ಎಲ್ಲಾ ಆಯುಧಗಳನ್ನೂ ಧರಿಸಿರುವ ನಿನಗೆ ನಮಸ್ಕಾರವು.

೬–೮. ದೊಡ್ಡ ಕೋಣನ ಮೇಲೆ ಕುಳಿತಿರುವ ಉರಿಯುತ್ತಿರುವ ಬೆಂಕಿಯಂತೆ ಕಣ್ಣುಗಳುಳ್ಳ ದೊಡ್ಡ ಮೇರುವಿನಂತೆ ರೂಪವುಳ್ಳ ಕೆಂಪು ಹೂವನ್ನೂ ಬಟ್ಟೆಯನ್ನೂ ಧರಿಸಿರುವ ಪ್ರಳಯಕಾಲದ ಮೇಘದ ಧ್ವನಿಯಂತೆ ಧ್ವನಿಯುಳ್ಳ ಪ್ರಳಯಕಾಲದ ಗಾಳಿಯಂತೆ ವೇಗವುಳ್ಳ ಸಾಗರವನ್ನೂ ಕೂಡ ಕುಡಿಯುವ ಎಲ್ಲಾ ಪ್ರಪಂಚವನ್ನೂ ನುಂಗುವ ಪರ್ವತಗಳನ್ನು ತಿನ್ನುತ್ತಿರುವ ಬಾಯಿಯಿಂದ ಬೆಂಕಿಯನ್ನು ಉಗುಳುತ್ತಿರುವ ಕಾಲರೂಪನಾಗಿಯೂ ಘೋರನಾಗಿಯೂ ಬೆಂಕಿಯಂತೆ ತೇಜಸ್ಸೂ ಉಳ್ಳ ಮೃತ್ಯುವಿನಿಂದ ಸೇವಿಸಲ್ಪಡುತ್ತಿರುವ ನಿನಗೆ ನಮಸ್ಕಾರವು.

ವ್ಯಾಧಿಭಿರ್ಬಹುಭಿಃ ಪಾರ್ಶ್ವೇ ಸೇವ್ಯಮಾನಾಯತೇ ನಮಃ |
ಸಹಿತಾಯೋಗ್ರಯಾ ಮಾರ್ಯಾ ಮಹಾಮಾರ್ಯಾತಿಘೋರಯಾ ॥ ೯ ॥

ಈದೃಶಾಕಾರರೂಪಾಯ ಪಾಪಿಷ್ಠಾನಾಂ ನಮೋ ನಮಃ |
ಪ್ರಫುಲ್ಲಪಂಕಜಾಕಾರ ಪ್ರಸನ್ನವದನಾಯ ಚ ॥ ೧೦ ॥

ಕಾರುಣ್ಯಪೂರ್ಣನೇತ್ರಾಯ ಪಿತೃರೂಪಾಯ ತೇ ನಮಃ |
ಮಹಾಮೃದುಲಕೇಶಾಯ ಭ್ರೂರೇಖಾಂಚಿತ ಚಕ್ಷುಷೇ ॥ ೧೧ ॥

ಮನೋಜ್ಞಶ್ಮಶ್ರುವಕ್ತ್ರಾಯ ಪಕ್ವಬಿಂಬೋಷ್ಠಶೋಭಿನೇ |
ದ್ವಿಭುಜಾಯ ಪ್ರಸನ್ನಾಯ ಜಾಂಬೂನದವಪುಷ್ಮತೇ ॥ ೧೨ ॥

ಸರ್ವಾಭರಣಯುಕ್ತಾಯ ರತ್ನಪೀಠಸ್ಥಿತಾಯ ಚ |
ಶ್ವೇತಮಾಲ್ಯಾಂಬರಾಢ್ಯಾಯ ಶ್ವೇತಚ್ಛತ್ರೋಪಶೋಭಿನೇ ॥ ೧೩ ॥

---

೯-೧೧. ಬಹು ರೂಪವಾದ ಅನೇಕವಾದ ವ್ಯಾಧಿಗಳಿಂದ ಪಾರ್ಶ್ವದಲ್ಲಿ ಸೇವಿಸಲ್ಪಡುತ್ತಿರುವ ನಿನಗೆ ನಮಸ್ಕಾರವು. ಉಗ್ರವಾದ ಮಾರಿಯಿಂದಲೂ ಘೋರವಾದ ಮಹಾಮಾರಿಯಿಂದಲೂ ಕೂಡಿರುವ ಪಾಪಿಷ್ಠರೆಲ್ಲರಿಗೂ ಮೇಲೆ ಹೇಳಿದ ರೀತಿಯಲ್ಲಿ ಕಾಣುತ್ತಿರುವ ನಿನಗೆ ನಮಸ್ಕಾರವು. ಅರಳಿರುವ ಕಮಲ ದಂತೆ ಮನೋಹರವಾಗಿರುವ ಮುಖವುಳ್ಳ ಕೃಪೆಯಿಂದ ಕೂಡಿರುವ ಕಣ್ಣುಗಳುಳ ಪಿತೃಗಳ ರೂಪವನ್ನು ಹೊಂದಿರುವ ಮೃದುವಾಗಿರುವ ತಲೆಗೂದಲುಗಳುಳ್ಳ, ಹುಬ್ಬಿನ ರೇಖೆಯಿಂದ ಕೂಡಿರುವ ಕಣ್ಣುಗಳುಳ್ಳ ನಿನಗೆ ನಮಸ್ಕಾರವು.

೧೨-೧೩. ಚಿನ್ನಾಗಿರತಕ್ಕ ಗಡ್ಡ ಮೀಸೆಗಳಿಂದ ಕೂಡಿದ ಮುಖವುಳ್ಳ ಹಣ್ಣಾದ ತೊಂಡೆಯ ಹಣ್ಣಿನಂತಿರುವ ತುಟಿಗಳುಳ್ಳ ಎರಡು ತೋಳುಗಳುಳ್ಳ ಪ್ರಸ ನ್ನನಾಗಿರುವ ಚಿನ್ನದ ಬಣ್ಣಕ್ಕಿರುವ ಮೈಯ್ಯುಳ್ಳ ಎಲ್ಲಾ ಆಭರಣಗಳಿಂದಲೂ ಕೂಡಿಕೊಂಡಿರುವ ರತ್ನದ ಪೀಠದಲ್ಲಿ ಕುಳಿತಿರುವ ಬಿಳಿಯ ಹೂ ಮಾಲೆಯನ್ನು ಧರಿಸಿರುವ ಬಿಳಿಯ ಛತ್ರಿಯನ್ನು ಧರಿಸಿರುವ ಧರ್ಮರಾಜನಿಗೆ ನಮಸ್ಕಾರವು.

ಲಸಚ್ಚಾಮರ ಹಸ್ತಾಭ್ಯಾಮುಭಾಭ್ಯಾಮುಭಯೋರಪಿ |
ಪಾರ್ಶ್ವಯೋರ್ದಿವ್ಯನಾರೀಭ್ಯಾಂ ವೀಜ್ಯಮಾನಾಯ ತೇ ನಮಃ || ೧೪ ||

ರತ್ನಗ್ರೈವೇಯರಮ್ಯಾಯ ರತ್ನಕುಂಡಲಶೋಭಿನೇ |
ರತ್ನಕೇಯೂರಹಾರಾಯ ನಾನಾರತ್ನಕಿರೀಟಿನೇ || ೧೫ ||

ಕೃಪಾಲಂಕೆಷಕೃಪಾದೃಷ್ಟ್ಯಾ ಪಶ್ಯತೇ ಮಿತ್ರರೂಪಿಣೇ |
ಸರ್ವಸಂಪತ್ಸಮೃದ್ಧಾಯ ಸೌಭಾಗ್ಯನಿಲಯಾಯ ಚ || ೧೬ ||

ಸಭಾಸದ್ಭಿರುಪಾಸ್ಯಾಯ ಧರ್ಮಾಧರ್ಮ ವಿಚಕ್ಷಣೈಃ |
ಧರ್ಮೇಣ ಶುಭ್ರರೂಪೇಣ ಸತ್ಯೇನ ಶುಭಲಕ್ಷ್ಮಣಾ || ೧೭ ||

ಶಮೇನ ಶಶಿವರ್ಣೇನ ದಮೇನ ಕ್ಷೀರತೇಜಸಾ |
ಆಚಾರೇಣ ವಿಶುದ್ಧೇನ ವರ್ಣಾಶ್ರಮಭವೇನ ಚ || ೧೮ ||

---

೧೪. ಎರಡು ಪಾರ್ಶ್ವಗಳಲ್ಲಿಯೂ ಇಬ್ಬರು ದಿವ್ಯವಾದ ಹೆಂಗಸರು ಉತ್ತಮವಾದ ಚಾಮರಗಳನ್ನು ಹಿಡಿದು ಬೀಸುತ್ತಿರುವರು. ಹಾಗೆ ಬೀಸಿಸಿಕೊಳ್ಳುವ ನಿನಗೆ ನಮಸ್ಕಾರವು.

೧೫. ರತ್ನದ ಹಾರದಿಂದ ಮನೋಹರನಾದ ರತ್ನದ ಕಿವಿಯ ಕುಂಡಲವನ್ನು ಹಾಕಿಕೊಂಡಿರುವ ರತ್ನದ ಭುಜಕೀರ್ತಿಯನ್ನುಳ್ಳ ಬಗೆಬಗೆಯ ರತ್ನಗಳನ್ನು ಹಾಕಿ ಮಾಡಿರುವ ಕಿರೀಟವನ್ನು ಹಾಕಿಕೊಂಡಿರುವ ನಿನಗೆ ನಮಸ್ಕಾರವು.

೧೬. ಬಹು ಹೆಚ್ಚಾದ ಕೃಪೆಯಿಂದ ಕೂಡಿರುವ ದೃಷ್ಟಿಯಿಂದ ನೋಡುತ್ತಿರುವ ಮಿತ್ರನಾದ ಎಲ್ಲಾ ಸಂಪತ್ತುಗಳಿಂದಲೂ ಕೂಡಿರುವ ಸೌಭಾಗ್ಯಕ್ಕೆ ಮನೆಯಾದ ಧರ್ಮರಾಜನಿಗೆ ನಮಸ್ಕಾರವು.

೧೭–೧೮. ಧರ್ಮ ಅಧರ್ಮಗಳನ್ನು ಬಲ್ಲ ಸಭಿಕರಿಂದ ಸೇವಿಸಲ್ಪಡುತ್ತಿರುವ ಶುಭ್ರವಾದ ಗುರುತುಗಳುಳ್ಳ ಸತ್ಯನಿಂದಲೂ ಚಂದ್ರನ ಬಣ್ಣಕ್ಕಿರುವ ಶಮನಿಂದಲೂ ಹಾಲಿನ ಬಣ್ಣಕ್ಕಿರುವ ದಮನಿಂದಲೂ ಬಹು ಶುದ್ಧನಾದ ವರ್ಣಾಶ್ರಮಗಳನ್ನುಂಟುಮಾಡಿರುವ ಆಚಾರನಿಂದಲೂ ಆ ಸಂಯಮನೀ ಸಭೆಯಲ್ಲಿ ಅಕ್ಕಪಕ್ಕಗಳಲ್ಲಿ ಸೇವಿಸಲ್ಪಡುತ್ತಿರುವ ಆ ಧರ್ಮರಾಜನಿಗೆ ನಮಸ್ಕಾರವು.

ಸೇವಿತಾಯ ಮಹಾಪಾರ್ಶ್ವೇಃಸಂಯಮನ್ಯಾಸ್ಸಭಾಂತರೇ ।
ಸಾಧೂನಾಂ ಸ್ನಿಹ್ಯತೇ ಶಶ್ವತ್ ಪ್ರಾಣಾನರ್ಪಯತೇ ಗಿರಾ ॥ ೧೯ ॥

ವಾಚಾ ತೋಷಯತೇ ಸಾಧೂನ್ ಸರ್ವಸ್ವಂ ದದತೇ ಗುಣ್ಯೈಃ ।
ಸದಾ ಸಂತುಷ್ಟರೂಪಾಯ ಸಜ್ಜನಾನಾಂ ನಮೋ ನಮಃ ॥ ೨೦ ॥

ನಮಃ ಕೃತಾಂತಾಯ ಕೃಪಾಕರಾಯ
ಕೃತಕ್ರಿಯಾಣಾಂ ಕೃತಿನಾಂ ಹಿತಾಯ ।
ಸತ್ಸಂಗಿನೇ ಸಂಯಮನೀಶ್ವರಾಯ
ಧರ್ಮಾತ್ಮನೇ ಧರ್ಮಕೃತಾಂ ಪ್ರಿಯಾಯ ॥ ೨೧ ॥

ಘಂಟಾರವಧ್ವನಿತದಿಙ್ಮುಖ ತುಂಗಶೃಂಗ
ಪೂತ್ಕಾರಭೀಷಣಮಹಾಮಹಿಷಸ್ಥಿತಾಯ ।
ನಾರಾಚಶಕ್ತಿಮುಸಲಾಸಿಗದಾತ್ರಿಶೂಲ
ಪಾಶಾಂಕುಶೈರ್ವಿರಸದಷ್ಟಮಹೀಭುಜಾಯ ॥ ೨೨ ॥

---

೧೯-೨೦ ಸಾಧುಗಳೊಡನೆ ಬಾರಿಬಾರಿಗೂ ಸ್ನೇಹಮಾಡುತ್ತಿರುವ ಮಾತಿನಿಂದಲೇ ಪ್ರಾಣಗಳನ್ನು ಕೊಟ್ಟುಬಿಡುವಂತಿರುವ ಸಾಧುಗಳನ್ನು ಮಾತಿನಿಂದ ಸಂತೋಷಪಡಿಸುತ್ತಿರುವ ತನ್ನ ಗುಣಗಳಿಂದಲೇ ಅವರಿಗೆ ಎಲ್ಲವನ್ನೂ ಅರ್ಪಿಸುವಂತಿರುವ ಸಜ್ಜನರ ವಿಷಯದಲ್ಲಿ ಯಾವಾಗಲೂ ಸಂತೋಷಗೊಂಡಿರುವ ಈ ಯಮಧರ್ಮರಾಜನಿಗೆ ನಮಸ್ಕಾರವು.

೨೧. ಕೃತಾಂತನಾದ ಕೃಪೆಯುಳ್ಳ ಕೆಲಸಮಾಡುವವರ ಮೇಲೆ ಹಿತವನ್ನು ತೋರಿಸುವ ಸತ್ಪುರುಷರ ಸಹವಾಸವುಳ್ಳ ಸಂಯಮನಿ ಎಂಬ ಸಭೆಗೆ ಒಡೆಯನಾದ ಧರ್ಮಸ್ವರೂಪನಾದ ಧರ್ಮಮಾಡಿದವರಲ್ಲಿ ಪ್ರೀತಿಯನ್ನು ತೋರಿಸುವ ಧರ್ಮರಾಜನಿಗೆ ನಮಸ್ಕಾರವು.

೨೨. ಘಂಟೆಯ ಧ್ವನಿಯಿಂದ ದಿಕ್ಕುಗಳೆಲ್ಲವನ್ನೂ ತುಂಬುತ್ತಿರುವ ಉದ್ದವಾಗಿರುವ ಕೊಂಬುಗಳುಳ್ಳ ಫೂತ್ಕಾರ ಮಾಡುವುದರಿಂದ ಭಯಂಕರವಾದ ದೊಡ್ಡ ಕೋಣನ ಮೇಲೆ ಕುಳಿತಿರುವ ನಾರಾಚ ಶಕ್ತಿ ಮುಸಲ ಕತ್ತಿ ಗದೆ ತ್ರಿಶೂಲ ಪಾಶ ಅಂಕುಶ ಎಂಬ ಎಂಟು ಬಗೆಯ ಆಯುಧಗಳನ್ನು ಒಂದೊಂದು ಕೈಯ್ಯಲ್ಲಿಯೂ ಹಿಡಿದುಕೊಂಡಿರುವ ಎಂಟು ಕೈಗಳುಳ್ಳ ಯಮಧರ್ಮರಾಜನಿಗೆ ನಮಸ್ಕಾರವು.

ಸದ್ಭಿಶ್ಚತುರ್ದಶಭಿರೇವ ಶುಭಾಶುಭಾನಿ
ಸಮ್ಯಗ್ವಿಚಾರಯತಿ ಶಾಸ್ತಿ ಚ ಸಾಕ್ಷಿಭಿರ್ಯಃ ||
ತಸ್ಮೈ ನಮಃ ಸಕಲ ಲೋಕಶಮಾಯ ಶಾನ್ತ
ರೂಪಾಯ ದಕ್ಷಿಣದಿಶಾಪತಯೇ ಯಮಾಯ || ೨೩ ||

ಭವ್ಯಾಯ ಭಾನುತನಯಾಯ ಭಯಾಪಹಾಯ
ನೇತ್ರಪ್ರಿಯಾಯ ನಿಯಮಸ್ಥಿತ ಮಾನವಾನಾಂ ||
ಸೌವರ್ಣ ಮಂದ ಮನು ಮಾತೃ ಸಪತ್ನಜಾಯ
ವೈವಸ್ವತಾಯ ವರದಾಯ ನಮಃ ಶುಚೀನಾಂ || ೨೪ ||

ಬದ್ಧ್ವಾ ದೃಢಂ ನಿಜಭಟೈರ್ನಿಹಿತಾನ್ ಪುರಸ್ತಾ
ದ್ಘೋರೇಷ್ವನೇಕ ನರಕೇಷು ನಿಪಾತ್ಯ ಪಾಪಾನ್ ||
ಛಿಂದೀತಿ ಭಿಂದಿ ದಹ ಶೋಷಯಶೋಷಯೇತಿ
ತುಭ್ಯಂ ನಮಃ ಕಥಯತೇ ಯಮುನಾಗ್ರಜಾಯ || ೨೫ ||

---

೨೩. ಹದಿನಾಲ್ಕು ಜನ ಸಭಿಕರೊಡನೆ ಕುಳಿತುಕೊಂಡು ಸಾಕ್ಷಿಗಳೊಡನೆ ಪ್ರಾಣಿಗಳ ಶುಭಾಶುಭಗಳನ್ನು ವಿಚಾರಿಸಿ ಶಿಕ್ಷೆಯನ್ನು ಕೊಡುವ ಎಲ್ಲಾ ಲೋಕಗಳನ್ನೂ ನಾಶಮಾಡುವ ಶಾಂತ ಸ್ವರೂಪನಾದ ದಕ್ಷಿಣದಿಕ್ಕಿಗೆ ಒಡೆಯ ನಾದ ಯಮನಿಗೆ ನಮಸ್ಕಾರವು.

೨೪. ಮಂಗಳಕರನಾದ ಸೂರ್ಯನ ಮಗನಾದ ಭಯವನ್ನು ಹೋಗಲಾ ಡಿಸುವ ನಿಯಮಗಳನ್ನು ಪಾಲಿಸುವ ಮನುಜರ ಕಣ್ಣಿಗೆ ಪ್ರೀತಿಪಾತ್ರನಾಗಿ ಕಾಣುವ ಸಾವರ್ಣಿಮನು ಶನಿಗಳ ತಾಯಿಯ ಸವತಿಯ ಮಗನಾದ ಶುಚಿಯಾಗಿ ರತಕ್ಕವರಿಗೆ ವರವನ್ನು ಕೊಡುವ ವೈವಸ್ವತನಾದ ಯಮನಿಗೆ ನಮಸ್ಕಾರವು.

೨೫. ತನ್ನ ಭಟರಾದವರು ಪಾಪಿಗಳನ್ನು ಪಾಶಗಳಿಂದ ಕಟ್ಟಿ ಮುಂದು ಗಡೆಯಲ್ಲಿ ನಿಲ್ಲಿಸಿದಾಗ ನೀನು ಅವರನ್ನು ಘೋರವಾದ ನರಕದಲ್ಲಿ ಹಾಕಿ ಕತ್ತರಿಸು ಸೀಳು ಸುಡು ಹಿಂಡು ತಿಕ್ಕು ಎಂದು ಹೇಳುತ್ತಿರುವ ಯಮುನೆಗೆ ಅಣ್ಣನಾದ ಯಮಧರ್ಮರಾಯನಿಗೆ ನಮಸ್ಕಾರವು.

ರಕ್ತಾಂತ್ರವೃತ್ತನಯನಾಯ ವೃಕೋದರಾಯ
ಭೀತಿಪ್ರದಾಯ ಭ್ರುಕುಟೀಕುಟಿಲಾನನಾಯ ॥
ನೀಲಾಯ ನಿಷ್ಠುರಭಟೈರ್ನಿಯಮೈರ್ವಿಹೀನಾನ್
ಸಂತರ್ಜತೇ ಸತತಮಸ್ತು ನಮೋಂತಕಾಯ ॥ ೨೬ ॥

ದೂರೇ ವಿಲೋಕ್ಯ ನಿಜಕರ್ಮರತಾನ್ ವಿಮಾನೇ
ಪ್ರತ್ಯುದ್ಗತಾಯ ರಚಿತಾಂಜಲಿ ಬಂಧನಾಯ ॥
ಸಂಜ್ಞಾಸುತಾಯ ಸರಸೀರುಹಲೋಚನಾಯ
ತುಭ್ಯಂ ನಮೋ ವಿಹಿತ ಪಂಚ ಮಹಾ ಕ್ರತೂನಾಂ ॥ ೨೭ ॥

ವಿಶ್ವಾಧಿಕಾಯ ವಿಮಲಾಯ ವಿಚಕ್ಷಣಾಯ
ವಿಶ್ವಂಭರಾಯ ವಿಧಿ ವಿಷ್ಣು ಶಿವ ಪ್ರಿಯಾಯ ॥
ಸತ್ಸಾಕ್ಷಿಣೇ ಸದಸದಾಚರಣೇಽಖಿಲಾನಾಂ
ಶಶ್ವನ್ನಮಃ ಸಕಲಲೋಕ ಪರಾಯಣಾಯ ॥ ೨೮ ॥

---

೨೬. ಕೆಂಪಗಿರುವ ಕಣ್ಣಿನ ತುದಿಗಳುಳ್ಳ ತೋಳದ ಹೊಟ್ಟೆಯಂತೆ ಹೊಟ್ಟೆಯುಳ್ಳ ಭಯವನ್ನುಂಟುಮಾಡುವ ಹುಬ್ಬನ್ನು ಗಂಟುಹಾಕಿಕೊಂಡಿರುವ ಮುಖವುಳ್ಳ ಕಪ್ಪಗಿರುವ ನಿಯಮವನ್ನು ಅನುಸರಿಸಿ ನಡೆಯದವರನ್ನು ಕೆಟ್ಟವರಾದ ಭಟರಿಂದ ಹೆದರಿಸುತ್ತಿರುವ ಯಮನಿಗೆ ನಮಸ್ಕಾರವು.

೨೭. ಅವರವರ ಕರ್ಮವನ್ನು ಮಾಡಿಕೊಂಡಿರುವವರು ವಿಮಾನದಲ್ಲಿ ಬಂದರೆ ಅವರನ್ನು ನೋಡಿ ಕೈ ಮುಗಿದುಕೊಂಡು ಎದುರುಗೊಳ್ಳುವ ಸಂಜ್ಞೆಯ ಮಗನಾದ ಕಮಲದಂತೆ ಕಣ್ಣುಗಳುಳ್ಳ ಐದು ಮಹಾಯಾಗಗಳನ್ನು ಮಾಡಿರುವ ನಿನಗೆ ನಮಸ್ಕಾರವು.

೨೮. ಪ್ರಪಂಚಕ್ಕೇ ಅಧಿಕನಾದ ಪವಿತ್ರನಾದ ಜಾಣನಾದ ಪ್ರಪಂಚವನ್ನೇ ಧರಿಸಿರುವ ಬ್ರಹ್ಮ ವಿಷ್ಣು ಮಹೇಶ್ವರರಿಗೆ ಪ್ರೀತಿಪಾತ್ರನಾದ ಎಲ್ಲರೂ ಆಚರಿಸುವ ಒಳ್ಳೆಯದು ಕೆಟ್ಟುದುಗಳಿಗೆ ಸರಿಯಾದ ಸಾಕ್ಷಿರೂಪನಾದ ಸಕಲ ಜನಗಳಿಗೂ ಬೇಕಾದವನಾದ ಯಮಧರ್ಮರಾಜನಿಗೆ ಬಾರಿಬಾರಿಗೂ ನಮಸ್ಕಾರವು.

॥ ವಸಿಷ್ಠ ಉವಾಚ ॥

ಇತಿ ಸ್ತುತ್ವಾ ನಮಸ್ಕಾರಮಕರೋದ್ದಂಡವದ್ಭುವಿ ।
ದಕ್ಷಿಣಾಶಾಪತಿಂ ಧ್ಯಾಯನ್ ದಾಕ್ಷಿಣ್ಯಕರುಣಾಲಯಂ ॥ ೨೯ ॥

ತತಃ ಪ್ರಸನ್ನೋ ಭಗವಾನ್ ಯಮೋ ವೈವಸ್ವತೋಽಂತಕಃ ।
ಪ್ರಾದುರಾಸೀನ್ಮಹಾತೇಜಾಃ ಪ್ರಸನ್ನವದನಾಂಬುಜಃ ॥ ೩೦ ॥

ಶ್ವೇತಮಾಲಾಂಬರಧರೋ ನಾನಾಭರಣಭೂಷಿತಃ ।
ಮಹಾಬಾಹುರ್ವಿಶಾಲಾಕ್ಷೋ ಮಹಾಲಾವಣ್ಯಶೋಭಿತಃ ॥ ೩೧ ॥

ಸಂತೋಷೋತ್ಫುಲ್ಲನಯನೈಃ ಪ್ರಸನ್ನಾನನಪಂಕಜೈಃ ।
ಮೃದುವಾಕ್ಯೈಃ ಸುವೇಶೈಶ್ಚ ಸರ್ವಾಭರಣಭೂಷಿತೈಃ ॥ ೩೨ ॥

ಸಮಸ್ತಾಯುಧಸಂಪನ್ನೈಃ ಸುಗುಣೈರ್ವಿನಯೋಜ್ಜ್ವಲೈಃ ।
ಸೇವ್ಯಮಾನಸ್ಸದಾ ಪಾರ್ಶ್ವೇ ಸಿಂಹಸ್ಕಂಧೈಃ ಸ್ವಕಿಂಕರೈಃ ॥ ೩೩ ॥

---

೨೯. ವಸಿಷ್ಠನು ಹೇಳಿದನು–ದಾಕ್ಷಿಣ್ಯವನ್ನು ಹೊಂದಿದ ಕೃಪಾಕರನಾದ ದಕ್ಷಿಣ ದಿಕ್ಕಿಗೆ ಒಡೆಯನಾದ ಯಮನನ್ನು ಧ್ಯಾನಿಸುತ್ತ ಈತನು ಭೂಮಿಯಲ್ಲಿ ಉದ್ದಕ್ಕೂ ಮಲಗಿ ನಮಸ್ಕರಿಸಿದನು.

೩೦. ಆಗ ಯಮನು ಪ್ರಸನ್ನನಾಗಿ ಮುಗುಳು ನಗೆಯನ್ನು ನಗುತ್ತ ಎದುರಿಗೆ ಬಂದನು.

೩೧. ಬಿಳಿಯ ಹೂವು ಬಿಳಿಯ ಬಟ್ಟೆಗಳನ್ನು ಧರಿಸಿಕೊಂಡು ಅನೇಕ ಬಗೆಯ ಒಡವೆಗಳನ್ನು ಹಾಕಿಕೊಂಡಿದ್ದನು. ದೊಡ್ಡ ತೋಳುಗಳುಳ್ಳವನಾಗಿಯೂ ವಿಶಾಲವಾದ ಕಣ್ಣುಗಳುಳ್ಳವನಾಗಿಯೂ ಲಾವಣ್ಯಕ್ಕೆ ನಿಧಿಯಾಗಿಯೂ ಇದ್ದನು.

೩೨-೩೩. ಸಂತೋಷದಿಂದ ಕೂಡಿರುವ ಕಣ್ಣುಗಳುಳ್ಳ ಮೃದುವಾಗಿ ಮಾತನಾಡುವ ಒಳ್ಳೆಯ ವೇಷಗಳುಳ್ಳ ಎಲ್ಲಾ ಆಭಣಗಳಿಂದ ಕೂಡಿರುವ ಎಲ್ಲಾ ಆಯುಧಗಳನ್ನೂ ಧರಿಸಿರುವ ಒಳ್ಳೆಯ ಗುಣದಿಂದಲೂ ವಿನಯದಿಂದಲೂ ಕೂಡಿರುವ ಬಲಶಾಲಿಗಳಾದ ಯಾವಾಗಲೂ ಸೇವಿಸುತ್ತಿರುವ ಆಳುಗಳಿಂದ ಕೂಡಿಕೊಂಡಿರುವ ಯಮನು ಆ ಮುನಿಯ ಎದುರಿಗೆ ಬಂದನು.

ಸದಸ್ಯೈರಪಿ ಮಧ್ಯಸ್ಥೈರ್ಧರ್ಮನಿಷ್ಠೈಃ ಸೂಕ್ಷ್ಮದರ್ಶಿಭಿಃ ।
ಸರ್ವಶಾಸ್ತ್ರಾರ್ಥತತ್ವಜ್ಞೈರ್ಮಹಾಕ್ರತುಷು ದೀಕ್ಷಿತೈಃ ॥ ೩೪ ॥

ಕಿರೀಟಹಾರಕೇಯೂರ ಮಣಿಕುಂಡಲಿಭಿರ್ನೃಪ ।
ಪರಿತಃ ಸೇವಿತೋದಾರ್ಯೈರ್ಮುನೇಸ್ತಸ್ಯ ಪುರೋಭವತ್ ॥
ಮುನಿಮುತ್ಥಾಪ್ಯ ಬಾಹುಭ್ಯಾಂ ಸಮಾಲಿಂಗ್ಯೇದಮಬ್ರವೀತ್ ॥ ೩೫ ॥

॥ ಯಮ ಉವಾಚ ॥

ಸ್ತವೇನಾನೇನ ಸಂತುಷ್ಟೋ ವರದೋಹಮಿಹಾಗತಃ ।
ವೃಣೀಷ್ವ ಮತ್ತೋಭಿಮತಂ ವರಮಿಷ್ಟಂ ದದಾಮಿ ತೇ ॥ ೩೬ ॥

॥ ವಸಿಷ್ಠ ಉವಾಚ ॥

ತಚ್ಛ್ರುತ್ವಾ ವಚನಂ ತಸ್ಯ ಸಮುತ್ಥಾಯ ಮುನೀಶ್ವರಃ ।
ಪ್ರಹರ್ಷೋತ್ಫುಲ್ಲನಯನಸ್ತಂ ಸಮಾಲೋಕ್ಯ ವಿಸ್ಮಿತಃ ॥ ೩೭ ॥

---

೩೪–೩೫. ಧರ್ಮದಲ್ಲಿ ನೆಲೆಸಿರುವ ಸೂಕ್ಷ್ಮವಾಗಿ ವಿಷಯಗಳನ್ನು ವಿಮರ್ಶಿಸುವ ಎಲ್ಲಾ ಶಾಸ್ತ್ರಗಳನ್ನೂ ಬಲ್ಲ ದೊಡ್ಡ ದೊಡ್ಡ ಯಾಗಗಳಲ್ಲಿ ದೀಕ್ಷೆಯನ್ನು ಹೊಂದಿರುವ ಕಿರೀಟ ಹಾರ ಕೇಯೂರ ಮಣಿಯ ಕರ್ಣಾಭರಣಗಳನ್ನು ಹಾಕಿಕೊಂಡಿರುವ ಮಧ್ಯಸ್ಥಿಕೆಯಿಂದ ಧರ್ಮವನ್ನು ನಿರೀಕ್ಷಿಸುತ್ತಿರುವ ಸಭೆಯವರಿಂದ ಸೇವಿಸಲ್ಪಡುತ್ತಿರುವ ಯಮಧರ್ಮರಾಯನು ಆ ಮುನಿಯ ಎದುರಿಗೆ ಬಂದು ಪ್ರತ್ಯಕ್ಷನಾಗಿ ಮತ್ತು ನಮಸ್ಕರಿಸುತ್ತಿರುವ ಆತನನ್ನು ತೋಳುಗಳಿಂದ ಹಿಡಿದೆತ್ತಿ ಆಲಿಂಗಿಸಿಕೊಂಡು ಇಂತೆಂದನು.

೩೬. ಯಮನು ಹೇಳಿದನು–ಎಲೈ ಮುನಿಯೆ ! ನಿನ್ನ ಈ ಸ್ತೋತ್ರದಿಂದ ಸಂತೋಷಪಟ್ಟು ವರವನ್ನು ಕೊಡಲು ನಾನು ಇಲ್ಲಿಗೆ ಬಂದಿದ್ದೇನೆ. ನನ್ನಿಂದ ನೀನು ನಿನಗೆ ಬೇಕಾದ ವರಗಳನ್ನು ಕೇಳಿಕೋ ! ನಿನಗೆ ಬೇಕಾದುದನ್ನು ಕೊಡುತ್ತೇನೆ.

೩೭. ವಸಿಷ್ಠನು ಹೇಳಿದನು-ಆ ಯಮಧರ್ಮರಾಯನ ಮಾತನ್ನು ಕೇಳಿ ಆ ಮುನಿಯು ಮೇಲಕ್ಕೆ ಎದ್ದು ಸಂತೋಷದಿಂದ ಕಣ್ಣುಗಳನ್ನು ಬಿಡುತ್ತ ಅವನನ್ನು ನೋಡಿ ಆಶ್ಚರ್ಯಗೊಂಡನು.

ಕೃತಾಂತಮಾಸಾದ್ಯ ಕೃತೀ ಕೃತಾರ್ಥಃ
ಕೃತಾಂಜಲಿಃ ಕೃತ್ಯಮುವಾಚ ತಾಸಾಂ ||
ಪ್ರಾಣಪ್ರದಾನಂ ಕುರು ಕನ್ಯಕಾನಾಂ
ಪುನಃ ಪುನಸ್ತ್ವಾಮಿದಮೇವ ಯಾಚೇ || ೩೮ ||

|| ವಸಿಷ್ಠ ಉವಾಚ ||

ತದ್ವಾಕ್ಯ ಮಾಕರ್ಣ್ಯ ಸ ಧರ್ಮರಾಜಃ
ಸ್ವಕಿಂಕರಾನ್ ಪಾರ್ಶ್ವಗತಾನುವಾಚ ॥
ಕನ್ಯಾಶ್ಚತಸ್ರಸ್ಸಹಸಾನಯಧ್ವ
ಮುದ್ಯಾನಮಧ್ಯೇ ಕದಲೀ ವನಸ್ಥಾಃ || ೩೯ ||

|| ವಸಿಷ್ಠ ಉವಾಚ ||

ತಥೇತಿ ಗತ್ವಾ ಕದಲೀವನಸ್ಥಾಃ
ಕನ್ಯಾಸ್ಸಮಾನೀಯ ದದುರ್ಜವೇನ ।
ಸಂಪ್ರೇಷಯಾಮಾಸ ಯಮೋಪಿ ಶೀಘ್ರಂ
ಅದೃಶ್ಯರೂಪೇಣ ಸ ವಿಪ್ರಕನ್ಯಾಃ || ೪೦ ||

---

೩೮. ಈ ರೀತಿಯಾಗಿಯಮನು ಪ್ರತ್ಯಕ್ಷ ನಾದುದರಿಂದ ಕೃತಾರ್ಥನಾದ ಆ ಋಷಿಯು ಆ ಕನ್ಯೆಯರಿಗೆ ಪ್ರಾಣವನ್ನು ಕೊಡಬೇಕೆಂಬುದಾಗಿ ಅದನ್ನೇ ಮತ್ತೆ ಮತ್ತೆ ಕೇಳಿಕೊಂಡನು.

೩೯. ವಸಿಷ್ಠನು ಹೇಳಿದನು-ಆ ಮುನಿಯ ಮಾತನ್ನು ಕೇಳಿ ಧರ್ಮರಾಜನು ತನ್ನ ಪಕ್ಕದಲ್ಲಿರುವ ಭಟರನ್ನು ಕುರಿತು ಉದ್ಯಾನದ ಮಧ್ಯದಲ್ಲಿ ಬಾಳೆಯ ಮರಗಳ ವನದಲ್ಲಿರುವ ಆ ನಾಲ್ಕು ಕನ್ಯೆಯರನ್ನು ಕರೆದುಕೊಂಡು ಬನ್ನಿರಿ ಎಂದು ಹೇಳಿದನು.

೪೦. ವಸಿಷ್ಠನು ಹೇಳಿದನು–ಹಾಗೆಯೇ ಆಗಲೆಂದು ಹೇಳಿ ಆ ಯಮದೂತರು ಕದಲೀ ವನದ ಮಧ್ಯದಲ್ಲಿದ್ದ ಕನ್ಯೆಯರನ್ನು ತಂದು ಜಾಗ್ರತೆಯಾಗಿ ಯಮನಿಗೆ ಒಪ್ಪಿಸಿದರು. ಯಮನೂ ಕೂಡ ಆ ಕನ್ಯೆಯರನ್ನು ಅವರು ಕಣ್ಣಿಗೆ ಕಾಣದ ರೀತಿಯಲ್ಲಿ ಅವರ ಬಂಧುಗಳು ಕಾಯ್ದುಕೊಂಡಿರುವಲ್ಲಿಗೆ ಕಳುಹಿಸಿದನು.

**ಯಥಾಸುಪ್ತೋತ್ಥಿತಾಃ ಪೂರ್ವಂ ತಥಾ ಕೂಪಾತ್ಸಮುತ್ಥಿತಾಃ ।**
**ಜಹರ್ಷುಸ್ತಜ್ಜನನ್ಯೋಽಥ ಬಾಲಾ ದೃಷ್ಟ್ವಾ ಸಚೇತನಾಃ ॥ ೪೧ ॥**

**ಪರಿಧಾಯ ನಿಜಂ ವಾಸಃ ಪೂರ್ವವದ್ವಿಜಕನ್ಯಕಾಃ ।**
**ಆಹೂಯ ಜನನೀಂ ಬಾಲಾಃ ಸ್ವಕೀಯಂ ವಿವಿಶುರ್ಗೃಹಂ ॥ ೪೨ ॥**

**ಪ್ರಾಣಾಪಹಾರೀ ಭಗವಾನ್ ಪ್ರಸನ್ನಃ**
**ಪ್ರೋವಾಚ ವಾಕ್ಯಂ ಮೃಗಶೃಂಗಮೇನಂ ।**
**ವೃಣೀಷ್ವ ಭೂಯೋಽಪಿ ವರಂ ದದಾಮಿ**
**ಸ್ತೋತ್ರೇಣ ಸಂತುಷ್ಟಮವೇಹಿ ಮಾಂ ತ್ವಂ ॥ ೪೩ ॥**

**॥ ಮೃಗಶೃಂಗ ಉವಾಚ ॥**

**ಮಯಾ ಕೃತಂ ಸ್ತೋತ್ರಮಿದಂ ತ್ವದೀಯಂ**
**ಯಃ ಕೋಽಪಿ ಭಕ್ತ್ಯಾ ಶೃಣುಯಾತ್ಪಠೇದ್ವಾ ।**
**ತಸ್ಯಾಪಮೃತ್ಯುರ್ಭವಿತಾ ನ ಪೀಡಾ**
**ಪಾಪೀ ನ ಭೂಯಾತ್ಸ ಭವೇಚ್ಚಿರಾಯುಃ ॥ ೪೪ ॥**

---

೪೧. ಹಿಂದೆ ಮಲಗಿದ್ದು ನಿದ್ದೆಯಿಂದ ಏಳುತ್ತಿದ್ದಂತೆ ಈಗ ಆ ಬಾವಿಯಿಂದಲೂ ಆ ಕನ್ಯೆಯರು ಎದ್ದು ಬಂದರು. ಹೀಗೆ ತಮ್ಮ ಮಕ್ಕಳು ಜೀವಂತರಾಗಿ ಬಂದುದನ್ನು ನೋಡಿ ಅವರ ತಾಯಿಯರು ಸಂತೋಷಪಟ್ಟರು.

೪೨. ಆ ಕನ್ಯೆಯರು ಹಿಂದಿನಂತೆ ತಮ್ಮ ಬಟ್ಟೆಗಳನ್ನು ಉಟ್ಟುಕೊಂಡು ತಮ್ಮ ತಾಯಿಯರನ್ನು ಕರೆದುಕೊಂಡು ತಮ್ಮ ತಮ್ಮ ಮನೆಗೆ ಹೋದರು.

೪೩. ಎಲ್ಲರ ಪ್ರಾಣಗಳನ್ನೂ ತೆಗೆದುಕೊಂಡು ಹೋಗುವ ಭಗವಂತನಾದ ಈ ಯಮಧರ್ಮರಾಜನು ಪ್ರಸನ್ನನಾಗಿ ಈ ಮೃಗಶೃಂಗನನ್ನು ಕುರಿತು ನಿನ್ನ ಸ್ತೋತ್ರದಿಂದ ಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳಿಕೋ. ಎಂಬುದಾಗಿ ಹೇಳಿದನು.

೪೪. ಮೃಗಶೃಂಗನು ಹೇಳಿದನು–ನಾನು ಮಾಡಿರುವ ಈ ಸಿನ್ನ ಸ್ತೋತ್ರವನ್ನು ಭಕ್ತಿಯಿಂದ ಓದಿದರಾಗಲೀ ಕೇಳಿದರಾಗಲೀ ಅವನಿಗೆ ಅಪಮೃತ್ಯುವಾಗಲೀ ಪೀಡೆಗಳಾಗಲೀ ಬರಕೂಡದು. ಪಾಪಗಳೆಲ್ಲವೂ ಹೋಗಬೇಕು. ಚಿರಾಯುವಾಗಿ ಆಗಬೇಕು.

॥ ಯಮ ಉವಾಚ ॥

ತಥಾಸ್ತು ವಿಪ್ರೋತ್ತಮ ಕುತ್ಸಪುತ್ರ
ಶೃಣುಷ್ವ ಭೂಯೋಽಪಿ ರಹಸ್ಯಮೇಕಂ ।
ಅವಾಚ್ಯಮೇತದ್ಭುವಿ ನಾಸ್ತಿಕಾನಾಂ
ವಾಚ್ಯಂ ಪ್ರಯತ್ನಾದಿದಮಾಸ್ತಿಕಾನಾಂ ॥ ೪೫ ॥

ಚತುರ್ದಶೀ ಮಂಗಳವಾರಯೋಗೇ
ಯಃ ಕೃಷ್ಣಪಕ್ಷೇ ತಿಲತರ್ಪಣಂ ಚ ॥
ಕೃತ್ವಾ ತದಾನೀಂ ಸ್ತವಮೇನಮುಕ್ತ್ವಾ
ಲಭೇತ ಕಾಮಾನಖಿಲಾನ್ ಸ ಮರ್ತ್ಯಃ ॥ ೪೬ ॥

॥ ವಸಿಷ್ಠ ಉವಾಚ ॥

ಇತ್ಥಂ ವರಂ ವಿಪ್ರವರಾಯ ದತ್ವಾ
ಸಾರ್ಥಂ ಗಣೈರಂತರಧತ್ತ ದೇವಃ ।
ವಿಪ್ರೋಽಪಿ ಲಬ್ಧ್ವಾ ವರಮರ್ಕಪುತ್ರಾತ್
ಸ್ವಮಾಶ್ರಯಂ ಹೃಷ್ಟಮನಾಃ ಪ್ರಪೇದೇ ॥ ೪೭ ॥

---

೪೫- ಯಮನು ಹೇಳಿದನು-ಎಲೈ ಕುತ್ಸನೇ ! ನೀನು ಹೇಳಿದಂತೆಯೇ ಆಗಲಿ. ಆದರೆ ಇದರಲ್ಲಿ ಮತ್ತೊಂದು ಗುಟ್ಟಿರುವುದು. ಅದನ್ನು ಹೇಳುತ್ತೇನೆ ಕೇಳು. ಇದನ್ನು ಲೋಕದಲ್ಲಿ ನಾಸ್ತಿಕರಿಗೆ ಹೇಳಬಾರದು. ಆಸ್ತಿಕರಿಗೆ ಪ್ರಯತ್ನ ಪಟ್ಟು ಹೇಳಬೇಕು.

೪೬. ಕೃಷ್ಣಪಕ್ಷದಲ್ಲಿ ಚತುರ್ದಶಿಯು ಮಂಗಳವಾರದ ದಿವಸ ಬಂದರೆ ಆದಿನ ಯಮನನ್ನು ಉದ್ದೇಶಿಸಿ ಎಳ್ಳನ್ನು ಹಾಕಿಕೊಂಡು ತರ್ಪಣವನ್ನು ಮಾಡಬೇಕು. ಅನಂತರ ಈ ಸ್ತೋತ್ರವನ್ನು ಹೇಳಬೇಕು. ಹಾಗಾದರೆ ಅವನು ಎಲ್ಲಾ ಇಷ್ಟಗಳನ್ನೂ ಹೊಂದುತ್ತಾನೆ.

೪೭. ವಸಿಷ್ಠನು ಹೇಳಿದನು-ಯಮನು ಆ ಮೃಗಶೃಂಗನಿಗೆ ಈ ರೀತಿಯಾಗಿ ವರಗಳನ್ನು ಕೊಟ್ಟು ತನ್ನ ಗಣಗಳೊಂದಿಗೆ ಹೊರಟುಹೋದನು ಆ ಮೃಗಶೃಂಗನೂ ಯಮನಿಂದ ವರಗಳನ್ನು ಹೊಂದಿ ಸಂತೋಷದಿಂದ ತನ್ನ ಆಶ್ರಮಕ್ಕೆ ಹೋದನು.

**ಯಮಸ್ತುತಿಮಿಮಾಂ ಪಠೇದನುದಿನಂ ಹಿ ಯೋ ಮಾನವೋ ।**
**ನ ತಸ್ಯ ಯಮಯಾತನಾ ಭವತಿ ಚ ಪ್ರಸನ್ನೋ ಯಮಃ ।**
**ಕದಾಚಿದಪಿ ಮೃತ್ಯುನಾಪ್ಯಭಿಭವೋ ನ ತತ್ಸಂತತಾ**
**ವಿಹೈವ ಚ ಪರತ್ರ ಚ ಶ್ರಿಯಮುಪೈತಿ ನ ವ್ಯಾಧಯಃ　　　　॥ ೪೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಧರ್ಮರಾಜ ಸ್ತೋತ್ರಾಖ್ಯಾನಂ ನಾಮ ಪಂಚವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೪೮. ಈ ಯಮಸ್ತುತಿಯನ್ನು ನಿತ್ಯವೂ ಯಾವ ಮನುಷ್ಯನು ಹೇಳುತ್ತಾನೆಯೋ ಅವನಿಗೆ ಯಮನು ಪ್ರಸನ್ನನಾಗುತ್ತಾನೆ. ಯಮನು ಯಾತನೆಯನ್ನು ಕೊಡುವುದಿಲ್ಲ. ಆ ಮೃತ್ಯುವು ಇವನನ್ನು ಯಾವಾಗಲೂ ತೊಂದರೆ ಪಡಿಸುವುದೇ ಇಲ್ಲ. ಅವನ ವಂಶದವರಿಗೂ ತೊಂದರೆಯನ್ನು ಕೊಡುವುದಿಲ್ಲ. ಅವನು ಈ ಲೋಕ ಪರಲೋಕಗಳಲ್ಲಿಯೂ ಒಳ್ಳೆಯದನ್ನೇ ಹೊಂದುತ್ತಾನೆ. ರೋಗಗಳಾವುವೂ ಬರುವುದಿಲ್ಲ. ಸಂಪತ್ತು ಹೆಚ್ಚುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಧರ್ಮರಾಜ ಸ್ತೋತ್ರಾಖ್ಯಾನ ಎಂಬ ಇನ್ನೂರ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಡ್ತ್ರಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಸಮಾಗತಾಸ್ತು ತಾಃ ಕನ್ಯಾ ಯಮಲೋಕಾದನಿಂದಿತಾಃ ।
ಸ್ವಮಾತೃಭ್ಯಸ್ಸ್ವಬಂಧುಭ್ಯಃ ತತ್ರ ವೃತ್ತಾಂತಮಬ್ರುವನ್ ॥ ೧ ॥

ಪಾಪಿನಾಂ ಯಾತನಾಶ್ಚಾಪಿ ಸುಕೃತೀನಾಂ ಗತಿಂ ತಥಾ ।
ತನ್ನಿಶಮ್ಯ ಜನಾಸ್ಸರ್ವೇ ಭೀತಾ ವಿಸ್ಮಿತಮಾನಸಾಃ ॥ ೨ ॥

ಅನ್ಯೇದ್ಯುರಪಿ ತಾ ಬಾಲಾಃ ಪ್ರಾತರುತ್ಥಾಯ ಸತ್ವರಾಃ ।
ಮಾಘಸ್ನಾನಂ ಯಥಾಪೂರ್ವಂ ಕರ್ತುಂ ಪ್ರಾಪುರ್ಮರುದ್ವೃಧಾಂ ॥ ೩ ॥

---

## ಇನ್ನೂರ ಇಪ್ಪತ್ತಾರನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಆ ಕನ್ಯೆಯರು ಯಮಲೋಕದಿಂದ ಬಂದು ತಮ್ಮ ತಾಯಿಯರಿಗೂ ಬಂಧುಗಳಿಗೂ ಅಲ್ಲಿನ ವಿಚಾರಗಳನ್ನು ಹೇಳತೊಡಗಿದರು.

೨. ಅಲ್ಲಿ ನಡೆಯುವ ಪಾಪಿಗಳ ಯಾತನೆಯನ್ನೂ ಪುಣ್ಯವಂತರ ಸ್ಥಿತಿಯನ್ನೂ ಹೇಳಿದರು. ಅದನ್ನು ಕೇಳಿ ಜನರೆಲ್ಲರೂ ಹೆದರಿ ಆಶ್ಚರ್ಯಗೊಂಡರು

೩. ಮರುದಿನವೂ ಕೂಡ ಆ ಹುಡುಗಿಯರು ಬೆಳಿಗ್ಗೆ ಎದ್ದು ಅವಸರದಿಂದ ಮೊದಲಿನಂತೆ ಮಾಘಸ್ನಾನ ಮಾಡಲು ಕಾವೇರಿಗೆ ಹೋದರು.

॥ ದಿಲೀಪ ಉವಾಚ ॥

ಸಮಾಗತಾಸ್ತು ತಾಃ ಕನ್ಯಾ ಯಮಲೋಕಾದನಿಂದಿತಾಃ ।
ಸ್ವಮಾತೃಭ್ಯಃ ಸ್ವಬಂಧುಭ್ಯಸ್ತತ್ರ ವೃತ್ತಾಂತಮಬ್ರುವನ್ ॥ ೪ ॥

ಪಾಪಿನಾಂ ಯಾತನಾಶ್ಚಾಪಿ ಸುಕೃತೀನಾಂ ಗತಿಂ ತಥಾ ।
ವಿಸ್ತರಾಚ್ಛ್ರೋತುಮಿಚ್ಛಾಮಿ ಪುಣ್ಯಪಾಪಶುಭಾಶುಭಾನ್ ॥ ೫ ॥

॥ ವಸಿಷ್ಠ ಉವಾಚ ॥

ಸ್ವಮಾತೃಭ್ಯಸ್ಸ್ವಬಂಧುಭ್ಯಃ ಕನ್ಯಾಭಿರ್ಯದುದೀರಿತಂ ।
ತಥೈವ ತೇ ಪ್ರವಕ್ಷ್ಯಾಮಿ ಪುಣ್ಯಪಾಪಶುಭಾಶುಭಾನ್ ॥ ೬ ॥

॥ ಕನ್ಯಾ ಊಚುಃ ॥

ಗಂತವ್ಯೋ ಯಮಲೋಕೋ ಹಿ ಪ್ರಾಣಿಭಿಶ್ಚ ಚತುರ್ವಿಧೈಃ ।
ಸಂತ್ರಾಸಜನನೋ ಘೋರೋ ವಿವಶ್ಯೈಸ್ಸರ್ವದೈವ ಹಿ ॥ ೭ ॥

---

೪. ದಿಲೀಪನು ಹೇಳಿದನು-ಎಲೈ ಋಷಿಯೆ ! ಯಮಲೋಕದಿಂದ ಬಂದ ಆ ಕನ್ಯೆಯರು ತಮ್ಮ ತಾಯಿಯರಿಗೂ ಬಂಧುಗಳಿಗೂ ಅಲ್ಲಿನ ವಿಷಯಗಳನ್ನು ಹೇಳತೊಡಗಿದರಷ್ಟೆ !

೫. ಅಲ್ಲಿ ನಡೆಯತಕ್ಕ ಪಾಪಿಗಳ ಯಾತನೆಯನ್ನೂ ಪುಣ್ಯವಂತರ ಗತಿಯನ್ನೂ ಅವರುಗಳ ಒಳ್ಳೆಯವು ಕೆಟ್ಟವುಗಳನ್ನೆಲ್ಲಾ ವಿಸ್ತಾರವಾಗಿ ಕೇಳಲಿಚ್ಛಿಸುತ್ತೇನೆ.

೬. ವಸಿಷ್ಠನು ಹೇಳಿದನು-ಎಲೈ ದೊರೆಯೆ ! ಆ ಕನ್ಯೆಯರು ತಮ್ಮ ತಾಯಿಯರಿಗೂ ಬಂಧುಗಳಿಗೂ ಆ ಯಮಲೋಕದ ಶುಭಾಶುಭಗಳನ್ನು ಹೇಗೆ ಹೇಳಿದರೋ ಅದರಂತೆಯೇ ಸ್ವಲ್ಪವನ್ನೂ ಬಿಡದೆ ಹೇಳುತ್ತೇನೆ.

೭. ಕನ್ಯೆಯರು ಹೇಳಿದರು-ನಾಲ್ಕು ರೀತಿಯಾಗಿರುವ ಪ್ರಾಣಿಗಳೆಲ್ಲವೂ ಯಮಲೋಕಕ್ಕೆ ಹೋಗಲೇಬೇಕು. ಆ ಯಮಲೋಕವು ಪ್ರಾಣಿಗಳಿಗೆ ಘೋರವಾಗಿ ಹೆದರಿಕೆಯನ್ನು ಯಾವಾಗಲೂ ಉಂಟುಮಾಡುವುದು.

ಗರ್ಭಸ್ಥೈರ್ಜಾಯಮಾನೈಶ್ಚ ಬಾಲೈಸ್ತರುಣಮಧ್ಯಮೈಃ ।
ಸ್ತ್ರೀಪುನ್ನಪುಂಸಕೈರ್ವೃದ್ಧೈರ್ಯಾತವ್ಯಂ ಸರ್ವಜಂತುಭಿಃ ॥ ೮ ॥

ಶುಭಾಶುಭಫಲಂ ತತ್ರ ದೇಹಿನಾಂ ಪ್ರವಿಚಾರ್ಯತೇ ।
ಚಿತ್ರಗುಪ್ತಾದಿಭಿಸ್ಸದ್ಭಿಃ ಮಧ್ಯಸ್ಥೈಸ್ಸಮದರ್ಶಿಭಿಃ ॥ ೯ ॥

ನ ತತ್ರ ಪ್ರಾಣಿನಸ್ಸಂತಿ ಯೇ ನ ಯಾಂತಿ ಯಮಾಲಯಂ ।
ಅವಶ್ಯಂ ಹಿ ಕೃತಂ ಕರ್ಮ ಭೋಕ್ತವ್ಯಮವಿಚಾರತಃ ॥ ೧೦ ॥

ಅತ್ರ ಯೇ ಶುಭಕರ್ಮಾಣಃ ಸೌಮ್ಯಚಿತ್ತಾ ದಯಾನ್ವಿತಾಃ ।
ತೇ ನರಾ ಯಾನ್ತಿ ಸೌಮ್ಯೇನ ಪಥಾ ಯಮನಿಕೇತನಂ ॥ ೧೧ ॥

ಮಾಘಮಾಸೇ ತು ಸಂಪ್ರಾಪ್ತೇ ಯೇ ಸ್ನಾನಮರುಣೋದಯೇ ।
ಕುರ್ವಂತಿ ಹರಿಗೋವಿಂದ ಮಾಧವೇತಿ ನರೋತ್ತಮಾಃ ॥ ೧೨ ॥

---

೮. ಗರ್ಭದಲ್ಲಿದ್ದಾಗ ಸತ್ತ ಪ್ರಾಣಿಗಳೂ ಹುಟ್ಟುವಾಗ ಸತ್ತ ಪ್ರಾಣಿಗಳೂ ಬಾಲರೂ ತರುಣರೂ ಮಧ್ಯಮ ವಯಸ್ಸಿನವರೂ ಮುದುಕರೂ ಹೆಂಗಸರೂ ಗಂಡಸರೂ ನಪುಂಸಕರಾದಿಯಾಗಿ ಎಲ್ಲಾ ಪ್ರಕಾರವಾದ ಪ್ರಾಣಿಗಳೂ ಯಮ ಲೋಕಕ್ಕೆ ಹೋಗಬೇಕು.

೯. ಮಧ್ಯಸ್ಥರಾಗಿ ಸಮದರ್ಶಿಗಳಾದ ಚಿತ್ರಗುಪ್ತನೇ ಮೊದಲಾದ ಸತ್ಪುರುಷರು ಅಲ್ಲಿ ಪ್ರಾಣಿಗಳ ಶುಭಾಶುಭ ಫಲಗಳನ್ನು ವಿಚಾರಿಸುತ್ತಾರೆ.

೧೦. ಯಮನ ಲೋಕಕ್ಕೆ ಹೋಗದಿರುವ ಪ್ರಾಣಿಗಳು ಪ್ರಪಂಚದಲ್ಲಿ ಒಬ್ಬರೂ ಇಲ್ಲವೇ ಇಲ್ಲ. ತಾನು ಮಾಡಿದ ಕರ್ಮಗಳನ್ನು ಸ್ವಲ್ಪವೂ ವಿಚಾರ ಮಾಡದೆ ಖಂಡಿತವಾಗಿಯೂ ಅನುಭವಿಸಬೇಕು.

೧೧. ಈ ಲೋಕದಲ್ಲಿ ಶುಭವಾದ ಕೆಲಸವನ್ನು ಮಾಡುತ್ತಾ ಸೌಮ್ಯವಾದ ಮನಸ್ಸುಳ್ಳವರೂ ದಯಾವಂತರೂ ಆದವರು ಒಳ್ಳೆಯದಾದ ದಾರಿಯಿಂದ ಯಮನ ಮನೆಗೆ ಹೋಗುತ್ತಾರೆ.

೧೨-೧೮. ಮಾಘಮಾಸದಲ್ಲಿ ಅರುಣೋದಯಕಾಲದಲ್ಲಿ ಯಾರು ಹರಿ ಗೋವಿಂದ ಮಾಧವ ಎಂಬುದಾಗಿ ಹರಿನಾಮವನ್ನು ಸ್ಮರಿಸುತ್ತಾ ಸ್ನಾನ

ತೇಯಾಂತಿ ಸುಖಮಾರ್ಗೇಣ ಯಮಲೋಕಂ ಸುಖಾವಹಂ ।
ಕಿಂಚಿದಭ್ಯುದಿತೇ ಸೂರ್ಯೇ ಸ್ನಾತಾಯೇ ಬದರೀಫಲಂ ॥ ೧೩ ॥

ಮಾಘಮಾಸೇ ಪ್ರಯಚ್ಛಂತಿ ತೇಯಾಂತಿ ಮುದಿತಾ ನರಾಃ ।
ಮಾಘೇ ಪ್ರಶಸ್ತಂ ಕದಲೀಫಲದಾನಂ ಹಿ ತತ್ಪ್ರದಾಃ ॥ ೧೪ ॥

ಖಾದಂತಃ ಸತ್ಫಲಂ ಹೃಷ್ಟಾಃ ಪ್ರಯಾಂತಿ ಯಮಮಂದಿರಂ ।
ತಿಲಾನ್ ದದಾತಿ ಯೋಮಾಘೇ ಸ್ನಾನಂ ಕೃತ್ವಾರುಣೋದಯೇ ॥ ೧೫ ॥

ಸುಖೇನ ಸುಪ್ರಸನ್ನಾತ್ಮಾ ಸೋಽಪಿಯಾತಿ ಯಮಾಲಯಂ ।
ಮಾಘೇಮಾಸ್ಯಚಾ ಸ್ನಾತ್ವಾ ದದ್ಯಾದಾ ಮಲಕಂತುಯಃ ॥ ೧೬ ॥

ಪ್ರಯಾತಿಸೋಽರ್ಕ ತೇಜಸ್ವೀ ವೈವಸ್ವತನಿಕೇತನಂ ।
ಪಾದುಕಾಂ ಪಾದರಕ್ಷಾಂ ಚ ಯೋಽದದಾತಿ ದ್ವಿಜನ್ಮನಾಂ ॥ ೧೭ ॥

ಸವರಾಶ್ವೇನ ಮಹತಾ ಸುಖಂ ಯಾತಿ ಯಮಾಲಯಂ ।
ಛತ್ರದಾನೇನ ಗಚ್ಛಂತಿ ಪಥಾಸಾಭ್ರೇಣದೇಹಿನಃ ॥ ೧೮ ॥

---

ಮಾಡುತ್ತಾರೆಯೋ ಅವರು ಸುಖಪ್ರದವಾದ ಮಾರ್ಗದಿಂದ ಹೋಗುತ್ತಾರೆ. ಯಾರು ಸೂರ್ಯನು ಉದಯಿಸಿದಾಗ ಸ್ನಾನಮಾಡಿ ಬದರೀ (ಯುಗಚೀ) ಹಣ್ಣನ್ನು ಮಾಘಮಾಸದಲ್ಲಿ ದಾನ ಮಾಡುತ್ತಾರೆಯೋ ಅವರು ಸಂತೋಷದಿಂದ ಯಮನ ಮನೆಗೆ ಹೋಗುತ್ತಾರೆ. ಮಾಘಮಾಸದಲ್ಲಿ ಬಾಳೆಯ ಹಣ್ಣನ್ನು ದಾನಮಾಡು ವವರು ಆ ಹಣ್ಣನ್ನು ತಿನ್ನುತ್ತಾ ಸಂತೋಷದಿಂದ ಯಮನ ಲೋಕಕ್ಕೆ ಹೋಗು ತ್ತಾರೆ. ಮಾಘಮಾಸದಲ್ಲಿ ಯಾರು ಅರುಣೋದಯದಲ್ಲಿ ಸ್ನಾನಮಾಡಿ ಎಳ್ಳನ್ನು ದಾನಮಾಡುತ್ತಾರೆಯೋ ಅವರು ಸುಖದಿಂದಲೂ ಸಂತೋಷದಿಂದಲೂ ಯಮ ಲೋಕವನ್ನು ಹೊಂದುತ್ತಾರೆ. ಮಾಘಮಾಸದಲ್ಲಿ ಸ್ನಾನಮಾಡಿ ನೆಲ್ಲಿಯಕಾಯನ್ನು ಯಾರು ದಾನ ಮಾಡುತ್ತಾರೆಯೋ ಅವರು ಸೂರ್ಯನ ತೇಜಸ್ಸುಳ್ಳವರಾಗಿ ಯಮನ ಮನೆಗೆ ಹೋಗುತ್ತಾರೆ. ಕೆರಗಳನ್ನೇ ಆಗಲಿ ಕಾಲಿಗೆ ಹಾಕಿಕೊಳ್ಳುವ ಮತ್ತಾ ಪತರದ ಪಾದರಕ್ಷೆಗಳನ್ನೇ ಆಗಲಿ ಇವನ್ನು ಯಾವನು ಬ್ರಾಹ್ಮಣರಿಗೆ ದಾನಮಾಡು ತ್ತಾನೆಯೋ ಅವನು ಉತ್ತಮವಾದ ಕುದುರೆಯನ್ನು ಹತ್ತಿಕೊಂಡು ಯಮನ ಪಟ್ಟಣಕ್ಕೆ ಹೋಗುತ್ತಾನೆ. ಛತ್ರಿಯನ್ನು ದಾನ ಮಾಡಿದವರು ಮೋಡಗಳು ಕವಿದುಕೊಂಡು ತಣ್ಣಗಿರುವ ದಾರಿಯಲ್ಲಿ ಯಮನ ಪಟ್ಟಣಕ್ಕೆ ಹೋಗುತ್ತಾರೆ.

ದಿವ್ಯಾಂಬರಧರಾಸ್ತತ್ರ ಯಾಂತಿ ವಸ್ತ್ರಪ್ರದಾಯಿನಃ ।
ಶಿಬಿಕಾವಾಹದಾನೇನ ಸದ್ರಥೇನ ಸುಖಂ ವ್ರಜೇತ್ ॥ ೧೯ ॥

ಶಯ್ಯಾಸನಪ್ರದಾನೇನ ಸುಖಂ ಯಾನ್ತಿ ಸವಿಶ್ರಮಾಃ ।
ಆರಾಮಕರ್ತಾ ಛಾಯಾಸು ಶೀತಲಾಸು ಸುಖಂ ವ್ರಜೇತ್ ॥ ೨೦ ॥

ಯಾನ್ತಿ ಪುಷ್ಪಕಯಾನೇನ ಪುಷ್ಪಾರಾಮಪ್ರದಾಯಿನಃ ।
ದೇವಾಯತನಕರ್ತಾರೋ ಯತೀನಾಮಾಶ್ರಮಸ್ಯ ಚ ॥ ೨೧ ॥

ಅನಾಥಮಂಡಪಾನಾಂ ಚ ಕ್ರೀಡಂತೋ ಮಂದಿರೋತ್ತಮೇ ।
ಪಥಿ ವಿಶ್ರಮ್ಯ ವಿಶ್ರಮ್ಯ ಪ್ರಯಾಂತಿ ಯಮಮಂದಿರಂ ॥ ೨೨ ॥

ದೇವಾಗ್ನಿಗುರುವಿಪ್ರಾಣಾಂ ಮಾತಾಪಿತ್ರೋಶ್ಚ ಪೂಜಕಾಃ ।
ಪೂಜ್ಯಮಾನಾ ನರಾ ಯಾಂತಿ ಕಾಮಿಕೇನ ಪಥಾ ಸುಖಂ ॥ ೨೩ ॥

---

೧೯–೨೦. ವಸ್ತ್ರವನ್ನು ದಾನಮಾಡಿದವರು ಒಳ್ಳೆಯ ಬಟ್ಟೆಯನ್ನು ಧರಿಸಿ ಕೊಂಡೂ ಪಲ್ಲಕ್ಕಿಯನ್ನು ದಾನಮಾಡಿದವರು ಒಳ್ಳೆಯ ರಥದಿಂದಲೂ ಹಾಸಿಗೆ ಆಸನಗಳನ್ನು ದಾನಮಾಡಿದವರು ವಿಶ್ರಮಿಸಿಕೊಂಡು ಸುಖವಾಗಿಯೂ ತೋಪು ಗಳನ್ನು ಹಾಕಿಸಿದವರು ಶೀತವಾಗಿರುವ ನೆರಳಿನಲ್ಲಿಯೂ ಯಮನ ಪಟ್ಟಣಕ್ಕೆ ಹೋಗುತ್ತಾರೆ.

೨೧–೨೨. ಹೂದೋಟವನ್ನು ಮಾಡಿಸುವವರು ಹೂವಿನ ಯಾನ ದಿಂದಲೂ ದೇವಸ್ಥಾನಗಳನ್ನೂ ಯತಿಗಳ ಆಶ್ರಮಗಳನ್ನೂ ಅನಾಥರಿಗೆ ಮಂಟಪ ಗಳನ್ನೂ ಕಟ್ಟಿಸಿದವರು ದಾರಿಯಲ್ಲಿ ಅಲ್ಲಲ್ಲಿಯೇ ವಿಶ್ರಮಿಸಿಕೊಳ್ಳುತ್ತ ಯಮನ ಮನೆಗೆ ಹೋಗುತ್ತಾರೆ-

೨೩. ದೇವರು, ಅಗ್ನಿ, ಗುರು, ಬ್ರಾಹ್ಮಣರನ್ನೂ, ತಾಯಿತಂದೆಗಳನ್ನೂ ಪೂಜಿಸುವವರು ತಾವೂ ಪೂಜೆಯನ್ನು ಹೊಂದುತ್ತಾ ಸಕಲ ಇಷ್ಟಗಳನ್ನೂ ಹೊಂದತಕ್ಕ ದಾರಿಯಿಂದ ಹೋಗುತ್ತಾರೆ.

ದ್ಯೋತಯನ್ತೋ ದಿಶಸ್ಸರ್ವಾ ಯಾಂತಿ ದೀಪಪ್ರದಾಯಿನಃ |
ಪ್ರತಿಶ್ರಯಪ್ರದಾತಾ ಚ ಸುಖಂ ಯಾತಿ ಗೃಹೇ ಸುಖಂ || ೨೪ ||

ಸರ್ವಕಾಮಸಮೃದ್ಧೇನ ಪಥಾ ಗಚ್ಛನ್ತಿ ಗೋಪ್ರದಾಃ |
ಯೇನ್ನಪಾನೀಯದಾತಾರಸ್ತೇ ತೃಪ್ತಾ ಯಾನ್ತಿ ಸತ್ಪಥಾ || ೨೫ ||

ಆರ್ತೌಷಧಪ್ರದಾತಾರಃ ಸುಖಂ ಯಾನ್ತಿ ನಿರಾಮಯಾಃ ।
ವಿಶ್ರಾಮ್ಯಮಾಣಾ ಗಚ್ಛನ್ತಿ ಗುರುಶುಶ್ರೂಷಣೇ ರತಾಃ || ೨೬ ||

ಪಾದಶೌಚಪ್ರದಾನೇನ ಶೀತಲೇನ ಪಥಾ ವ್ರಜೇತ್ ।
ಪಾದಾಭ್ಯಂಗಂ ತು ಯೋ ದಾದ್ಯಾನ್ಮಾಘಮಾಸೇ ದ್ವಿಜನ್ಮನಾಂ || ೨೭ ||

ಮನೋಜ್ಞತುರಗಾರೂಢಃ ಸುಖಂ ಯಾತಿ ಯಮಾಲಯಂ ।
ಹೇಮರತ್ನಪ್ರದಾನೇನ ವಿಮಾನೇನೈವ ಗಚ್ಛತಿ || ೨೮ ||

ರೂಪ್ಯಾನಡ್ವಾಹದಾನೇನ ರಥಯಾನೇನ ಗಚ್ಛತಿ |
ಸರ್ವಕಾಮಸಮೃದ್ಧಾತ್ಮಾ ಭೂಮಿದಾನೇನ ಗಚ್ಛತಿ || ೨೯ ||

---

೨೪-೨೫. ದೀಪ ದಾನ ಮಾಡುವವರು ಎಲ್ಲಾ ದಿಕ್ಕುಗಳನ್ನೂ ಪ್ರಕಾಶ ಪಡಿಸುತ್ತಲೂ ಮನೆಹೊಕ್ಕವರಿಗೆ ಆಶ್ರಯವನ್ನು ಕೊಡತಕ್ಕವರು ಸುಖವಾಗಿಯೂ ಗೋವನ್ನು ದಾನ ಮಾಡುವವರು ಇಷ್ಟವಾದುದನ್ನೆಲ್ಲಾ ಹೊಂದುವ ದಾರಿಯಿಂದಲೂ ಅನ್ನ ನೀರುಗಳನ್ನು ಕೊಡತಕ್ಕವರು ತೃಪ್ತರಾಗಿ ಒಳ್ಳೆಯ ದಾರಿಯಿಂದಲೂ ಯಮಲೋಕಕ್ಕೆ ಹೋಗುತ್ತಾರೆ.

೨೬-೨೮. ರೋಗಿಗಳಿಗೆ ಔಷಧವನ್ನು ಕೊಡುವವರು ರೋಗವಿಲ್ಲದೆಯೂ ಗುರುಶುಶ್ರೂಷೆ ಮಾಡತಕ್ಕವರು ದಾರಿಯಲ್ಲಿ ವಿಶ್ರಮಿಸಿಕೊಳ್ಳುತ್ತಲೂ ಕಾಲಿಗೆ ನೀರನ್ನು ಕೊಟ್ಟು ತೊಳೆಯುವವರು ತಣ್ಣಗಿರುವ ದಾರಿಯಲ್ಲಿಯೂ ಹೋಗುತ್ತಾರೆ. ಮಾಘಮಾಸದಲ್ಲಿ ಬ್ರಾಹ್ಮಣರಿಗೆ ಕಾಲಿಗೆ ಎಣ್ಣೆ ಒತ್ತಿ ನೀರನ್ನು ಹಾಕಿದವರು ಉತ್ತಮವಾದ ಕುದುರೆಗಳನ್ನು ಹತ್ತಿಕೊಂಡೂ ಚಿನ್ನ ರತ್ನಗಳನ್ನು ಕೊಡುವವರು ವಿಮಾನದಿಂದಲೂ ಕೂಡ ಯಮನ ಪಟ್ಟಣಕ್ಕೆ ಹೋಗುತ್ತಾರೆ.

೨೯-೩೩. ಬೆಳ್ಳಿ ಹೋರಿಗಳನ್ನು ದಾನ ಮಾಡುವವರು ರಥದಲ್ಲಿ ಕುಳಿತು ಕೊಂಡೂ ಭೂಮಿಯನ್ನು ದಾನಮಾಡುವವರು ಎಲ್ಲಾ ಇಷ್ಟಗಳನ್ನೂ

ಅನ್ನದಾನಪ್ರದಾನೇನ ಪಿಬನ್ ಖಾದನ್ ಪ್ರಗಚ್ಛತಿ ।
ತಾಂಬೂಲಂ ಯೇ ಪ್ರಯಚ್ಛಂತಿ ಮಾಘಮಾಸೇ ವಿಶೇಷತಃ ॥ ೩೦ ॥

ಶೋಭಿತೇನ ಪಥಾ ಯಾಂತಿ ಸುಗಂಧವದನಾಶ್ಚ ತೇ ।
ಪ್ರಾತರ್ಮಾಘೇ ನರಸ್ಸ್ನಾತ್ವಾ ಘೃತದಾನಂ ಕರೋತಿ ಯಃ ॥ ೩೧ ॥

ಜ್ಯೋತಿರ್ಮಯೇನ ಯಾನೇನ ವೈವಸ್ವತಪುರಂ ವ್ರಜೇತ್ ।
ಕೂಶ್ಮಾಂಡಂ ಯೋ ದ್ವಿಜೇಂದ್ರಾಯ ಮಾಘೇಸ್ನಾತ್ವಾ
ಸಮರ್ಪಯೇತ್ ॥ ೩೨ ॥

ಹಿಮಶುಭ್ರವಿಮಾನೇನ ಸ ಸುಖಂ ಯಾತಿ ತೃಪ್ತಿಮಾನ್ ।
ತಂಡುಲಾಢಕದಾನೇನ ಯಮಲೋಕಂ ಸುಖಂ ವ್ರಜೇತ್ ॥ ೩೩ ॥

ಔಷಧ್ಯಃ ಫಲಪಾಕಾನ್ತಾ ಮಾಘಮಾಸೇ ಫಲಂತಿ ಯಾಃ ।
ತಾಸಾಂ ದಾನೇನ ಸರ್ವಾಸಾಂ ಸರ್ವಭೋಗಸಮನ್ವಿತಃ ॥ ೩೪ ॥

---

ಹೊಂದುತ್ತಲೂ ಅನ್ನದಾನ ಮಾಡುವವರು ತಿನ್ನುತ್ತಲೂ ಕುಡಿಯುತ್ತಲೂ ಯಮನ ಪಟ್ಟಣಕ್ಕೆ ಹೋಗುತ್ತಾರೆ. ಮಾಘಮಾಸದಲ್ಲಿ ತಾಂಬೂಲ ದಾನವನ್ನು ಮಾಡುವವರು ಸುಗಂಧವನ್ನು ಬಾಯಿಯಲ್ಲಿ ಹೊಂದಿದವರಾಗಿ ಅಲಂಕರಿಸಲ್ಪಟ್ಟ ದಾರಿಯಲ್ಲಿ ಹೋಗುತ್ತಾರೆ ಮನುಷ್ಯನು ಮಾಘಮಾಸದಲ್ಲಿ ಬೆಳಿಗ್ಯೆ ಸ್ನಾನಮಾಡಿ ತುಪ್ಪದ ದಾನವನ್ನು ಮಾಡಿದರೆ ಅವನು ಜ್ಯೋತಿಸ್ಸಿನಿಂದ ಕೂಡಿರುವ ದಾರಿಯಿಂದ ಯಮಲೋಕಕ್ಕೆ ಸುಖವಾಗಿ ಹೋಗುವನು. ಮಾಘಮಾಸದಲ್ಲಿ ಸ್ನಾನಮಾಡಿ ಕುಂಬಳಕಾಯಿಯನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಹಿಮದಂತೆ ಬೆಳ್ಳಗಿರುವ ವಿಮಾನದಲ್ಲಿ ತೃಪ್ತಿಯಾಗಿ ಸುಖವಾಗಿ ಹೋಗುತ್ತಾನೆ. ಅಕ್ಕಿ ಜೋಳಗಳನ್ನು ದಾನಮಾಡಿದರೆ ಸುಖವಾಗಿ ಯಮಲೋಕವನ್ನು ಹೊಂದುತ್ತಾರೆ.

೩೪-೩೭ ಫಲಬಿಟ್ಟು ನಾಶವಾಗುವ ಔಷಧಿಗಳೆಂಬ ಸಸ್ಯಗಳಿಂದ ಮಾಘಮಾಸದಲ್ಲಿ ಬಿಟ್ಟ ಫಲಗಳ ದಾನದಿಂದ ಸರ್ವಭೋಗಗಳಿಂದ ಕೂಡಿದವನಾಗಿ

ಖಾದನ್ನಶ್ನನ್ನಥಾಕಾಮಮಂತಕಾಲಯಮಶ್ನುತೇ ।
ಇತ್ಯಾದಿ ದಾನನಿರತೈರ್ಮಾಘಸ್ನಾನಪ್ರದೈಸ್ಸದಾ ॥ ೩೫ ॥

ನಾನಾದಾನರತೈಶ್ಚೈವ ನಾನಾವ್ರತ ಪರಾಯಣೈಃ ।
ವೈವಸ್ವತಸ್ಯ ನಗರೀ ಪರಿಪೂರ್ಣಾ ಸಮನ್ತತಃ ॥ ೩೬ ॥

ವಿಶೇಷೇಣ ವಿರಾಜಂತೇ ಮಾಘಸ್ನಾನಪರಾಯಣಾಃ ।
ವಿಶೇಷಾದ್ಧರ್ಮರಾಜೇನ ಪೂಜಿತಾಸ್ತತ್ರ ಭೋಗಿನಃ ॥ ೩೭ ॥

ವಿಶೇಷೇಣ ವಿರಾಜನ್ತೇ ಮಾಘಸ್ನಾನರತಾತ್ಮನಾಂ ।
ವಿಮಾನಾನ್ಯಪಿ ಚಿತ್ರಾಣಿ ಶತಶೋಥ ಸಹಸ್ರಶಃ ॥ ೩೮ ॥

ಏವಂ ಸುಕೃತಿಭಿಃ ಪೂರ್ಣಾ ರಾಜಧಾನೀ ಯಮಸ್ಯ ಸಾ ।
ಏತಾನ್ ಸುಕೃತಿನೋ ದೃಷ್ಟ್ವಾ ವಿಮಾನಸ್ಥಾನಿನಾತ್ಮಜಃ ॥ ೩೯ ॥

---

ಬೇಕಾದ ಹಾಗೆ ತಿನ್ನುತ್ತ, ಕುಡಿಯುತ್ತ ಯಮನ ಮನೆಗೆ ಹೋಗುತ್ತಾನೆ. ಮಾಘಸ್ನಾನವನ್ನು ಮಾಡುತ್ತ ಈ ರೀತಿಯಾಗಿ ಬಗೆಬಗೆಯ ದಾನಗಳನ್ನು ಮಾಡುವುದರಲ್ಲಿ ಆಸಕ್ತರಾಗಿರುವವರಿಂದ ಆ ಯಮನ ಪಟ್ಟಣವು ಎಲ್ಲಾ ಕಡೆಯಲ್ಲಿಯೂ ತುಂಬಿದೆ. ಅಲ್ಲಿ ಅವರೂ ಕೂಡ ಆ ಧರ್ಮರಾಜನಿಂದ ಗೌರವಿಸಲ್ಪಡುತ್ತಾರೆ. ಅಲ್ಲಿ ಮಾಘಸ್ನಾನದಲ್ಲಿ ಆಸಕ್ತಿಯುಳ್ಳವರೇ ಧರ್ಮರಾಯನ ಸಭೆಯಲ್ಲಿ ಗೌರವಿತರಾಗಿರುತ್ತಾರೆ.

೩೮. ಮಾಘಸ್ನಾನ ಮಾಡುವವರ ವಿಮಾನಗಳೇ ಆ ಯಮನ ಪಟ್ಟಣದಲ್ಲಿ ಚಿತ್ರವಿಚಿತ್ರವಾಗಿಯೂ ಸಾವಿರಗಟ್ಟಲೆಯಲ್ಲಿಯೂ ಬಹುವಾಗಿ ಪ್ರಕಾಶಿಸುತ್ತವೆ.

೩೯–೪೦. ಆ ಯಮನ ರಾಜಧಾನಿಯು ಈ ರೀತಿಯಾದ ಪುಣ್ಯವಂತರಿಂದ ತುಂಬಿಕೊಂಡಿದೆ. ವಿಮಾನದಲ್ಲಿ ಬರುತ್ತಿರುವ ಈ ರೀತಿಯಾದ ಪುಣ್ಯವಂತರನ್ನು ನೋಡಿ ಸೂರ್ಯಪುತ್ರನಾದ ಯಮನು ತನ್ನ ಆಸನದಿಂದ ಎದ್ದು

ಪ್ರತ್ಯುದ್ಯಯೌ ಗಣೈಸ್ಸಾರ್ಧಂ ಸಮುತ್ಥಾಯ ನಿಜಾಸನಾತ್ ।
ಕೃತಾಂಜಲಿಪುಟಸ್ತೇಷಾಂ ಸಪರ್ಯಾಮಕರೋದ್ಯಮಃ ॥ ೪೦ ॥

ಸ್ವಾಗತಾಸನದಾನೇನ ಪಾದಾರ್ಘ್ಯೇಣ ಪ್ರಿಯೇಣ ಚ ।
ಧನ್ಯಾ ಯೂಯಂ ಮಹಾತ್ಮಾನಃ ಸ್ವಾತ್ಮನೋ ಹಿತಕಾರಿಣಃ ॥ ೪೧ ॥

ಯೇನ ದಿವ್ಯಸುಖಾರ್ಥಾಯ ಭವದ್ಭಿಸ್ಸುಕೃತಂ ಕೃತಂ ।
ಇದಂ ವಿಮಾನಮಾರುಹ್ಯ ದಿವ್ಯಸ್ತ್ರೀಭೋಗಭೂಷಿತಂ ॥ ೪೨ ॥

ಸ್ವರ್ಗಸಂ ಗಚ್ಛಧ್ವಮತುಲಂ ಸರ್ವಕಾಮಸಮನ್ವಿತಂ ।
ಇತಿ ತೇನಾಭ್ಯನುಜ್ಞಾತಾಃ ಸ್ವರ್ಗಲೋಕಂ ಪ್ರಯಾಂತಿತೇ ॥ ೪೩ ॥

ಯೇ ತು ಪ್ರಯಾಗೇ ಮಜ್ಜನ್ತಿ ಮಾಘಮೇಕಂ ನರೋತ್ತಮಾಃ ।
ತೇ ಬ್ರಹ್ಮಲೋಕಂ ಗಚ್ಛಂತಿ ಋಜುಮಾರ್ಗೇಣ ಶೋಭನಂ ॥ ೪೪ ॥

---

ತನ್ನ ಪರಿವಾರದೊಂದಿಗೆ ಎದುರುಗೊಳ್ಳುತ್ತಿರುತ್ತಾನೆ. ಮತ್ತು ಕೈ ಮುಗಿದು ಕೊಂಡು ಅವರ ಪೂಜೆಯನ್ನು ಮಾಡುತ್ತಿರುತ್ತಾನೆ.

೪೧–೪೩. ಆಗ ಯಮನು ಸುಖಾಗಮನವನ್ನು ಕೋರಿ ಅರ್ಘ್ಯಪಾದ್ಯಗಳನ್ನು ಕೊಟ್ಟು ಒಳ್ಳೆಯ ಮಾತನಾಡುತ್ತ ನಿಮ್ಮ ಆತ್ಮನಿಗೆ ಹಿತಮಾಡಿಕೊಂಡ ನೀವೇ ಧನ್ಯರು. ಮಹಿಮವಂತರು. ದಿವ್ಯವಾದ ಸುಖವನ್ನು ಅನುಭವಿಸಲು ನೀವು ಒಳ್ಳೆಯ ಕೆಲಸವನ್ನು ಮಾಡಿರುವಿರಿ. ನಿಮ್ಮಗಳಿಗೆ ಧನ್ಯವಾದವು. ದಿವ್ಯ ಸ್ತ್ರೀಯರ ಭೋಗದಿಂದ ಕೂಡಿದ ಈ ವಿಮಾನದಲ್ಲಿ ಕುಳಿತುಕೊಂಡು ಎಲ್ಲಾ ಸೌಖ್ಯಗಳಿಂದಲೂ ಕೂಡಿರುವ ಉತ್ತಮವಾದ ಸ್ವರ್ಗವನ್ನು ಹೊಂದಿರಿ. ಎಂದು ಆ ಯಮನಿಂದ ಅನುಮೋದಿಸಲ್ಪಟ್ಟವರಾಗಿ ಅವರು ಸ್ವರ್ಗಕ್ಕೆ ಹೋಗುತ್ತಾರೆ

೪೪. ಯಾರು ಮಾಘ ಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡುತ್ತಾರೆಯೋ ಅವರು ಸರಿಯಾದ ದಾರಿಯಿಂದ ಉತ್ತಮವಾದ ಬ್ರಹ್ಮಲೋಕಕ್ಕೆ ಹೋಗುತ್ತಾರೆ.

ಮಾಘಮಾಸ್ಯುಷಸಿಸ್ನಾತ್ವಾ ಪರಿಪಾವನಮೂರ್ತಯಃ ।
ವಿಷ್ಣುಧರ್ಮರತಾಶ್ಶಾಂತಾ ವಿಷಯೇಷು ಪರಾಙ್ಮುಖಾಃ ॥ ೪೫ ॥

ತೇ ವಿಷ್ಣುಲೋಕಂ ಗಚ್ಛಂತಿ ಋಜುಮಾರ್ಗೇಣ ಶೋಭನಂ ।
ಕಿಂಚಿದಭ್ಯುದಿತೇ ಸೂರ್ಯೇ ಮಾಘಮಾಸೇ ನಿಮಜ್ಯ ಚ ॥ ೪೬ ॥

ಶಿವಧರ್ಮರತಾಃ ಶಿಷ್ಟಾಃ ಶತರುದ್ರೀಯಜಾಪಕಾಃ ।
ತೇ ಶಂಭುಲೋಕಂ ಗಚ್ಛಂತಿ ಋಜುಮಾರ್ಗೇಣ ಶೋಭನಂ ॥ ೪೭ ॥

ಅನ್ಯೇ ಸುಕೃತಿನಃ ಸರ್ವೇ ವಿಮಾನೇನ ಯಮಾಂತಿಕಂ ।
ಗತ್ವಾ ತೇನಾಭ್ಯನುಜ್ಞಾತಾ ಗಚ್ಛಂತಿ ತ್ರಿದಿವಂ ತತಃ ॥ ೪೮ ॥

ಅನ್ಯೇ ಸುಕೃತಿನಸ್ಸಂತಿ ವಿಮಾನಸ್ಥಾಸ್ಸಹಸ್ರಶಃ ।
ಸಂಯಮನ್ಯಾಃ ಪ್ರದೇಶೇ ತು ತಾನ್ನ ವಿದ್ಮೋತ್ರ ವರ್ಣಿತುಂ ॥ ೪೯ ॥

---

೪೫–೪೭. ಮಾಘ ಮಾಸದ ಉಷಃಕಾಲದಲ್ಲಿ ಸ್ನಾನಮಾಡಿ ಪವಿತ್ರ ಮೂರ್ತಿಗಳಾಗಿ ವೈಷ್ಣವವ್ರತವನ್ನು ಮಾಡುತ್ತಾ ಶಾಂತರಾಗಿ ವಿಷಯಾಸಕ್ತಿಗಳಿಡದೆ ಇರುವವರು ಋಜುಮಾರ್ಗದಿಂದ ವಿಷ್ಣು ಲೋಕವನ್ನು ಹೊಂದುತ್ತಾರೆ. ಮಾಘ ಮಾಸದಲ್ಲಿ ಸೂರ್ಯನು ಅರ್ಧಹುಟ್ಟಿರುವಾಗ ಸ್ನಾನ ಮಾಡಿ ಶಿವಧರ್ಮವನ್ನು ಆಚರಿಸುತ್ತಾ ಶತರುದ್ರಿಯವನ್ನು ಜಪಿಸುತ್ತಿರುವವರು ಉತ್ತಮವಾದ ಮಾರ್ಗದಿಂದ ಶಂಭುಲೋಕವನ್ನು ಹೊಂದುತ್ತಾರೆ.

೪೮. ಉಳಿದ ಪುಣ್ಯಶಾಲಿಗಳೂ ಕೂಡ ವಿಮಾನದಿಂದ ಯಮನ ಬಳಿಗೆ ಹೋಗುತ್ತಾರೆ. ಅಲ್ಲಿ ಆ ಯಮನಿಂದ ಅಪ್ಪಣೆಯನ್ನು ಹೊಂದಿ ಅನಂತರ ಸ್ವರ್ಗಕ್ಕೆ ಹೋಗುತ್ತಾರೆ.

೪೯. ಇನ್ನೂ ಅನೇಕ ಜನ ಪುಣ್ಯವಂತರು ವಿಮಾನದಲ್ಲಿ ಆ ಯಮನ ಪಟ್ಟಣದ ಸಮೀಪದಲ್ಲಿಯೂ ಸಭೆಯ ಸಮೀಪದಲ್ಲಿಯೂ ಇದ್ದೇ ಇರುವರು. ಅವರನ್ನು ವರ್ಣಿಸುವುದಕ್ಕೆ ನಮಗೆ ತಿಳಿಯುವುದಿಲ್ಲ.

ಉದ್ಯಾನಮಧ್ಯೇ ಕದಲೀವನಮಧ್ಯೇ ಸ್ಥಿತಾ ವಯಂ ।
ಏತಾನ್ ಸುಕೃತಿನೋ ದೃಷ್ಟ್ವಾವಯಂ ಧನ್ಯಾ ಹಿ ಮಾತರಃ ॥ ೫೦ ॥

ನೇತ್ರಸಾಫಲ್ಯಮಸ್ಮಾಕಂ ಜನ್ಮಸಾಫಲ್ಯಮಪ್ಯಭೂತ್ ।
ಏತಾನ್ ಸುಕೃತಿನೋ ದೃಷ್ಟ್ವಾವಯಂ ಧನ್ಯಾ ಹಿ ಬಾಂಧವಾಃ ॥ ೫೧ ॥

ಮಾಘಸ್ನಾನಪ್ರಭಾವೇನ ವಯಂ ತತ್ರ ನಿರಾಮಯಾಃ ।
ಏತಾನ್ಸುಕೃತಿನೋ ದೃಷ್ಟ್ವಾ ವಯಂ ಧನ್ಯಾಃ ಸ್ಮ ಹೇ ಜನಾಃ ॥ ೫೨ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಸಂಯಮನೀ ವರ್ಣನಂ ನಾಮ ಷಡ್ವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೫೦. ಆ ಯಮನ ಪಟ್ಟಣದ ಉದ್ಯಾನವನದ ಮಧ್ಯದಲ್ಲಿರುವ ಒಂದು ಕದಳೀವನದ ಮಧ್ಯದಲ್ಲಿ ನಾವುಗಳಿದ್ದೆವು. ಈ ಪುಣ್ಯಾತ್ಮರನ್ನು ನೋಡಿ ನಾವುಗಳು ಧನ್ಯರಾದೆವು. ಅಮ್ಮ ! ಅಲ್ಲಿನ ಸ್ಥಿತಿಯು ಹೀಗಿರುವುದು.

೫೧ ಬಂಧುಗಳಿರಾ ! ಈ ಸುಕೃತಿಗಳನ್ನು ನೋಡಿದ ನಮ್ಮ ಕಣ್ಣುಗಳು ಸಾರ್ಥಕವಾದುವು. ನಮ್ಮ ಜನ್ಮವೂ ಸಫಲವಾಯಿತು. ನಾವೂ ಧನ್ಯರಾದೆವು.

೫೨. ಈ ಮಾಘ ಸ್ನಾನದ ಪ್ರಭಾವದಿಂದ ಅಲ್ಲಿ ನಾವು ಸುಖವಾಗಿದ್ದೆವು. ಈ ಪುಣ್ಯಾತ್ಮರನ್ನು ನೋಡಿ ನಾವು ಬಹು ಧನ್ಯರಾದೆವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಸಂಯಮನೀ ವರ್ಣನ ಎಂಬ ಇನ್ನೂರ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಃ ॥



॥ ಕನ್ಯಾ ಊಚುಃ ॥

**ತತ್ರ ಯೇ ಪಾಪಕರ್ಮಾಣಸ್ತೇಷಾಂ ದುಃಖಂ ಬ್ರವಾಮಹೈ ।**
**ಮಾತರೋ ಬಾಂಧವಾಃ ಸರ್ವೇ ಶೃಣುಧ್ವಂ ಧೈರ್ಯಮಾಸ್ಥಿತಾಃ ॥ ೧ ॥**

**ತತ್ರ ಯೇ ಕ್ರೂರಕರ್ಮಾಣಃ ಪಾಪಾ ದಾನವಿವರ್ಜಿತಾಃ ।**
**ತೇ ಘೋರೇಣ ಪಥಾ ಯಾನ್ತಿ ದಕ್ಷಿಣೇನ ಯಮಾಲಯಂ ॥ ೨ ॥**

**ಷಡಶೀತಿ ಸಹಸ್ರಾಣಿ ಯೋಜನಾನಿ ಸಮನ್ತತಃ ।**
**ವೈವಸ್ವತಪುರಂ ಜ್ಞೇಯಂ ನಾನಾರೂಪಮವಸ್ಥಿತಂ ॥ ೩ ॥**

---

### ಇನ್ನೂರ ಇಪ್ಪತ್ತೇಳನೆಯ ಅಧ್ಯಾಯವು



೧. ಕನ್ಯೆಯರು ಹೇಳಿದರು-ಇನ್ನು ಮುಂದೆ ಅಲ್ಲಿರುವ ಪಾಪಿಗಳ ದುಃಖದ ವಿಷಯವನ್ನು ಹೇಳುತ್ತೇನೆ. ಎಲೈ ಬಂಧುಗಳಿರಾ! ಮತ್ತು ತಾಯಿಯರ! ನೀವೆಲ್ಲರೂ ಧೈರ್ಯವನ್ನು ಹೊಂದಿ ಕೇಳಿರಿ.

೨. ಕೆಟ್ಟ ಕೆಲಸವನ್ನು ಮಾಡುತ್ತ ದಾನ ಮಾಡದೆ ಪಾಪಗಳನ್ನು ಮಾಡಿದವರು ದಕ್ಷಿಣದ ಕಡೆಯ ಘೋರವಾದ ದಾರಿಯಿಂದ ಯಮನ ಪಟ್ಟಣಕ್ಕೆ ಹೋಗುತ್ತಾರೆ.

೩. ಬಗೆ ಬಗೆಯ ರೀತಿಯಿಂದ ಕೂಡಿಕೊಂಡಿರುವ ಆ ಯಮನ ಪಟ್ಟಣವು ಎಂಭತ್ತಾರು ಸಾವಿರ ಯೋಜನಗಳ ಚದರ ಮೈಲಿಗಳಿವೆ.

ಸಮೀಪಮಿವ ಚಾಭಾತಿ ನರಾಣಾಂ ಪುಣ್ಯಕರ್ಮಣಾಂ ।
ಪಾಪಾನಾಮತಿದೂರಸ್ಥಂ ಪಥಾ ರೌದ್ರೇಣ ಗಚ್ಛತಾಂ ॥ ೪ ॥

ತೀವ್ರಕಂಟಕಯುಕ್ತೇನ ಶರ್ಕರಾನಿಚಿತೇನ ಚ ।
ಕ್ಷುರಧಾರಾನಿಭೈಸ್ತೀವ್ರೈಃ ಪಾಷಾಣೈರ್ನಿಚಿತೇನ ಚ ॥ ೫ ॥

ಕ್ವಚಿತ್ಪಂಕೇನ ಮಹತಾ ಅಂಕುರೈಶ್ಚೈವ ಘಾತಕೈಃ ।
ಲೋಹಸೂಚಿನಿಭೈರ್ದರ್ಭೈಃ ಸಂಛನ್ನೇನ ತಥಾ ಕ್ವಚಿತ್ ॥ ೬ ॥

ತಟಪ್ರಪಾತವಿಷಮೈಃ ಪರ್ವತೈರ್ವೃಕ್ಷಸಂಕುಲೈಃ ।
ಪ್ರತಪ್ತಾಂಗಾರಯುಕ್ತೇನ ಯಾಂತಿ ಮಾರ್ಗೇಣ ದುಃಖಿತಾಃ ॥ ೭ ॥

---

೪. ಆ ಪಟ್ಟಣವು ಪುಣ್ಯ ಕರ್ಮಮಾಡಿದವರಿಗೆ ಸುಖವಾದ ದಾರಿಯಲ್ಲಿ ಹೋಗುವುದರಿಂದ ಬಹು ಹತ್ತಿರವಾಗಿರುವಂತೆಯೂ ಪಾಪಿಗಳು ಕಠಿಣವಾದ ದಾರಿಯಲ್ಲಿ ಹೋಗುವುದರಿಂದ ಬಹು ದೂರವಾಗಿಯೂ ಕಾಣುತ್ತದೆ.

೫. ಪಾಪಿಗಳಾದವರು ಬಹುವಾದ ಮುಳ್ಳುಗಳುಳ್ಳ ಕತ್ತಿಯಂತೆ ಹರಿತವಾಗಿ ಚೂಪಾಗಿರುವ ಸುರುಜುಗಲ್ಲುಗಳುಳ್ಳ ದಾರಿಗಳಿಂದಲೂ ಆ ಯಮನ ಪಟ್ಟಣಕ್ಕೆ ಹೋಗುತ್ತಾರೆ.

೬. ಆ ಪಾಪಿಗಳು ಹೋಗುವ ದಾರಿಯು ಕೆಲವೆಡೆಯಲ್ಲಿ ಬಹುವಾದ ಕೆಸರುಳ್ಳದ್ದಾಗಿಯೂ ಕೆಲವುಕಡೆ ಚುಚ್ಚುವ ಮೊಳೆಕೆಗಳಿಂದಲೂ ಮತ್ತೆ ಕೆಲವೆಡೆಗಳಲ್ಲಿ ಕಬ್ಬಿಣದ ಮುಳ್ಳಿನಂತೆ ಬೆಳೆದಿರುವ ಚುಚ್ಚಿಕೊಳ್ಳುತ್ತಿರುವ ದರ್ಭೆಯ ಮೊಳಕೆಗಳಿಂದಲೂ ಕೂಡಿಕೊಂಡಿವೆ.

೭. ಕೆಲವೆಡೆಯಲ್ಲಿ ಆ ಮಾರ್ಗವು ಮೇಲಿನಿಂದ ಕೆಳಕ್ಕೆ ಬೀಳುವ ಹಾಗೆ ತೊಂದರೆ ಕೊಡತಕ್ಕದ್ದಾಗಿಯೂ, ಬೆಟ್ಟಗಳಿಂದಲೂ ಮರಗಳ ಗುಂಪಿನಿಂದಲೂ ಕೆಂಪಗೆ ಕಾದಿರುವ ಕೆಂಡದಿಂದಲೂ ದುಃಖವನ್ನು ಕೊಡುವುದಾಗಿಯೂ ಇವೆ. ಇವುಗಳಲ್ಲಿ ಪಾಪಿಗಳು ದುಃಖಗೊಂಡು ಹೋಗುತ್ತಿರುವರು.

ಕ್ವಚಿದ್ವಿಷಮಗರ್ತೈಶ್ಚ ಕ್ವಚಿಲ್ಲೋಷ್ಟೈಶ್ಚ ಪಿಚ್ಛಿಲೈಃ |
ಸುತಪ್ತವಾಲುಕಾಭಿಶ್ಚ ಪಥಾ ತೀಕ್ಷ್ಣೈಶ್ಚ ಶಂಕುಭಿಃ ॥ ೮ ॥

ಅನೇಕಶಾಖಾವಿತತೈಃ ವ್ಯಾಪ್ತಂ ವನಶತೈರಪಿ |
ಕಷ್ಟೇನ ತಮಸಾ ಮಾರ್ಗಮನಾಲಂಬೇನ ಕುತ್ರಚಿತ್ ॥ ೯ ॥

ಅಯಃಶೃಂಗಾಟಕೈಸ್ತಪ್ತೈಃ ಕ್ವಚಿದ್ದಾವಾಗ್ನಿನಾ ಪುನಃ |
ಕ್ವಚಿತ್ತಪ್ತ ಶಿಲಾಭಿಶ್ಚ ಕ್ವಚಿದ್ವ್ಯಾಪ್ತಂ ಹಿಮೇನ ಚ ॥ ೧೦ ॥

ಕ್ವಚಿದ್ವಾಲುಕಯಾ ವ್ಯಾಪ್ತಮಾಕರ್ಣಾನ್ತಪ್ರವೇಶಯಾ |
ಕ್ವಚಿದುಷ್ಣಾಂಬುನಾ ವ್ಯಾಪ್ತಂ ಕ್ವಚಿತ್ಕಾರೀಷ ವಹ್ನಿನಾ ॥ ೧೧ ॥

ಸಿಂಹೈರ್ವೃಕೈಶ್ಚ ಶಾರ್ದೂಲೈರ್ದಂಶಗ್ರೀವೈಶ್ಚ ದಾರುಣೈಃ |
ಕ್ವಚಿನ್ಮಹಾಜಲೂಕಾಭಿಃ ಕ್ವಚಿಚ್ಚಾ ಜಗರೈಃ ಪುನಃ ॥ ೧೨ ॥

---

೮. ಆ ಮಾರ್ಗವು ಕೆಲವೆಡೆಗಳಲ್ಲಿ ಆಳವಾದ ಹಳ್ಳಗಳಿಂದಲೂ ಕೆಲವೆಡೆಗಳಲ್ಲಿ ಸಣ್ಣ ಸಣ್ಣಗಿರುವ ಹೆಂಟೆಗಳಿಂದಲೂ ಕೆಲವೆಡೆಗಳಲ್ಲಿ ಕಾದಿರುವ ಮರಳುಗಳಿಂದಲೂ ಸಣ್ಣ ಸಣ್ಣ ಚೂಪಾದ ಗೂಟಗಳಿಂದಲೂ ಕೂಡಿದ್ದಿತು.

೯. ಕೆಲವು ಜಾಗದಲ್ಲಿ ಆ ಮಾರ್ಗವು ಅನೇಕ ಕೊಂಬೆಗಳುಳ್ಳ ಮರಗಳುಳ್ಳ ಬಹು ಕಾಡಿನಿಂದ ಕೂಡಿಯೂ ಹೋಗುವುದಕ್ಕೆ ಆಗದಂತಿರುವ ಕತ್ತಲೆಯುಳ್ಳದ್ದಾಗಿಯೂ ಕೆಲವೆಡೆಗಳಲ್ಲಿ ಹಿಡಿದುಕೊಂಡು ಹೋಗಲಾಗದಿರುವಂತಿದ್ದಿತು.

೧೦. ಕೆಲವೆಡೆಗಳಲ್ಲಿ ಕಾದ ಕಬ್ಬಿಣದ ಚೌಕಗಳಿಂದಲೂ ಕೆಲವೆಡೆಯಲ್ಲಿ ಕಾಳ್ಗಿಚ್ಚಿನಿಂದ ಕೂಡಿಕೊಂಡೂ ಕೆಲವೆಡೆಯಲ್ಲಿ ಕಾದ ಕಲ್ಲುಗಳಿಂದಲೂ ಕೆಲವು ಜಾಗದಲ್ಲಿ ಹಿಮಗಳಿಂದಲೂ ಕೂಡಿದ್ದಿತು.

೧೧. ಕೆಲವೆಡೆಗಳಲ್ಲಿ ಕಿವಿಯವರೆಗೂ ಧೂಳೇಳುವ ಮರಳು (ಧೂಳು) ಗಳಿಂದಲೂ, ಕೆಲವೆಡೆಯಲ್ಲಿ ಬಿಸಿನೀರಿನಿಂದಲೂ ಕೆಲವೆಡೆಯಲ್ಲಿ ಕಾಡು ಬೆರಣಿಗಳ ಬೆಂಕಿಯಿಂದಲೂ ಕೂಡಿದ್ದಿತು.

೧೨. ಆ ಮಾರ್ಗವು ಕೆಲವೆಡೆಗಳಲ್ಲಿ ಸಿಂಹ ಹುಲಿ ಜಿಂಕೆಗಳಿಂದಲೂ ಕೂಡಿದ್ದು ಆಗಾಗ್ಗೆ ಕಚ್ಚುವಂತಿದ್ದಿತು. ಕೆಲವು ಕಡೆ ದೊಡ್ಡ ದೊಡ್ಡ ಜಿಗಣೆಗಳುಳ್ಳವಾಗಿಯೂ ಕೆಲವೆಡೆಯಲ್ಲಿ ಹೆಬ್ಬಾವುಗಳಿಂದಲೂ ಕೂಡಿದ್ದಿತು.

**ಮಕ್ಷಿಕಾಭಿಶ್ಚ ರೌದ್ರಾಭಿಃ ಕ್ವಚಿತ್ಸರ್ಪೈರ್ವಿಷೋಲ್ಬಣೈಃ ।**
**ಮತ್ತಮಾತಂಗಯೂಥೈಶ್ಚ ಬಲೋನ್ಮತ್ತೈಃ ಪ್ರಮಾಥಿಭಿಃ ॥ ೧೩ ॥**

**ಪಂಥಾನ ಮಾಲಿಖದ್ಭಿಶ್ಚ ತೀಕ್ಷ್ಣಶೃಂಗೈರ್ಮಹಾವೃಷೈಃ ।**
**ಮಹಾಶೃಂಗೈಶ್ಚ ಮಹಿಷೈರುಷ್ಟ್ರೈರ್ಮತ್ತೈಶ್ಚ ಖಾದನೈಃ ॥ ೧೪ ॥**

**ಡಾಕಿನೀಭಿಶ್ಚ ರೌದ್ರಾಭಿಃ ವಿಕರಾಳೈಶ್ಚ ರಾಕ್ಷಸೈಃ ।**
**ವ್ಯಾಧಿಭಿಶ್ಚ ಮಹಾಘೋರೈಃ ಪೀಡ್ಯಮಾನಾ ವ್ರಜಂತಿ ಚ ॥ ೧೫ ॥**

**ಮಹಾಧೂಳಿವಿಮಿಶ್ರೇಣ ಮಹಾಚಂಡೇನ ವಾಯುನಾ ।**
**ಮಹಾಪಾಷಾಣವರ್ಷೇಣ ಪೀಡ್ಯಮಾನಾ ವ್ರಜಂತಿ ಚ ॥ ೧೬ ॥**

**ಮಹತಾ ಪಾಂಸುವರ್ಷೇಣ ಪೂರ್ಯಮಾಣಾ ರುದಂತಿ ಚ ।**
**ಮಹಾಮೇಘರವೈರ್ಘೋರೈರ್ವಿತ್ರಾಸ್ಯಂತೇ ಮುಹುರ್ಮುಹುಃ ॥ ೧೭ ॥**

---

೧೩. ಕೆಲವೆಡೆಯಲ್ಲಿ ಕೆಟ್ಟದಾದ ನೊಣಗಳಿದ್ದವು. ಕೆಲವೆಡೆಯಲ್ಲಿ ವಿಷದಿಂದ ಕೂಡಿದ ಸರ್ಪಗಳಿದ್ದುವು. ಕೆಲವೆಡೆಯಲ್ಲಿ ಮದಿಸಿದ ಆನೆಗಳಿದ್ದುವು

೧೪. ಕೆಲವುಕಡೆ ಮೊನೆಯಾದ ಕೊಂಬುಗಳುಳ್ಳ ಗೂಳಿಗಳೂ ದಾರಿಯಲ್ಲಿ ಕಾಲು ಕೆರೆಯುತ್ತಲಿದ್ದುವು ಮತ್ತೆ ಕೆಲವೆಡೆಯಲ್ಲಿ ದೊಡ್ಡ ಕೊಂಬುಳ್ಳ ಕೋಣಗಳೂ ಒಂಟೆಗಳೂ ಇದ್ದುವು. ಇವು ಮದಿಸಿ ತಿನ್ನುವುದಕ್ಕೆ ಬರುತ್ತಿದ್ದುವು

೧೫. ಕೆಲವೆಡೆಯಲ್ಲಿ ಕ್ರೂರವಾದ ಡಾಕಿನಿಗಳೂ ಭಯಂಕರವಾದ ರಾಕ್ಷಸರೂ ಘೋರವಾದ ರೋಗಗಳೂ ಇದ್ದು ಪೀಡಿಸುತ್ತಿದ್ದುವು. ಇಂತಹ ದಾರಿಯಲ್ಲಿ ಹೋಗಬೇಕು.

೧೬. ಕೆಲವೆಡೆಯಲ್ಲಿ ಧೂಳಿನಿಂದ ಕೂಡಿದ ಬಿರುಗಾಳಿಯು ತೊಂದರೆ ಕೊಡುತ್ತಿದ್ದಿತು. ಕೆಲವೆಡೆಯಲ್ಲಿ ತಲೆಯ ಮೇಲೆ ಕಲ್ಲಿನ ಮಳೆಯೇ ಬೀಳುತ್ತಿದ್ದಿತು. ಈ ರೀತಿಯಾದ ತೊಂದರೆಯಿಂದ ಹೋಗುತ್ತಿದ್ದರು.

೧೭. ಕೆಲವೆಡೆಯಲ್ಲಿ ಬಹುವಾದ ಧೂಳು ಬೀಳುತ್ತಿರುವುದರಿಂದ ಕಣ್ಣು ಕಾಣದೆ ಅಳುತ್ತಿದ್ದರು. ಕೆಲವೆಡೆಯಲ್ಲಿ ಮೇಘದಂತೆ ಧ್ವನಿಯುಳ್ಳ ಧ್ವನಿಯಿಂದ ಹೆದರುತ್ತಿದ್ದರು.

ನಿಶಿತಾಯುಧವರ್ಷೇಣ ಚ್ಛಿದ್ಯಮಾನಾಶ್ಚ ಸರ್ವಶಃ ।
ಮಹಾಕ್ಷಾರಾಂಬುಧಾರಾಭಿಃ ಸಿಚ್ಯಮಾನಾ ವ್ರಜಂತಿ ಚ ॥ ೧೮ ॥

ಮಹತಾ ಶೀತಮರುತಾ ರೂಕ್ಷೇಣ ಪರುಷೇಣ ಚ ।
ಸಮಂತಾತ್ತಾಡ್ಯಮಾನಾಶ್ಚ ಶುಷ್ಯಂತಿ ಚ ರುದಂತಿ ಚ ॥ ೧೯ ॥

ಇತ್ಥಂ ರೌದ್ರೇಣ ಮಾರ್ಗೇಣ ಪಾಥೇಯರಹಿತೇನ ಚ ।
ನಿರಾಲಂಬೇಣ ದುರ್ಗೇಣ ನಿರ್ಜನೇನ ಸಮಂತತಃ ॥ ೨೦ ॥

ಅವಿಮಿಶ್ರೇಣ ಮಹತಾ ನಿರ್ಗತಾಪಾಶ್ರಯೇಣ ಚ ।
ತಮೋರೂಪೇಣ ಕಷ್ಟೇನ ಸರ್ವದುಃಖಾಶ್ರಯೇಣ ಚ ॥ ೨೧ ॥

ನೀಯಂತೇ ದೇಹಿನಸ್ಸರ್ವೇ ವಿಮೂಢಾಃ ಪಾಪಕಾರಿಣಃ ।
ಯಮದೂತೈರ್ಮಹಾಘೋರೈಸ್ತದಾಜ್ಞಾಕಾರಿಭಿರ್ಬಲಾತ್ ॥ ೨೨ ॥

---

೧೮. ಕೆಲವೆಡೆಯಲ್ಲಿ ಹರಿತವಾದ ಆಯುಧಗಳಿಂದ ಕಡಿಯುತ್ತಿರುತ್ತಾರೆ. ಕೆಲವೆಡೆಯಲ್ಲಿ ಕಾರವಾದ ನೀರಿನ ಮಳೆಯನ್ನು ಸುರಿಸುತ್ತಿರುತ್ತಾರೆ. ಇಂತಹ ದಾರಿಯಲ್ಲಿ ಹೋಗಬೇಕು.

೧೯. ಕೆಲವೆಡೆಯಲ್ಲಿ ಬಹುವಾದ ಶೀತದ ಗಾಳಿಯು ಬೀಸುತ್ತಿರುವುದು. ಕೆಲವೆಡೆಯಲ್ಲಿ ಬಿರುಗಾಳಿಯು ಬೀಸುತ್ತಿರುವುದು ಇವೆಲ್ಲವೂ ಈ ರೀತಿಯಾಗಿ ತೊಂದರೆಪಡಿಸುವುದರಿಂದ ಬಾಡಿ ಬೆಂಡಾಗಿ ಅಳುತ್ತಿರುತ್ತಾರೆ.

೨೦. ಈ ರೀತಿಯಾಗಿ ಪಾಪಿಗಳು ಘೋರವಾದ ಮಾರ್ಗದಿಂದ ಆಹಾರ ವಿಲ್ಲದೆಯೂ ಆಶ್ರಯವಿಲ್ಲದೆಯೂ ಹಳ್ಳತಿಟ್ಟಾಗಿಯೂ ಜನವಿಲ್ಲದೆಯೂ ಇರುವ ಮಾರ್ಗದಿಂದ ಹೋಗುತ್ತಾರೆ.

೨೧-೨೨. ಇನ್ನೊಬ್ಬರ ಸಂಪರ್ಕವಿಲ್ಲದ ದೊಡ್ಡದಾದ ಆಶ್ರಯವಿಲ್ಲದೆ ಇರುವ ಕತ್ತಲಾಗಿರುವ ಕಷ್ಟವಾದ ಎಲ್ಲಾ ಬಗೆಯ ಕಷ್ಟಗಳನ್ನೂ ಕೊಡುವ ಇಂತಹ ಮಾರ್ಗದಲ್ಲಿ ಘೋರಾಕಾರವಾದ ಯಮದೂತರು ಯಮನ ಅಪ್ಪಣೆ ಪಡೆದು ಈ ಪಾಪಿಗಳನ್ನು ಕರೆದುಕೊಂಡು ಹೋಗುತ್ತಾರೆ.

ಏಕಾಕಿನಃ ಪರಾಧೀನಾ ಮಿತ್ರಬಂಧುವಿವರ್ಜಿತಾಃ ।
ಶೋಚನ್ತಃ ಸ್ವಾನಿ ಕರ್ಮಾಣಿ ರುದಂತಶ್ಚ ಮುಹುರ್ಮುಹುಃ ॥ ೨೩ ॥

ಪ್ರೇತಭೂತಾ ವಿವಸ್ತ್ರಾಶ್ಚ ಶುಷ್ಕಕಂಠೋಷ್ಠತಾಲುಕಾಃ ।
ಕೃಶಾಂಗಾ ಭಯಭೀತಾಶ್ಚ ದಹ್ಯಮಾನಾಃ ಕ್ಷುಧಾಗ್ನಿನಾ ॥ ೨೪ ॥

ಬದ್ಧಾಃಶೃಂಖಲಯಾ ಕೇಚಿದುತ್ತಾನಾಃ ಪಾದಯೋರ್ನರಾಃ
ಆಕೃಷ್ಯಂತೇ ಘೃಷ್ಯಮಾಣಾ ಯಮದೂತೈರ್ಬಲೋತ್ಕಟೈಃ ॥ ೨೫ ॥

ಉರಸ್ಯಥೋಮುಖಾಶ್ಚಾನ್ಯೇ ಕೃಷ್ಯಮಾಣಾಸ್ಸುದುಃಖಿತಾಃ ।
ಕೇಶಪಾಶೇನ ಬದ್ಧ್ವೈವ ಹ್ಯಾಕೃಷ್ಯಂತೇ ಸುದುರ್ಜನಾಃ ॥ ೨೬ ॥

ಲಲಾಟೇ ಚಾಂಕುಶೇನಾನ್ಯೇ ಶಾತಾಃ ಕ್ಲಿಶ್ಯಂತಿ ದೇಹಿನಃ ।
ಉತ್ತಾನಕಂಟಕಪಥಾ ಕ್ವಚಿದಂಗಾರವರ್ತ್ಮನಾ ॥ ೨೭ ॥

---

೨೩. ಅವರು ಹೋಗುವಾಗ ಒಬ್ಬಂಟಿಗರಾಗಿಯೂ ಪರಾಧೀನರಾಗಿಯೂ ಮಿತ್ರಬಂಧುಗಳಿಂದ ಬಿಡಲ್ಪಟ್ಟವರಾಗಿಯೂ ತಮ್ಮ ತಮ್ಮ ಪಾಪಕರ್ಮಗಳನ್ನು ಕುರಿತು ಯೋಚಿಸುತ್ತಲೂ ಬಾರಿಬಾರಿಗೂ ಅಳುತ್ತಲೂ ಆ ಮಾರ್ಗದಲ್ಲಿ ಹೋಗುತ್ತಾರೆ.

೨೪. ಪ್ರೇತರಾಗಿ ಬಟ್ಟೆಯಿಲ್ಲದೆ ತುಟಿ ಬಾಯಿ ಗಂಟಲುಗಳನ್ನು ಒಣಗಿಸಿಕೊಂಡು ಕಂಗೆಟ್ಟು ಭಯಪಟ್ಟು ಹಸಿವು ಬಾಯಾರಿಕೆಗಳಿಂದ ತೊಂದರೆಪಡುತ್ತಾ ಹೋಗುತ್ತಿರುತ್ತಾರೆ.

೨೫. ಕೆಲವರು ಪಾಪಿಗಳನ್ನು ಯಮದೂತರು ಸರಪಣಿಯಿಂದ ಕಾಲುಗಳನ್ನು ಕಟ್ಟಿ ಅಂತಹ ಮಾರ್ಗದಲ್ಲಿ ಎಳೆದುಕೊಂಡು ಹೋಗುತ್ತಾರೆ.

೨೬–೨೭. ಕೆಲವರನ್ನು ಸರಪಣಿಗಳಲ್ಲಿ ಕಟ್ಟಿ ಎದೆಯು ನೆಲದ ಮೇಲೆ ತರೆಯುತ್ತಿರುವಂತೆಯೂ ಮತ್ತೆ ಕೆಲವರನ್ನು ಅವರ ಜುಟ್ಟನ್ನು ಹಿಡಿದುಕೊಂಡೂ ಮತ್ತೆ ಕೆಲವರನ್ನು ಹಣೆಗೆ ಅಂಕುಶವನ್ನು ಚುಚ್ಚುತ್ತಲೂ ಮತ್ತೆ ಕೆಲವರನ್ನು ಮುಳ್ಳುಗಳು ನೆಟ್ಟಗಿರುವ ದಾರಿಯಲ್ಲಿ ಎಳೆಯುತ್ತಲೂ ಇನ್ನೂ ಕೆಲವರನ್ನು ಬೆಂಕಿಯ ಕೆಂಡಗಳನ್ನು ಹರಡಿರುವ ದಾರಿಯಲ್ಲಿಯೂ ಎಳೆದುಕೊಂಡು ಹೋಗುತ್ತಾರೆ.

ಪಶ್ಚಾದ್ಬಾಹುನಿಬದ್ಧಾಶ್ಚ ಜಠರೇಣ ಪ್ರಪೀಡಿತಾಃ |
ಆಬದ್ಧಾಃ ಶೃಂಖಲಾಭಿಶ್ಚ ಹಸ್ತಯೋಃಶ್ಚ ಸುಕೀಲಿತಾಃ || ೨೮ ||

ಗ್ರೀವಾಪಾಶೈಃ ಕೃಷ್ಯಮಾಣಾಃ ಪ್ರಯಾಂತ್ಯನ್ಯೇ ಸುದುಃಖಿತಾಃ |
ಜಿಹ್ವಾಯಾಂ ರಜ್ಜುಮಾಬಧ್ಯ ಕೃಷ್ಯಂತೇ ದುರ್ಜನಾ ನರಾಃ || ೨೯ ||

ಕಟ್ಯಾಮುಪ್ಯರ್ಧಚಂದ್ರೇಣ ಕ್ಷಿಪ್ಯಮಾಣಾ ಇತಸ್ತತಃ |
ಶಿಶ್ನಂ ಸವೃಷಣಂ ಬದ್ಧ್ವಾ ನೀಯಂತ್ಯನ್ಯೇ ಹಿ ರಜ್ಜುನಾ || ೩೦ ||

ನಾಸಾಂ ನಿಬಧ್ಯ ರಜ್ವಾ ಚ ಕೃಷ್ಯಂತೇ ಚ ತಥಾ ಪಥಿ |
ಭಿನ್ನಾಃ ಕಪೋಲಯೋ ರಜ್ವಾ ಕೃಷ್ಯಂತೇನ್ಯೇ ತಥೋಷ್ಠಯೋಃ || ೩೧ ||

ವಿಭಿನ್ನಾಶ್ಚೋದರೇ ಚಾನ್ಯೇ ತಪ್ತಶೃಂಖಲಯಾ ನರಾಃ |
ಕೃಷ್ಯಂತೇ ಕರ್ಣಯೋಶ್ಚಾನ್ಯೇ ಭಿನ್ನಾಶ್ಚ ಚಿಬುಕೇಪರೇ || ೩೨ ||

---

೨೮. ಕೆಲವರ ಕೈಗಳನ್ನು ಹಿಂದುಗಡೆಗೆ ಕಟ್ಟಿಯೂ ಹೊಟ್ಟೆಯು ನೆಲದಲ್ಲಿ ತಿಕ್ಕುವಂತೆಯೂ ಮತ್ತೆ ಕೆಲವರಿಗೆ ಕೈಕೋಳ ಕಾಲುಕೋಳಗಳನ್ನು ಹಾಕಿಯೂ ಎಳೆದುಕೊಂಡು ಹೋಗುತ್ತಾರೆ.

೨೯. ಕೆಲವರಿಗೆ ಕತ್ತಿಗೆ ಹಗ್ಗವನ್ನು ಹಾಕಿಯೂ ಮತ್ತೆ ಕೆಲವರಿಗೆ ಬಾಯಿಗೆ ಕಡಿವಾಣವನ್ನು ಹಾಕಿಯೂ ಯಮದೂತರು ಇಂತಹ ದಾರಿಯಲ್ಲಿ ಎಳೆದುಕೊಂಡು ಹೋಗುತ್ತಾರೆ.

೩೦. ಕೆಲವರನ್ನು ಅರ್ಧಚಂದ್ರದ ಆಕಾರಕ್ಕಿರುವ ಆಯುಧದಿಂದ ನಡುವಿನ ಹತ್ತಿರಕ್ಕೆ ಹಾಕಿ ನೂಕುತ್ತಲೂ ಕೆಲವು ಗಂಡಸರಿಗೆ ಮೂತ್ರದ ಲಿಂಗಕ್ಕೆ ಬೀಜವನ್ನು ಸೇರಿಸಿ ಹಗ್ಗದಿಂದ ಕಟ್ಟಿ ಎಳೆದುಕೊಂಡೂ ಆ ಮಾರ್ಗದಲ್ಲಿ ಹೋಗುತ್ತಿರುವರು.

೩೧. ಕೆಲವರಿಗೆ ಮೂಗಿಗೆ ಹಗ್ಗವನ್ನು ಹಾಕಿಕೊಂಡು ಎಳೆಯುತ್ತಲೂ ಕೆಲವರಿಗೆ ಕಪೋಲಗಳಲ್ಲಿ ತೂತು ಮಾಡಿ ಹಗ್ಗವನ್ನು ಹಾಕಿಯೂ ಮತ್ತೆ ಕೆಲವರಿಗೆ ತುಟಿಗಳಿಗೆ ಹಗ್ಗವನ್ನು ಹಾಕಿಯೂ ಎಳೆದುಕೊಂಡು ಹೋಗುತ್ತಾರೆ.

೩೨-೩೩. ಕೆಲವರಿಗೆ ಹೊಟ್ಟೆಗೆ ಚುಚ್ಚಿ ಹಗ್ಗವನ್ನು ಕಟ್ಟಿಯೂ ಕೆಲವರಿಗೆ ಕಿವಿಗೆ ಚುಚ್ಚಿ ಹಗ್ಗವನ್ನು ಹಾಕಿಯೂ ಕೆಲವರಿಗೆ ತುಟಿಗಳಿಗೆ ಹಗ್ಗವನ್ನು

ಭಿನ್ನಪಾದಾಗ್ರಹಸ್ತಾಶ್ಚ ಭಿನ್ನಕಂಠೋಷ್ಠತಾಲುಕಾಃ ।
ಸಂಭಿನ್ನವೃಷಣಶ್ಚಾನ್ಯೇ ಭಿನ್ನಸರ್ವಾಂಗಸಂಧಯಃ ॥ ೩೩ ॥

ಪ್ರಭಿದ್ಯಮಾನಾಃ ಕುನ್ತೈಶ್ಚ ಭಿದ್ಯಮಾನಾಶ್ಚ ಸಾಯಕೈಃ ।
ಇತಸ್ತತಃ ಪ್ರಧಾವನ್ತೇ ಕ್ರಂದಮಾನಾ ನಿರಾಶ್ರಯಾಃ ॥ ೩೪ ॥

ಮುದ್ಗರೈರ್ಲೋಹದಂಡೈಶ್ಚ ಹನ್ಯಮಾನಾ ಮುಹುರ್ಮುಹುಃ ।
ಕ್ರಕಚೈರ್ವಿವಿಧೈರ್ಘೋರೈರ್ಜ್ವಲಿತಾಗ್ನಿ ಸಮಪ್ರಭೈಃ ॥ ೩೫ ॥

ಛಿಂದಿಪಾಲೈಶ್ಚ ಭಿದ್ಯಂತೇ ಸ್ರವಂತಃ ಪೂಯಶೋಣಿತಂ ।
ಸಕ್ಷತಾಃ ಕ್ರಿಮಿದಷ್ಟಾಶ್ಚ ನೀಯಂತೇ ವಿವಶಾ ನರಾಃ ॥ ೩೬ ॥

ಯಾಚಮಾನಾಸ್ತು ಸಲಿಲಮನ್ನಂ ಚಾಪಿ ಬುಭುಕ್ಷಿತಾಃ ।
ಛಾಯಾಂ ಪ್ರಾರ್ಥಯಮಾನಾಶ್ಚ ಶೀತಾರ್ತಾಶ್ಚಾನಲಂ ಪುನಃ ॥ ೩೭ ॥

---

ಹಾಕಿಯೂ ಕೆಲವರಿಗೆ ಕೈಕಾಲುಗಳಿಗೆ ಚುಚ್ಚಿ ಹಗ್ಗವನ್ನು ಕಟ್ಟಿಯೂ ಕೆಲವರಿಗೆ ಕತ್ತಿಗೆ ಚುಚ್ಚಿ ಅದಕ್ಕೆ ಹಗ್ಗವನ್ನು ಹಾಕಿಯೂ ಕೆಲವರ ಮೂತ್ರಕೋಶವನ್ನು ಕತ್ತರಿಸಿಯೂ ಕೆಲವರನ್ನು ಕೀಲು ಕೀಲುಗಳಲ್ಲಿ ಕತ್ತರಿಸಿಯೂ ಆ ಮಾರ್ಗದಲ್ಲಿ ಎಳೆದುಕೊಂಡು ಹೋಗುತ್ತಾರೆ.

೩೪—೩೬. ಕುಂತಾಯುಧದಿಂದ ಚುಚ್ಚುತ್ತಲೂ ಬಾಣಗಳಿಂದ ಚುಚ್ಚುತ್ತಲೂ ಕರೆದುಕೊಂಡು ಹೋಗುವಾಗ ಆ ಪಾಪಿಗಳು ರಕ್ಷಕರಿಲ್ಲದವರಾಗಿ ಅತ್ತಿತ್ತ ಓಡಾಡುತ್ತಾರೆ. ಮತ್ತು ಮತ್ತೆ ಕೆಲವರನ್ನು ಮುದ್ಗರದಿಂದಲೂ ಕಬ್ಬಿಣದ ಸಲಾಕೆಗಳಿಂದಲೂ ಹೊಡೆಯುತ್ತಿರುತ್ತಾರೆ. ಮತ್ತೆ ಕೆಲವರನ್ನು ಗರಗಸದಿಂದ ಕೊಯ್ಯುತ್ತಿರುತ್ತಾರೆ. ಮತ್ತೆ ಕೆಲವರನ್ನು ಕಾದಿರುವ ಸಲಾಕೆಗಳಿಂದ ಚುಚ್ಚುತ್ತಿರುತ್ತಾರೆ. ಹೀಗೆ ಮಾಡುವುದರಿಂದ ಆ ಪಾಪಿಗಳು ರಕ್ತವನ್ನು ಸುರಿಸುತ್ತಲೂ ಕೀವುಗಳನ್ನು ಹೊಂದಿಯೂ ಅವುಗಳಲ್ಲಿ ಹುಳುವನ್ನು ಬೀಳಿಸಿಕೊಂಡೂ ಹೋಗುತ್ತಿರುತ್ತಾರೆ.

೩೭-೩೮. ಅವರು ಬಾರಿ ಬಾರಿಗೂ ನೀರನ್ನೂ ಅನ್ನವನ್ನೂ ಕೇಳುತ್ತಿರುತ್ತಾರೆ. ಹಸಿವಿನಿಂದಲೂ ಬಾಯಾರಿಕೆಯಿಂದಲೂ ಬಹು ತೊಂದರೆ ಪಡುತ್ತಿರುತ್ತಾರೆ. ಕೆಲವು ಜಾಗದಲ್ಲಿ ಬಿಸಿಲನ್ನು ತಡೆಯಲಾರದೆ ನೆರಳನ್ನು ಕೇಳುತ್ತಲೂ ಮತ್ತೆ ಕೆಲವು ಜಾಗದಲ್ಲಿ ಶೀತವನ್ನು ತಡೆಯಲಾರದೆ ಬೆಂಕಿಯನ್ನು ಕೇಳುತ್ತಲೂ

ದಾನಹೀನಾಃ ಪ್ರಯಾಂತ್ಯೇವಂ ಪಾಥೇಯರಹಿತೇ ಪಥಿ ।
ಸತ್ವಾ ಗೃಹೀತಪಾಥೇಯಾಃ ಸುಖಂ ಯಾನ್ತಿ ಯಮಾಲಯಂ　　|| ೩೮ ||

ಏವಂ ಪಥಾತಿ ಕಷ್ಟೇನ ಪ್ರಾಪ್ತಾಃ ಪ್ರೇತಪುರಂ ಯದಾ ।
ಆಜ್ಞಾಪಿತಾಸ್ತದಾ ದೂತೈರ್ನಿವೇದ್ಯಂತೇ ಯಮಾಗ್ರತಃ　　|| ೩೯ ||

ತತಸ್ತೇ ಪಾಪಕರ್ಮಾಣಸ್ತಂ ಪಶ್ಯಂತಿ ಭಯಾನಕಂ ।
ಪಾಪಾವಷ್ಟಬ್ಧನಯನಾ ವಿಪರೀತಾತ್ಮಬುದ್ಧಯಃ　　|| ೪೦ ||

ದಂಷ್ಟ್ರಾಕರಾಲವದನಂ ಭ್ರುಕುಟೀಕುಟಿಲೇಕ್ಷಣಂ ।
ಊರ್ಧ್ವಕೇಶಂ ಮಹಾಶ್ಮಶ್ರುಂ ಪ್ರಸ್ಫುರತ್ಸಾಧರೋತ್ತರಂ　　|| ೪೧ ||

ಅಷ್ಟಾದಶಭುಜಂ ಕ್ರುದ್ಧಂ ನೀಲಾಂಜನಚಯೋಪಮಂ ।
ಸರ್ವಾಯುಧದ್ಯೋತಕರಂ ಬ್ರಹ್ಮದಂಡೇನ ತರ್ಜಕಂ　　|| ೪೨ ||

---

ತಿನ್ನಲು ತಿಂಡಿಯಿಲ್ಲದೆ ಆ ದಾರಿಯಲ್ಲಿ ಈ ಪಾಪಿಗಳು ಹೋಗುತ್ತಾರೆ. ಸತ್ಯವಂತರೂ ದಾನ ಮಾಡಿದವರೂ ಸರಿಯಾದ ದಾರಿಯಲ್ಲಿ ಸುಖವಾಗಿ ಹೋಗುತ್ತಾರೆ.

೩೯. ಆ ಪಾಪಿಗಳು ಈ ರೀತಿಯಾಗಿ ಕಷ್ಟಪಟ್ಟುಕೊಂಡು ಪ್ರೇತರಾಜನಾದ ಯಮನ ಪಟ್ಟಣಕ್ಕೆ ಹೋಗುತ್ತಾರೆ. ಆಗ ದೂತರು ಯಮನ ಆಜ್ಞೆಯನ್ನು ಪಡೆದು ಆತನ ಮುಂದೆ ಇವರನ್ನು ಕರೆದುಕೊಂಡು ಹೋಗುತ್ತಾರೆ.

೪೦-೪೪. ಅಲ್ಲಿ ಕೋರೆದಾಡೆಯನ್ನು ಹೊಂದಿದ ಮುಖವನ್ನು ಗಂಟಿಕ್ಕಿಕೊಂಡಿರುವ ತಲೆಗೂದಲು ಮೇಲುಮುಖವಾಗಿರುವ ದೊಡ್ಡ ಗಡ್ಡ ಮೀಸೆಗಳುಳ್ಳ ತುಟಿಗಳು ಕೋಪದಿಂದ ಅಲ್ಲಾಡುತ್ತಿರುವ ಹದಿನೆಂಟು ತೋಳುಗಳುಳ್ಳ, ಕೋಪದಿಂದ ಕೂಡಿರುವ, ಅಂಜನ ಪರ್ವತದಂತೆ ಕಪ್ಪಗಿರುವ ಯಮನನ್ನು ಪಾಪದಿಂದ ಕೂಡಿರುವ ಈ ಪಾಪಿಗಳು ನೋಡುತ್ತಾರೆ. ಎಲ್ಲಾ ಆಯುಧಗಳನ್ನೂ ಹಿಡಿದಿರುವ ಬ್ರಹ್ಮದಂಡದಿಂದ ಹೆದರಿಸುತ್ತಿರುವ ದೊಡ್ಡ ಕೋಣನನ್ನು

ಮಹಾಮಹಿಷಮಾರೂಢಂ ದೀಪ್ತಾಗ್ನಿ ಸಮಲೋಚನಂ |
ರಕ್ತಮಾಲ್ಯಾಂಬರಧರಂ ಮಹಾಮೇರುಮಿವೋತ್ಥಿತಂ ॥ ೪೩ ॥

ಪ್ರಲಯಾಂಬುದನಿರ್ಘೋಷಂ ಪಿಬಂತಮಿವ ಸಾಗರಂ |
ಗ್ರಸಂತಮಿವ ತ್ರೈಲೋಕ್ಯಮುದ್ಗಿರನ್ತಮಿವಾನಲಂ ॥ ೪೪ ॥

ಮೃತ್ಯುಂ ಚೈವ ಸಮೀಪಸ್ಥಂ ಕಾಲಾನಲಸಮಪ್ರಭಂ |
ಕಾಲಂ ಚಾನಲ ಸಂಕಾಶಂ ಕೃತಾಂತಂ ಚ ಭಯಾನಕಂ ॥ ೪೫ ॥

ಮರೀಚೋಗ್ರಾ ಮಹಾಮಾರೀ ಕಾಲರಾತ್ರಿಶ್ಚ ದಾರುಣಾ |
ವಿವಿಧಾ ವ್ಯಾಧಯಃ ಕಷ್ಟಾ ನಾನಾರೂಪಭಯಾನಕಾಃ ॥ ೪೬ ॥

ಶಕ್ತಿಶೂಲಾಂಕುಶಧರಾಃ ಪಾಶಚಕ್ರಾಸಿಧಾರಿಣಃ |
ವಜ್ರದಂಡಧರಾ ರೌದ್ರಾಃ ಕ್ರೂರ ಬಾಣಧನುರ್ಧರಾಃ ॥ ೪೭ ॥

ಅಸಂಖ್ಯಾತಾ ಮಹಾವೀರಾ ಕ್ರೂರಾಶ್ಚಾಂಜನಸನ್ನಿಭಾಃ |
ಸರ್ವಾಯುಧದ್ಯೋತಕರಾ ಯಮದೂತಾ ಭಯಾನಕಾಃ ॥ ೪೮ ॥

---

ಹತ್ತಿಕೊಂಡಿರುವ ಬೆಂಕಿಯಂತೆ ಕಣ್ಣುಗಳುಳ್ಳ ಕೆಂಪು ಹೂವಿನ ಮಾಲೆಯನ್ನು ಹಾಕಿಕೊಂಡಿರುವ ಮೇರು ಪರ್ವತದಂತೆ ಇರುವ ಪ್ರಲಯಕಾಲದ ಮೇಘದಂತೆ ಘರ್ಜಿಸುತ್ತಿರುವ ಸಮುದ್ರವನ್ನೇ ಕುಡಿಯುವಂತಿರುವ ಮೂರು ಲೋಕವನ್ನಾದರೂ ನುಂಗುವನೋ ಎಂಬಂತಿರುವ ಬೆಂಕಿಯನ್ನೇ ಉಗುಳುತ್ತಿರುವ ಯಮನನ್ನು ನೋಡುತ್ತಾರೆ.

೪೫. ಕಾಲಾಗ್ನಿಗೆ ಸಮನಾಗಿರುವ ಮೃತ್ಯುವನ್ನೂ ಸಮೀಪದಲ್ಲಿ ಕೂರಿಸಿಕೊಂಡಿರುವನು. ಬೆಂಕಿಯಂತಿರುವ ಕಾಲನನ್ನೂ ಭಯವನ್ನುಂಟುಮಾಡುವ ಕೃತಾಂತನನ್ನೂ ಕೂಡ ಹತ್ತಿರದಲ್ಲಿ ಕೂರಿಸಿಕೊಂಡಿರುವನು.

೪೬–೪೮. ಮರೀಚ ಉಗ್ರ ಮಹಾಮಾರೀ ಕಾಳರಾತ್ರಿ ಬಗೆ ಬಗೆಯ ರೂಪಗಳನ್ನು ಹೊಂದಿರುವ ಅನೇಕ ರೋಗಗಳು ಶಕ್ತಿ ಶೂಲ ಅಂಕುಶ ಪಾಶ ಚಕ್ರ ಕತ್ತಿ ವಜ್ರಾಯುಧಗಳನ್ನು ಧರಿಸಿರುವ ಆಳುಗಳೂ ಕ್ರೂರವಾದ ಧನುಸ್ಸನ್ನು ಧರಿಸಿರುವವರೂ ಇಂತಹ ವೀರರು ಅಸಂಖ್ಯಾತರಾಗಿ ತಮ್ಮ ಎಲ್ಲಾ ಆಯುಧಗಳನ್ನೂ ಧರಿಸಿಕೊಂಡು ಅಲ್ಲಿ ನಿಂತಿರುವರು. ಈ ಪರಿವಾರಗಳಿಂದ

ಅನೇನ ಪರಿವಾರೇಣ ಸಂಸ್ಕೃತಂ ಘೋರದರ್ಶನಂ ।
ಯಮಂ ಪಶ್ಯಂತಿ ಪಾಪಿಷ್ಠಾಶ್ಚಿತ್ರಗುಪ್ತಂ ಚ ಭೀಷಣಂ　　　॥ ೪೯ ॥

ಭರ್ತ್ಸಯತಿನಿಚಾತ್ಯಂತಂ ಯಮಸ್ತಾನ್ ಪಾಪಕಾರಿಣಃ ।
ತ್ರಗುಪ್ತಶ್ಚ ಭಗವಾನ್ ಧರ್ಮವಾಕ್ಯೈಃ ಪ್ರಬೋಧಯನ್　　　॥ ೫೦ ॥

ಭೋ ಭೋ ದುಷ್ಕೃತಕರ್ಮಾಣಃ ಪರದ್ರವ್ಯಾಪಹಾರಕಾಃ ।
ಗರ್ವಿತಾ ರೂಪಗರ್ವೇಣ ಪರದಾರಾಭಿಮರ್ಶಕಾಃ　　　॥ ೫೧ ॥

ಯತ್ಸ್ವಯಂ ಕ್ರಿಯತೇ ಕರ್ಮ ತದ್ಭುಂಕ್ತೇ ಚ ಸ್ವಯಂ ನರಃ ।
ತದಾ ಕಿಮಾತ್ಮಭೋಗಾರ್ಥಂ ಭವದ್ಭಿರ್ದುಷ್ಕೃತಂ ಕೃತಂ　　　॥ ೫೨ ॥

ಇದಾನೀಂ ಪ್ರತಪ್ಯಧ್ವಂ ದಹ್ಯಮಾನಾಃ ಸ್ವಕರ್ಮಭಿಃ ।
ಭುಂಜಧ್ವಂ ತಾನಿ ಕರ್ಮಾಣಿ ನಾತ್ರದೋಷೋಽಸ್ತಿ ಕಸ್ಯಚಿತ್　　　॥ ೫೩ ॥

---

ಕೂಡಿಕೊಂಡಿರುವ ನೋಡಲು ಭಯಂಕರನಾದ ಆ ಯಮನನ್ನೂ ಅವನ ಜತೆಯಲ್ಲಿದ್ದ ಚಿತ್ರಗುಪ್ತನನ್ನೂ ನೋಡುತ್ತಾರೆ.

೫೦. ಆಗ ಯಮನು ಆ ಪಾಪಿಗಳನ್ನು ಬಹುವಾಗಿ ಗದರಿಸುತ್ತಿರುತ್ತಾನೆ. ಚಿತ್ರಗುಪ್ತನು ಧರ್ಮವಾಕ್ಯಗಳಿಂದ ಅವರಿಗೆ ಎಚ್ಚರಿಕೆ ಕೊಡುತ್ತಾ ಅವರ ಪಾಪಗಳನ್ನು ಹೇಳುತ್ತಾನೆ.

೫೧–೫೩. ಎಲೈ ಪರರ ಹಣವನ್ನು ಕದಿಯುವ ಪಾಪಿಗಳೆ! ನೀವು ರೂಪದಿಂದ ಗರ್ವಿತರಾಗಿ ಪರರ ಹೆಂಡಿರನ್ನು ಹೊಂದಿ ರಮಿಸಿದಿರಿ. ಯಾವನು ತಾನಾಗಿ ಯಾವ ಕೆಲಸವನ್ನು ಮಾಡುತ್ತಾನೆಯೋ ಅವನು ಅದರ ಫಲವನ್ನು ಸ್ವತಃ ಅನುಭವಿಸಬೇಕು. ಆ ರೀತಿಯಲ್ಲಿದ್ದರೂ ಈ ರೀತಿಯಾದ ಕೆಟ್ಟದ್ದನ್ನು ಅನುಭವಿಸಲು ಪಾಪಗಳನ್ನೇಕೆ ಮಾಡಿದಿರಿ ? ಈಗ ಏಕೆ ನಾನು ಇಂತಹ ಕೆಲಸ ವನ್ನು ಮಾಡಿದೆವಲ್ಲಾ ಎಂದು ಕುಣಿಯುತ್ತಿದ್ದೀರಿ ? ನೀವು ಮಾಡಿದ ಅಂತಹ ಪಾಪಗಳನ್ನು ಅನುಭವಿಸಿ. ಇದರಲ್ಲಿ ಮತ್ತೊಬ್ಬನ ದೋಷವು ಸ್ವಲ್ಪವೂ ಇರುವುದಿಲ್ಲ.

ಏತೇ ಹಿ ಪೃಥಿವೀಪಾಲಾಸ್ಸಂಪ್ರಾಪ್ತಾ ಮತ್ಸಮೀಪತಃ |
ಸ್ವಕೀಯೈಃ ಕರ್ಮಭಿರ್ಘೋರೈರ್ದುಷ್ಪ್ರಜ್ಞಾಬಲಗರ್ವಿತೈಃ ॥ ೫೪ ॥

ಭೋ ಭೋ ನೃಪಾ ದುರಾಚಾರಾ ಪ್ರಜಾವಿಧ್ವಂಸಕಾರಿಣಃ |
ಅಲ್ಪಕಾಲಸ್ಯ ರಾಜ್ಯಸ್ಯ ಕೃತೇ ಕಿಂ ದುದುಷ್ಕೃತಂ ಕೃತಂ ॥ ೫೫ ॥

ರಾಜ್ಯಲೋಭೇನ ಮೋಹೇನ ಬಲಾದನ್ಯಾಯತಃ ಪ್ರಜಾಃ |
ಯದ್ದಂಡಿತಾಃ ಫಲಂ ತಸ್ಯ ಭುಂಜಧ್ವಮಧುನಾ ನೃಪಾಃ ॥ ೫೬ ॥

ಕ್ವ ತದ್ರಾಜ್ಯಂ ಕಳತ್ರಂ ಚ ಯದರ್ಥಮಶುಭಂ ಕೃತಂ |
ತತಸ್ಸರ್ವಂ ಪರಿತ್ಯಜ್ಯ ಯೂಯಮೇಕಾಕಿನಃ ಸ್ಥಿತಾಃ ॥ ೫೭ ॥

ತದ್ಬಲಂ ನಾತ್ರ ಪಶ್ಯಾಮೋ ಯೇನ ವಿಧ್ವಂಸಿತಾಃ ಪ್ರಜಾಃ |
ಯಮದೂತೈರ್ಭರ್ಜ್ಯಮಾನಾ ಅಧುನಾ ಕೀದೃಶಂ ಭವೇತ್ ॥ ೫೮ ॥

---

೫೪-೫೫. ನನ್ನ ಹತ್ತಿರಕ್ಕೆ ಬಂದಿರುವ ಎಲೈ ಈ ದೊರೆಗಳಿರ! ನೀವು ದುಷ್ಟಬುದ್ಧಿಯಿಂದ ಗರ್ವಿತರಾಗಿ ಮಾಡಿದ ಕೆಲಸದಿಂದ ಏಕೆ ತಪಿಸುತ್ತಿದ್ದೀರಿ? ಪ್ರಜಾನಾಶಕರಾದ ದುಷ್ಟರಾದ ಎಲೈ ರಾಜರೆ! ಅಲ್ಪಕಾಲವಾಳಬೇಕಾದ ರಾಜ್ಯಕ್ಕೋಸ್ಕರ ಎಂತಹ ಕೆಟ್ಟ ಕೆಲಸಗಳನ್ನು ಮಾಡಿದಿರಿ?

೫೬. ರಾಜ್ಯದ ಆಸೆಯಿಂದಲೂ ಲೋಭತನದಿಂದಲೂ ಪ್ರಜೆಗಳನ್ನು ಯಾವ ಕಾರಣದಿಂದ ಪೀಡಿಸಿದಿರೋ ಅದರ ಫಲವನ್ನು ಈಗ ಅನುಭವಿಸಿರಿ.

೫೭. ಯಾವುದಕ್ಕೋಸ್ಕರ ನೀವು ಈ ಕೆಟ್ಟ ಕೆಲಸಗಳನ್ನು ಮಾಡಿದಿರೋ ಅಂತಹ ರಾಜ್ಯವೂ ಕುಟುಂಬವೂ ಈಗೆಲ್ಲಿ ಹೋದುವು? ಅವೆಲ್ಲವನ್ನೂ ಬಿಟ್ಟು ನೀವು ಈಗ ಒಬ್ಬಂಟಿಗರಾಗಿ ಇಲ್ಲಿ ಬಂದು ನಿಂತಿರುವಿರಲ್ಲ!

೫೮. ನೀವು ಯಾವ ಬಲದಿಂದ ಪ್ರಜೆಗಳನ್ನು ಪೀಡಿಸಿದಿರೋ ಅಂತಹ ಬಲವನ್ನು ಎಲ್ಲಿ ಕಳೆದುಕೊಂಡಿರಿ? ಇಲ್ಲಿ ಕಾಣುತ್ತಿಲ್ಲವಲ್ಲ! ಈ ಯಮದೂತರು ನಿಮ್ಮನ್ನು ಹಿಂಸಿಸುತ್ತಿದ್ದರೆ ಸುಮ್ಮನಿರುವಿರಲ್ಲ. ಆ ಬಲವು ಹೇಗಾಗಿ ಹೋಯಿತು? ಅಲ್ಲದೆ ಎಂತಹ ತುಚ್ಛವಾದುದು?

ಏವಂ ಬಹುವಿಧೈರ್ವಾಕ್ಯೈರುಪಾಲಬ್ಧಾ ಯಮೇನ ತೇ |
ಶೋಚನ್ತಃ ಸ್ವಾನಿಕರ್ಮಾಣಿ ತೂಷ್ಣೀಂ ತಿಷ್ಠಂತಿ ಪಾರ್ಥಿವಾಃ ॥ ೫೯ ॥

ಇತಿ ಧರ್ಮಂ ಸಮುದ್ದಿಶ್ಯ ನೃಪಾಣಾಂ ಧರ್ಮರಾಟ್ ಪುನಃ |
ತತ್ಪಾಪ ಪಂಕಶುದ್ಧ್ಯರ್ಥಮಿದಂ ವಚನಮಬ್ರವೀತ್ ॥ ೬೦ ॥

॥ ಯಮ ಉವಾಚ ॥

ಭೋ ಭೋಶ್ಚಂಡ ಮಹಾಚಂಡ ಗೃಹೀತ್ವಾ ನೃಪತೀನಿಮಾನ್ |
ವಿಶೋಧಯಧ್ವಂ ಪಾಪೇಭ್ಯಃ ಕ್ರಮೇಣ ನರಕಾಗ್ನಿಷು ॥ ೬೧ ॥

॥ ಕನ್ಯಾ ಊಚುಃ ॥

ತತಶ್ಶೀಘ್ರಂ ಸಮುತ್ಥಾಯ ನೃಪಾನ್ ಸಂಗೃಹ್ಯಪಾದಯೋಃ |
ಭ್ರಾಮಯಿತ್ವಾತಿವೇಗೇನ ಪ್ರಕ್ಷಿಪ್ಯೋರ್ಧ್ವಂ ಪ್ರಗೃಹ್ಯ ಚ ॥ ೬೨ ॥

ಸರ್ವೇ ಪ್ರಾಣೇನ ಮಹತಾ ಸುಪ್ರತಪ್ತಶಿಲಾತಲೇ |
ಆಸ್ಫಾಲಯಂತಿ ತರಸಾ ವಜ್ರೇಣೇವ ಮಹಾದ್ರುಮಂ ॥ ೬೩ ॥

---

೫೯. ಈ ರೀತಿಯಾಗಿ ನಿಂದಿಸುತ್ತಿದ್ದರೆ ಆ ರಾಜರು ತಾವು ಮಾಡಿದ ಪಾಪ ಕೆಲಸವನ್ನು ಜ್ಞಾಪಿಸಿಕೊಳ್ಳುತ್ತ ಸುಮ್ಮನೆ ನಿಂತಿರುವರು.

೬೦. ಈ ರೀತಿಯಾಗಿ ಧರ್ಮವಾದ ಮಾತನ್ನು ಆ ಧರ್ಮರಾಜನು ಹೇಳುತ್ತಾ ಅವರು ಆ ಪಾಪದಿಂದ ಶುದ್ಧವಾಗಲು ಈ ಮಾತನ್ನು ಹೇಳಿದನು.

೬೧. ಯಮನು ಹೇಳಿದನು–ಎಲೈ ಚಂಡ ಮಹಾಚಂಡರಿರಾ ! ಈ ರಾಜರುಗಳನ್ನು ಕರೆದುಕೊಂಡು ಹೋಗಿರಿ. ನರಕಾಗ್ನಿಯಲ್ಲಿ ಕ್ರಮವಾಗಿ ಪಾಪದಿಂದ ಶುದ್ಧಿಮಾಡಿರಿ.

೬೨-೬೩. ಕನ್ಯೆಯರು ಹೇಳಿದರು-ಆಗ ಆ ಆಳುಗಳು ರಾಜರ ಕಾಲುಗಳನ್ನು ಹಿಡಿದುಕೊಂಡು ಗರ್ರನೆ ತಿರುಗಿಸಿ ಅಲ್ಲಿ ಚೆನ್ನಾಗಿ ಕಾದಿರುವ ಕಲ್ಲಿನ ಮೇಲಕ್ಕೆ ಎಸೆಯುತ್ತಾರೆ. ಮತ್ತು ಮೇಲಕ್ಕೆ ಎತ್ತಿ ಅಂತಹ ಕಾದಕಲ್ಲುಗಳ ಮೇಲೆ ಕೊಡಲಿಯಿಂದ ಮರವನ್ನು ಬಡಿಯುವ ಹಾಗೆ ಬಡಿಯುತ್ತಾರೆ.

ತತಶ್ಚ ರಕ್ತಸ್ರೋತಾಂಸಿ ಸ್ರವಂತೇ ಜರ್ಜರೀಕೃತಾಃ ।
ನಿಸ್ಸಂಜ್ಞಶ್ಚ ತದಾ ದೇಹೀ ನಿಶ್ಚೇಷ್ಟಶ್ಚ ಪ್ರಜಾಯತೇ ॥ ೬೪ ॥

ತತಶ್ಚ ವಾಯುನಾ ಸ್ಪೃಷ್ಟಃ ಶನೈರುಚ್ಛ್ವಾಸತೇ ಪುನಃ ।
ತತಃ ಪಾಪವಿಶುದ್ಧ್ಯರ್ಥಂ ಕ್ಷಿಪ್ಯತೇ ನರಕಾರ್ಣವೇ ॥ ೬೫ ॥

ಅಷ್ಟಾವಿಂಶತಿ ರೇವಾಧಃ ಕ್ಷಿತೇರ್ನರಕಕೋಟಯಃ ।
ಸಪ್ತಮಸ್ಯ ತಲಸ್ಯಾಂತೇ ಘೋರೇ ತಮಸಿ ಸಂಸ್ಥಿತಾಃ ॥ ೬೬ ॥

ಘೋರಾಖ್ಯಾ ಪ್ರಥಮಾಕೋಟಿಃ ಸುಘೋರಾ ತದಧಃ ಸ್ಥಿತಾಃ ।
ಅತಿಘೋರಾ ಮಹಾಘೋರಾ ಘೋರರೂಪಾ ಚ ಪಂಚಮೀ ॥ ೬೭ ॥

ಷಷ್ಠೀ ತರಳತಾರಾಖ್ಯಾ ಸಪ್ತಮೀ ಚ ಭಯಾನಕಾ ।
ಅಷ್ಟಮೀ ಕಾಲರಾತ್ರಿಶ್ಚ ನವಮೀ ಚ ಭಯೋತ್ಕಟಾ ॥ ೬೮ ॥

---

೬೪. ಆಗ ಅವರ ದೇಹವು ನುಜ್ಜು ಗುಜ್ಜಾಗಿ ರಕ್ತವು ಸೋರುತ್ತದೆ. ಅನಂತರ ಮೂರ್ಛೆ ಹೊಂದಿದವರಾಗಿಯೂ, ಆಗುವರು.

೬೫. ಅನಂತರ ಗಾಳಿಯು ಬೀಸುತ್ತಲೂ ಅವರಿಗೆ ಸ್ವಲ್ಪ ಜ್ಞಾನವು ಬರುತ್ತದೆ. ಮತ್ತೆ ಅವರ ಪಾಪದ ಶುದ್ಧಿಗೋಸ್ಕರ ಮತ್ತೆ ನರಕದಲ್ಲಿ ಹಾಕುತ್ತಾರೆ.

೬೬. ಭೂಮಿಯ ತಳಭಾಗದಲ್ಲಿ ಇಪ್ಪತ್ತೆಂಟು ನರಕದ ಸಾಲುಗಳಿವೆ. ಅವರನ್ನು ಏಳನೆಯ ಭಾಗದ ಕೆಳಗಿರುವ ಘೋರವಾದ ಆ ತಮಸ್ಸಿಗೆ ಹಾಕುತ್ತಾರೆ. ಪಾತಾಳದ ಕೆಳಗೆ ಏಳನೆಯ ಮಳಿಗೆಯಲ್ಲಿ ಈ ನರಕಗಳೆಲ್ಲವೂ ಇರುತ್ತವೆ.

೬೭—೭೧. ಈ ನರಕಗಳನ್ನು ಕ್ರಮವಾಗಿ ಹೇಳುತ್ತಾರೆ. ಘೋರಾ. ಸುಘೋರಾ, ಅತಿಘೋರಾ, ಮಹಾಘೋರಾ, ಘೋರರೂಪಾ, ತರಳ, ತಾರಾ, ಭಯಾನಕಾ, ಕಾಲರಾತ್ರಿ, ಭಯೋತ್ಕಟಾ, ಚಂಡ. ಮಹಾಚಂಡ,

ದಶವಿಂಶದಧಶ್ಚಂಡಾ ಮಹಾಚಂಡಾ ತಥೋಽಪ್ಯಥಃ ।
ಚಂಡಕೋಲಾಹಲಾ ಚಾನ್ಯಾ ಪ್ರಚಂಡಾ ನರನಾಯಿಕಾ ॥ ೬೯ ॥

ಕರಾಲಾ ವಿಕರಾಲಾ ಚ ವಜ್ರಾ ವಿಂಶತಿಮಾ ಸ್ಮೃತಾ ।
ತ್ರಿಕೋಣಾ ಪಂಚಕೋಣಾ ಚ ಸುದೀರ್ಘಾ ಪರಿವರ್ತುಲಾ ॥ ೭೦ ॥

ಸಪ್ತಭೌಮಾಷ್ಟಭೌಮಾ ಚ ದೀಪ್ತಾ ಮಾಯೇತಿ ಚಾಷ್ಟಮೀ ।
ಇತ್ಯೇತಾ ನಾಮತಃ ಪ್ರೋಕ್ತಾಃ ಕ್ರಮಾದ್ವಿಂಶತಿ ಕೋಟಯಃ ॥ ೭೧ ॥

ಅಷ್ಟಾವಿಂಶತಿರೇವ್ಯೈತಾಃ ಪಾಪಾನಾಂ ಯಾತನಾಪ್ರದಾಃ ॥ ೭೨ ॥

ಪ್ರತ್ಯೇಕಂ ಸರ್ವಕೋಟೀನಾಂ ಪಂಚ ಪಂಚೈವ ನಾಯಕಾಃ ।
ನಾಮಾನಿ ನಾಯಕಾನಾಂ ವೈ ಪ್ರತ್ಯೇಕಂ ಚ ನಿಬೋಧತ ॥ ೭೩ ॥

ರೌರವಃ ಪ್ರಥಮಸ್ತೇಷಾಂ ರುದಂತೇ ಯತ್ರ ದೇಹಿನಃ ।
ಮಹಾರೌರವಪೀಡಾಭಿಃ ಮಹಾಂತೋಽಪಿ ರುದಂತಿ ಚ ॥ ೭೪ ॥

---

ಚಂಡ, ಕೋಲಾಹಲ, ಪ್ರಚಂಡ, ನರನಾಯಿಕೆ, ಕರಾಳ, ವಿಕರಾಳ, ವಜ್ರ, ತ್ರಿಕೋಣ, ಪಂಚಕೋಣ ಸುದೀರ್ಘ ಪರಿವರ್ತುಲ ಸಪ್ತಭೌಮ ಅಷ್ಟಭೌಮ ದೀಪ್ತಮಾಯಾ ಈ ರೀತಿಯಾಗಿ ಇಪ್ಪತ್ತೆಂಟು ನರಕಭಾಗಗಳು ಒಂದರ ಕೆಳಗೊಂದು ಕ್ರಮದಿಂದ ಇರುತ್ತವೆ. ಇವೆಲ್ಲವೂ ಪಾಪಿಗಳಿಗೆ ಯಾತನೆಯನ್ನು ಕೊಡುತ್ತವೆ

೭೩. ಎಲ್ಲಾ ಭಾಗಗಳಿಗೂ ಬೇರೆ ಬೇರೆಯಾಗಿ ಐದೈದು ಮುಖ್ಯ ಭಾಗಗಳಿರುತ್ತವೆ. ಮುಖ್ಯ ಭಾಗಗಳ ಹೆಸರನ್ನು ಬೇರೆ ಬೇರೆಯಾಗಿ ಹೇಳುತ್ತೇನೆ ಕೇಳಿರಿ !

೭೪. ಮೊದಲನೆಯದು ರೌರವವು ಅಲ್ಲಿ ದೇಹಿಗಳೆಲ್ಲರೂ ಅಳುತ್ತಿರುತ್ತಾರೆ. ಮಹಾರೌರವದಲ್ಲಿ ಎಂತಹವರಾದರೂ ಅಳುತ್ತಿರುತ್ತಾರೆ.

ತಮಶ್ಶೀತಸ್ತಥಾ ಚೋಷ್ಣಃ ಪಂಚಾದ್ಯಾ ನಾಯಕಾಃ ಸ್ಮೃತಾಃ ।
ಸುಘೋರಸ್ಸುತಮಸ್ತೀಕ್ಷ್ಣಃ ಪದ್ಮಸ್ಸಂಜೀವನಃ ಶಠಃ ॥ ೭೫ ॥

ಮಹಾಮಾಯೋತಿ ಲೋಮಶ್ಚ ಸುಭೀಮಶ್ಚ ಕಟಂಕಟಃ ।
ತೀವ್ರವೇಗಃ ಕರಾಳಶ್ಚ ವಿಕರಾಳಃ ಪ್ರಕಂಪನಃ ॥ ೭೬ ॥

ಮಹಾಪದ್ಮಸ್ಸುಚಕ್ರಶ್ಚ ಕಾಲಸೂತ್ರಃ ಪ್ರತರ್ಜನಃ ।
ಸೂಚೀಮುಖಸ್ಸುನೇಮಿಶ್ಚ ಖಾದಕಃ ಸುಪ್ರದೀಪಕಃ ॥ ೭೭ ॥

ಕುಂಭೀಪಾಕಃ ಸುಪಾಕಶ್ಚ ಕೂಪಶ್ಚಾತೀವ ದಾರುಣಃ ।
ಅಂಗಾರರಾಶಿರ್ಭವನೋ ಅಸೃಕ್ಪೂಯ ಹ್ರದಸ್ತಥಾ ॥ ೭೮ ॥

ವಿರಾಮಮಯಸ್ತುಂಡ ಶಕುನಿಃ ಮಹಾಸಂವರ್ತಕಃ ಕ್ರತುಃ ।
ತಪ್ತಜತುಃ ಪಂಕಲೇಪಃ ಪೂತಿಮಾಂಸೋದ್ರವಸ್ತ್ರಪುಃ ॥ ೭೯ ॥

ಉಚ್ಛ್ವಾಸಸ್ಚ ನಿರುಚ್ಛ್ವಾಸಃ ಸುದೀರ್ಘಃ ಕೂಟಶಾಲ್ಮಲಿಃ ।
ದುರಿಷ್ಟಃ ಸುಮಹಾನಾದಃ ಪ್ರಭಾವಃ ಸುಪ್ರಭಾವನಃ ॥ ೮೦ ॥

---

೭೫-೮೦. ತಮ, ಶೀತ, ಉಷ್ಣ, ಇವು ಮೊದಲನೆಯ ಐದು ಮುಖ್ಯ ಭಾಗಗಳು. ಸುಘೋರ, ಸುತಮ, ತೀಕ್ಷ್ಣ, ಪದ್ಮ, ಸಂಜೀವನ, ಶಠ, ಮಹಾಮಾಯ ಅತಿಲೋಮ, ಸುಭೀಮ, ಕಟಂಕಟ, ತೀವ್ರವೇಗ, ಕರಾಳ, ವಿಕರಾಳ, ಪ್ರಕಾಂಪನ, ಮಹಾಪದ್ಮ, ಸುಚಕ್ರ, ಕಾಲಸೂತ್ರ, ಪ್ರತರ್ಜನ, ಸೂಚೀಮುಖ, ಸುನೇಮಿ, ಖಾದಕ, ಸುಪ್ರದೀಪಕ, ಕುಂಭೀಪಾಕ, ಸುಪಾಕ, ಕೂಪ, ದಾರುಣ, ರೂಪ, ಅಂಗಾರರಾಶಿ, ಅಸೃಕ್ಪೂಯಹ್ರದ, ವಿರಾಮಯ, ತುಂಡಶಕುನಿ, ಮಹಾಸಂವರ್ತಕ, ಕ್ರತು, ತಪ್ತಜಂತು, ಪಂಕಲೇಪ, ಪೂತಿಮಾಂಸ, ದ್ರವಸ್ತ್ರಪು, ಉಚ್ಛ್ವಾಸ, ನಿರುಚ್ಛ್ವಾಸ, ಸುದೀರ್ಘ, ಕೂಟಶಾಲ್ಮಲಿ, ದುರಿಷ್ಟ, ಸುಮಹಾನಾದ, ಪ್ರಭಾವನ, ಸುಪ್ರಭಾವನ ಇವು ಕೆಲವುಗಳ ಹೆಸರು.

ಋಕ್ಷೋ ಮೇಷೋ ವೃಷಃ ಶಲ್ಯಃ ಸಿಂಹವ್ಯಾಘ್ರ ಮೃಗಾನನಾಃ ।
ಸೂಕರಶ್ವಾನಮಹಿಷ ವೃಕನೇಷ ವರಾನನಾಃ　　॥ ೮೧ ॥

ಗ್ರಾಹಕುಂಭೀರನಕ್ರಾಖ್ಯಾಃ ಸರ್ಪಃ ಕೂರ್ಮಶ್ಚ ವಾಯಸಃ ।
ಗೃಧ್ರೋಲೂಕ ಜಲೂಕಾಶ್ಚ ಶಾರ್ದೂಲ ಕಪಿ ಕರ್ಕಟಾಃ　　॥ ೮೨ ॥

ಗಂಡಶ್ಚ ಪೂತಿವಕ್ತ್ರಶ್ಚ ರಕ್ತಾಕ್ಷಃ ಪೂತಿಮೃತ್ತಿಕಃ ।
ಕಣಧೂಮಸ್ತ್ರಿಷಾಗ್ನಿಶ್ಚ ಕ್ರಿಮೀಣಾಂ ನಿಚಯಸ್ತಥಾ　　॥ ೮೩ ॥

ಅಮೇಯಶ್ಚಾ ಪ್ರತಿಷ್ಠಶ್ಚ ರುಧಿರಾನ್ನಃ ಶ್ವಭೋಜನಃ ।
ಲಾಲಾಭಕ್ಷಾತ್ಮಭಕ್ಷೌ ಚ ಸರ್ವಭಕ್ಷಃ ಸುದಾರುಣಃ　　॥ ೮೪ ॥

ಸಂಕಟಃ ಸುವಿಲಾಸಶ್ಚ ಸುಕಟಃ ಸಂಕಟಃ ಕಟಃ ।
ಪುರೀಷಶ್ಚ ಕಟಾಹಶ್ಚ ಕಷ್ಟಾ ವೈತರಣೀ ನದೀ　　॥ ೮೫ ॥

ಸುತಪ್ತಲೋಹಶಂಕುಶ್ಚಾಪ್ಯಯಶ್ಶಂಕುಃ ಪ್ರಪೂರಣಃ ।
ಅಸಿತಾಲ ವನಂ ಘೋರಮಸ್ಥಿ ಭಂಗಃ ಪ್ರಪೀಡಕಃ　　॥ ೮೬ ॥

ನೀಲಾತಸೀಕ್ಷುಯಂತ್ರಾಣಿ ಕೂಟಶ್ಚಾಂಶ ಪ್ರಮರ್ದನಃ ।
ಮಹಾಚೂರ್ಣೀ ಸುಚೂರ್ಣೀ ಚ ತಪ್ತಲೋಹಮಯೀ ಶಿಲಾ　　॥ ೮೭ ॥

---

೮೧–೮೯. ಋಕ್ಷ, ಮೇಷ, ವೃಷ, ಶಲ್ಯ, ಸಿಂಹಮುಖ, ವ್ಯಾಘ್ರಮುಖ, ಮೃಗಮುಖ, ಹಂದಿಮುಖ, ನಾಯಿಮುಖ, ಕೋಣನಮುಖ, ತೋಳನ ಮುಖ, ಕುರಿಮುಖ, ಗ್ರಾಹ, ಕುಂಭೀರ, ನಕ್ರ, ಸರ್ಗ, ಕೂರ್ಮ, ವಾಯಸ, ಗೃಧ್ರ, ಉಲೂಕ, ಜಲೂಕ, ಶಾರ್ದೂಲ, ಕಪಿ, ಕರ್ಕ, ಗಂಡ ಪೂತಿವಕ್ತ್ರ, ರಕ್ತಾಕ್ಷ, ಪೂತಿಮೃತ್ತಿಕ, ಕಣಧೂಮ, ತ್ರಿಷಾಗ್ನಿ, ಕ್ರಿಮಿನಿಚಯ, ಅಮೇಯ, ಅಪ್ರತಿಷ್ಠ, ರುಧಿರಾನ್ನ, ಶ್ವಭೋಜನ, ಲಾಲಾಭಕ್ಷ, ಸರ್ವಭಕ್ಷ, ಆತ್ಮಭಕ್ಷ, ಸುದಾರುಣ, ಸಂಕಟ, ಸುವಿಲಾಸ, ಸುಕಟ, ಸಂಕಟ, ಕಟ, ಪುರೀಷ, ಕಟಾಹ, ಕಷ್ಟ, ವೈತರಣೀನದಿ, ಸುತಪ್ತಲೋಹ, ಪ್ರಪೀಡಕ, ನೀಲಾತಸೀಯಂತ್ರ, ಇಕ್ಷುಯಂತ್ರ, ಕೂಟ ಅಂಶ, ಪ್ರಮರ್ದನ ಮಹಾಚೂರ್ಣೀ, ಸುಚೂರ್ಣೀ, ತಪ್ತಲೋಹ,

ಪರ್ವತಃ ಕ್ಷುರಧಾರಾದಸ್ತಥಾ ಚ ಮಲಪರ್ವತಃ ।
ಮೂತ್ರವಿಷ್ಠಾಂಧಕೂಪಶ್ಚ ಪೂಯಕೂಪಶ್ಚ ಶಾತನಃ ॥ ೮೮ ॥

ಮುಸಲೋಲೂಖಲೋ ಯತ್ರ ಶಿಲಾಶಕಟಲಾಂಗಲಃ ।
ತಾಲಪತ್ರಾಸಿಗಹನಂ ಮಹಾಮಶಕ ಮಂಡಪಂ ॥ ೮೯ ॥

ಸಮ್ಮೋಹನೋತಿಭಂಗಶ್ಚ ತಪ್ತಶೂಲಾಮಯೋಗುಡಃ ।
ಬಹುದುಃಖಂ ಮಹಾದುಃಖಂ ಕಶ್ಮಲಂ ಶಮಲಂ ತಥಾ ॥ ೯೦ ॥

ಹಲಾಹಲೋ ವಿರೂಪಶ್ಚ ಭೀಮರೂಪಶ್ಚ ಭೀಮಗಃ ।
ಏಕಪಾದೋ ದ್ವಿಪಾದಶ್ಚ ತೀವ್ರಶ್ಚಾವೀಚಿರಂತಿಮಃ ॥ ೯೧ ॥

ಅಷ್ಟಾವಿಂಶತಿರಿತ್ಯೇತೇ ಕ್ರಮಶಃ ಪಂಚಕಾಃ ಸ್ಮೃತಾಃ ।
ಕೋಟಿನಾಮಾನುಪೂರ್ವ್ಯೇಣ ಪಂಚ ಪಂಚೈವ ನಾಯಕಾಃ ॥ ೯೨ ॥

ರೌರವಾದ್ಯಾಶ್ಚ ವೀಚ್ಯಂತಾ ನರಕಾಣಾಂ ಶತಂ ಸ್ಮೃತಂ ।
ಚತ್ವಾರಿಂಶತ್ಸಮಧಿಕಂ ಮಹಾನರಕಮಂಡಲಂ ॥ ೯೩ ॥

---

ತಪ್ತಶಿಲಾ, ಕ್ಷುರಧಾರ, ಮಲಪರ್ವತ, ಮೂತ್ರಕೂಪ, ವಿಷ್ಠಾಕೂಪ, ಅಂಧಕೂಪ, ಪೂಯಕೂಪ, ಶಾತನ, ಮುಸಲಯಂತ್ರ, ಉಲೂಖಲಯಂತ್ರ, ಶಿಲಾಯಂತ್ರ, ಶಕಟಯಂತ್ರ, ಲಾಂಗಲಯಂತ್ರ, ತಾಲಿಪತ್ರ, ಅಸಿಗರ್ಹ, ಮಹಾಮಶಕಮಂಡಪ. ಎಂಬುವು ಕೆಲವುಗಳ ಹೆಸರು.

೯೦ ೯೧. ಸಮ್ಮೋಹನ, ಅತಿಭಂಗ, ತಪ್ತಶೂಲಮಯ, ತಪ್ತಗುಡ, ಬಹುದುಃಖ, ಮಹಾದುಃಖ, ಕಶ್ಮಲ, ಶಮಲ, ಹಾಲಾಹಲ, ವಿರೂಪ, ಭೀಮರೂಪ, ಭೀಮಗ, ಏಕಪಾದ, ದ್ವಿಪಾದ, ಅವೀಚಿ ಎಂಬುವು ನರಕಗಳ ಹೆಸರುಗಳು.

೯೨. ಈ ಐದೈದರಂತೆ ಇಪ್ಪತ್ತೆಂಟು ಪಂಚಕಗಳಿವೆ. ಕ್ರಮವಾಗಿ ಈ ಐದೈದರ ಹೆಸರುಗಳನ್ನು ಹೇಳಿದ್ದೇವೆ.

೯೩. ರೌರವವೇ ಮೊದಲುಗೊಂಡು ವೀಚಿಯೆಂಬ ನರಕದವರೆಗೆ ನೂರ ನಾಲ್ವತ್ತು ನರಕಗಳಿವೆ. ಈ ನರಕಗಳ ಗುಂಪೇ ಪ್ರಪಂಚದಲ್ಲಿ ಪಾಪಿಗಳಿಗೆ ಶಿಕ್ಷೆಗೋಸ್ಕರ ನಿರ್ಮಿತವಾಗಿವೆ.

ಏಷು ಪಾಪಾಃ ಪ್ರಯಚ್ಛಂತೇ ನರಾಃ ಕರ್ಮಾನುರೂಪತಃ ।
ಯಾತನಾಭಿರ್ವಿಚಿತ್ರಾಭಿರಾಕರ್ಮ ಪ್ರಕ್ಷಯಾದ್ಭೃಶಂ ॥ ೯೪ ॥

ಆಮಲಪ್ರಕ್ಷಯಾದ್ಯದ್ವತ್ ಧ್ಮಾಯಂತೇಽಗ್ನೌ ಹಿ ಧಾತವಃ ।
ತದ್ವತ್ಪಾಪ ಕ್ಷಯಾತ್ಪಾಪಾಃ ಶೋಧ್ಯಂತೇ ನರಕಾಗ್ನಿನಾ ॥ ೯೫ ॥

ಏವಂ ಕ್ಲಿಷ್ಟಾ ವಿಶುದ್ಧಾಶ್ಚ ಸಾವಶೇಷೇಣ ಕರ್ಮಣಾ ।
ತತಃ ಕ್ಷಿತಿಂ ಸಮಾಸಾದ್ಯ ಪುನರ್ಜಾಯಂತಿ ದೇಹಿನಃ ॥ ೯೬ ॥

ಸ್ಥಾವರಾ ವಿವಿದಾಕಾರಾಸ್ತೃಣಗುಲ್ಮಾದಿಭೇದತಃ ।
ತತ್ರಾನುಭೂಯ ದುಃಖಾನಿ ಜಾಯಂತೇ ಕೀಟಯೋನಿಷು ॥ ೯೭ ॥

ನಿಷ್ಕ್ರಾನ್ತಾಃ ಕೀಟಯೋನಿಭ್ಯಃ ಕ್ರಮಾಜಾ ಯನ್ತಿ ಪಕ್ಷಿಣಃ ।
ಸಂಕ್ಲಿಷ್ಟಾಃ ಪಕ್ಷಿಭಾವೇನ ಭವಂತಿ ಮೃಗಜಾತಿಷು ॥ ೯೮ ॥

---

೯೪. ಪಾಪಿಗಳಾದ ಪ್ರಾಣಿಗಳನ್ನು ಅವರ ಕರ್ಮಕ್ಕನುಗುಣವಾಗಿ ಆಯಾ ನರಕಗಳಲ್ಲಿ ಹಾಕುತ್ತಾರೆ. ಅವರ ಆ ಪಾಪಕರ್ಮವು ನಾಶವಾಗುವ ವರೆಗೂ ಅವುಗಳಲ್ಲಿ ಅವರು ಯಾತನೆಗಳನ್ನು ಅನುಭವಿಸುತ್ತಾರೆ.

೯೫-೯೬. ಚಿನ್ನವೇ ಮೊದಲಾದ ಧಾತುಗಳನ್ನು ಅದರಲ್ಲಿರುವ ಕೊಳೆಯು ಹೋಗುವವರೆಗೂ ಹೇಗೆ ಬೆಂಕಿಯಲ್ಲಿ ಕರಗಿಸುತ್ತಾರೆಯೋ ಹಾಗೆ ನರಕಾಗ್ನಿಯಲ್ಲಿ ಪಾಪಗಳು ಹೋಗುವವರೆವಿಗೂ ಆ ಪಾಪಿಗಳನ್ನು ಶೋಧಿಸುತ್ತಾರೆ. ಈ ರೀತಿಯಾಗಿ ಪಾಪಿಗಳು ನರಕದಲ್ಲಿ ತೊಂದರೆಯನ್ನು ಹೊಂದಿ ಕಳೆದುಳಿದ ಕೊಂಚ ಪಾಪದಿಂದ ಅದಕ್ಕನುಸಾರವಾದ ಜನ್ಮವನ್ನು ಭೂಮಿಯಲ್ಲಿ ಹೊಂದುತ್ತಾರೆ.

೯೭. ಸ್ಥಾವರಗಳ ಜನ್ಮದಲ್ಲಿ ತೃಣ ಗುಲ್ಮ ಮುಂತಾದ ರೂಪಗಳಾಗಿ ಹುಟ್ಟಿ ಆ ಜನ್ಮದಲ್ಲಿ ದುಃಖವನ್ನು ಅನುಭವಿಸಿ ಮತ್ತೆ ಕೀಟ ಜನ್ಮದಲ್ಲಿ ಹುಟ್ಟುತ್ತಾರೆ.

೯೮. ಕೀಟಗಳ ಜನ್ಮವೂ ಕಳೆದಮೇಲೆ ಅನಂತರ ಪಕ್ಷಿಗಳಾಗಿ ಹುಟ್ಟುತ್ತಾರೆ. ಪಕ್ಷಿಜನ್ಮದಲ್ಲಿಯೂ ತೊಂದರೆಪಟ್ಟು ಅನಂತರ ಮೃಗಗಳಾಗಿ ಹುಟ್ಟುತ್ತಾರೆ.

ಮೃಗದುಃಖಮತಿಕ್ರಮ್ಯ ಜಾಯಂತೇ ಪಶುಯೋನಿಷು ।
ಕ್ರಮಾದ್ಗೋಯೋನಿಮಾಸಾದ್ಯ ಪುನರ್ಜಾಯಂತಿ ಮಾನವಾಃ ॥ ೯೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ
ಸಂವಾದೇ ಮಾಘ ಮಾಹಾತ್ಮ್ಯೇ ಯಮಲೋಕ ವರ್ಣನಂ ನಾಮ
ಸಪ್ತವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೯೯. ಮೃಗಗಳಾಗಿ ದುಃಖವನ್ನು ಅನುಭವಿಸಿ ಆ ಜನ್ಮಗಳನ್ನು ಕಳೆದುಕೊಂಡು ಪಶುಗಳಾಗಿ ಹುಟ್ಟಿ ಆ ಕಷ್ಟಗಳನ್ನೂ ಕಳೆದುಕೊಂಡು ಗೋವಾಗಿ ಹುಟ್ಟುತ್ತಾರೆ. ಅದರಲ್ಲಿನ ಕಷ್ಟಗಳನ್ನು ಕಳೆದುಕೊಂಡು ಅನಂತರ ಮನುಷ್ಯರಾಗಿ ಹುಟ್ಟುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ
ಸಂವಾದದ ಮಾಘ ಮಹಿಮೆಯಲ್ಲಿ ಯಮಲೋಕ ವರ್ಣನ ಎಂಬ
ಇನ್ನೂರ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟವಿಂಶತ್ಯಧಿಕದ್ವಿಶತತಮೋಽಧ್ಯಾಯಃ ||



|| ಕನ್ಯಕಾ ಊಚುಃ ||

ಏತಾವನ್ಮಾತ್ರ ಮಸ್ಮಾಭಿರ್ದೃಷ್ಟಮೇತದ್ಯಮಾಲಯೇ |
ಯಾತನಾ ನಾರಕಾ ಘೋರಾಃ ಪಾಪಿನಶ್ಚೈವ ಮಾತರಃ || ೧ ||

ಅಶ್ರುತಾನ್ಯಪ್ರದೃಷ್ಟಾನಿ ಶತಶೋಽಥ ಸಹಸ್ರಶಃ |
ಜ್ಞಾತುಂ ದ್ರಷ್ಟುಂ ಚ ತತ್ಸರ್ವಮಸ್ಮಾಭಿರ್ನೈವ ಶಕ್ಯತೇ || ೨ ||

|| ಮಾತರ ಊಚುಃ ||

ಅಲಮೇತಾವತಾಸ್ಮಾಕಂ ಶ್ರುತ್ವಾ ನರಕಯಾತನಾಃ |
ಸೀದಂತಿ ಸರ್ವಗಾತ್ರಾಣಿ ಹೃದಿ ಭೀತಿಃ ಪ್ರವರ್ತತೇ || ೩ ||

---

## ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯವು



೧. ಕನ್ಯೆಯರು ಹೇಳಿದರು-ಅಮ್ಮಾ ! ಪಾಪಿಗಳಿಗೆ ಮಾಡತಕ್ಕ ಘೋರ ಯಾತನೆಗಳನ್ನು ನಾವು ಆ ಯಮನ ಪಟ್ಟಣದಲ್ಲಿ ಇಷ್ಟು ಮಾತ್ರವನ್ನು ನೋಡಿದೆವು.

೨. ಅಲ್ಲಿ ಇನ್ನೂ ಕೂಡ ನಾವು ನೋಡದ, ಕೇಳದ ನರಕಗಳು ನೂರು ಸಾವಿರ ಗಟ್ಟಲೆಯಲ್ಲಿವೆ. ಅವನ್ನು ನೋಡುವುದಕ್ಕಾಗಲೀ ತಿಳಿಯುವುದಕ್ಕಾಗಲೀ ನಮ್ಮಿಂದ ಆಗಲಾರದು.

೩. ತಾಯಿಯರು ಹೇಳಿದರು-ನಾವು ಇಷ್ಟು ಈ ನರಕ ಯಾತನೆಯನ್ನು ಕೇಳಿದುದೇ ಸಾಕಾಗಿರುವುದು ನಮ್ಮ ಮೈಯೆಲ್ಲವೂ ನಡುಗುತ್ತಿರುವುದು. ಹೃದಯದಲ್ಲಿ ಹೆದರಿಕೆಯು ಹುಟ್ಟುತ್ತಿರುವುದು.

ಸ್ಮಾರಂ ಸ್ಮಾರಂ ಮನೋಽಸ್ಮಾಕಂ ಮುಹುರ್ಮೂರ್ಛ್ಯತಿ ಮುಹ್ಯತಿ ।
ಅಂತರ್ಭಯಾತಿರೇಕೇಣ ರೋಮಕಂಟಕಿತಾ ವಯಂ ॥ ೪ ॥

ಶ್ರುತ್ವಾ ಯಮಪುರಾಧ್ವಾನಂ ಪ್ರಾಣಾಃ ಕಂಠಗತಾ ಹಿ ನಃ ॥ ೫ ॥

॥ ವಸಿಷ್ಠ ಉವಾಚ ॥

ಅಂತಸ್ತಾಪಾಕುಲಾಶ್ಚಶ್ವದುದ್ವಿಗ್ನಮನಸೋಽಕುರ್ವ ।
ಪತಿತಾಸ್ತಾಸ್ಸಮಾಶ್ವಾಸ್ಯ ಕನ್ಯಾ ವಚನಮಬ್ರುವನ್ ॥ ೬ ॥

॥ ಕನ್ಯಾ ಊಚುಃ ॥

ದೇಶೇಽಸ್ಮಿನ್ ಭಾರತೇ ಪುಣ್ಯೇ ಜನ್ಮ ಲಬ್ಧಂ ಸುದುರ್ಲಭಂ ।
ಅತ್ರ ಜನ್ಮ ಸಹಸ್ರಾಣಾಂ ಸಹಸ್ರೈರಪಿ ಮಾತರಃ ॥ ೭ ॥

ಕದಾಚಿಲ್ಲಭತೇ ಜಂತುಃ ಮಾನುಷ್ಯಂ ಪುಣ್ಯಸಂಚಯಾತ್ ।
ಮಾಘಸ್ನಾನೈಕ ನಿಷ್ಠಾನಾಂ ನ ಕಿಂಚಿದಪಿ ದುರ್ಲಭಂ ॥ ೮ ॥

---

೪. ಇದನ್ನು ಜ್ಞಾಪಿಸಿಕೊಂಡು ಜ್ಞಾಪಿಸಿಕೊಂಡು ಮನಸ್ಸು ಹುಚ್ಚು ಹಿಡಿದಂತೆ ಆಗುತ್ತದೆ. ಮೂರ್ಛೆ ಹೋಗುತ್ತದೆ. ಒಳಗೆ ಭಯವು ಹೆಚ್ಚಿದುದರಿಂದ ಮೈಯೆಲ್ಲವೂ ನವಿರೆದ್ದಿದೆ. ಈ ಯಮನ ಪಟ್ಟಣದ ದಾರಿಯ ವಿಷಯವನ್ನು ಕೇಳಿಯೇನೆ ನಮ್ಮ ಪ್ರಾಣಗಳು ಹಾರಿಹೋಗುವಂತಾಗಿವೆ.

೫-೬. ವಸಿಷ್ಠನು ಹೇಳಿದನು–ಈ ರೀತಿಯಾದ ಯಾತನೆಯನ್ನು ಕೇಳಿ ಅವರೆಲ್ಲರೂ ಭಯಪಡುತ್ತ ದುಃಖದಿಂದ ಬಿದ್ದು ಬಿಟ್ಟರು. ಅನಂತರ ಆ ಕನ್ಯೆಯರು ಅವರನ್ನು ಸಮಾಧಾನಪಡಿಸಿ ಇಂತೆಂದರು.

೭-೮. ಕನ್ಯೆಯರು ಹೇಳಿದರು-ಈ ಪುಣ್ಯಭೂಮಿಯಾದ ಭಾರತದಲ್ಲಿ ಜನ್ಮವನ್ನು ಹೊಂದುವುದೇ ಕಷ್ಟವು. ಹಾಗಿದ್ದರೂ ಇಲ್ಲಿ ಕೋಟ್ಯಂತರ ಜನ್ಮಗಳನ್ನು ತಾಳಿದ ಮೇಲೆ ಎಷ್ಟೋ ಒಂದು ಸಾರಿ ಯಾವುದೋ ಪುಣ್ಯಯೋಗದಿಂದ ಮನುಷ್ಯ ಜನ್ಮವು ಸಿಕ್ಕುತ್ತದೆ. ಆ ಮನುಷ್ಯ ಜನ್ಮವನ್ನು ಹೊಂದಿದವರು ಮಾಘ ಸ್ನಾನವನ್ನು ಮಾಡುತ್ತಿದ್ದರೆ ಯಾವುದೂ ಕಷ್ಟವಾಗುವುದಿಲ್ಲ.

ಅತ್ರೈವ ಪರಮಾ ಮುಕ್ತಿಃ ಭುಕ್ತಯಶ್ಚಾಪಿ ಪುಷ್ಕಲಾಃ ।
ಕರ್ಮ ಭೂಮಿರಿಯಂ ಪ್ರೋಕ್ತಾ ತತೋಽನ್ಯಾ
ಭೋಗಭೂಮಯಃ ॥ ೯ ॥

ತಪಸ್ತಪ್ಯಂತಿ ಯತಯೋ ಜುಹ್ವತೇ ಚಾತ್ರ ಯಜ್ವಿನಃ ।
ದಾನಾನಿ ಚಾತ್ರ ದೀಯಂತೇ ಪರಲೋಕಾರ್ಥಮಾದರಾತ್ ॥ ೧೦ ॥

ಅತ್ರೈವ ಮಾಘಸ್ನಾನಂ ಚ ಧನ್ಯಾಃ ಕುರ್ವಂತಿ ಕೇಚನ ।
ಬ್ರಹ್ಮತ್ವ ಮಮರೇಶತ್ವಂ ದೇವತಂ ಮಾರುತಂ ತಥಾ ॥ ೧೧ ॥

ಲಭಂತೇಽತ್ರ ತಪಃಕೃತ್ವಾ ನರಾಃ ಕರ್ಮಾನುರೂಪತಃ ।
ಸರ್ವೇಷಾಮೇವ ದೇಶಾನಾಮಯಂ ದೇಶಃ ಪರಃ ಸ್ಮೃತಃ ॥ ೧೨ ॥

ಯತಃ ಸ್ವರ್ಗಶ್ಚ ಮೋಕ್ಷಶ್ಚ ಧರ್ಮಃ ಸಂಪ್ರಾಪ್ಯತೇ ನರೈಃ ।
ದೇಶೇಸ್ಮಿನ್ ಭಾರತೇ ಪುಣ್ಯೇ ಪ್ರಾಪ್ಯಮಾನುಷ್ಯಮಧ್ರುವಂ ॥ ೧೩ ॥

---

೯. ಭಾರತ ಭೂಮಿಯಲ್ಲಿಯೇ ಮುಕ್ತಿಯೂ ಭುಕ್ತಿಯೂ ಬಹುವಾಗಿ ಸಿಕ್ಕಬೇಕು. ಈ ಭಾರತವು ಕರ್ಮಭೂಮಿಯೆಂದೆನಿಸಿಕೊಂಡಿದೆ. ಉಳಿದುವೆಲ್ಲವೂ ಭೋಗಭೂಮಿಗಳೆಂದು ಪ್ರಸಿದ್ಧಿಗೊಂಡಿವೆ.

೧೦. ಆದ್ದರಿಂದ ಈ ಭಾರತಭೂಮಿಯಲ್ಲಿಯೇ ಯತಿಗಳು ತಪಸ್ಸನ್ನು ಮಾಡುತ್ತಾರೆ. ಯಾಗಮಾಡುವವರೂ ಹೋಮ ಮಾಡುತ್ತಾರೆ ದಾನಗಳನ್ನೂ ಕೊಡುತ್ತಾರೆ. ಪರಲೋಕಕ್ಕೆ ಏನೇನುಬೇಕೋ ಅವೆಲ್ಲವನ್ನೂ ಇಲ್ಲಿಯೇ ಮಾಡಿಕೊಳ್ಳುತ್ತಾರೆ.

೧೧–೧೬. ಈ ಭಾರತದಲ್ಲಿಯೇ ಧನ್ಯರಾದವರು ಕೆಲವರು ಮಾಘಸ್ನಾನವನ್ನು ಮಾಡುತ್ತಾರೆ. ಇಲ್ಲಿಯೇ ತಪಸ್ಸನ್ನು ಮಾಡಿ ಬ್ರಹ್ಮತ್ವವನ್ನಾಗಲೀ ಇಂದ್ರಪದವಿಯನ್ನಾಗಲೀ ದೇವತೆಗಳ ಸ್ಥಾನವನ್ನಾಗಲೀ ಹೊಂದುತ್ತಾರೆ ಮನುಷ್ಯರು ಈ ಭಾರತಭೂಮಿಯಲ್ಲಿ ತಾವು ಮಾಡಿದ ಕರ್ಮಕ್ಕೆ ಅನುಗುಣವಾದ ಸ್ಥಾನವನ್ನು ಹೊಂದುತ್ತಾರೆ. ಮನುಷ್ಯರು ಈ ಭಾರತಭೂಮಿಯಲ್ಲಿ ಮಾಘ ಪುಣ್ಯಗಳಿಂದಲೇ ಸ್ವರ್ಗವನ್ನಾಗಲೀ ಮೋಕ್ಷವನ್ನಾಗಲೀ ಹೊಂದುತ್ತಾರಾದ್ದರಿಂದ ಎಲ್ಲಾ ದೇಶಗಳಿಗಿಂತಲೂ ಈ ದೇಶವೇ ಉತ್ತಮವಾದುದು. ಹೀಗಿರುವಲ್ಲಿ ಪುಣ್ಯತಮವಾದ ಈ ಭಾರತ ಭೂಮಿಯಲ್ಲಿ ಶಾಶ್ವತವಲ್ಲದ ಮನುಷ್ಯ ಜನ್ಮವನ್ನು

ಯಃ ಕುರ್ಯಾನ್ನಾತ್ಮನಃ ಶ್ರೇಯಃ ತೇನಾತ್ಮಾ ಖಲು ವಂಚಿತಃ ।
ಮನುಷ್ಯತ್ವೇಽಪಿ ವಿಪ್ರತ್ವಂ ಯಃ ಪ್ರಾಪ್ಯಾತೀವದುರ್ಲಭಂ ॥ ೧೪ ॥

ನತರೋಽತ್ಯಾತ್ಮನಃ ಶ್ರೇಯಃ ಕೋಽನ್ಯಸ್ತಸ್ಮಾದಚೇತನಃ ।
ಅತಃ ಕಾಲಾಂತರಾದ್ಯಾತಿ ಮಾನುಷ್ಯಮತಿ ದುರ್ಲಭಂ ॥ ೧೫ ॥
ತತ್ಸಮಾಪ್ಯ ತಥಾ ಕುರ್ಯಾನ್ನಗಚ್ಛೇನ್ನರಕಂ ಯಥಾ ।

ಕದಾ ಭಾರತಮಭ್ಯೇತ್ಯ ಮಾಘಮಾಸೇ ಬಹಿರ್ಜಲೇ
ಉಷಃಕಾಲೇ ನಿಮಜ್ಜಾಮ ಇತಿವಾಂಛನ್ತಿ ನಿರ್ಜರಾಃ ॥ ೧೬ ॥

ಗಾಯಂತಿ ದೇವಾಃ ಕಿಲ ಗಾಯಕಾನಿ
ಧನ್ಯಾಸು ಯೇ ಭಾರತಭೂಮಿಭಾಗೇ ।
ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ
ಭವಂತಿ ಭೂಯಃ ಪುರುಷಾಃ ಸುರತ್ವಾತ್ ॥ ೧೭ ॥

---

ಹೊಂದಿದಾಗ ಯಾವನು ತನ್ನ ಶ್ರೇಯಸ್ಸನ್ನು ಸಾಧಿಸಿಕೊಳ್ಳುವುದಿಲ್ಲವೋ ಅವನು ತನ್ನ ಆತ್ಮವನ್ನು ತಾನೇ ವಂಚಿಸಿಕೊಂಡಂತಾಗುವುದು. ಆ ಮನುಷ್ಯ ನಾಗಿ ಹುಟ್ಟಿ ಅವನು ತನಗೆ ಶ್ರೇಯಸ್ಸನ್ನು ಸಾಧಿಸಿಕೊಳ್ಳದೆ ಇದ್ದರೆ ಅವನಿ ಗಿಂತಲೂ ಮೂಢನು ಬೇರೆಯಾದವನಿಲ್ಲ. ಆದ್ದರಿಂದ ಬಹುಕಾಲದ ಮೇಲೆ ದುರ್ಲಭವಾದ ಈ ಮನುಷ್ಯ ಜನ್ಮವನ್ನು ಹೊಂದಿ ಅದು ಮುಗಿಯುವುದರೊಳಗೆ ನರಕವನ್ನು ಹೊಂದದಂತೆ ಮಾಡಿಕೊಳ್ಳಬೇಕು. ದೇವತೆಗಳೂ ಕೂಡ ನಾವು ಯಾವಾಗ ಭಾರತವನ್ನು ಹೊಂದಿ ಮಾಘಮಾಸದಲ್ಲಿ ಹೊರಗಡೆಯ ನೀರಿನಲ್ಲಿ ಉಷಃಕಾಲದಲ್ಲಿ ಸ್ನಾನಮಾಡಿಯೇವು ? ಎಂದು ಆಶಿಸುತ್ತಿರುತ್ತಾರೆ.

೧೭. ಸ್ವರ್ಗ ಮೋಕ್ಷಗಳನ್ನು ಹೊಂದಲು ದಾರಿಯನ್ನು ತೋರಿಸುವ ಈ ಭಾರತದ ಭೂಮಿಯಲ್ಲಿ ಇರುವ ಮನುಷ್ಯರು ದೇವತೆಗಳಿಗಿಂತಲೂ ಉತ್ಕೃಷ್ಟರೂ ಮತ್ತು ಧನ್ಯರು. ಎಂಬುದಾಗಿ ಯಾವಾಗಲೂ ಹಾಡನ್ನು ಹಾಡುತ್ತಿರುವರು..

ಜಾನಾಮ ನೈತತ್ಕ್ವ ವಯಂ ವಿಲೀನೇ
ಸ್ವರ್ಗಪ್ರದೇ ಕರ್ಮಣಿ ದೇಹಬಂಧಂ ।
ಪ್ರಯಾಮಧನ್ಯಾಃ ಖಲು ತೇ ಮನುಷ್ಯಾ
ಯೇ ಭಾರತೇ ನೇಂದ್ರಿಯವಿಪ್ರಹೀಣಾ ॥ ೧೮ ॥

ತಸ್ಮಾನ್ನಾ ಭೈಷ್ಟಮಾಭೈಷ್ಟ ಕುರುಧ್ವಂ ಧರ್ಮಮಾದನಾತ್ ।
ಗೃಹೀತದಾನಪಾಥೇಯಾಃ ಸುಖಂ ಯಾನ್ತಿ ಯಮಾಧ್ವನಿ ॥ ೧೯ ॥

ಅನ್ಯಥಾ ಕ್ಲಿಶ್ಯತೇ ಜನ್ತುಃ ಪಾಥೇಯರಹಿತೇ ಪಥಿ ।
ಇತಿ ಜ್ಞಾತ್ವಾ ನರಃ ಪುಣ್ಯಂ ಕುರ್ಯಾತ್ಪಾಪಂ ವಿವರ್ಜಯೇತ್ ॥ ೨೦ ॥

ಪುಣ್ಯೇನ ಯಾತಿ ದೇವತ್ವಮಧರ್ಮಾನ್ನರಕಂ ವ್ರಜೇತ್ ।
ಯೇ ಮನಾಗಪಿ ದೇವೇಶಂ ಪ್ರಪನ್ನಾಃ ಶರಣಂ ಹರಿಂ ॥ ೨೧ ॥

---

೧೮. ಈ ಸ್ವರ್ಗವನ್ನು ಕೊಡುವ ಕೆಲಸ ಮಾಡುವ ದೇಹವನ್ನು ಈ ಭೂಲೋಕದಲ್ಲಿ ನಾವು ಯಾವಾಗ ಹೊಂದುತ್ತೇವೆಂಬುದನ್ನು ತಿಳಿದಿಲ್ಲವಲ್ಲ! ಭಾರತ ಭೂಮಿಯಲ್ಲಿ ಇಂದ್ರಿಯಗಳಿಗೆ ಅಧೀನರಾಗದೇ ಇರುವ ಜನರೇ ಧನ್ಯರಲ್ಲವೆ !

೧೯. ಆದ್ದರಿಂದ ಹೆದರಬೇಡಿರಿ. ಹೆದರಬೇಡಿರಿ. ವಿಶ್ವಾಸದಿಂದಲೂ ಶ್ರದ್ಧೆಯಿಂದಲೂ ಧರ್ಮದ ಕೆಲಸವನ್ನು ಮಾಡಿರಿ. ದಾನವೆಂಬ ಅನ್ನದ ಗಂಟನ್ನು (ಬುತ್ತಿಯನ್ನು) ಹೊಂದಿರುವವರು ಯಮನ ಮಾರ್ಗದಲ್ಲಿ ಸುಖವಾಗಿ ಹೋಗುತ್ತಾರೆ.

೨೦. ಹಾಗೆ ದಾನ ಮಾಡದೇ ಆ ದಾನದ ಬುತ್ತಿಯನ್ನು ತೆಗೆದುಕೊಂಡು ಹೋಗದಿದ್ದರೆ ಆ ಪ್ರಾಣಿಯು ಅನ್ನವಿಲ್ಲದೆ ದಾರಿಯಲ್ಲಿ ತೊಂದರೆ ಪಡುತ್ತಾನೆ ಈ ವಿಷಯವನ್ನು ತಿಳಿದು ಮನುಷ್ಯನು ಪುಣ್ಯವನ್ನು ಮಾಡಬೇಕು. ಪಾಪವನ್ನು ಬಿಟ್ಟುಬಿಡಬೇಕು.

೨೧-೨೫. ಪುಣ್ಯದಿಂದ ದೇವತೆಯಾಗುತ್ತಾನೆ. ಎಂದರೆ ಸ್ವರ್ಗಕ್ಕೆ ಹೋಗುತ್ತಾನೆ. ಪಾಪದಿಂದ ನರಕಕ್ಕೆ ಹೋಗುತ್ತಾನೆ. ಯಾರು ಸ್ವಲ್ಪ ವಾದರೂ ಆ ಸ್ವಾಮಿಯಾದ ವಿಷ್ಣುವನ್ನು ಶರಣು ಹೊಂದುತ್ತಾರೆಯೋ ಅವರು

ತೇಪಿ ಘೋರಂ ನ ಪಶ್ಯಂತಿ ಯಮಸ್ಯ ಸದನಂ ನರಾಃ ।
ನಾರಾಯಣಂ ಪರಂ ದೇವಂ ಸಚ್ಚಿದಾನಂದವಿಗ್ರಹಂ ॥ ೨೨ ॥

ಯಜಧ್ವಂ ಬಾಂಧವಾ ಯೂಯಂ ವಿಮುಕ್ತಿಂ ಯದಿ ವಾಂಛಥ ।
ಭಾವನಾಮಯಮೇತದ್ಧೀ ಜಗತ್ ಸ್ಥಾವರಜಂಗಮಂ ॥ ೨೩ ॥

ವಿದ್ಯುದ್ವಿಲೋಲಂ ವಿಜ್ಞಾಯ ತಂ ಯಜಧ್ವಂ ಜನಾರ್ದನಂ ।
ಮಾ ಕೃಣುಧ್ವಮಹಂಕಾರಂ ವಿದ್ಯುಲ್ಲೇಖಾಸಮಂ ವೃಥಾ ॥ ೨೪ ॥

ಶರೀರಂ ಮೃತ್ಯುಸಂಯುಕ್ತಂ ಜೀವಿತಂ ಚಾಪಿ ಚಂಚಲಂ ।
ರಾಜಾದಿಭಿಃ ಧನಂ ಬಾಧ್ಯಂ ಸಂಪದಃ ಕ್ಷಣಭಂಗುರಾಃ ॥ ೨೫ ॥

ಮಾತರಃ ಕಿನ್ನ ಜಾನೀಧ್ವಮಾಯುಷೋರ್ಧಂ ತು ನಿದ್ರಯಾ ।
ಹೃತಂ ಚ ಭೋಜನಾದ್ಯೈಶ್ಚ ಕಿಯದಾಯುಃ ಸಮಾಹೃತಂ ॥ ೨೬ ॥

---

ಯಮನ ಪಟ್ಟಣಕ್ಕೆ ಹೋಗುತ್ತಾ ಕೆಟ್ಟದಾದ ಕಷ್ಟವಾದ ವಿಷಯಗಳನ್ನು ನೋಡುವುದೇ ಇಲ್ಲ. ಪರಸ್ವರೂಪನಾದ ಸತ್ ಚಿತ್ ಆನಂದ ಸ್ವರೂಪನಾದ ನಾರಾಯಣನನ್ನು ಪೂಜಿಸಿರಿ. ಎಲೈ ಬಾಂಧವರಿರಾ! ಹಾಗೆ ಆತನನ್ನು ಪೂಜಿಸಿದರೆ ಮುಕ್ತಿಯು ಸಿಕ್ಕುತ್ತದೆ. ಚರಾಚರ ರೂಪವಾದ ಈ ಪ್ರಪಂಚವು ಭಾವನಾರೂಪವಾದುದು. ಕ್ರಿಯಾರೂಪವಾದುದು ಮಾಯಾರೂಪವಾದುದು. ಇದು ಮಿಂಚಿನಂತೆ ಚಂಚಲವೆಂದು ತಿಳಿದು ಆ ಸ್ವಾಮಿಯಾದ ಜನಾರ್ದನನನ್ನು ಪೂಜಿಸಿರಿ. ಈ ಪ್ರಪಂಚವು ಮಿಂಚಿನ ಬಳ್ಳಿಯಂತೆ ಚಂಚಲವಾಗಿದೆ. ವ್ಯರ್ಥವಾದುದು. ಆದ್ದರಿಂದ ಅಹಂಕಾರವನ್ನು ಮಾಡಬೇಡಿರಿ. ಈ ಶರೀರವಾದರೋ ಮೃತ್ಯುವಿನಿಂದ ಹಿಂಬಾಲಿಸಲ್ಪಟ್ಟದ್ದು. ಜೀವಿತವಾದರೋ ಚಂಚಲವಾದುದು. ಹಣ ಮುಂತಾದುವನ್ನು ರಾಜನು ತೊಂದರೆ ಕೊಟ್ಟು ಕಿತ್ತುಕೊಳ್ಳುತ್ತಾನೆ. ಸಂಪತ್ತುಗಳು ಕ್ಷಣಕಾಲವಿದ್ದು ಒಡನೆಯೇ ನಾಶವಾಗುತ್ತವೆ.

೨೬. ಎಲೈ ತಾಯಿಯರ! ಇದು ನಿಮಗೇಕೆ ಗೊತ್ತಾಗುವುದಿಲ್ಲ? ಮನುಷ್ಯನ ಆಯುಸ್ಸಿನಲ್ಲಿ ಅರ್ಧ ಭಾಗವು ನಿದ್ದೆಯಿಂದ ಕಳೆದು ಹೋಗುತ್ತದೆ. ಉಳಿದ ಅರ್ಧದಲ್ಲಿಯೂ ಆಟ ಊಟಗಳಿಂದ ಸ್ವಲ್ಪಮಟ್ಟಿಗೆ ನಾಶವಾಗುತ್ತದೆ.

ಕಿಯದಾಯುರ್ಬಲವತಾ ವೃದ್ಧತ್ವಂ ಚ ಕಿಯತ್ ಸ್ಮೃತಂ |
ಕಿಯದ್ವಿಷಯಭೋಗೈಶ್ಚ ಕಿಯದ್ಧರ್ಮಂ ಕರಿಷ್ಯಥ || ೨೭ ||

ಬಾಲಭಾವೇ ಚ ವಾರ್ಧಕ್ಯೇ ನ ಲಭೇತಾಚ್ಯುತಾರ್ಚನಂ |
ವಯಸೀಹೈವ ಧರ್ಮಂ ಚ ಕುರುಧ್ವಮನಹಂಕೃತಾಃ || ೨೮ ||

ಮಾ ವಿನಶ್ಯಥ ಸಂಸಾರಗರ್ತೇ ಮಗ್ನಾ ಭಯಂಕರೇ |
ವಪುರ್ವಿನಾಶನಿಲಯಮಾಪದಾಂ ಪರಮಂ ಪದಂ || ೨೯ ||

ಶರೀರಂ ರೋಗನಿಲಯಂ ಮಲಾದ್ಯೈರಪಿ ದೂಷಿತಂ |
ಕಿಮರ್ಥಂ ಶಾಶ್ವತಧಿಯಾ ಪಾಪಂ ಕುರುತ ಮಾತರಃ || ೩೦ ||

ಅಸಾರಭೂತೇ ಸಂಸಾರೇ ನಾನಾದುಃಖಸಮನ್ವಿತೇ |
ವಿಶ್ವಾಸೋ ನೋಪಗಂತವ್ಯೋ ನಿಶ್ಚಯಂ ನಾಶಮೇಶ್ಯಥ || ೩೧ ||

---

೨೭. ಉಳಿದ ಆಯುಸ್ಸಿನಲ್ಲಿ ಬಾಲ್ಯವೂ ಮುಪ್ಪೂ ಎಷ್ಟೋ ಕಳೆದು ಹೋಗುತ್ತವೆ. ವಿಷಯ ಭೋಗದಲ್ಲಿ ಕೆಲವು ಭಾಗವು ಕಳೆದು ಹೋಗುತ್ತದೆ. ಆದ್ದರಿಂದ ಧರ್ಮವನ್ನು ಮಾಡಿರಿ. ಆ ಧರ್ಮವನ್ನು ತಾನೆ ಎಷ್ಟು ಮಾಡೀರಿ ? ಅದೂ ಅಲ್ಪವೆ !

೨೮. ಬಾಲ್ಯದಲ್ಲಿಯೂ ಮುಪ್ಪಿನಲ್ಲಿಯೂ ಅಚ್ಯುತನನ್ನು ಪೂಜೆ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಈ ಯೌವ್ವನದಲ್ಲಿಯೇ ಅಹಂಕಾರಪಡದೆ ಧರ್ಮವನ್ನು ಮಾಡಿರಿ. ಅಚ್ಯುತನನ್ನು ಪೂಜಿಸಿರಿ.

೨೯. ಈ ಭಯಂಕರವಾದ ಸಂಸಾರವೆಂಬ ಹಳ್ಳದಲ್ಲಿ ಬಿದ್ದು ನಾಶವಾಗಬೇಡಿರಿ. ಈ ದೇಹವು ನಾಶವಾಗ ತಕ್ಕದ್ದು. ಆಪತ್ತುಗಳಿಗೆ ಸ್ಥಾನವಾದುದು ಎಂಬುದನ್ನು ತಿಳಿಯಿರಿ.

೩೦. ಈ ಶರೀರವು ರೋಗಕ್ಕೆ ತವರು ಮನೆಯು. ಮಲಮೂತ್ರಗಳಿಂದ ಹೇಸಿಗೆಯಾದುದು. ಇದನ್ನು ಶಾಶ್ವತವೆಂದು ತಿಳಿದು ಪರಕ್ಕೋಸ್ಕರ ಪಾಪವನ್ನು ಮಾಡುತ್ತೀರಿ ?

೩೧. ಅನೇಕ ದುಃಖಗಳಿಂದ ಸಾರವಿಲ್ಲದ ಈ ಸಂಸಾರದಲ್ಲಿ ವಿಶ್ವಾಸವನ್ನು ಹೊಂದಬೇಡಿರಿ. ಖಂಡಿತವಾಗಿಯೂ ನಾಶಹೊಂದುತ್ತೀರಿ.

ಶೃಣುಧ್ವಂ ಬಾಂಧವಾಸ್ಸರ್ವೇ ಸತ್ಯಮಸ್ಮಾಭಿರುಚ್ಯತೇ ।
ಕಾಯಸ್ಸನ್ನಿಹಿತಾಪಾಯಃ ಪೂಜ್ಯ ಏವ ಜನಾರ್ದನಃ ॥ ೩೨ ॥

ಯಜಧ್ವಂ ಸತತಂ ವಿಷ್ಣುಂ ಮಾನುಷ್ಯಮತಿದುರ್ಲಭಂ ।
ಕೋಟಿಜನ್ಮಸಹಸ್ರೇಷು ಸ್ಥಾವರಾದಿಷು ಬಾಂಧವಾಃ ॥ ೩೩ ॥

ಸಂಭ್ರಾಂತಸ್ಯ ತು ಮಾನುಷ್ಯಂ ಕಥಂ ಚಿತ್ಪರಿಲಭ್ಯತೇ ।
ತತ್ರಾಪಿ ದೇವತಾಬುದ್ಧಿರ್ದಾನಬುದ್ಧಿಶ್ಚ ಮಾತರಃ ॥ ೩೪ ॥

ಯೋಗಬುದ್ಧಿಸ್ತಥಾ ಚೈವ ದುರ್ಲಭಾಶ್ಚೈವಮಾತರಃ ।
ದುರ್ಲಭಂ ಮಾನುಷಂ ಪ್ರಾಪ್ಯ ಯೋ ಹರಿಂ ನಾರ್ಚಯೇತ್ಸಕೃತ್ ॥ ೩೫ ॥

ಆತ್ಮಾನಮಾತ್ಮನಾ ಹಂತಿ ಕೋನ್ಯಸ್ತಸ್ಮಾದಚೇತನಃ ।
ದಂಭಾಚಾರಂ ಪರಿತ್ಯಜ್ಯ ಯಜಧ್ವಂ ಚಕ್ರಪಾಣಿನಂ ॥ ೩೬ ॥

---

೩೨. ಎಲೈ ಬಾಂಧವರಿರಾ ! ನೀವೆಲ್ಲರೂ ಕೇಳಿರಿ. ನಾವು ಸತ್ಯವಾಗಿ ಹೇಳುತ್ತಿದ್ದೇವೆ. ಈ ದೇಹಕ್ಕೆ ಯಾವಾಗಲೂ ಅಪಾಯವು ಹತ್ತಿರದಲ್ಲಿಯೇ ಕಾದಿರುವುದು. ಆದ್ದರಿಂದ ಜನಾರ್ದನನನ್ನು ಪೂಜಿಸಿರಿ.

೩೩-೩೬. ಆದ್ದರಿಂದ ವಿಷ್ಣುವನ್ನು ಯಾವಾಗಲೂ ಪೂಜಿಸಿರಿ. ನಾವು ಸಾಧಾರಣವಾಗಿ ಕೋಟಿಸಾವಿರ ಜನ್ಮಗಳನ್ನು ಹೊಂದುತ್ತೇವೆ. ಅವುಗಳಲ್ಲಿ ನಾವು ಸ್ಥಾವರ ಜನ್ಮವನ್ನೂ ಜಂಗಮ ಜನ್ಮವನ್ನೂ ಎಷ್ಟನ್ನು ಹೊಂದುತ್ತೇವೆಯೋ ಗೊತ್ತಿರುವುದಿಲ್ಲ. ಅವುಗಳಲ್ಲೆಲ್ಲಾ ಸುತ್ತಿ ಕೊನೆಗೆ ಕಷ್ಟದಿಂದ ಯಾವುದೋ ಪುಣ್ಯದ ವಿಶೇಷದಿಂದ ಈ ಮನುಷ್ಯ ಜನ್ಮವು ಸಿಕ್ಕುತ್ತದೆ. ಈ ಮನುಷ್ಯ ಜನ್ಮವನ್ನು ಹೊಂದಿಯೂ ದೇವತಾ ಪೂಜೆಯ ಬುದ್ಧಿ ದಾನಬುದ್ಧಿಗಳು ಹುಟ್ಟುವುದಿಲ್ಲ. ಅದರಂತೆಯೇ ಯೋಗಬುದ್ಧಿಯೂ ಹುಟ್ಟುವುದು ಕಷ್ಟವು. ಸಿಕ್ಕಲು ಕಷ್ಟವಾಗಿರುವ ಈ ಮನುಷ್ಯ ಜನ್ಮವನ್ನು ಹೊಂದಿಯೂ ಯಾವನು ಹರಿಯನ್ನು ಪೂಜಿಸುವುದಿಲ್ಲವೋ ಅವನು ತನ್ನನ್ನು ತಾನೇ ಕೊಂದುಕೊಳ್ಳುತ್ತಾನೆ. ಅವನಿಗಿಂತಲೂ ಬುದ್ಧಿಗೆಟ್ಟವನು ಮತ್ತಾವನಿರುವನು ? ಡಂಭಾಚಾರ ರೂಪವಾದ ಕಪಟಗಳನ್ನು ಬಿಟ್ಟು ಆ ಚಕ್ರಪಾಣಿಯಾದ ವಿಷ್ಣುವನ್ನು ಪೂಜಿಸಿರಿ. ಕೈಯ್ಯನ್ನು

ಭೂಯೋ ಭೂಯೋ ಹಿತಂ ಬ್ರೂವೋ ಭುಜಮುದ್ಧೃತ್ಯ ಭಕ್ತಿತಃ |
ವಿಷ್ಣುಃ ಸರ್ವಾತ್ಮನಾ ಪೂಜ್ಯಃ ತ್ಯಾಜ್ಯಾಸೂಯಾ ತಥಾ ನೃಭಿಃ || ೩೭ ||

ಅನಾರಾಧ್ಯ ಜಗನ್ನಾಥಂ ಸರ್ವಧಾತಾರಮಚ್ಯುತಂ |
ಸಂಸಾರಸಾಗರೇ ಮಗ್ನಾಃ ಕಥಂ ಪಾರಂ ಗಮಿಷ್ಯಥ || ೩೮ ||

ಬಹುನಾತ್ರ ಕಿಮುಕ್ತೇನ ಮಾತರಃ ಶ್ರೂಯತಾಮಿದಂ |
ಕಿಂ ವೇದೈಃ ಕಿಂ ತಪೋಭಿರ್ವಾ ಕಿಂ ಯಜ್ಞೈರುಕ್ತ ದಕ್ಷಿಣೈಃ || ೩೯ ||

ಅಹನ್ಯಹನಿ ಗೋವಿಂದಂ ತನ್ಮಯತ್ವೇನ ಶೃಣ್ವತಾಂ |
ಕಿಂ ಪುತ್ರದಾರೈಃ ಕಿಂ ಭೃತ್ಯೈಃ ಕಿಂ ಗೃಹಕ್ಷೇತ್ರಬಾಂಧವೈಃ || ೪೦ ||

ಅಹನ್ಯಹನಿ ಗೋವಿಂದಕೀರ್ತನಂ ಪರಿಶೃಣ್ವತಾಂ |
ತಸ್ಮಾದ್ಭೂಯಮಂ ಭಯಂ ತ್ಯಕ್ತ್ವಾ ಕುರುಧ್ವಂ ಕೇಶವಾರ್ಚನಂ || ೪೧ ||

---

ಮೇಲಕ್ಕೆತ್ತಿಕೊಂಡು. ಭಕ್ತಿಯಿಂದ ನಿಮಗೆ ಹಿತವಾದ ಮಾತನ್ನು ಕ್ಷಣಕ್ಷಣಕ್ಕೂ ಹೇಳುತ್ತೇನೆ. ವಿಷ್ಣುವನ್ನು ಸರ್ವ ಪ್ರಕಾರದಿಂದಲೂ ಪೂಜಿಸಿರಿ. ಅಸೂಯೆಯನ್ನು ಬಿಟ್ಟುಬಿಡಿರಿ.

೩೮. ಎಲ್ಲವನ್ನೂ ಕೊಡುವ ನಾಶರಹಿತನಾದ ಜಗನ್ನಾಥನಾದ ವಿಷ್ಣುವನ್ನು ಪೂಜಿಸದೆ ಸಂಸಾರ ಸಾಗರದಲ್ಲಿ ಮುಳುಗಿರುವ ನೀವು ಹೇಗೆ ತಾನೆ ದಡವನ್ನು ಹೊಂದೀರಿ ?

೩೯. ಎಲೈ ತಾಯಿಯರಾ ! ಬಹುವಾದ ಮಾತಿನಿಂದೇನು ಪ್ರಯೋಜನವು ? ನಾವು ಹೇಳಿದುದನ್ನು ಕೇಳಿರಿ. ವೇದಗಳಿಂದಾಗಲೀ ತಪಸ್ಸುಗಳಿಂದಾಗಲೀ ಯಜ್ಞಗಳಿಂದಾಗಲೀ ದಾನಗಳಿಂದಾಗಲೀ ಉಪಯೋಗವಿಲ್ಲ

೪೦. ಪ್ರತಿದಿನವೂ ಗೋವಿಂದನ ನಾಮವನ್ನು ಅವನಲ್ಲಿ ನಟ್ಟ ಬುದ್ಧಿಯಿಂದಲೇ ಹೇಳುತ್ತಲೂ ಕೇಳುತ್ತಲೂ ಇರಿ. ಮಕ್ಕಳು ಹೆಂಡತಿ ಗಂಡಂದಿರು ಕೆಲಸ, ಮನೆ, ಭೂಮಿ ನೆಂಟರು ಇವರೊಬ್ಬರಿಂದಲೂ ಪ್ರಯೋಜನವಿಲ್ಲ.

೪೧. ಪ್ರತಿದಿನವೂ ಗೋವಿಂದನ ಕೀರ್ತನೆಯನ್ನು ಮಾಡುತ್ತಾ ಕೇಳುತ್ತಾ ಇರಿ. ಅದರಿಂದ ನಿಮಗೆ ಆ ಭಯವು ಹೋಗುತ್ತದೆ. ಭಯವನ್ನು ಬಿಟ್ಟು ಕೇಶವನ ಪೂಜೆಯನ್ನು ಮಾಡಿರಿ.

ಪಿಬಧ್ವಮಮಲಂ ಶುದ್ಧಂ ಶಾಲಗ್ರಾಮಶಿಲಾಜಲಂ ।
ಕುರುಧ್ವಮುಪವಾಸಂ ಚ ವಾಸರೇಷು ಮಧುದ್ರುಹಃ ॥ ೪೨ ॥

ಸ್ನಾನಂ ಕುರುಧ್ವಮನಿಶು ಮಕರಸ್ಥೇ ದಿವಾಕರೇ ।
ಕುರುಧ್ವಂ ಭರ್ತೃಸೇವಾಂ ಚ ಭೀತಿಸ್ತ್ಯಾಜ್ಯಾ ಸುದೂರತಃ ॥ ೪೩ ॥

ಏಕಾದಶೀ ತಿಥಿಃ ಪುಣ್ಯಾ ಸರ್ವಪಾಪಪ್ರಣಾಶಿನೀ ।
ಪಕ್ಷೇ ಪಕ್ಷೇ ಸಮಾಯಾತಿ ಕಿಂ ನು ವೋ ನರಕಾದ್ಭಯಂ ॥ ೪೪ ॥

ಪುಣ್ಯದಾಯೀ ಪುನರ್ಮಾಘೋ ಬಹಿಸ್ತೋಯೇ ನಿಮಜ್ಜನಾತ್ ।
ವರ್ಷೇ ವರ್ಷೇ ಸಮಾಯಾತಿ ಕಿಂ ನು ವೋ ನರಕಾದ್ಭಯಂ ॥ ೪೫ ॥

॥ ವಸಿಷ್ಠ ಉವಾಚ ॥

ಏತಾವದುಕ್ತ್ವಾ ಮಾತ್ರ್ಯಾಣಾಂ ಕನ್ಯಾಸ್ತಾಃ ಪುನರೇವ ಹಿ ।
ಮಾಘಸ್ನಾನೋಪವಾಸಾದಿ ಧರ್ಮದಾನಾನಿ ಚಕ್ರಿರೇ ॥ ೪೬ ॥

---

೪೨. ಶುದ್ಧವಾಗಿಯೂ ಪವಿತ್ರವಾಗಿಯೂ ಇರುವ ಸಾಲಿಗ್ರಾಮ ಶಿಲೆಯ ತೀರ್ಥವನ್ನು ಕುಡಿಯಿರಿ. ಹರಿಯ ವಾಸರವಾದ ಏಕಾದಶಿ ಮುಂತಾದುವುಗಳಲ್ಲಿ ಉಪವಾಸವನ್ನು ಮಾಡಿರಿ.

೪೩. ಮಕರರಾಶಿಯಲ್ಲಿ ಸೂರ್ಯನಿರುವಾಗ ನಿತ್ಯವೂ ಸ್ನಾನವನ್ನು ಮಾಡಿರಿ. ಗಂಡಂದಿರ ಸೇವೆಯನ್ನು ಶ್ರದ್ಧೆಯಿಂದ ಮಾಡಿರಿ. ಹೆದರಿಕೆಯನ್ನು ದೂರವಾಗಿ ಬಿಟ್ಟುಬಿಡಿರಿ.

೪೪. ಏಕಾದಶೀ ತಿಥಿಯು ಬಹು ಪುಣ್ಯಕರವಾದುದು. ಎಲ್ಲಾ ಪಾಪಗಳನ್ನೂ ನಾಶ ಮಾಡುತ್ತವೆ. ಅದು ಪ್ರತಿಯೊಂದು ಪಕ್ಷದಲ್ಲಿಯೂ ಬರುತ್ತದೆ. ನಿಮಗೆ ನರಕದಿಂದ ಹೆದರಿಕೆಯುಂಟಾಗಲು ಕಾರಣವೇನು ?

೪೫. ಪುಣ್ಯವನ್ನು ಕೊಡುವ ಮಾಘ ಮಾಸವು ಹೊರಗಡೆಯ ನೀರಿನಲ್ಲಿ ಸ್ನಾನ ಮಾಡುವುದರಿಂದ ಪುಣ್ಯವನ್ನು ಕೊಡುತ್ತದೆ. ಮಾಘವು ಪ್ರತಿವರ್ಷವೂ ಬರುತ್ತದೆ. ನೀವು ನರಕದಿಂದ ಹೆದರಲು ಕಾರಣವೇನು ?

೪೬. ವಸಿಷ್ಠನು ಹೇಳಿದನು ಆ ಕನ್ಯೆಯರು ತಾಯಿಯರಿಗೆ ಇದನ್ನು ಹೇಳಿ ಮತ್ತೆ ಅವರೂ ಕೂಡ ಮಾಘ ಸ್ನಾನವನ್ನೂ ಉಪವಾಸವನ್ನೂ ದಾನ ಧರ್ಮಗಳನ್ನೂ ಮಾಡಿದರು.

ಏತಾವದೂಚುರ್ಮಾತೄಣಾಂ ಕನ್ಯಾಃ ಕಮಲಲೋಚನಾಃ ।
ಯಮಲೋಕಸ್ಯ ಮಾಹಾತ್ಮ್ಯಂ ತನ್ಮಯಾ ವರ್ಣಿತಂ ತವ ॥ ೪೭ ॥

ಮಾಘಮಾಸಕೃತಮಜ್ಜನೋ ನರಃ
ಪಾರಿಜಾತಕುಸುಮೈರಲಂಕೃತಃ ।
ಅಪ್ಸರಃ ಕುಚತಟೇನಿಪೀಡಿತಃ
ಕ್ರೀಡತಿ ತ್ರಿದಶನಂದನೇ ವನೇ ॥ ೪೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಧರ್ಮ ಪ್ರಶಂಸಾ ಕಥನಂ ನಾಮ ಅಷ್ಟಾವಿಂಶತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೪೭. ಆ ಕಮಲಲೋಚನೆಯರಾದ ಕನ್ಯೆಯರು ತಾಯಿಯರಿಗೆ ಯಮಲೋಕದ ಮಹಿಮೆಯನ್ನು ಇಷ್ಟು ಹೇಳಿದರು. ಅದನ್ನು ನಿನಗೆ ನಾನು ವರ್ಣಿಸಿದ್ದೇನೆ.

೪೮. ಮಾಘಮಾಸದಲ್ಲಿ ಸ್ನಾನ ಮಾಡಿದ ಮನುಷ್ಯನು ಪಾರಿಜಾತದ ಹೂವಿನಿಂದ ಅಲಂಕೃತನಾಗಿ ಅಪ್ಸರ ಸ್ತ್ರೀಯರೊಡನೆ ಇಂದ್ರನ ನಂದನ ವನದಲ್ಲಿ ಸುಖಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಧರ್ಮ ಪ್ರಶಂಸೆಯ ಕಥನ ಎಂಬ ಇನ್ನೂರ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ದಿಲೀಪ ಉವಾಚ ॥

ಷಡಶೀತಿಸಹಸ್ರಾಣಿ ಯೋಜನಾನಾಮತೀತ್ಯ ತತ್ ।
ವೈವಸ್ವತಪುರಂ ಜ್ಞೇಯಂ ನಾನಾರೂಪಮವಸ್ಥಿತಂ ॥ ೧ ॥

ತತ್ರೈತಾಭಿಃ ಕತೀದಿನೈರ್ಗತಮಾಗತಮಪ್ಯಥ ।
ಶರೀರಮಾಸಾಂ ಕನ್ಯಾನಾಮತಿಷ್ಠತ್ಕಥಮವ್ರಣಂ ॥ ೨ ॥

ಭಗವನ್ ಮುನಿಶಾರ್ದೂಲ ವದ ನಿಸ್ಸಂಶಯಂ ಮಮ । ॥ ೩ ॥

---

## ಇನ್ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯವು



೧. ದೀಲಿಪನು ಹೇಳಿದನು-ಯಮನ ಪುರವು ಎಂಭತ್ತಾರು ಸಾವಿರ ಯೋಜನದಗಲವಿರುವುದು. ಮತ್ತು ನಾನಾ ಬಗೆಯಾಗಿರುವುದು. ಎಂಬುದಾಗಿ ತಿಳಿಯಬೇಕು.

೨. ಅಲ್ಲಿಗೆ ಈ ಕನ್ಯೆಯರು ಎಷ್ಟು ದಿನಗಳಲ್ಲಿ ಹೋಗಿ ಬಂದರು ? ಈ ಕನ್ಯೆಯರ ಶರೀರವು ಅಷ್ಟು ದಿನಗಳವರೆಗೂ ಕೆಡದೆ ಹೇಗಿದ್ದಿತು ?

೩. ಎಲೈ ಪೂಜ್ಯನಾದ ಮುನಿಶ್ರೇಷ್ಠನೆ ! ನನ್ನ ಸಂಶಯವು ಹೋಗುವಂತೆ ಇವೆಲ್ಲವನ್ನೂ ಹೇಳು.

|| ವಸಿಷ್ಠ ಉವಾಚ ||

ಶೃಣು ರಾಜನ್ ಪ್ರವಕ್ಷ್ಯಾಮಿ ಗುಹ್ಯಮೇತನ್ಮಹಾಮತೇ ।
ಆಮಂಡಲಂ ಕೃತಯುಗೇ ಶರೀರಂ ನಾವಸೀದತಿ || ೪ ||

ಪಾದೋನಮಂಡಲಂ ತ್ರೇತಾಯುಗೇ ತಿಷ್ಠತಿ ತದ್ವಪುಃ |
ಅರ್ಧಮಂಡಲಪರ್ಯಂತಂ ತಿಷ್ಠತಿ ದ್ವಾಪರೇ ಯುಗೇ || ೫ ||

ಕಲೌ ಶರೀರಂ ಮರ್ತ್ಯಾನಾಂ ತಿಷ್ಠತ್ಯಾಪಾದಮಂಡಲಂ ।
ಚತುರ್ಗುಣಾ ಕೃತೇ ಬುದ್ಧಿಃ ತ್ರೇತಾಯಾಂ ತ್ರಿಗುಣಾ ಸ್ಮೃತಾ || ೬ ||

ದ್ವಾಪರೇ ದ್ವಿಗುಣಾ ಚೈವ ಕಲಾವೇಕ ಗುಣಾ ಸ್ಮೃತಾ ।
ದ್ವಾದಶಾಹಾತ್ಪರಂ ಮರ್ತ್ಯಾ ಗಚ್ಛಂತಿ ಯಮಸಾದನಂ || ೭ ||

ಇತೀರಿತಂ ತು ಯತ್ಸದ್ಭಿಃ ಪಾಪಿನಾಮೇವ ತನ್ನೃಪ |
ಇದಂ ಚ ಶೃಣುರಾಜೇಂದ್ರ ಗುಹ್ಯಾದ್ಗುಹ್ಯಂ ಬ್ರವೀಮಿ ತೇ || ೮ ||

---

೪-೮. ವಸಿಷ್ಠನು ಹೇಳಿದನು-ಎಲೈ ರಾಜನೇ! ಹೇಳುತ್ತೇನೆ. ಕೇಳು. ಇದು ಬಹು ರಹಸ್ಯವಾದುದು. ನಲವತ್ತೆಂಟು ದಿನಗಳಿಗೆ ಒಂದು ಮಂಡಲವೆಂದು ಹೆಸರು. ಕೃತಯುಗದಲ್ಲಿ ಪ್ರಾಣಹೋದ ಮೇಲೆ ಆ ಶವವು ಯಾವ ವಿಕಾರವನ್ನೂ ಹೊಂದದೆ ಒಂದು ಮಂಡಲ ಎಂದರೆ ನಾಲ್ವತ್ತೆಂಟು ದಿನಗಳು ಇರುತ್ತವೆ ತ್ರೇತಾ ಯುಗದಲ್ಲಿ ಆ ಶರೀರವು ಮೂವತ್ತಾರು ದಿನಗಳ ವರೆವಿಗೂ ಕೆಡದೆ ಇರಬಲ್ಲುದು. ದ್ವಾಪರ ಯುಗದಲ್ಲಿ ಆ ಶರೀರವು ಇಪ್ಪತ್ತನಾಲ್ಕು ದಿನಗಳ ವರೆಗೆ ಇರಬಲ್ಲದು. ಕಲಿಯುಗದಲ್ಲಿ ಅದೇ ಶರೀರವು ಹನ್ನೆರಡು ದಿನಗಳ ವರೆವಿಗೆ ಇರಬಲ್ಲುದು. ಮನುಷ್ಯನಿಗೆ ಬುದ್ಧಿಯು ಕೃತಯುಗದಲ್ಲಿ ನಾಲ್ಕು ಪಾಲೂ ತ್ರೇತಾಯುಗದಲ್ಲಿ ಮೂರು ಪಾಲೂ ದ್ವಾಪರ ಯುಗದಲ್ಲಿ ಎರಡು ಪಾಲೂ ಕಲಿಯುಗದಲ್ಲಿ ಒಂದು ಪಾಲೂ ಇರುತ್ತದೆ. ಮನುಷ್ಯರು ಹನ್ನೆರಡು ದಿನಗಳ ಮೇಲೆ ಯಮನ ಪಟ್ಟಣಕ್ಕೆ ಹೋಗುತ್ತಾರೆ. ಎಂದು ತಿಳಿದವರು ಹೇಳಿರುವುದು ಪಾಪಿಗಳ ವಿಷಯವೆಂದು ತಿಳಿ. ಆದರೆ ಎಲೈ ರಾಜನೇ! ಇದನ್ನು ಕೇಳು. ಇದು ಗುಟ್ಟಿನೊಳಗೂ ಗುಟ್ಟಾದುದು.

ಯಥಾ ಯಮಭಟಾಶ್ಶೀಘ್ರಂ ಗಚ್ಛಂತ್ಯಾಯಾನ್ತಿ ವಾಯುವತ್ ।
ಈಶ್ವರಾನುಗ್ರಹಾದೇವಂ ಗಚ್ಛಂತ್ಯಾಯಾನ್ತಿ ಕೇಚನ ॥ ೯ ॥

ಯಮಸ್ಯಾನುಗ್ರಹಾದೇತಾಃ ಕನ್ಯಾ ಯಮನಿಕೇತನಂ ।
ನರಕಾನ್ಯಾತನಾಸ್ತತ್ರ ದೃಷ್ಟ್ವಾ ಚ ಪುನರಾಗತಾಃ ॥ ॥ ೧೦ ॥

ಮಾಸಮಾಸಾಂ ಶರೀರಾಣಿ ರಕ್ಷಿತಾನಿ ಸ್ವಮಾತೃಭಿಃ ।
ತದಾ ಕೃತಯುಗಸ್ತಸ್ಮಾಚ್ಛರೀರಾಣಿ ಸ್ಥಿರಾಣಿ ಚ । ॥ ೧೧ ॥

ದೋಷೋಲಂಕರಣಾತ್ಪೂರ್ವಂ ಪ್ರೇತಸ್ಯ ಹಿ ನ ವಿದ್ಯತೇ ।
ಪ್ರೇತಾಲಂಕರಣಾ ದೂರ್ಧ್ವಂ ಶವಸ್ಪೃಷ್ಟಿರ್ವಿಧೀಯತೇ ॥ ॥ ೧೨ ॥

---

ಯಮಭಟರು ಈಶ್ವರನ ಅನುಗ್ರಹದಿಂದ ಹೇಗೆ ವಾಯುವಿನಂತೆ ಕ್ಷಣಕಾಲದಲ್ಲಿ ಹೋಗಿ ಬರುವರೋ ಅಂತೆಯೇ ಕೆಲವರು ಆ ಈಶ್ವರನ ಅನುಗ್ರಹದಿಂದ ಕ್ಷಣ ಕಾಲದಲ್ಲಿ ಹೋಗಿಬರುವರು.

೧೦. ಈ ಕನ್ಯೆಯರು ಯಮನ ಅನುಗ್ರಹದಿಂದ ಆ ಯಮನ ಪಟ್ಟಣದಲ್ಲಿ ರುವ ನರಕಗಳೆಲ್ಲವನ್ನೂ ಅಲ್ಲಿ ನಡೆಯುವ ಯಾತನೆಗಳನ್ನೂ ನೋಡಿಕೊಂಡು ಮತ್ತೆ ಬಂದರು.

೧೧-೧೨. ಇವರ ತಾಯಿಯರು ಈ ಕನ್ಯೆಯರ ಶರೀರವನ್ನು ಒಂದು ತಿಂಗಳವರೆವಿಗೂ ಕಾಪಾಡಿಕೊಂಡಿದ್ದರು. ಆಗ ಕೃತಯುಗವಾದುದರಿಂದ ಈ ಶರೀರಗಳು ಕೆಡದೆ ಸರಿಯಾಗಿ ಗಟ್ಟಿಯಾಗಿದ್ದುವು. ಸತ್ತವನು ಶರೀರವನ್ನು ಬಿಟ್ಟು ಬೇರೆಯ ರೂಪದಿಂದ ಹೋಗುತ್ತಾನಷ್ಟೆ. ಆಗ ಈ ಶರೀರವನ್ನು ಬಿಟ್ಟು ಒಂದು ಸೂಕ್ಷ್ಮಶರೀರವನ್ನು ಹೊಂದಿ ಹೋದ ಈ ಶರೀರದ ಸಂಬಂಧಿಯಾದ ಜೀವನಿಗೆ ಪ್ರೇತವೆಂದು ಹೆಸರು. ಈ ಪ್ರೇತ ಜನ್ಮವು ಸಪಿಂಡೀಕರಣವಾದಮೇಲೆ ಹೋಗುತ್ತದೆ. ಆ ಪ್ರೇತನಿಗೆ ಅಲಂಕಾರವನ್ನು ಮಾಡುವವರೆವಿಗೂ ಎಂದರೆ ವಸ್ತ್ರಾದಿಗಳನ್ನು ಕೊಡುವವರೆವಿಗೂ ಶವವನ್ನು ಮುಟ್ಟಿದರೆ ದೋಷವಿರುವುದಿಲ್ಲ. ಆ ಪ್ರೇತಕ್ಕೆ ಅಲಂಕಾರ ಮಾಡಿದಮೇಲೆ ಆ ಪ್ರೇತವು ಬಿಟ್ಟು ಹೋಗಿರುವ ಶರೀರ ವನ್ನು ಮುಟ್ಟಿದರೆ ಶವಸ್ಪರ್ಶನ ದೋಷವು ಉಂಟಾಗುತ್ತದೆ.

**ಮಾಘಸ್ನಾನೋಪವಾಸಾದಿ ಮಹಾಪುಣ್ಯಕೃತೋ ನರಾಃ |**
**ಏವಂ ಗಚ್ಛಂತಿ ಚಾಯಾಂತಿ ಪುಣ್ಯಂ ಸರ್ವತ್ರಕಾರಣಂ || ॥ ೧೩ ॥**

**ಪುಷ್ಕರೋ ನಾಮ ವಿಪ್ರೇಂದ್ರಃ ಪುರಾ ಗತ್ವಾ ಯಮಾಲಯಂ |**
**ಉತ್ಥಾಪಯಿತ್ವಾ ನರಕಾನ್ನರಾನ್ನಾರಕಿನೋ ಬಹೂನ್ ॥ ೧೪ ॥**

**ಆಗತ್ಯ ಪುನರತ್ರೈವ ಸ್ವಗೃಹೇ ಪೂರ್ವವತ್ ಸ್ಥಿತಃ |**
**ತ್ರೇತಾಯುಗೇ ಕದಾಚಿತ್ತು ರಾಮೋ ರಾಜ್ಯಂ ಪ್ರಶಾಸತಿ ॥ ೧೫ ॥**

**ದ್ವಿಜಸ್ಯ ಕಸ್ಯಚಿತ್ಪುತ್ರೋ ಮೃತೋ ಗತ್ವಾ ಯಮಾಲಯಂ |**
**ಪುನರ್ಜೀವನ ಪೃಥುಕಃ ಕಿಮೇತನ್ನ ಶ್ರುತಂ ತ್ವಯಾ ॥ ೧೬ ॥**

**ದೇವಕೀತನಯಃ ಕೃಷ್ಣೋ ಗುರೋಸ್ಸಾಂದೀಪನೇಸ್ಸುತಂ |**
**ಗ್ರಾಹಗ್ರಸ್ತಂ ಚಿರಾದ್ಧೃತ್ಯ ಪುನಸ್ಸ ಗುರವೇ ದದೌ ॥ ೧೭ ॥**

---

೧೩. ಪುಣ್ಯಗಳನ್ನು ಮಾಡಿರುವ ನರರು ಹೀಗೆ ಹೋಗುತ್ತಾರೆ. ಮತ್ತು ಬರುತ್ತಾರೆ. ಎಲ್ಲದಕ್ಕೂ ಪುಣ್ಯವೇ ಕಾರಣವು.

೧೪-೧೮. ಪುಷ್ಕರವೆಂಬ ಒಬ್ಬ ಬ್ರಾಹ್ಮಣನು ಪೂರ್ವದಲ್ಲಿ ಯಮನ ಪಟ್ಟಣಕ್ಕೆ ಹೋಗಿ ಅಲ್ಲಿರುವ ನರಕದ ಪಾಪಿಗಳನ್ನೆಲ್ಲಾ ಉದ್ಧಾರ ಮಾಡಿ ಮತ್ತೆ ಇಲ್ಲಿಗೇ ಬಂದು ಮನೆಯಲ್ಲಿ ಮೊದಲಿನಂತೆಯೇ ಸುಖವಾಗಿದ್ದನು. ತ್ರೇತಾಯು ಗದಲ್ಲಿ ಒಂದು ಸಾರಿ ಶ್ರೀರಾಮನು ರಾಜ್ಯಭಾರ ಮಾಡುತ್ತಿದ್ದಾಗ ಒಬ್ಬ ಬ್ರಾಹ್ಮಣನ ಮಗನು ಸತ್ತು ಯಮನ ಪಟ್ಟಣಕ್ಕೆ ಹೋದವನು ಮತ್ತೆ ಬದುಕಿ ಕೊಂಡನು. ಇದನ್ನು ನೀನು ಕೇಳಿಲ್ಲವೆ ! (ಆ ಜೀವವು ಬಂದು ಮತ್ತೆ ಇದೇ ದೇಹವನ್ನು ಹೊಕ್ಕಿತು) ದೇವಕಿಯ ಮಗನಾದ ಶ್ರೀ ಕೃಷ್ಣನು ತನ್ನ ಗುರುವಾದ ಸಾಂದೀಪಿನಿಯ ಮಗನನ್ನು ನೀರಿನೊಳಗೆ ಮೊಸಳೆಯು ಕಚ್ಚಿಕೊಂಡು ಕೊಂದು ಹಾಕಿರಲು ಆ ಸಾಂದೀಪಿನಿಯ ಮಾತಿನಂತೆ ಶ್ರೀ ಕೃಷ್ಣನು ಯಮನ ಪಟ್ಟಣದಿಂದ

**ಏವಮನ್ಯೇ ಜನಾಃ ಕೇಚಿದ್ಯಮಲೋಕಾತ್ಸಮಾಗತಾಃ ।**
**ಸಂಶಯೋತ್ರನ ಕರ್ತವ್ಯಃ ಕಿಂ ಭೂಯಃ ಶ್ರೋತುಮಿಚ್ಛಸಿ ॥ ೧೮ ॥**

**॥ ದಿಲೀಪ ಉವಾಚ ॥**

**ಪುಷ್ಕರೋನಾಮ ವಿಪ್ರೇಂದ್ರಃ ಕುತ್ರತ್ಯಃ ಕಥಮಾಗತಃ ।**
**ಉತ್ತಾರಿತಾಃ ಕಥಂ ತೇನ ನರಕೇಭ್ಯೋಽಪಿ ಪಾಪಿನಃ ॥ ೧೯ ॥**

**ರಾಮರಾಜ್ಯೇ ದ್ವಿಜಸುತಃ ಕಿಂ ಮೃತಃ ಕಥಮಾಗತಃ ।**
**ಭಗವಾನ್ ದೇವಕೀಪುತ್ರೋ ಗುರೋಸ್ಸಾಂದೀಪನೇಸ್ಸುತಂ ॥ ೨೦ ॥**

---

ಆ ಮಗನನ್ನು ತಂದು ಒಪ್ಪಿಸಿದನು. ಇನ್ನೂ ಇದೇ ರೀತಿಯಾಗಿ ಬಹು ಜನರು ಯಮಲೋಕದಿಂದ ಮರಳಿ ಬಂದಿದ್ದಾರೆ. ಈ ವಿಷಯದಲ್ಲಿ ಸಂಶಯ ಪಡಬೇಡ. ಮತ್ತೇನು ಬೇಕು ? ಕೇಳು ಹೇಳುತ್ತೇನೆ.

(ವಿಶೇಷ:-ದಿಲೀಪನಿಗೆ ವಸಿಷ್ಠನು ಶ್ರೀರಾಮನ ವಿಷಯವನ್ನೂ ಶ್ರೀ ಕೃಷ್ಣನ ವಿಷಯವನ್ನೂ ಹಿಂದೆ ಕಳೆದುದುನ್ನಾಗಿ ಹೇಳಿದ್ದಾನೆ. ಶ್ರೀ ರಾಮನಿಗೆ ದಿಲೀಪನು ನಾಲ್ಕು ತಲೆ ಹಿಂದಿನವನೆಂದು ಆತನ ವಂಶವೃಕ್ಷದಿಂದ ತಿಳಿದು ಬರುತ್ತದೆ. ಶ್ರೀ ಕೃಷ್ಣನೂ ಆ ರಾಮನಾದ ಮೇಲೆ ಕೆಲವು ಯುಗಗಳ ಈಚಿನವನು. ಇವರ ಕಥೆಯನ್ನು ನಡೆದುದನ್ನಾಗಿ ಹೇಳಿರುವುದು ಸರಿಯಲ್ಲವೆಂದು ತೋರಬಹುದು. ಆದರೆ ಇದೇ ಪದ್ಮಪುರಾಣದಲ್ಲಿ ಶಂಭುವು ಶ್ರೀ ರಾಮನಿಗೆ ಪುರಾಣವನ್ನು ಹೇಳುತ್ತಿರುವಾಗ ಶ್ರೀ ರಾಮನು ಮಾಡಿದ ನಡತೆಗಳನ್ನು ವಿವರಿಸಲು ರಾಮನು ತಾನು ಮಾಡಿಲ್ಲವೆಂದು ಸಂದೇಹಪಟ್ಟಾಗ ಇದು ಹಿಂದಿನ ರಾಮಾವತಾರದ ಕಥೆಯೆಂದು ಹೇಳಿದ್ದಾನೆ. ಎಂದರೆ ಹಿಂದಿನ ಅವತಾರಗಳನ್ನು ಹೇಳಿ ಅದಕ್ಕೂ ಈ ಕಾಲಕ್ಕೂ ಸಂಬಂಧಿಸುತ್ತಾರಾದ್ದರಿಂದ ತಪ್ಪಿರುವುದಿಲ್ಲ )

೧೯. ಆ ಪುಷ್ಕರನೆಂಬ ಬ್ರಾಹ್ಮಣನು ಯಾರು ? ಎಲ್ಲಿದ್ದನು ? ಹೇಗೆ ಬಂದನು ? ಅವನು ನರಕದಿಂದ ಪಾಪಿಗಳನ್ನು ಹೇಗೆ ಉದ್ಧಾರ ಮಾಡಿದನು ?

೨೦-೨೨ ರಾಮರಾಜ್ಯದಲ್ಲಿ ಬ್ರಾಹ್ಮಣನ ಮಗನು ಸಾಯಲು ಕಾರಣ ವೇನು ? ಹೇಗೆ ಬಂದನು ? ಭಗವಂತನಾದ ದೇವಕೀಪುತ್ರನಾದ ಶ್ರೀ ಕೃಷ್ಣನು ಮೊಸಳೆಯು ಕಚ್ಚಿ ತಿಂದಿದ್ದ ಗುರುವಾದ ಸಾಂದೀಪಿನಿಯ ಮಗನನ್ನು ಯಮನ

ಗೀರ್ಣಂ ಗ್ರಾಹೋದರೇ ಬಾಲಮಾನಯಾಮಾಸ ವೈ ಕಥಂ ।
ವಿಸ್ತರಾಚ್ಛ್ರೋತುಮಿಚ್ಛಾಮಿ ವಸಿಷ್ಠಾರುಂಧತೀಪತೇ ॥ ೨೧ ॥

ಏತತ್ಪ್ರಶ್ನತ್ರಯಂ ಸಮ್ಯಕ್ ಬ್ರೂಹಿ ಮೇ ಬ್ರಹ್ಮನಂದನ ॥ ೨೨ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಪುಷ್ಕರಸ್ಯ ಮಹಾತ್ಮನಃ ।
ಚರಿತಂ ಸರ್ವಪಾಪಘ್ನಂ ಶೃಣೋತ್ವವಹಿತೋ ಭವಾನ್ ॥ ೨೩ ॥

ನಂದಿಗ್ರಾಮೇ ವಸನ್ ಧೀಮಾನ್ ಪುಷ್ಕರೋ ನಾಮ ವೈ ದ್ವಿಜಃ ।
ನಿಜಾನುಷ್ಠಾನಕೃದ್ಧೀಮಾನ್ ಸರ್ವಭೂತಹಿತೇ ರತಃ ॥ ೨೪ ॥

ಮಾಘಸ್ನಾನರತೋ ನಿತ್ಯಂ ನಿತ್ಯಂ ಸ್ವಾಧ್ಯಾಯತತ್ಪರಃ ।
ವಿಷ್ಣೋರಾರಾಧನಂ ಕಾಲೇ ಸಕುರ್ವನ್ನಾನ್ಯಮಾನಸಃ ॥ ೨೫ ॥

---

ಪಟ್ಟಣದಿಂದ ಹೇಗೆ ತಂದನು ? ಎಲೈ ಅರುಂಧತಿಯ ಪತಿಯಾದ ವಸಿಷ್ಠನೆ ? ಈ ಮೂರು ವಿಷಯಗಳನ್ನು ವಿಸ್ತಾರವಾಗಿ ಕೇಳಬೇಕೆಂದಿದ್ದೇನೆ. ಕೃಪೆಮಾಡಿ ಹೇಳು.

೨೩. ವಸಿಷ್ಠನು ಹೇಳಿದನು-ಎಲೈ ದೊರೆಯೆ ! ಕೇಳು. ಮಹಾತ್ಮನಾದ ಪುಷ್ಕರನ ಕಥೆಯನ್ನು ಹೇಳುತ್ತೇನೆ. ಅದು ಎಲ್ಲಾ ಪಾಪವನ್ನೂ ನಾಶಮಾಡುತ್ತದೆ ಮನಸ್ಸನ್ನಿಟ್ಟು ಕೇಳು.

೨೪. ಎಲೈ ದೊರೆಯೆ ! ಆ ಪುಷ್ಕರನೆಂಬ ಬ್ರಾಹ್ಮಣನು ನಂದಿಗ್ರಾಮದಲ್ಲಿ ವಾಸವಾಗಿದ್ದನು. ತನ್ನ ಧರ್ಮಗಳನ್ನು ಆಯಾ ಕಾಲಕ್ಕೆ ಸರಿಯಾಗಿ ನೆರವೇರಿಸಿಕೊಳ್ಳುತ್ತಾ ಎಲ್ಲಾ ಪ್ರಾಣಿಗಳಿಗೂ ಹಿತವನ್ನೇ ಮಾಡುತ್ತಿದ್ದನು.

೨೫-೨೭. ಯಾವಾಗಲೂ ಮಾಘಮಾಸದಲ್ಲಿ ಮಾಡುವ ನಿಯಮಗಳನ್ನು ತಪ್ಪುತ್ತಿರಲಿಲ್ಲ. ಯಾವಾಗಲೂ ಅಧ್ಯಯನವನ್ನು ಮಾಡುತ್ತಿದ್ದನು. ವಿಷ್ಣುವಿನ ಪೂಜೆಯನ್ನು ಒಂದೇ ಮನಸ್ಸಿನಿಂದ ಆಯಾಯ ಕಾಲದಲ್ಲಿ ಮಾಡುತ್ತಿದ್ದನು.

ಆಸ್ತೇ ತತ್ರ ಮಹಾಯೋಗೀ ಸಕುಟುಂಬೋಽಗ್ನಿಹೋತ್ರ ಕೃತ್ ।
ಅಪ್ರಮೇಯ ಹರೇ ವಿಷ್ಣೋ ಕೃಷ್ಣ ದಾಮೋದರಾಚ್ಯುತ ॥ ೨೬ ॥

ಗೋವಿಂದಾನಂತದೇವೇಶೇತ್ಯಾಹಾಸೌ ಕೇವಲಂ ನೃಪ ।
ದೇವತಾರಾಧನಂ ತ್ಯಕ್ತ್ವಾ ತಸ್ಯ ವಿಪ್ರಸ್ಯ ನಿತ್ಯಶಃ ॥ ೨೭ ॥

ನಾನ್ಯೇಷು ರಮತೇ ಚಿತ್ತಂ ಸ್ವಪ್ನೇಷ್ವಪಿ ಮಹಾಮತೇ ।
ಅಥ ವೈವಸ್ವತೋ ರಾಜಾ ಪ್ರಾಹ ದೂತಾನ್ ಭಯಂಕರಾನ್ ॥ ೨೮ ॥

ಗತ್ವೈನಂ ಪುಷ್ಕರಂ ವಿಪ್ರಂ ನಂದಿಗ್ರಾಮನಿವಾಸಿನಂ ।
ಸಮಾನಯಧ್ವಮಿತ್ಯಾಹ ತೇಽಪಿ ಶ್ರುತ್ವಾ ಭುವಂ ಗತಾಃ ॥ ೨೯ ॥

ಪ್ರಗೃಹ್ಯ ತಮುಜಾನಂತೋ ಯಮಲೋಕಂ ಗತಾ ನೃಪ ।
ತಮಾಯಾಂತಂ ಯಮೋ ದೃಷ್ಟ್ವಾ ಪುಷ್ಕರಂ ಭೀತಮಾನಸಃ ॥ ೩೦ ॥

---

ಈ ರೀತಿಯಾಗಿ ಕುಟುಂಬದೊಡನೆ ಅಗ್ನಿ ಹೋತ್ರವನ್ನು ಮಾಡುತ್ತಾ ಆತನು ಮಹಾಯೋಗಿಯಾಗಿ ಇದ್ದುಕೊಂಡಿದ್ದನು. ಅಪ್ರಮೇಯ! ಹರೇ! ಕೃಷ್ಣ! ವಿಷ್ಣೋ! ದಾಮೋದರಾ! ಅಚ್ಯುತಾ! ಗೋವಿಂದ! ಅನಂತ! ದೇವೇಶ! ಎಂಬುದಾಗಿಯೇ ಯಾವಾಗಲೂ ಹೇಳುತ್ತಿದ್ದನು. ಆತನ ಮನಸ್ಸು ದೇವರ ಪೂಜೆಯನ್ನು ಹೊರತಾಗಿ ಮತ್ತಾವುದರಲ್ಲಿಯೂ ಯಾವಾಗಲೂ ಆಸಕ್ತವಾಗುತ್ತಲೇ ಇರಲಿಲ್ಲ ಕೊನೆಗೆ ಸ್ವಪ್ನದಲ್ಲಿಯೂ ಕೂಡ ಮತ್ತೊಂದನ್ನೂ ಎಣಿಸನು.

೨೮-೨೯. ಅನಂತರ ರಾಜನಾದ ಯಮನು ಭಯಂಕರರಾದ ತಮ್ಮ ಆಳುಗಳನ್ನು ಕರೆದು ಎಲೈ ದೂತರಿರಾ! ನಂದಿಗ್ರಾಮಕ್ಕೆ ಹೋಗಿ ಆ ಪುಷ್ಕರನೆಂಬ ಬ್ರಾಹ್ಮಣನನ್ನು ಕರೆದುಕೊಂಡು ಬನ್ನಿರಿ. ಎಂದೆನಲು ಅವರು ಅದನ್ನು ಕೇಳಿ ಹಾಗೆ ಕರೆತರಲು ನಂದಿಗ್ರಾಮಕ್ಕೆ ಹೋದರು.

೩೦-೩೧ ಆ ಯಮದೂತರಿಗೆ ಅವನ ವಿಷಯವು ಗೊತ್ತಿಲ್ಲದಿದ್ದುದರಿಂದ ಅವರು ಅವನನ್ನು ಕರೆದುಕೊಂಡು ಹೋದರು. ಈ ಪುಷ್ಕರನು ಬರುತ್ತಿರುವಾಗಲೇ ಯಮನು ದೂರದಿಂದಲೇ ನೋಡಿ ಹೆದರಿ ಎದುರುಗೊಂಡು ಕರೆತಂದು

ಪ್ರತ್ಯುತ್ಥಾಯಾಸನಂ ಗೃಹ್ಯ ಪ್ರವೇಶ್ಯ ಸ್ವಾಸನೇ ಮುನಿಂ |
ಭರ್ತ್ಸಯಾಮಾಸ ದೂತಾಂಶ್ಚ ಭವದ್ಭಿಃ ಕಿಮನುಷ್ಠಿತಂ ॥ ೩೧ ॥

ತತ್ರಾನ್ಯಃ ಪುಷ್ಕರೋ ನಾಮ ತಂ ಪ್ರತ್ಯುಕ್ತ್ವಾಂ ಮಯಾ ಭಟಾಃ |
ಕಿಮಯಂ ಸರ್ವಧರ್ಮಜ್ಞೋ ವಿಷ್ಣು ಭಕ್ತೋ ವಿಶೇಷತಃ ॥ ೩೨ ॥

ಮಾಘಸ್ನಾನರತೋ ನಿತ್ಯಮುಪವಾಸಪರಾಯಣಃ |
ಮತ್ಸಮೀಪಮಿಹಾನೀತೋ ಭವದ್ಭಿಃ ಪಾಪಚೇತಸೈಃ ॥ ೩೩ ॥

॥ ವಸಿಷ್ಠ ಉವಾಚ ॥

ತಾನೇವಂ ಭರ್ತ್ಸಯಿತ್ವಾಥ ಪ್ರೇತರಾಜಸ್ತಮಬ್ರವೀತ್ ॥ ೩೪ ॥

॥ ಯಮ ಉವಾಚ ॥

ಪುತ್ರದಾರಾದಯಸ್ಸರ್ವೇ ರುದಂತಿ ಭೃಶಮಾಕುಲಾಃ |
ಗಚ್ಛ ತ್ವಮಪಿ ಸೋಽಪ್ಯಾಹ ಪುಷ್ಕರಸ್ತಂ ವೃಕೋದರಂ ॥ ೩೫ ॥

---

ಆಸನವನ್ನು ಕೊಟ್ಟು ಕೂರಿಸಿ ಅವನನ್ನು ಉಪಚರಿಸುತ್ತ ತನ್ನ ಆಳುಗಳನ್ನು ನೋಡಿ ನೀವು ಕೆಟ್ಟ ಕೆಲಸವನ್ನು ಮಾಡಿದಿರಿ ! ಎಂದು ಬೈದನು.

೩೨-೩೩. ಎಲೈ ಭಟರಿರಾ ! ಆ ನಂದಿಗ್ರಾಮದಲ್ಲಿ ಪುಷ್ಕರನೆಂಬುವನು ಮತ್ತೊಬ್ಬನಿರುವನು. ಅವನನ್ನು ಕರೆದುಕೊಂಡು ಬನ್ನಿರೆಂದು ಹೇಳಿದೆನು. ಇವನು ಎಲ್ಲಾ ಧರ್ಮಗಳನ್ನೂ ಬಲ್ಲವನು. ಆದರಲ್ಲಿಯೂ ವಿಷ್ಣುಭಕ್ತನು ಮಾಘಸ್ನಾನದಲ್ಲಿ ಆಸಕ್ತನು. ಉಪವಾಸಾದಿಗಳನ್ನು ತಪ್ಪದೆ ಮಾಡುತ್ತಿರುವವನು. ಇದನ್ನು ತಿಳಿಯದೆ ಪಾಪಿಗಳಾದ ನೀವು ಇವನನ್ನು ನನ್ನ ಬಳಿಗೆ ಕರೆದುಕೊಂಡು ಬಂದಿರುವಿರಲ್ಲ ! ಎಂದನು.

೩೪. ವಸಿಷ್ಠನು ಹೇಳಿದನು–ಆ ಯಮನು ಆವರನ್ನು ಬೈದು ಆ ಪುಷ್ಕರನನ್ನು ಕುರಿತು ಇಂತೆಂದನು.

೩೫. ಯಮನು ಹೇಳಿದನು-ಎಲೈ ಪುಷ್ಕರನೇ ! ನಿನ್ನ ಹೆಂಡತಿ ಮಕ್ಕಳು ಬಂಧುಗಳು ಇವರೆಲ್ಲರೂ ಬಹುವಾಗಿ ರೋದನ ಮಾಡುತ್ತಿದ್ದಾರೆ. ನೀನು ಮತ್ತೆ ಹೊರಟು ಹೋಗು. ಎಂಬುದಾಗಿ ಹೇಳಿದನು.

॥ ಪುಷ್ಕರ ಉವಾಚ ॥

ಭಗವನ್ ನರಕಾನ್ ಸರ್ವಾನ್ ದ್ರಷ್ಟುಮಿಚ್ಛಾಮಿ ತಾನಹಂ ।
ಪಾಪಿನೋ ಯೇಽಪಿ ಪಚ್ಯಂತೇ ಯಾತನಾದೇಹಮಾಸ್ಥಿತಾಃ ॥ ೩೬ ॥

॥ ವಸಿಷ್ಠ ಉವಾಚ ॥

ತತೋ ವೈವಸ್ವತಸ್ತಸ್ಮೈ ಪುಷ್ಕರಾಯ ಮಹಾತ್ಮನೇ ।
ನರಕಾನ್ ದರ್ಶಯಾಮಾಸ ಶತಶೋಽಥ ಸಹಸ್ರಶಃ ॥ ೩೭ ॥

ರೌರವಂ ರೌದ್ರಮತ್ಯರ್ಥಂ ಮಹಾರೌರವ ಮೇವ ಚ ।
ಶ್ವಭೋಜನಂ ವಿಶಸನಂ ಕ್ಷಾರಕರ್ದಮಮೇವ ಚ ॥ ೩೮ ॥

ಅಸಿಪತ್ರವನಂ ಘೋರಂ ತಪ್ತಕುಂಭಂ ಭಯಾನಕಂ ।
ಕ್ರಿಮಿಶಂ ಕ್ರಿಮಿಭಕ್ಷಂ ಚ ತಥಾ ವೈತರಣೀಂ ನದೀಂ ॥ ೩೯ ॥

ಕರಂಭವಾಲುಕಂ ಚೈವ ಲಾಲಾಭಕ್ಷಮವೀಚಿಕಂ ।
ಸೂಕರಂ ರೋದನಂ ಚೈವ ತಪ್ತವಾಲುಕ ಮೇವ ಚ ॥ ೪೦ ॥

---

೩೬. ಪುಷ್ಕರನು ಹೇಳಿದನು–ಎಲೈ ಯಮಧರ್ಮರಾಯನೇ! ಪಾಪಿಗಳು ಯಾತನಾ ದೇಹವನ್ನು ಹೊಂದಿ ಯಾವ ನರಕಗಳಲ್ಲಿ ಆ ಯಾತನೆಗಳನ್ನು ಅನುಭವಿಸುತ್ತಾರೆಯೋ ಅಂತಹ ನರಕಗಳನ್ನು ನೋಡಬೇಕು.

೩೭ ವಸಿಷ್ಠನು ಹೇಳಿದನು-ಆಗ ಯಮನು ಪುಷ್ಕರನಿಗೆ ಸಾವಿರಾರು ನರಕಗಳನ್ನು ಕರೆದುಕೊಂಡು ಹೋಗಿ ಎಲ್ಲವನ್ನೂ ತೋರಿಸುತ್ತ ಬಂದನು.

೩೮–೪೦. ರೌರವ, ಮಹಾರೌರವ, ಶ್ವಭೋಜನ, ವಿಶಸನ ಕ್ಷಾರಕ ರ್ದಮ, ಅಸಿಪತ್ರವನ, ತಪ್ತಕುಂಭ, ಕ್ರಿಮಿಶ ಕ್ರಿಮಿಭಕ್ಷ, ವೈತರಣೀನದಿ, ಕರಂಭವಾಲುಕ, ಲಾಲಾಭಕ್ಷ, ಅವೀಚಿಕ, ಸೂಕರ, ರೋದನ, ತಪ್ತವಾಲುಕ, ಇಂತಹವುಗಳನ್ನು ತೋರಿಸಿದನು.

ಏತೇಷು ನರಕೇಷ್ವೇವ ಪಚ್ಯಂತೇ ಪಾಪಿನೋಽನಿಶಂ ।
ತತ್ರ ತಾನ್ ಪತಿತಾನ್ ದೃಷ್ಟ್ವಾ ಪೀಡ್ಯಮಾನಾಸ್ಸ ನಾರಕಾನ್ ॥ ೪೧ ॥

ಶೂಲೋಪರಿ ಗತಾನ್ ವ್ಯಾಘ್ರೈರ್ಭಕ್ಷ್ಯಮಾಣಾನ್ ಸುದುಃಖಿತಾನ್ ।
ಕರಂಭವಾಲುಕೇ ತಪ್ತಾನ್ ಕ್ರಿಮಿಭಿರ್ಭಕ್ಷಿತಾನಪಿ ॥ ೪೨ ॥

ತಪ್ತಕುಂಭೇ ನಿಪತಿತಾನ್ ಕ್ರಿಮಿಭಿಸ್ತು ಪ್ರಪೀಡಿತಾನ್ ।
ಅಸಿಪತ್ರವನೇ ಛನ್ನಾನ್ ಕ್ರಕಚೈರ್ದಾರಿತಾನಪಿ ॥ ೪೩ ॥

ಕುಠಾರೈಃ ಪಾಟ್ಯಮಾನಾಂಶ್ಚ ಸಂಕ್ಲಿನ್ನಾನ್ ಕ್ಷಾರಕರ್ದಮೇ ।
ಸೂಚ್ಯಾ ನಿಪಾತ್ಯಮಾನಾಂಶ್ಚ ತಥಾ ಶಿಶಿರಪೀಡಿತಾನ್ ॥ ೪೪ ॥

ಏತಾನನ್ಯಾಂಶ್ಚ ತತ್ರಸ್ಥಾನ್ ನಾರಕಾನ್ಯಾತನಾ ಗತಾನ್ ।
ದೃಷ್ಟ್ವಾತಿದುಃಖಿತೋ ಭೂತ್ವಾ ಪುಷ್ಕರಸ್ತಾಮುವಾಚ ಹ ॥ ೪೫ ॥

---

೪೧. ಈ ನರಕಗಳಲ್ಲಿಯೇ ಪಾಪಿಗಳನ್ನು ಹಾಕಿ ಅವರು ಪಾಪವನ್ನು ಅನುಭವಿಸುವಂತೆ ಯಮನು ಮಾಡುತ್ತಾನೆ. ಈ ಪುಷ್ಕರನು ಆ ನರಕದಲ್ಲಿ ಕಷ್ಟಪಡುತ್ತಿರುವವರನ್ನು ನೋಡಿದನು.

೪೨-೪೫. ಆ ನರಕಗಳಲ್ಲಿ ಶೂಲದಲ್ಲಿ ಚುಚ್ಚಿ ನೇತು ಹಾಕಿರುವವರನ್ನೂ ಹುಲಿಯಿಂದ ಕಚ್ಚಿ ತಿನ್ನಲ್ಪಡುತ್ತಿರುವವರನ್ನೂ ಕಾದಿರುವ ಮರಳಿನಲ್ಲಿ ಹುರಿಯಲ್ಪಡುತ್ತಿರುವವರನ್ನೂ ಹುಳುಗಳಿಂದ ತಿನ್ನಲ್ಪಡುತ್ತಿರುವವರನ್ನೂ ಕಾದಿರುವ ಮಡಕೆಯೊಳಗೆ ಬಿದ್ದಿರುವವರನ್ನೂ ಹುಳುಗಳು ಬಿದ್ದು ತೊಂದರೆ ಪಡುತ್ತಿರುವವರನ್ನೂ ಅಸಿಪತ್ರವನದಲ್ಲಿ ಓಡಿಯಾಡುತ್ತ ಆ ಮರದಿಂದ ಬೀಳುವ ಗರಗಸದಂತಹ ಎಲೆಗಳಿಂದ ಕುಯ್ಯಲ್ಪಡುತ್ತಿರುವವರನ್ನೂ ಕೊಡಲಿಯಿಂದ ಕಡಿಯಲ್ಪಡುತ್ತಿರುವವರನ್ನೂ ಕಾರದ ಕೊಚ್ಚೆಯೊಳಗೆ ಬಿದ್ದು ಇರುವವರನ್ನೂ ಸೂಜಿಯಿಂದ ಚುಚ್ಚಲ್ಪಡುತ್ತಿರುವವರನ್ನೂ ಶೀತದಿಂದ ತೊಂದರೆ ಪಡುತ್ತಿರುವವರನ್ನೂ ಇವರನ್ನೂ ಇನ್ನೂ ಅನೇಕವಾದ ನರಕಯಾತನೆಗಳನ್ನು ಅನುಭವಿಸುತ್ತಿರುವವರನ್ನೂ ನೋಡಿ ಆ ಪುಷ್ಕರನು ಬಹು ದುಃಖಗೊಂಡು ಅವರನ್ನು ಕುರಿತು ಇಂತೆಂದನು.

॥ ಪುಷ್ಕರ ಉವಾಚ ॥

ಕಿಂ ನ ತತ್ರ ಕೃತಂ ಪುಣ್ಯಂ ಭವದ್ಭಿಃ ಪೂರ್ವಜನ್ಮನಿ ।
ತೇನಾತ್ರ ಯಾತನಾ ಸಂಸ್ಥಾಃ ದುಃಖಿತಾ ನಿತ್ಯಮಾಸ್ಥಿತಾಃ ॥ ೪೬ ॥

॥ ನಾರಕಾ ಊಚುಃ ॥

ನಾಽಸ್ಮಾಭಿಸ್ಸುಕೃತಂ ಕಿಂಚಿತ್ ಕೃತಂ ತತ್ರ ಮಹೀತಲೇ ।
ತೇನಾತ್ರ ಯಾತನಾಸಂಸ್ಥಾಃ ದಹ್ಯಾಮೋ ದುಃಖಿತಾ ಭೃಶಂ ॥ ೪೭ ॥

ಪರದಾರೇಷು ನಿರತಾಃ ಪರದ್ರವ್ಯಾಪಹಾರಿಣಃ ।
ಪರಹಿಂಸಾರತಾ ನಿತ್ಯಂ ದಹ್ಯಾಮಸ್ತೇನ ವೈ ವಯಂ ॥ ೪೮ ॥

ಪರೀವಾದಾಃ ಕೃತಾಸ್ಮಾಭಿಃ ಪರೇಷಾಂ ನಾಪರಾಧಿನಾಂ ।
ನಿಂದಿತಾಶ್ಚ ತಥಾ ವಿಪ್ರಾ ದಹ್ಯಾಮಸ್ತೇನ ವೈ ವಯಂ ॥ ೪೯ ॥

---

೪೬. ಪುಷ್ಕರನು ಹೇಳಿದನು-ಏನು ನೀವು ಪೂರ್ವಜನ್ಮದಲ್ಲಿ ಪುಣ್ಯವನ್ನು ಮಾಡಲೇ ಇಲ್ಲವೆ ? ಆದ್ದರಿಂದಲೇ ಈ ಯಾತನೆಯನ್ನು ಹೊಂದುತ್ತಾ ನಿತ್ಯವೂ ದುಃಖ ಪಡುತ್ತಿದ್ದೀರಿ.

೪೭. ನಾರಕಿಗಳು ಹೇಳಿದರು-ನಾವು ಭೂಲೋಕದಲ್ಲಿದ್ದಾಗ ಸ್ವಲ್ಪವೂ ಪುಣ್ಯವನ್ನು ಆಚರಿಸಲೇ ಇಲ್ಲ. ಆದ್ದರಿಂದಲೇ ಈ ಯಾತನೆಯಲ್ಲಿದ್ದುಕೊಂಡು ಬಹುವಾಗಿ ದುಃಖಪಡುತ್ತಿದ್ದೇವೆ.

೪೮. ನಾವು ಯಾವಾಗಲೂ ಪರರ ಹೆಂಡಿರಲ್ಲಿಯೇ ರಮಿಸುತ್ತಿದ್ದೆವು. ಪರರ ಹಣವನ್ನು ಅಪಹರಿಸುತ್ತಿದ್ದೆವು. ಪರರಿಗೆ ಯಾವಾಗಲೂ ಹಿಂಸೆಯನ್ನು ಮಾಡುತ್ತಿದ್ದೆವು. ಆದ್ದರಿಂದಲೇ ನಾವು ಇಲ್ಲಿ ತೊಂದರೆ ಪಡುತ್ತಿದ್ದೇವೆ.

೪೯. ತಪ್ಪಿಲ್ಲದೆ ಇರುವವರ ಮೇಲೆ ಅಪವಾದಗಳನ್ನು ಹೊರಿಸಿದೆವು. ಹಾಗೆಯೇ ವಿಪ್ರರನ್ನು ನಿಂದಿಸುತ್ತಿದ್ದೆವು. ಅದರಿಂದಲೇ ತೊಂದರೆ ಪಡುತ್ತಿದ್ದೇವೆ.

ತಥಾರ್ಥಹೇತೋರಸ್ಮಾಭಿಃ ಕೃತಮಧ್ಯಾಪನಂ ದ್ವಿಜ ।
ತಥೈವಾಧ್ಯಯನಂ ತೇನ ದಹ್ಯಾಮೋ ನರಕೇ ವಯಂ ॥ ೫೦ ॥

ಭೃತ್ಯವರ್ಗೇಷ್ವಭುಕ್ತೇಷು ಭುಕ್ತಮಸ್ಮಾಭಿರಾದರಾತ್ ।
ಅನ್ನಮಗ್ರೇ ತಥಾ ಮೃಷ್ಟಂ ತೇನ ದಹ್ಯಾಮಹೇ ವಯಂ ॥ ೫೧ ॥

ಮಾಘೇ ಸರ್ವೇಷು ಮಜ್ಜತ್ಸು ನ ವಯಂ ಕೃತಮಜ್ಜನಾಃ ।
ಕಿಂಚಿದಭ್ಯುದಿತೇ ಸೂರ್ಯೇ ದಹ್ಯಾಮಸ್ತೇನ ವೈವಯಂ ॥ ೫೨ ॥

ಪೃಥಕ್ ಪಾಕರತಾ ನಿತ್ಯಂ ನಿತ್ಯಂ ಚಾದ್ಧುತವಹ್ನಯಃ ।
ಅಸ್ನಾನಭೋಜಿನೋ ಜಾತಾಃ ದಹ್ಯಾಮೋ ನರಕೇ ವಯಂ ॥ ೫೩ ॥

ಗೋಕುಲಸ್ಯ ತೃಷಾರ್ತಸ್ಯ ಧಾವತೋ ಜಲಸಮ್ಮುಖಂ ।
ವಿಘ್ನ ಆಚರಿತೋ ನಿತ್ಯಂ ದಹ್ಯಾಮಸ್ತೇನ ವೈ ವಯಂ ॥ ೫೪ ॥

---

೫೦. ನಾವು ಹಣವನ್ನು ತೆಗೆದುಕೊಂಡು ವೇದವನ್ನು ಹೇಳಿಕೊಟ್ಟೆವು. ಅಂತೆಯೇ ಹಣವನ್ನು ತೆಗೆದುಕೊಂಡು ಅವರಿಗೋಸ್ಕರ ವೇದವನ್ನು ಜಪಿಸಿದೆವು. ಆದ್ದರಿಂದಲೇ ಈ ನರಕದಲ್ಲಿ ಕಷ್ಟ ಪಡುತ್ತಿದ್ದೇವೆ.

೫೧. ಸೇವಕರ ಗುಂಪು ಹಸಿದುಕೊಂಡಿರುವಾಗ ನಾವು ಸಂತೋಷದಿಂದ ಅವರೆದುರಿಗೆ ಊಟಮಾಡಿದೆವು. ಅದರಲ್ಲಿಯೂ ಅವರೆದುರಿಗೆ ಮೃಷ್ಟಾನ್ನವನ್ನು ಊಟಮಾಡಿದೆವು. ಆ ಪಾಪದಿಂದ ಈಗ ತೊಂದರೆ ಪಡುತ್ತಿದ್ದೇವೆ.

೫೨. ಸೂರ್ಯನು ಅರ್ಧ ಹುಟ್ಟಿರುವಾಗ ಮಾಘಮಾಸದಲ್ಲಿ ಎಲ್ಲರೂ ಪ್ರಾತಃಸ್ನಾನ ಮಾಡುತ್ತಿದ್ದರೂ ನಾವು ಸ್ನಾನವನ್ನು ಮಾಡಲಿಲ್ಲ. ಆದ್ದರಿಂದ ಈಗ ಕಷ್ಟ ಪಡುತ್ತಿದ್ದೇವೆ.

೫೩-೫೪. ನಾವು ನಮ್ಮ ಸುಖಕ್ಕೋಸ್ಕರ ಎಲ್ಲರಿಗೂ ಒಂದು ಬಗೆಯ ಅಡಿಗೆಮಾಡಿದರೆ ನಮಗೆ ಬೇರೆಯಾಗಿ ಚನ್ನಾಗಿ ಮಾಡಿಸಿಕೊಳ್ಳುತ್ತಿದ್ದೆವು. ಅಗ್ನಿಹೋತ್ರಾದಿಗಳನ್ನಾಗಲೀ ಹೋಮಗಳನ್ನಾಗಲೀ ಮಾಡಿದವರೇ ಅಲ್ಲ. ಸ್ನಾನ ಮಾಡದೇ ಊಟ ಮಾಡುತ್ತಿದ್ದೆವು. ಆ ಪಾಪದಿಂದ ಈ ನರಕದಲ್ಲಿ ತೊಂದರೆ ಪಡುತ್ತಿದ್ದೇವೆ. ಗೋವುಗಳ ಗುಂಪು ಬಾಯಾರಿ ನೀರಿನ ಕಡೆಗೆ ಓಡಿ ಹೋಗುತ್ತಿದ್ದರೆ, ಅವು ನೀರು ಕುಡಿಯದಂತೆ ವಿಘ್ನವನ್ನು ಮಾಡುತ್ತಿದ್ದೆವು. ಆ ಪಾಪದಿಂದ ತೊಂದರೆ ಪಡುತ್ತಿದ್ದೇವೆ.

ಗವಾಂ ಗ್ರಾಸಮದತ್ವಾ ತು ತತ್ಕ್ಷೀರಾದಾನತತ್ಪರಾಃ |
ಜಾತಾಸ್ಸ್ವಪೋಷಣರತಾ ದಹ್ಯಾಮಸ್ತೇನ ವೈ ವಯಂ || ೫೫ ||

ದಾನೇಷ್ವಭಿರತಂ ನಿತ್ಯಮರ್ಥಿಭ್ಯೋ ಧಾರ್ಮಿಕಂ ಪ್ರತಿ |
ವಿಘ್ನ ಆಚರಿತಸ್ತೇನ ನೂನಂ ದಹ್ಯಾಮಹೇ ವಯಂ || ೫೬ ||

ತ್ಯಕ್ತದಾರಾ ವ್ರತಭ್ರಷ್ಟಾಃ ಪರಾನ್ನರುಚಯಸ್ತಥಾ |
ಪರ್ವಸ್ವಪಿರತಾಃ ಸ್ತ್ರೀಷು ತೇನ ದಹ್ಯಾಮಹೇ ವಯಂ || ೫೭ ||

ಬ್ರಾಹ್ಮಣೇಭ್ಯಃ ಪ್ರತಿಶ್ರುತ್ಯ ನ ದತ್ತಂ ಲೋಭಕಾರಣಾತ್ |
ಅಸ್ಮಾಭಿಸ್ತೇನ ದೋಷೇಣ ದಹ್ಯಾಮೋದ್ಯ ಭೃಶಂ ದ್ವಿಜ || ೫೮ ||

ನಿಕ್ಷೇಪಹಾರಿಣೋ ಜಾತಸ್ತಥಾ ಮಿತ್ರದ್ರುಹೋ ವಯಂ |
ಕೂಟಸಾಕ್ಷ್ಯಂ ಗತಾಸ್ತೇನ ದಹ್ಯಾಮೋತ್ರ ವಯಂ ದ್ವಿಜ || ೫೯ ||

---

೫೫. ಗೋವುಗಳಿಗೆ ಗ್ರಾಸವನ್ನು ಕೊಡದೆ, ಅವುಗಳ ಹಾಲನ್ನು ಕರೆದು ಕೊಳ್ಳುತ್ತಿದ್ದೆವು. ಅದರಿಂದ ನಮ್ಮ ದೇಹವನ್ನು ಕಾಪಾಡಿಕೊಂಡೆವು. ಆ ಪಾಪದಿಂದ ಈಗ ತೊಂದರೆ ಪಡುತ್ತಿದ್ದೇವೆ.

೫೬. ನಿತ್ಯವೂ ದಾನ ತೆಗೆದುಕೊಳ್ಳುತ್ತಿದ್ದೆವು. ಧರ್ಮಿಷ್ಠನನ್ನು ಕುರಿತು ಯಾಚಕರು ಬೇಡಲು ಬಂದರೆ ವಿಘ್ನವನ್ನುಂಟು ಮಾಡುತ್ತಿದ್ದೆವು. ಆದ್ದರಿಂದ ಈಗ ಈ ಕಷ್ಟವನ್ನು ಅನುಭವಿಸುತ್ತೇವೆ.

೫೭. ಹೆಂಡತಿಯನ್ನು ತಪ್ಪಿಲ್ಲದಿದ್ದರೂ ಬಿಟ್ಟುಬಿಟ್ಟೆವು. ವ್ರತವನ್ನು ಮಾಡಲೇ ಇಲ್ಲ. ಯಾವಾಗಲೂ ಪರಾನ್ನದಲ್ಲಿ ಆಸಕ್ತರಾಗಿ ಅದರ ರುಚಿಯನ್ನು ನೋಡಿ ಸಂತೋಷಿಸುತ್ತಿದ್ದೆವು. ಪರರ ಹೆಂಡಿರಲ್ಲಿಯೇ ರಮಿಸುತ್ತಿದ್ದೆವು. ಆದ್ದರಿಂದಲೇ ಈಗ ತೊಂದರೆಪಡುತ್ತಿದ್ದೇವೆ.

೫೮. ಬ್ರಾಹ್ಮಣರಿಗೆ ಕೊಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿ ಲೋಭಿತನದಿಂದ ಹೇಳಿದುದನ್ನು ಕೊಡಲಿಲ್ಲ. ಆ ದೋಷದಿಂದ ನಾವು ಇಲ್ಲಿ ತೊಂದರೆ ಪಡುತ್ತಿದ್ದೇವೆ.

೫೯. ನಂಬಿಕೆಯಿಂದ ನಮ್ಮಲ್ಲಿ ಕೊಟ್ಟು ಇದ್ದುದನ್ನು ಮೋಸಮಾಡಿ ದಕ್ಕಿಸಿ ಕೊಂಡೆವು. ಮಿತ್ರರಿಗೆ ದ್ರೋಹವನ್ನು ಮಾಡಿದೆವು. ಸುಳ್ಳು ಸಾಕ್ಷಿಯನ್ನು ಹೇಳಿದೆವು. ಆದ್ದರಿಂದ ಇಲ್ಲಿ ತೊಂದರೆ ಪಡುತ್ತಿದ್ದೇವೆ.

ತವ ಕಿಂ ಬಹುನೋಕ್ತೇನ ಯುಚ್ಛಾಸ್ಮಾಭಿರನುಷ್ಠಿತಂ |
ಪಾತಕಂ ದ್ವಿಜವರ್ಯೇಹ ದಹ್ಯಾಮಸ್ತೇನ ವೈ ವಯಂ || ೬೦ ||

|| ಪುಷ್ಕರ ಉವಾಚ ||

ಸ ಕೃಚ್ಚನಾರ್ಚಿತೋ ದೇವೋ ಭವದ್ಭಿಃ ಕಿಂ ಜನಾರ್ದನಃ |
ತತ್ತೇನ ತಾದೃಶೀಂ ಪ್ರಾಪ್ತಾ ದಶಾಂ ವಯಂ ಭಯಾನಕಾಂ || ೬೧ ||

ಸಮಸ್ತಲೋಕನಾಥೋ ಯೈರರ್ಚಿತಃ ಪುರುಷೋತ್ತಮಃ |
ತೇಷಾಂ ಮುಕ್ತಿರಪೀಹಸ್ಯಾತ್ಕಿಮು ಪಾಪಕ್ಷಯೋ ನೃಣಾಂ || ೬೨ ||

ಪ್ರಣತಿರ್ನ ಕೃತಾ ಪಾಯೋ ಭವದ್ಭಿಃ ಪುರುಷೋತ್ತಮೇ |
ತೇನಯೂಯಮಿದಂ ಪ್ರಾಪ್ತಾ ನರಕಂ ಭೃಶದಾರುಣಂ || ೬೩ ||

ಕಿಮತ್ರ ಹಾಹಾಕಾರೇಣ ಯುಷ್ಮಾಕಮಧುನಾ ಹರಿಂ |
ಸ್ಮರತಾಹರ್ನಿಶಂ ವಿಷ್ಣುಮಶೇಷ ದುರಿತಾಪಹಂ || ೬೪ ||

---

೬೦. ನಿನ್ನೊಡನೆ ಬಹುವಾಗಿ ಹೇಳಿದುದರಿಂದ ಪ್ರಯೋಜನವೇನು? ನಾವು ಯಾವ ಪಾಪಗಳನ್ನು ಮಾಡಿದೆವೋ ಆ ಪಾಪಗಳಿಂದ ಇಲ್ಲಿ ಈ ಕಷ್ಟವನ್ನು ಅನುಭವಿಸುತ್ತಿದ್ದೇವೆ.

೬೧. ಪುಷ್ಕರನು ಹೇಳಿದನು–ಎಲೈ ನಾರಕೀಯರಿರಾ! ನೀವು ಒಂದು ಸಾರಿಯೂ ಕೂಡ ಆ ಜನಾರ್ದನನನ್ನು ಪೂಜಿಸಲಿಲ್ಲ. ಆದ್ದರಿಂದಲೇ ನೀವು ಇಂತಹ ಭಯಂಕರವಾದ ದೆಸೆಯನ್ನು ಹೊಂದಿದ್ದೀರಿ.

೬೨. ಸಮಸ್ತ ಲೋಕಗಳಿಗೂ ಒಡೆಯನಾದ ಆ ಪುರುಷೋತ್ತಮನಾದ ವಿಷ್ಣುವನ್ನು ಒಂದು ಸಾರಿ ಪೂಜಿಸಿದರೇನೇ ಅವರಿಗೆ ಪಾಪವು ಹೋಗುವುದು, ಎಂಬುದನ್ನು ಹೇಳಬೇಕಾದುದೇ ಇಲ್ಲವು.

೬೩. ನೀವು ಆ ಪುರುಷೋತ್ತಮನಿಗೆ ಒಂದು ಸಾರಿಯೂ ಕೂಡ ನಮಸ್ಕರಿಸಲೂ ಇಲ್ಲ. ಆದ್ದರಿಂದಲೇ ನೀವು ಈ ರೀತಿ ದಾರುಣವಾದ ನರಕವನ್ನು ಹೊಂದಿದ್ದೀರಿ.

೬೪. ನೀವು ಈಗ ಹಾಹಾಕಾರವನ್ನೇಕೆ ಮಾಡುತ್ತಿದ್ದೀರಿ? ಈಗಲಾದರೂ ಹಗಲೂ ರಾತ್ರಿಯೂ ಆ ಪಾಪನಾಶಕನಾದ ವಿಷ್ಣುವನ್ನು ಸ್ಮರಿಸಿರಿ.

ಅಹಮಪ್ಯತ್ರ ನಾಮಾನಿ ಕೀರ್ತಯಾಮಿ ಜಗತ್ಪತೇಃ ।
ತಾನಿ ವಃ ಶ್ರೇಯಸೇ ನಿತ್ಯಂ ಭವಿಷ್ಯತಿ ನ ಸಂಶಯಃ ॥ ೬೫ ॥

॥ ನಾರಕಾ ಊಚುಃ ॥

ಆತ್ಮಪಾಪೇನ ತಪ್ತಾನಾಮಸ್ಮಾಕಮಮೃತಾತ್ಮನಾಂ ।
ತವಾಂಗಸ್ಪರ್ಶಸಂಭೂತೋ ವಾಯುರಾಹ್ಲಾದಯತ್ಯಲಂ ॥ ೬೬ ॥

ಅತ್ರ ಸಂಸ್ಥೀಯತಾಂ ಬ್ರಹ್ಮನ್ ಕ್ಷಣಮಸ್ಯದ್ಯ ನಸ್ಸುಖಂ ।
ಯಥಾ ಭವತಿ ಧರ್ಮಾತ್ಮನ್ ದುಃಖಾಭಿಹತಚೇತಸಾಂ ॥ ೬೭ ॥

ದರ್ಶನೇನಾಪಿ ತೇ ಬ್ರಹ್ಮನ್ ಸಂಜಾತಾ ತುಷ್ಟಿರದ್ಯ ನಃ ।
ಅಹೋ ದಯಾ ತವ ಬ್ರಹ್ಮನ್ ಪಾಪೇಷ್ವಪಿ ಹಿ ಜಾಯತೇ ॥ ೬೮ ॥

॥ ಯಮ ಉವಾಚ ॥

ಗಚ್ಛ ಪುಷ್ಕರ ಧರ್ಮಜ್ಞ ದೃಷ್ಟಾಶ್ಚ ನರಕಾಸ್ತ್ವಯಾ ।
ರೋರೂಯತೇ ಹಿ ತೇ ಭಾರ್ಯಾ ದುಃಖಶೋಕಪರಿಪ್ಲುತಾ ॥ ೬೯ ॥

---

೬೫. ನಾನೂ ಕೂಡ ಆ ಜಗತ್ಪತಿಯ ನಾಮಗಳನ್ನು ಹೇಳುತ್ತೇನೆ. ಅದರಿಂದ ಈ ಪಾಪಿಗಳಾದ ನಿಮಗೂ ಶ್ರೇಯಸ್ಸುಂಟಾಗುತ್ತದೆ.

೬೬. ನಾರಕಿಗಳು ಹೇಳಿದರು—ನಾವು ಮಾಡಿದ ಪಾಪದಿಂದಲೇ ನೊಂದು ಕೊಳ್ಳುತ್ತಿರುವ ಪಾಪಿಗಳಾಗದ ನಮಗೆ ನಿನ್ನ ಅವಯವಗಳ ಮೇಲೆ ಬೀಸಿದ ಗಾಳಿಯು ನಮ್ಮನ್ನು ಸಂತೋಷ ಪಡಿಸುತ್ತಿರುವುದು.

೬೭. ಎಲೈ ಬ್ರಾಹ್ಮಣನೇ! ಇಲ್ಲಿ ಕ್ಷಣಕಾಲ ನಿಂತುಕೊಂಡಿರು. ಅದರಿಂದ ಕ್ಷಣಕಾಲವಾದರೂ ನಮಗೆ ಸುಖವಾಗಲೀ. ನಾವು ಬಹಳ ದುಃಖದಿಂದ ಕೂಡಿದ್ದೇವೆ. ಸ್ವಲ್ಪ ಹೊತ್ತು ಇಲ್ಲಿ ನಿಂತುಕೊ.

೬೮. ಎಲೈ ಬಾಹ್ಮಣನೇ ! ನಿನ್ನ ದರ್ಶನದಿಂದಲೇ ನಮಗೆ ತೃಪ್ತಿಯಾಗಿದೆ. ಅಪ್ಪ! ನಿನಗೆ ದಯವೆಷ್ಟಿರಬಹುದು ? ಪಾಪಿಗಳಾದ ನಮ್ಮಲ್ಲಿಯೂ ಕೂಡ ದಯೆಯಿರುವುದಲ್ಲ.

೬೯. ಯಮನು ಹೇಳಿದನು—ಎಲೈ ಧರ್ಮಜ್ಞನಾದ ಪುಷ್ಕರನೇ ! ನೀನು ಹೊರಡು. ನರಕಗಳನ್ನೆಲ್ಲಾ ನೋಡಿದುದಾಯಿತು. ನಿನ್ನ ಹೆಂಡತಿಯು ದುಃಖದಿಂದ ಅಳುತ್ತ ಹೊರಳಾಡುತ್ತಿರುವಳು.

|| ಪುಷ್ಕರ ಉವಾಚ ||

ಕಥಂ ಗಚ್ಛಾಮಿ ಭಗವನ್ ಗತೇ ವಾ ತತ್ರ ಕಿಂ ಸುಖಂ |
ಶೃಣ್ವತಃ ಶೃಣು ವಾಚೋತ್ರ ನಾರಕಾಣಾಂ ಅಹರ್ನಿಶಂ || ೭೦ ||

ಕಿಂಕರೈರ್ಹನ್ಯಮಾನಾನಾಂ ಪತತಾಮಗ್ನಿ ಸಂಚಯೇ ।
ರಕ್ಷ ಮಾಂ ರಕ್ಷ ರಕ್ಷೇತಿ ಕೇಷಾಂ ಚಿಚ್ಛ್ರೂಯತೇ ಧ್ವನಿಃ || ೭೧ ||

ಯಥಾ ಸಮಸ್ತಭೂತಾತ್ಮಾ ವಿಷ್ಣುಃ ಸರ್ವೇಶ್ವರೋ ಹರಿಃ |
ಆರಾಧ್ಯತೇ ಮಯಾ ನಿತ್ಯಂ ತೇನ ಮುಂಚಂತು ನಾರಕಾಃ || ೭೨ ||

ಯಥಾ ಸರ್ವಗತೋ ವಿಷ್ಣುಃ ಸರ್ವಂ ವಿಷ್ಣೌ ಪ್ರತಿಷ್ಠಿತಂ ।
ತಥಾ ತೇನಾದ್ಯ ಸತ್ಯೇನ ಸದ್ಯೋ ಮುಂಚಂತು ನಾರಕಾಃ || ೭೩ ||

---

೭೦. ಪುಷ್ಕರನು ಹೇಳಿದನು-ಎಲೈ ಭಗವಂತನೇ ! ಹೇಗೆತಾನೆ ಹೋಗಲಿ ಹೋದರೆ ತಾನೇ ಅಲ್ಲಿ ನನಗೆ ಸುಖವೇನಿರುವುದು ? ಈ ನಾರಕಿಗಳು ಹೇಳುತ್ತಿರುವ ಇದನ್ನು ಕೇಳಿದರೆ ಮನೆಯಲ್ಲಿ ತಾನೆ ಹೇಗೆ ಮನಸ್ಸು ನಿಲ್ಲುವುದು.

೭೧. ನಿನ್ನ ಆಳುಗಳಿಂದ ಏಟನ್ನು ತಿನ್ನುತ್ತಲೂ ಬೆಂಕಿಯ ಮಧ್ಯದಲ್ಲಿ ಬೀಳುತ್ತಲೂ ಇರುವ ಆ ನಾರಕಿಗಳು ಕಾಪಾಡು ಕಾಪಾಡು ಎಂದು ಹೇಳಿ ಕೂಗುತ್ತಿರುವ ಧ್ವನಿಯು ಕೇಳುತ್ತಿರುವುದು.

೭೨. ಸಮಸ್ತ ಪ್ರಾಣಿಗಳಲ್ಲಿಯೂ ಇರುವ ಸರ್ವೇಶ್ವರನಾದ ಹರಿಯನ್ನು ನಾನು ಪೂಜೆ ಮಾಡುತ್ತೇನೆ. ಆ ಸತ್ಯದಿಂದಲೂ ಪುಣ್ಯದಿಂದಲೂ ಈ ನರಕದವರನ್ನು ಬಿಟ್ಟುಬಿಡು.

೭೩. ವಿಷ್ಣುವು ಎಲ್ಲಾ ಪದಾರ್ಥಗಳಲ್ಲಿಯೂ ಇರುವನು. ವಿಷ್ಣುವಿನಲ್ಲಿಯೇ ಎಲ್ಲಾ ಪದಾರ್ಥಗಳೂ ಇರುವುವು. ಆ ಸತ್ಯದಿಂದಲೇ ಈ ನರಕದಲ್ಲಿರುವವರನ್ನು ಬಿಟ್ಟುಬಿಡು.

ಕೃಷ್ಣಾಚ್ಯುತ ಜಗನ್ನಾಥ ಹರೇ ವಿಷ್ಣೋ ಜನಾರ್ದನ ।
ಪಾಹಿ ಸರ್ವಾನಿಮಾನತ್ರ ನಾರಕೇ ಯಾತನಾಗತಾನ್ || ೭೪ ||

|| ವಸಿಷ್ಠ ಉವಾಚ ||

ಶ್ರುತ್ವಾ ನಾಮಾನಿತತ್ರಸ್ಥಾಸ್ತೇನೋಕ್ತಾನಿ ಹೃಪರೇರ್ನ ।
ನಾರಕಾ ನರಕಾನ್ಮುಕ್ತಾಸ್ತತ್ಕ್ಷಣಾದೇವ ಪಾರ್ಥಿವ || ೭೫ ||

ಊಚುಶ್ಚ ಪುಷ್ಕರಂ ಪ್ರೀತ್ಯಾ ಯತೋ ಮುಕ್ತಾ ಸ್ತತೋ ವಯಂ ।
ತಸ್ಮಾತ್ತೇ ಕೀರ್ತಿರತುಲಾ ಲೋಕೇ ವಿಸ್ತಾರಮೃಚ್ಛತು || ೭೬ ||

ಯಯೋಽಪಿ ವಿಸ್ಮಯಾವಿಷ್ಟಃ ಪುಷ್ಕರಂ ಪ್ರಾಪ್ಯ ಪಾರ್ಥಿವ ।
ವರೇಣ ಚ್ಛಂದಯಾಮಾಸ ಜೀವಿತೇಶಃ ಪ್ರಹೃಷ್ಟಧೀಃ || ೭೭ ||

|| ಯಮ ಉವಾಚ ||

ಮೇದಿನೀಂ ಪ್ರಾಪ್ಯ ಧರ್ಮಾತ್ಮನ್ ತಿಷ್ಠ ತತ್ರಾಪಿ ಸರ್ವದಾ ।
ನ ವಿದ್ಯತೇ ಭಯಂ ಮತ್ತಃ ಸುಹೃದಾಮಪಿ ತೇ ದ್ವಿಜ || ೭೮ ||

---

೭೪. ಕೃಷ್ಣ! ಅಚ್ಯುತ! ಜಗನ್ನಾಥ! ಹರೇ! ವಿಷ್ಣೋ! ಜನಾರ್ದನ! ನೀನು ಈ ನರಕದಲ್ಲಿ ಯಾತನೆ ಪಡುತ್ತಿರುವ ಈ ಪಾಪಿಗಳನ್ನೆಲ್ಲಾ ಕಾಪಾಡು.

೭೫. ವಸಿಷ್ಠನು ಹೇಳಿದನು–ಆಗ ಪುಷ್ಕರನು ಹೇಳಿದ ಆ ಹರಿಯ ನಾಮವನ್ನು ನರಕದಲ್ಲಿದ್ದವರೆಲ್ಲರೂ ಕೇಳಿ ಒಡನೆಯೇ ಆ ನರಕದಿಂದ ಬಿಡುಗಡೆಯನ್ನು ಹೊಂದಿದರು.

೭೬. ಆಗ ಅವರೆಲ್ಲರೂ ಎಲೈ ಪುಷ್ಕರನೆ! ನಾವೆಲ್ಲರೂ ಈ ನರಕದಿಂದ ಪಾರಾದೆವಾದುದರಿಂದ ನಿನ್ನ ಕೀರ್ತಿಯು ಲೋಕದಲ್ಲಿ ವಿಸ್ತಾರವಾಗಿ ಹರಡಲಿ. ಎಂದು ಹೇಳಿದರು.

೭೭. ಆಗ ಯಮನೂ ಕೂಡ ಆಶ್ಚರ್ಯಗೊಂಡು ಪುಷ್ಕರನನ್ನು ಕುರಿತು ಸಂತೋಷದಿಂದ ವರವನ್ನು ಕೇಳಿಕೋ ಎಂದನು.

೭೮. ಯಮನು ಹೇಳಿದನು-ಎಲೈ ಧರ್ಮಿಷ್ಠನೇ! ನೀನು ಭೂಲೋಕಕ್ಕೆ ಹೋಗಿ ಅಲ್ಲಿಯೇ ಇದ್ದುಬಿಡು. ನನ್ನಿಂದಾಗಲೀ ನನ್ನ ಕಡೆಯವರಿಂದಾಗಲೀ ನಿನಗೂ ನಿನ್ನ ಕಡೆಯವರಿಗೂ ಭಯವಿರುವುದಿಲ್ಲ.

ಮಾಹಾತ್ಮ್ಯಂ ತವ ಯೋಽಸ್ಮಿತ್ರ ನಿತ್ಯಂ ಸ್ಮರತಿ ಮಾನವಃ ।
ಅಪಮೃತ್ಯು ಭಯಂ ತಸ್ಯ ಮತ್ಪ್ರಸಾದಾನ್ನ ಜಾಯತೇ　　॥ ೭೯ ॥

॥ ವಸಿಷ್ಠ ಉವಾಚ ॥

ಉಕ್ತೋ ವೈವಸ್ವತೇನೈವಂ ಪುಷ್ಕರೋ ಭುವನೋತ್ಯ ಸಃ ।
ಸಮಾಸ್ತೇ ಪೂರ್ವವತ್ ಸ್ವಸ್ಥಃ ಪೂಜಯರ್ನ ಮಧುಸೂದನಂ　　॥ ೮೦ ॥

ಏತನ್ಮಯೋಽಪದಿಷ್ಟಂ ತೇ ಪುಷ್ಕರಸ್ಯ ಮಹಾತ್ಮನಃ ।
ಮಂಹಾತ್ಮ್ಯಂ ಸಂಶ್ರುತಂ ಯೈಸ್ತು ಸರ್ವಪಾಪಕ್ಷಯೋ ಭವೇತ್　　॥ ೮೧ ॥

ಮುಕ್ತಿಶ್ಚ ನರಕಾದ್ವಿಷ್ಣೋರ್ನಾಮ ಸಂಕೀರ್ತನಾದಿಪಿ ।
ಯಥಾ ಹಿ ಜಾಯತೇ ವಿದ್ವನ್ ತಥೋಕ್ತಾ ಚ ತವಾನಘ　　॥ ೮೨ ॥

---

೭೯. ಎಲೈ ಪುಷ್ಕರನೆ! ನಿನ್ನ ಮಹಿಮೆಯನ್ನು ಯಾವನು ನಿತ್ಯವೂ ಸ್ಮರಿಸುತ್ತಾನೆಯೋ ಅವನಿಗೆ ನನ್ನ ಅನುಗ್ರಹದಿಂದ ಅಪಮೃತ್ಯುವಿನ ಭಯ ವಿರುವುದಿಲ್ಲ. ಉಂಟಾಗುವುದೂ ಇಲ್ಲ.

೮೦. ವಸಿಷ್ಠನು ಹೇಳಿದನು-ಆ ಯಮನು ಹೀಗೆ ಹೇಳಲು ಪುಷ್ಕರನು ಭೂಲೋಕಕ್ಕೆ ಬಂದನು. ಇಲ್ಲಿ ಆ ಮಧುಸೂದನನನ್ನು ಮೊದಲಿನಂತೆ ಪೂಜಿಸುತ್ತ ಅನೇಕ ದಿನಗಳು ಇದ್ದನು.

೮೧. ಈ ರೀತಿಯಾಗಿ (ಮಹಾತ್ಮನಾದ) ಆ ಪುಷ್ಕರನ ಮಹಿಮೆಯನ್ನು ಹೇಳಿದೆನು. ನಾನು ಹೇಳಿದ ಈ ಪುಷ್ಕರನ ಮಹಿಮೆಯನ್ನು ಯಾರು ಕೇಳು ತ್ತಾರೆಯೋ ಅವರಿಗೆ ಎಲ್ಲಾ ಪಾಪಗಳೂ ನಾಶವಾಗುತ್ತವೆ.

೮೨. ಆ ವಿಷ್ಣುವಿನ ನಾಮಗಳನ್ನು ಹೇಳುವುದರಿಂದ ಮುಕ್ತಿಯು ಆಗುವ ಬಗೆಯನ್ನು ನಿನಗೆ ಹೇಳಿದ್ದೇನೆ.

ಸ್ವಲ್ಪಾಪಿನಾಮ ಸ್ಮೃತಿರಾದಿಪುಂಸಃ
ಕ್ಷಯಂ ಕರೋತ್ಯಾಹಿತ ಪಾಪರಾಶೇಃ ।
ಪ್ರತ್ಯಕ್ಷತಃ ಕಿಂ ಪುನರತ್ರ ದೃಷ್ಟಂ
ಸಂಕೀರ್ತಿತೇ ನಾಮ್ನಿ ಜನಾರ್ದನಸ್ಯ ॥ ೮೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಪುಷ್ಕರಾಖ್ಯಾನಂ ನಾಮ ಏಕೋನತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೮೩. ಆದಿಪುರುಷನಾದ ಆ ಸ್ವಾಮಿಯ ನಾಮ ಸ್ಮರಣೆಯನ್ನು ಸ್ವಲ್ಪ ಮಾಡಿದರೂ ತಾನು ಮಾಡಿದ ಬಹುವಾದ ಪಾಪಗಳನ್ನು ಕಳೆದುಕೊಳ್ಳುವನು. ಇದನ್ನು ಪ್ರತ್ಯಕ್ಷವಾಗಿ ನೋಡಿದಂತೆಯೇ ಆಗಿದೆ. ಆ ಸ್ವಾಮಿಯ ಧ್ಯಾನದಲ್ಲಿಯೇ ಆಸಕ್ತನಾದವನಿಗೆ ಹೇಳತಕ್ಕದ್ದೇನಿದೆ?

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಪುಷ್ಕರಾಖ್ಯಾನ ಎಂಬ ಇನ್ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಶೃಣು ದ್ವಿಜಕುಮಾರಸ್ಯ ರಾಮರಾಷ್ಟ್ರೇ ನಿವಾಸಿನಃ ।
ಪುನರಾಗಮನಂ ತಸ್ಯ ಯಮಲೋಕಾದ್ಬ್ರವೀಮಿ ತೇ ॥ ೧ ॥

ಅಯೋಧ್ಯನಾಮ ನಗರೀ ಸರ್ವಲಕ್ಷಣಸಂಯುತಾ ।
ತ್ರಿಷು ಲೋಕೇಷು ವಿಖ್ಯಾತಾ ಸೂರ್ಯಾನ್ವಯವಿವರ್ಧಿನೀ ॥ ೨ ॥

ಆಸೀತ್ತಸ್ಯಾಂ ನರವರೋ ರಾಮೋ ವೈ ಭ್ರಾತೃಭಿಸ್ಸಹ ।
ಪ್ರಮುಮೋದ ಸುಖೀ ರಾಜ್ಯಂ ಧರ್ಮೇಣ ಪರಿಪಾಲಯನ್ ॥ ೩ ॥

---

## ಇನ್ನೂರ ಮೂವತ್ತನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಶ್ರೀರಾಮನ ರಾಜ್ಯದಲ್ಲಿ ವಾಸಮಾಡುವ ಬ್ರಾಹ್ಮಣನ ಮಗನು ಯಮಲೋಕದಿಂದ ಹಿಂತಿರುಗಿ ಬಂದ ವಿಷಯವನ್ನು ಹೇಳುತ್ತೇನೆ ಕೇಳು.

೨. ಸಮಸ್ತವಾದ ಲಕ್ಷಣಗಳಿಂದ ಕೂಡಿದ ಅಯೋಧ್ಯೆಯೆಂಬ ಪಟ್ಟಣವೊಂದಿರುವುದು. ಅದು ಮೂರು ಲೋಕದಲ್ಲಿಯೂ ಪ್ರಸಿದ್ಧವಾದುದು. ಅಲ್ಲಿಯೇ ಸೂರ್ಯವಂಶದ ರಾಜರು ಇದ್ದುಕೊಂಡು ಬೆಳೆದುದು.

೩. ಆ ಪಟ್ಟಣದಲ್ಲಿ ರಾಜಶ್ರೇಷ್ಠನಾದ ರಾಮನೆಂಬುವವನು ಸಹೋದರರೊಡನೆ ಧರ್ಮದಿಂದ ರಾಜ್ಯವಾಳುತ್ತ ಸುಖವಾಗಿಯೂ, ಸಂತೋಷವಾಗಿಯೂ ಇದ್ದನು.

ತತಃ ಕತಿಪಯಾಹೇಷು ಗತೇಷು ಜರಠೋ ದ್ವಿಜಃ |
ಶವಂ ಬಾಲಮುಪಾದಾಯ ರಾಜದ್ವಾರಮುಪಾಗಮತ್ ॥ ೪ ॥

ರುರ್ದ ಬಹುವಿಧಂ ವಾಚಾ ಸ್ನೇಹಾಕ್ಷರಸಮನ್ವಿತಂ |
ಅಸಕೃತ್ಪುತ್ರಪುತ್ರೇತಿ ವಾಕ್ಯಮೇತದುವಾಚ ಹ ॥ ೫ ॥

॥ ವೃದ್ಧ ಬ್ರಾಹ್ಮಣ ಉವಾಚ ॥

ಕಿಂ ನಾಮ ದುಷ್ಕೃತಂ ಕರ್ಮ ಪೂರ್ವದೇಹಾಂತರೇ ಕೃತಂ |
ಯದಹಂ ಪುತ್ರಮೇಕಂ ತ್ವಾಂ ಪಶ್ಯಾಮಿ ನಿಧನಂ ಗತಂ ॥ ೬ ॥

ಅಪ್ರಾಪ್ತಯೌವನಂ ಬಾಲಂ ಪಂಚವರ್ಷಸಮನ್ವಿತಂ |
ಅಕಾಲೇ ಕಾಲಮಾಪನ್ನೋ ದುಃಖಾಯ ಮಮ ನಂದನಃ ॥ ೭ ॥

ನ ಸ್ಮರಾಮ್ಯುಕ್ತಮನೃತಂ ನ ಚ ಹಿಂಸಾಂ ಸ್ಮರಾಮ್ಯಹಂ |
ಸರ್ವೇಷಾಂ ಪ್ರಾಣಿನಾಂ ಪಾಪಂ ನ ಕದಾಚನ ವಿದ್ಯತೇ ॥ ೮ ॥

---

೪. ಹೀಗೆ ರಾಮನು ರಾಜ್ಯವಾಳುತ್ತ ಕೆಲವು ದಿನಗಳು ಕಳೆಯಲು ಒಬ್ಬ ಮುದುಕನಾದ ಬ್ರಾಹ್ಮಣನು ಬಂದು ಮಗನ ಹೆಣವನ್ನು ತೆಗೆದುಕೊಂಡು ಅಳುತ್ತಾ ಅರಮನೆಯ ಬಾಗಿಲಿಗೆ ಬಂದನು.

೫. ಹೀಗೆ ತೆಗೆದುಕೊಂಡು ಬಂದು ಸ್ನೇಹದಿಂದ ಕಾಪಾಡಿದ ರೀತಿಯ ಅನೇಕ ಬಗೆಯಾದ ಮಾತುಗಳನ್ನಾಡುತ್ತ ಅಳುತ್ತ ಬಾರಿಬಾರಿಗೂ ಪುತ್ರ, ಪುತ್ರ ಎಂಬುದಾಗಿ ಕೂಗುತ್ತ ಇಂತೆಂದನು.

೬. ವೃದ್ಧ ಬ್ರಾಹ್ಮಣನು ಹೇಳಿದನು–ಎಲೈ ಮಗನೇ ! ನಾನು ನಿನ್ನನ್ನು ಒಬ್ಬನೇ ಮಗನನ್ನಾಗಿ ಪಡೆದು ಅವನೂ ಕೂಡ ಸತ್ತುದನ್ನು ನೋಡಬೇಕಾಯಿತಲ್ಲಾ ?

೭. ಅಯ್ಯೋ ನಿನಗೆ ಯೌವನವು ಬರಲೇ ಇಲ್ಲವಲ್ಲ ! ಇನ್ನೂ ನಿನಗೆ ಐದು ವರ್ಷವಲ್ಲ ! ಈ ಚಿಕ್ಕ ವಯಸ್ಸಿನಲ್ಲಿಯೇ ಸತ್ತು ನನಗೆ ದುಃಖವನ್ನುಂಟು ಮಾಡಿರುವೆಯಲ್ಲ !

೮. ನಾನು ಸುಳ್ಳನ್ನು ಹೇಳಿದ ಜ್ಞಾಪಕವೇ ಇಲ್ಲ! ಯಾರಿಗಾದರೂ ಹಿಂಸೆಯನ್ನು ಮಾಡಿರುವುದೂ ಜ್ಞಾಪಕಕ್ಕೆ ಬರುವುದಿಲ್ಲವಲ್ಲ ! ಯಾವ ಪ್ರಾಣಿಗೇ ಆಗಲಿ ತೊಂದರೆಯಾಗಿ ನನಗೆ ಪಾಪ ಬರುವ ಕೆಲಸವನ್ನು ಮಾಡಲೇ ಇಲ್ಲವಲ್ಲಾ!

ತೇನ ಮೇ ದುಷ್ಕೃತೇನಾದ್ಯ ಬಾಲ ಏವ ಮಮಾತ್ಮಜಃ |
ಅಕೃತ್ವಾ ಪಿತೃಕಾರ್ಯಾಣಿ ನೀತೋ ವೈವಸ್ವತಕ್ಷಯಂ ॥ ೯ ॥

ರಾಮಸ್ಯ ದುಷ್ಕೃತಂ ಕಿಂಚಿತ್ ಮಹದಸ್ತಿ ನ ಸಂಶಯಃ |
ರಾಜದ್ವಾರಿ ಮರಿಷ್ಯಾಮಿ ಪತ್ನ್ಯಾ ಸಾರ್ಧಮನಾಥವತ್ ॥ ೧೦ ॥

ಭ್ರಾತೃಭಿಸ್ಸಹಿತೋ ರಾಜಾ ದೀರ್ಘಮಾಯುರವಾಪ್ನುಯಾತ್ |
ರಾಜದೋಷೈರ್ವಿಪದ್ಯಂತೇ ಪ್ರಜಾಹ್ಯವಿಧಿಪಾಲಿತಾಃ ॥ ೧೧ ॥

ಅಸದ್ವೃತ್ತೇ ಹಿ ನೃಪತಾವಕಾಲೇ ಮ್ರಿಯತೇ ಜನಃ |
ಸುವ್ಯಕ್ತಂ ರಾಜದೋಷೋಽಯಂ ಭವಿಷ್ಯತಿ ನ ಸಂಶಯಃ ॥ ೧೨ ॥

॥ ವಸಿಷ್ಠ ಉವಾಚ ॥

ಏವಂ ಬಹುವಿಧೈರ್ವಾಕ್ಯೈರ್ನಿಂದಮಾನೋ ಮುಹುರ್ಮುಹುಃ |
ರಾಜಾನಂ ದುಃಖಸಂತಪ್ತಃ ಸುತಂ ತಮಭಿಗೂಹತಿ ॥ ೧೩ ॥

---

೯. ನಾನು ಮಾಡಿದ ಯಾವ ಪಾಪದಿಂದ ಈ ಮಗುವು ಯೌವನವನ್ನು ಹೊಂದದೆ ಪಿತೃಕಾರ್ಯಗಳನ್ನು ಮಾಡದೆ ಯಮಲೋಕಕ್ಕೆ ಹೋಯಿತು ? ತಿಳಿಯಲಿಲ್ಲವಲ್ಲ !

೧೦. ನನ್ನ ಪಾಪವೇನೂ ಇಲ್ಲಿರುವುದಿಲ್ಲ. ರಾಮನು ಮಾಡಿದ ಪಾಪವೇ ಇರಬಹುದು. ಅದರಿಂದಲೇ ನನ್ನ ಮಗನು ಸತ್ತಿರುವನು. ಅದರಲ್ಲಿ ಸಂಶಯ ವಿಲ್ಲ. ಆದ್ದರಿಂದ ಅರಮನೆಯ ಬಾಗಿಲಿನಲ್ಲಿ ನನ್ನ ಹೆಂಡತಿಯನ್ನು ಕರೆದು ಕೊಂಡು ಹೋಗಿ ಅನಾಥರಂತೆ ಸಾಯುತ್ತೇವೆ.

೧೧. ಈ ರಾಜನಾದ ರಾಮನು ದೀರ್ಘಾಯುವಾಗಿ ತಮ್ಮಂದಿರೊಡನೆ ರಾಜ್ಯವನ್ನು ಆಳಲಿ. ಸರಿಯಾಗಿ ಪ್ರಜೆಗಳನ್ನು ಕಾಪಾಡದ ರಾಜನ ದೋಷದಿಂದ ಪ್ರಜೆಗಳು ಸಾಯುತ್ತಾರೆ. ಇದು ಖಂಡಿತವು.

೧೨. ರಾಜನು ಒಳ್ಳೆಯ ಮಾರ್ಗದಲ್ಲಿ ಇಲ್ಲದಿದ್ದರೆ ಪ್ರಜೆಗಳು ಅಕಾಲದಲ್ಲಿ ಸಾಯುತ್ತಾರೆ. ಇದು ರಾಜನ ದೋಷವೇ ಆಗಿದೆ. ವ್ಯಕ್ತವಾಗಿದೆ. ಸಂಶಯವೇ ಇಲ್ಲವು.

೧೩. ವಸಿಷ್ಠನು ಹೇಳಿದನು-ಆ ಬ್ರಾಹ್ಮಣನು ಬಯ್ಯುತ್ತಾ ದುಃಖದಿಂದ ಆ ಮಗನ ಶವವನ್ನು ಅಪ್ಪಿಕೊಳ್ಳುತ್ತಿದ್ದನು.

ತಥಾ ತು ಕಾರಣಂ ತಸ್ಯ ದ್ವಿಜಸ್ಯ ಪರಿದೇವಿತೇ ।
ಶುಶ್ರಾವ ರಾಘವಸ್ಸರ್ವಂ ದುಃಖಶೋಕಸಮನ್ವಿತಃ ॥ ೧೪ ॥

ಸ ದುಃಖೇನಾತಿಸಂತಪ್ತೋ ಮಂತ್ರಿಣಃ ಸ ಸಮಾಹ್ವಯತ್ ।
ತತೋ ನೃಪ ಮಯಾ ಸಾರ್ಧಮಷ್ಟೌ ವಿಪ್ರಾಃ ಪ್ರವೇಶಿತಾಃ ॥ ೧೫ ॥

ಮಾರ್ಕಂಡೇಯೋಥಮೌದ್ಗಲ್ಯೋ ವಾಮದೇವಶ್ಚ ಕಾಶ್ಯಪಃ ।
ಕಾತ್ಯಾಯನೋಥ ಜಾಬಾಲಿರ್ಗೌತಮೋ ನಾರದಸ್ತಥಾ ॥
ಏತೇ ದ್ವಿಜರ್ಷಭಾಸ್ಸರ್ವೇ ಆಸನೇಷೂಪವೇಶಿತಾಃ ॥ ೧೬ ॥

ತೇಷಾಂ ಸಮುಪವಿಷ್ಟಾನಾಂ ಸರ್ವೇಷಾಂ ದೀಪ್ತತೇಜಸಾಂ ।
ರಾಘವಸ್ಸರ್ವಮಾಚಷ್ಟ ದ್ವಿಜೋಽಯಮುಪರೋದಿತಿ ॥ ೧೭ ॥

॥ ವಸಿಷ್ಠ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ರಾಜ್ಞೋ ದೀನಸ್ಯ ನಾರದಃ ।
ಪ್ರತ್ಯುವಾಚ ಶುಭಂ ವಾಕ್ಯಮೃಷೀಣಾಂ ಸನ್ನಿಧೌ ನೃಪಂ ॥ ೧೮ ॥

---

೧೪. ಆಗ ಆ ರಾಮನು ಆ ಬ್ರಾಹ್ಮಣನ ಅಳುವಿಕೆಯಲ್ಲಿ ಕಾರಣವನ್ನು ಕೇಳಿದನು. ಅದನ್ನು ಕೇಳಿದೊಡನೆಯೇ ಬಹು ದುಃಖವಾಯಿತು.

೧೫. ರಾಘವನು ಬಹು ದುಃಖಗೊಂಡು ಮಂತ್ರಿಗಳನ್ನು ಕರೆಸಿದನು. ಆಗ ನನ್ನನ್ನೂ ಕರೆಸಿದನು. ನನ್ನೊಡನೆ ಎಂಟು ಜನ ಬ್ರಾಹ್ಮಣರನ್ನು ಕರೆಸಿದನು.

೧೬. ಮಾರ್ಕಂಡೇಯ, ಮೌದ್ಗಲ್ಯ, ವಾಮದೇವ, ಕಾಶ್ಯಪ, ಕಾತ್ಯಾಯನ, ಜಾಬಾಲಿ, ಗೌತಮ, ನಾರದ, ಇವರೂ ಬಂದರು. ಈ ಬಂದ ಬ್ರಾಹ್ಮಣ ಶ್ರೇಷ್ಠರನ್ನು ಆಸನದಲ್ಲಿ ಕೂರಿಸಿದನು.

೧೭. ಅವರೆಲ್ಲರೂ ಕುಳಿತುಕೊಂಡ ಮೇಲೆ ಆ ಮಹಾತ್ಮರೂ, ತೇಜೋವಂತರೂ, ಆದ ಋಷಿಗಳನ್ನು ನೋಡಿ ರಾಘವನು ಈ ಬ್ರಾಹ್ಮಣನು ಅಳುತ್ತಿರುವುದನ್ನು ತೋರಿಸಿ ಅವರಿಗೆ ಹೇಳಿದನು.

೧೮. ವಸಿಷ್ಠನು ಹೇಳಿದನು–ದೀನವಾಗಿ ಕೇಳಿಕೊಳ್ಳುತ್ತಿರುವ ಆ ರಾಮನ ಮಾತುಗಳನ್ನು ಕೇಳಿ ನಾರದನು ಆ ಋಷಿಗಳೆದುರಿಗೆ ರಾಜನನ್ನು ಕುರಿತು ಉತ್ತಮೋತ್ತಮವಾದ ಈ ಮಾತನ್ನು ಹೇಳಿದನು.

॥ ನಾರದ ಉವಾಚ ॥

ಶೃಣು ರಾಜನ್ಯಥಾಽಕಾಲೇ ಪ್ರಾಪ್ತೋಽಯಂ ಬಾಲಸಂಕ್ಷಯಃ ।
ಶ್ರುತ್ವಾ ಕರ್ತವ್ಯತಾಂ ರಾಮ ಕುರುಷ್ವ ರಘುನಂದನ ॥ ೧೯ ॥

ಪುರಾ ಕೃತಯುಗೇ ರಾಮ ಬ್ರಾಹ್ಮಣಾ ವೈ ತಪಸ್ವಿನಃ ।
ಅಬ್ರಾಹ್ಮಣಸ್ತತೋ ರಾಜನ್ನ ತಪಸ್ವೀ ಕಥಂಚನ ॥ ೨೦ ॥

ತ್ರೇತಾಯುಗೇಽವ್ಯವರ್ತಂತ ಬ್ರಾಹ್ಮಣಾಃ ಕ್ಷತ್ರಿಯಾಶ್ಚ ಯೇ ।
ತಪೋಽತಪ್ಯಂತ ತೇ ಸರ್ವೇ ಶುಶ್ರೂಷಾಮಿತರೇ ಜನಾಃ ॥ ೨೧ ॥

ತತೋ ದ್ವಾಪರಸಂಜ್ಞಾಂತೇ ತಪೋ ವೈಶ್ಯಾನ್ ಸಮಾವಿಶತ್ ।
ಯುಗೇಷು ತ್ರಿಷು ವಿಪ್ರೇಂದ್ರಾ ಧರ್ಮಂ ಚಕ್ರುರ್ನೃಪೋತ್ತಮ ॥ ೨೨ ॥

ಭವಿತಾ ಶೂದ್ರಯೋನ್ಯಾಂ ಹಿ ತಪಶ್ಚರ್ಯಾ ಕಲೌ ಯುಗೇ ।
ನ ಶೂದ್ರೋ ಲಭತೇ ಧರ್ಮಮುಗ್ರಂ ತಪ್ತ್ವಾ ನರರ್ಷಭ ॥ ೨೩ ॥

---

೧೯. ನಾರದನು ಹೇಳಿದನು-ಎಲೈ ದೊರೆಯೇ ! ಈ ಬಾಲನು ಅಕಾಲದಲ್ಲಿ ಸತ್ತಿರುವನು. ಇದರ ವಿಷಯವನ್ನು ಕೇಳು. ಕೇಳಿ ಅನಂತರದಲ್ಲಿ ಅದಕ್ಕೆ ಮಾಡಬೇಕಾದುದನ್ನು ಮಾಡು.

೨೦. ಎಲೈ ರಾಮನೇ ! ಪೂರ್ವದಲ್ಲಿ ಕೃತಯುಗದಲ್ಲಿ ಬ್ರಾಹ್ಮಣರೇ ತಪಸ್ಸನ್ನು ಮಾಡುತ್ತಿದ್ದರು. ಬ್ರಾಹ್ಮಣನಲ್ಲದವನು ತಪಸ್ಸನ್ನೇ ಮಾಡುತ್ತಿರಲಿಲ್ಲ.

೨೧. ತ್ರೇತಾಯುಗದಲ್ಲಿ ಅದು ತಪ್ಪಿ ಬ್ರಾಹ್ಮಣರೂ, ಕ್ಷತ್ರಿಯರೂ ತಪಸ್ಸು ಮಾಡುತ್ತಿದ್ದರು. ಮಿಕ್ಕವರು ಅವರ ಶುಶ್ರೂಷೆಯನ್ನು ಮಾಡುತ್ತಿದ್ದರು.

೨೨. ಆಮೇಲೆ ದ್ವಾಪರ ಯುಗದಲ್ಲಿ ತಪಸ್ಸು ಬ್ರಹ್ಮಕ್ಷತ್ರಿಯರನ್ನು ಅಲ್ಲದೆ ವೈಶ್ಯನಿಗೂ ಬಂದಿತು. ಈ ಮೂರು ಯುಗಗಳಲ್ಲಿಯೂ ಬ್ರಾಹ್ಮಣರು ಅವರವರ ಧರ್ಮಗಳನ್ನು ಬಿಡದೆ ಮಾಡುತ್ತಿದ್ದರು.

೨೩. ಕಲಿಯುಗದಲ್ಲಿ ಮಾತ್ರ ಶೂದ್ರರು ತಪಸ್ಸು ಮಾಡುತ್ತಾರೆ ಮಿಕ್ಕ ಮೂರು ಯುಗಗಳಲ್ಲಿಯೂ ಶೂದ್ರರು ತಪಸ್ಸನ್ನು ಮಾಡಿ ಧರ್ಮವನ್ನು ಸಂಪಾದಿಸಕೂಡದು.

ಏಕೋ ವಿಷಯಪರ್ಯಂತೇ ತವ ರಾಜ್ಞ ಮಹಾತಪಾಃ ।
ಶೂದ್ರಸ್ತಪ್ಯತಿ ದುರ್ಬುದ್ಧಿಃ ತೇನ ಬಾಲವಧೋ ಹ್ಯಯಂ ॥ ೨೪ ॥

ಯೋಹ್ಯಧರ್ಮಮಕಾರ್ಯಂ ವೈ ವಿಷಯೇ ಪಾರ್ಥಿವಸ್ಯ ಹಿ ।
ಕರೋತಿ ನೃಪಶಾರ್ದೂಲ ಪುರೇ ವಾ ದುರ್ಮತಿರ್ನೃಪ ॥ ೨೫ ॥

ಕ್ಷಿಪ್ರಂ ಸ ನರಕಂ ಯಾತಿ ಸ ಚ ರಾಜಾ ನ ಸಂಶಯಃ ।
ಸ ತ್ವಂ ಪುರುಷಶಾರ್ದೂಲ ಮಾರ್ಗಸ್ವ ವಿಷಯಂ ಸ್ವಕಂ ॥ ೨೬ ॥

ದುಷ್ಕೃತಂ ಯತ್ರ ಪಶ್ಯೇಥಾಸ್ತತ್ರ ಯತ್ನಂ ಸಮಾಚರ ।
ಏವಂ ತೇ ಧರ್ಮವೃದ್ಧಿಶ್ಚ ನೃಣಾಂ ಚಾಯುರ್ವಿವರ್ಧನಂ ॥ ೨೭ ॥

ಭವಿಷ್ಯತಿ ನರವ್ಯಾಘ್ರ ಬಾಲಶ್ಚಾಯಂ ಸ ಜೀವತಿ ॥ ೨೮ ॥

---

೨೪. ನಿನ್ನ ರಾಜ್ಯದಲ್ಲಿ ಯಾವನೋ ಒಬ್ಬ ಶೂದ್ರನು ಆ ನಿಷಿದ್ಧವಾದ ತಪಸ್ಸನ್ನು ಮಾಡುತ್ತಿರುವನು. ಎಲೈ ರಾಜನೇ ! ಆದ್ದರಿಂದಲೇ ಈ ಬಾಲನು ಅಕಾಲದಲ್ಲಿ ಮರಣವನ್ನು ಹೊಂದಿರುವನು.

೨೫-೨೬. ಯಾವನು ಯಾವ ರಾಜನ ದೇಶದಲ್ಲಿ ಮಾಡಬಾರದ ಕೆಲಸವನ್ನು ಮಾಡುತ್ತಾನೆಯೋ ಅಥವಾ ಅವನ ಪಟ್ಟಣದಲ್ಲಿಯೇ ಆಗಲಿ ಅತಿಕ್ರಮಿಸಿ ತಪಸ್ಸನ್ನು ಮಾಡುತ್ತಾನೆಯೋ ಆ ತಪಸ್ಸು ಮಾಡುವವನೂ, ಆ ರಾಜನೂ ಕೂಡ ನರಕವನ್ನು ಹೊಂದುತ್ತಾರೆ. ಸಂಶಯವಿಲ್ಲ. ಎಲೈ ರಾಮನೇ ! ಆದ್ದರಿಂದ ನಿನ್ನ ಪಟ್ಟಣದಲ್ಲಿಯೂ ನಿನ್ನ ದೇಶದಲ್ಲಿಯೂ ಹೋಗಿ ಹುಡುಕಿಸು.

೨೮. ಕೆಟ್ಟ ಕೆಲಸವನ್ನು ಎಲ್ಲಿ ಕಂಡು ಹಿಡಿಯುತ್ತೀಯೋ ಅಲ್ಲಿ ಅದನ್ನು ಸರಿಪಡಿಸು. ಆ ರೀತಿ ಮಾಡಿದರೆ ನಿನಗೆ ಧರ್ಮವೂ ವೃದ್ಧಿಯಾಗುತ್ತದೆ. ಪ್ರಜೆಗಳಿಗೂ ಆಯುಸ್ಸು ಹೆಚ್ಚುತ್ತದೆ. ಅನಂತರ ಈ ಬ್ರಾಹ್ಮಣ ಪುತ್ರನೂ ಬದುಕಿಕೊಳ್ಳುತ್ತಾನೆ.

॥ ವಸಿಷ್ಠ ಉವಾಚ ॥

ನಾರದಸ್ಯ ತು ತದ್ವಾಕ್ಯಂ ಶ್ರುತ್ವಾಮೃತಮಯಂ ತದಾ ।
ಪ್ರಹರ್ಷಮತುಲಂ ಲೇಭೇ ಲಕ್ಷ್ಮಣಂ ಚೇದಮಬ್ರವೀತ್ ॥ ೨೯ ॥

॥ ಶ್ರೀರಾಮ ಉವಾಚ ॥

ಗಚ್ಛ ಸೌಮ್ಯ ದ್ವಿಜಶ್ರೇಷ್ಠಂ ಸಮಾಶ್ವಾಸಯ ಲಕ್ಷ್ಮಣ ।
ಬಾಲಸ್ಯ ಚ ಶರೀರಂ ತು ತೈಲದ್ರೋಣ್ಯಾಂ ನಿಧಾಪಯ ॥
ಯಥಾ ನ ಕ್ಷೀಯತೇ ಬಾಲಃ ತಥಾ ಸೌಮ್ಯ ವಿಧೀಯತಾಂ ॥ ೩೦ ॥

॥ ವಸಿಷ್ಠ ಉವಾಚ ॥

ಏವಂ ಸ ದಿಶ್ಯ ಕಾಕುತ್ಸ್ಥೋ ಲಕ್ಷ್ಮಣಂ ಶುಭಲಕ್ಷಣಂ ।
ಮನಸಾ ಪುಷ್ಪಕಂ ದಧ್ಯಾವಾಗಚ್ಛೇತಿ ಮಹಾಯಶಾಃ ॥ ೩೧ ॥

ಆಜಗಾಮ ಮುಹೂರ್ತೇನ ಸಮೀಪಂ ರಾಘವಸ್ಯ ತತ್ ।
ಅಭಿವಾದ್ಯ ಮಹರ್ಷೀಂಸ್ತಾನ್ವಿಮಾನಂ ಸೋಧ್ಯರೋಹತ ॥ ೩೨ ॥

---

೨೯. ವಸಿಷ್ಠನು ಹೇಳಿದನು-ನಾರದನು ಹೇಳಿದ ಅಮೃತದಂತೆ ಹಿತವಾದ ಮಾತುಗಳನ್ನು ಆ ರಾಮನು ಕೇಳಿ ಬಹು ಸಂತೋಷಗೊಂಡನು. ಮತ್ತು ಆಗ ಲಕ್ಷ್ಮಣನನ್ನು ಕರೆದು ಇಂತೆಂದು ಹೇಳಿದನು.

೩೦. ಶ್ರೀರಾಮನು ಹೇಳಿದನು-ಎಲೈ ಲಕ್ಷ್ಮಣನೇ! ಹೋಗು. ಆ ಬ್ರಾಹ್ಮಣನನ್ನು ಶಮಾಧಾನ ಪಡಿಸು. ಆ ಬಾಲನ ಶರೀರವನ್ನು ಒಂದು ಎಣ್ಣೆಯ ದೋಣಿಯಲ್ಲಿ ಹಾಕಿಸಿ ಅದು ಕೆಡದಂತೆ ಏರ್ಪಡಿಸು.

೩೧. ವಸಿಷ್ಠನು ಹೇಳಿದನು-ಆ ರಾಮನು ಲಕ್ಷ್ಮಣನಿಗೆ ಈ ರೀತಿಯಾಗಿ ಅಪ್ಪಣೆಯನ್ನು ಮಾಡಿ, ಇಲ್ಲಿಗೆ ಬಾ ಎಂಬುದಾಗಿ ಪುಷ್ಪಕ ವಿಮಾನವನ್ನು ಮನಸ್ಸಿನಲ್ಲಿಯೇ ಸ್ಮರಿಸಿಕೊಂಡನು.

೩೨. ಆ ವಿಮಾನವು ಕ್ಷಣಕಾಲದಲ್ಲಿಯೇ ಆ ರಾಘವನ ಬಳಿಗೆ ಬಂದಿತು. ಅನಂತರ ಶ್ರೀರಾಮನು ಆ ಋಷಿಗಳಿಗೆ ನಮಸ್ಕರಿಸಿ ಪುಷ್ಪಕವಿಮಾನವನ್ನು ಏರಿದನು.

ಧನುರ್ಗೃಹೀತ್ವಾ ತೂಣೀಂ ಚ ಖಡ್ಗಂ ಚ ರುಚಿರಪ್ರಭಂ ।
ಪ್ರಾಯಾತ್ ಪ್ರತೀಚೀಂ ವಿಮಲಾಂ ವಿಚಿನ್ವಂಶ್ಚ ಸಮಂತತಃ ॥ ೩೩ ॥

ಉತ್ತರಾಮಗಮದ್ವೀರ್ಮಾ ದಿಶಂ ಹಿಮವತಾವೃತಾಂ ।
ಅಪಶ್ಯಮಾನಸ್ತತ್ರಾಪಿ ನ ಸ್ವಲ್ಪಮಪಿ ದುಷ್ಕೃತಂ ॥ ೩೪ ॥

ಪೂರ್ವಾಮಪಿ ದಿಶಂ ಸರ್ವಾಮಥಾಪಶ್ಯನ್ನರಾಧಿಪಃ ।
ಪ್ರವಿಶುದ್ಧ ಸಮಾಚಾರಾಮಾದರ್ಶಮಿವ ನಿರ್ಮಲಾಂ ॥ ೩೫ ॥

ದಕ್ಷಿಣಾಂ ದಿಶಮಾಕ್ರಾಮತ್ತತೋ ರಾಜರ್ಷಿನಂದನಃ ।
ಸ ಶೈಲಸ್ಯೋತ್ತರೇ ಪಾರ್ಶ್ವೇ ದದರ್ಶಲಸುಮತ್ಸರಃ ॥ ೩೬ ॥

ತಸ್ಮಿನ್ ಸರಸಿ ತಪ್ಯಂತಂ ತಾಪಸಂ ಸ ಮಹತ್ತಪಃ ।
ದದರ್ಶ ರಾಘವಃ ಶ್ರೀಮಾನ್ ಲಂಬಮಾನಮಧೋಮುಖಂ ॥ ೩೭ ॥

---

೩೩. ಧನುಸ್ಸನ್ನೂ, ಬತ್ತಳಿಕೆಯನ್ನೂ, ಕತ್ತಿಯನ್ನೂ ತೆಗೆದುಕೊಂಡು ಹುಡುಕುತ್ತಾ ಪಶ್ಚಿಮದ ಕಡೆಗೆ ಹೊರಟನು.

೩೪. ಪಶ್ಚಿಮ ದಿಕ್ಕಿನಲ್ಲಿ ಪಾಪ ಮಾಡಿದವನು ಕಾಣಬರದಿರಲು, ಅನಂತರ ಹಿಮವತ್ಪರ್ವತವಿರುವ ಉತ್ತರ ದಿಕ್ಕಿಗೆ ಹುಡುಕುತ್ತಾ ಹೊರಟನು. ಅಲ್ಲಿಯೂ ಕೂಡ ಪಾಪಿಯಾದ ಯಾವನನ್ನೂ ಕಾಣಲೇ ಇಲ್ಲ.

೩೫. ಅಲ್ಲಿಯೂ ಕಾಣದಿರಲು ಪೂರ್ವದಿಕ್ಕಿಗೆ ಹೊರಟು ಆ ಕಡೆಯಲ್ಲಿಯೂ ಸುತ್ತಿ ನೋಡಿದನು. ಆ ದಿಕ್ಕಿನಲ್ಲಿದ್ದವರೆಲ್ಲರೂ ಬಹು ಪರಿಶುದ್ಧವಾದ ಆಚಾರ ವುಳ್ಳವರಾಗಿ ನಿರ್ಮಲವಾದ ಕನ್ನಡಿಯಂತಿದ್ದರು.

೩೬. ಅನಂತರ ರಾಜರ್ಷಿಯ ಮಗನಾದ ರಾಮನು ದಕ್ಷಿಣ ದಿಕ್ಕಿಗೆ ಹುಡುಕುತ್ತ ಹೊರಟನು. ಅಲ್ಲಿ ಒಂದು ಬೆಟ್ಟವಿದ್ದಿತು. ಆ ಬೆಟ್ಟದ ಉತ್ತರದ ಕಡೆಗೆ ಒಂದು ಸರೋವರವಿದ್ದಿತು.

೩೭. ಆ ಸರೋವರದ ಬಳಿಯಲ್ಲಿ ಒಬ್ಬ ತಪಸ್ವಿಯು ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ತಪಸ್ಸಿಗೋಸ್ಕರ ತಲೆಯನ್ನು ಕೆಳಕ್ಕೆ ಮಾಡಿಕೊಂಡು ನೇತಾಡುತ್ತಾ ಉಗ್ರವಾದ ತಪಸ್ಸನ್ನು ಮಾಡುತ್ತಿರುವ ಆತನನ್ನು ಶ್ರೀ ರಾಮನು ಕಂಡನು.

ರಾಘವಸ್ತಮುಪಾಗಮ್ಯ ತಪ್ಯಂತಂ ತಪ ಉತ್ತಮಂ ।
ಉವಾಚ ಚ ನೃಪೋ ವಾಕ್ಯಂ ಧನ್ಯಸ್ತ್ವಮಿತಿ ಸುವ್ರತಃ ॥ ೩೮ ॥

ಬ್ರಾಹ್ಮಣೋ ವಾಸಿ ಭದ್ರಂ ತೇ ಕ್ಷತ್ರಿಯೋ ವಾಸಿ ದುರ್ಜಯಃ ।
ವೈಶ್ಯೋ ವಾ ಯದಿ ವಾ ಶೂದ್ರಃ ಸತ್ಯಮೇತದ್ಬ್ರವೀಹಿ ಮೇ ॥ ೩೯ ॥

ಕೌತೂಹಲಾತ್ತಾಂ ಪೃಚ್ಛಾಮಿ ರಾಮೋ ದಾಶರಥಿರ್ಹ್ಯಹಂ ॥ ೪೦ ॥

॥ ವಸಿಷ್ಠ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ರಾಮಸ್ಯಾಕ್ಲಿಷ್ಟಕರ್ಮಣಃ ।
ಅವಾಕ್‌ಶಿರಾಸ್ತಥಾ ಭೂತೋ ವಾಕ್ಯಮೇತದುವಾಚ ಹ ॥ ೪೧ ॥

॥ ತಪಸ್ಯುವಾಚ ॥

ಶೂದ್ರಂ ಮಾಂ ವಿದ್ಧಿ ಕಾಕುತ್‌ಸ್ಥ ಶಂಬೂಕಂ ನಾಮ ನಾಮತಃ ।
ದೇವತ್ವಂ ಪ್ರಾರ್ಥಯೇ ರಾಮ ಸಶರೀರೋ ಮಹಾಯಶಃ ॥ ೪೨ ॥

---

೩೮. ಆ ತಪಸ್ವಿಯ ಬಳಿಗೆ ಶ್ರೀರಾಮನು ಹೋಗಿ ಎಲೈ ತಪಸ್ವಿಯೇ! ನೀನೇ ಧನ್ಯನು. ಎಂದು ಹೇಳಿದನು.

೩೯-೪೦. ಅಯ್ಯಾ! ನಿನಗೆ ಮಂಗಳವಾಗಲಿ. ನೀನು ಬ್ರಾಹ್ಮಣನೇ? ಅಥವಾ ದುರ್ಜಯನಾದ ಕ್ಷತ್ರಿಯನೋ? ಇಲ್ಲವೇ ವೈಶ್ಯನೋ? ಅದೂ ಅಲ್ಲ ದಿದ್ದರೆ ಶೂದ್ರನೋ? ನನಗೆ ಸತ್ಯವಾಗಿ ಹೇಳು. ಕುತೂಹಲದಿಂದ ಕೇಳುತ್ತೇನೆ. ನಾನು ದಶರಥನ ಮಗನಾದ ಶ್ರೀರಾಮನು.

೪೧. ವಸಿಷ್ಠನು ಹೇಳಿದನು—ಆ ತನ್ನ ಕೆಲಸಗಳನ್ನು ಸರಾಗವಾಗಿ ಮಾಡಿ ಕೊಂಡಿರುವ ಆ ರಾಮನ ಮಾತನ್ನು ಕೇಳಿ ತಲೆಕೆಳಗಾಗಿ ತಪಸ್ಸು ಮಾಡುತ್ತಿದ್ದ ಆ ತಪಸ್ವಿಯು ಇಂತೆಂದನು.

೪೨. ತಪಸ್ವಿಯು ಹೇಳಿದನು-ಎಲೈ ರಾಮನೇ! ನಾನು ಶೂದ್ರನೆಂಬು ದಾಗಿ ತಿಳಿ. ನನ್ನ ಹೆಸರು ಶಂಬೂಕನು. ನಾನು ಈ ಶರೀರದೊಡನೆ ದೇವತೆ ಯಾಗಬೇಕೆಂದು ತಪಸ್ಸನ್ನು ಮಾಡುತ್ತಿದ್ದೇನೆ.

॥ ವಸಿಷ್ಠ ಉವಾಚ ॥

ಭಾಷತಸ್ತಸ್ಯ ಶೂದ್ರಸ್ಯ ಖಡ್ಗಂ ಸ ರುಚಿರಪ್ರಭಂ ।
ವಿಕೃಷ್ಯ ಕೋಶಾದ್ವಿಮಲಂ ಶಿರಶ್ಚಿಚ್ಛೇದ ರಾಘವಃ ॥ ೪೩ ॥

ತಸ್ಮಿನ್ ಶೂದ್ರೇ ಹತೇ ದೇವಾಃ ಸೇಂದ್ರಾಸ್ಸಾಗ್ನಿಪುರೋಗಮಾಃ ।
ಸಾಧುಸಾಧ್ವಿತಿ ಕಾಕುತ್‌ಸ್ಥಂ ಪ್ರಶಶಂಸುಃ ಮುಹುರ್ಮುಹುಃ ॥ ೪೪ ॥

ಸುಪ್ರೀತಾಶ್ಚಾಬ್ರುವನ್ ದೇವಾ ರಾಮಂ ಸತ್ಯಪರಾಕ್ರಮಂ ।
ಸುರಕಾರ್ಯಮಿದಂ ರಾಮ ಸುಕೃತಂ ತೇ ಮಹಾಮತೇ ॥ ೪೫ ॥

ಗೃಹಾಣ ತ್ವಂ ವರಂ ರಾಮ ಯತ್ತ್ವಮಿಚ್ಛಸ್ಯರಿಂದಮ ।
ದೇವಾನಾಂ ಭಾಷಿತಂ ಶ್ರುತ್ವಾ ರಾಘವಸ್ಸುಸಮಾಹಿತಃ ।
ಉವಾಚ ಪ್ರಾಂಜಲಿರ್ವಾಕ್ಯಂ ಸಹಸ್ರಾಕ್ಷಪುರೋಗಮಾನ್ ॥ ೪೬ ॥

---

೪೩. ವಸಿಷ್ಠನು ಹೇಳಿದನು-ಆ ಶೂದ್ರನು ಹೀಗೆ ಹೇಳಲು ರಾಮನು ಒಡನೆಯೇ ಖಡ್ಗವನ್ನು ತೆಗೆದು ಝಳಪಿಸುತ್ತ ಆತನ ತಲೆಯನ್ನು ಕತ್ತರಿಸಿದನು. [ರಾಮನಿಗೂ ತಪಸ್ವಿಗೂ ಅನೇಕ ವಿಧವಾದ ಮಾತುಗಳು ನಡೆಯುತ್ತವೆ. ಕೊನೆಗೆ ಧರ್ಮದಿಂದ ಒಪ್ಪಿಸಿ ಆತನನ್ನು ಕಡಿಯುತ್ತಾನೆ. ಇದು ಬೇರೆಕಡೆಯಲ್ಲಿ ಹೇಳಲ್ಪಟ್ಟಿದೆ. ಅಯುಕ್ತವೆಂದು ಭಾವಿಸಲಾಗುವುದಿಲ್ಲ.]

೪೪. ಆ ಶೂದ್ರನನ್ನು ರಾಮನು ಕೊಂದು ಹಾಕಲು ಇಂದ್ರ ಅಗ್ನಿಗಳೇ ಮುಂತಾದ ದೇವತೆಗಳು ಸಾಧು, ಸಾಧು ಎಂಬುದಾಗಿ ಅನೇಕ ಬಾರಿ ರಾಮನನ್ನು ಹೊಗಳಿದರು.

೪೫-೪೬. ದೇವತೆಗಳು ಆಗ ಸುಪ್ರಸನ್ನರಾದರು. ರಾಮನನ್ನು ಕುರಿತು ಎಲೈ ರಾಜನೇ ! ಇದು ದೇವತೆಗಳ ಕಾರ್ಯವು. ಇದನ್ನು ನೀನು ನೆರವೇರಿಸಿದ್ದೀಯೆ. ನಿನ್ನ ಪರಾಕ್ರಮವು ಅದ್ಭುತವಾದುದು. ನಿನಗೆ ಬೇಕಾದ ವರವನ್ನು ಕೇಳು. ಕೊಡುತ್ತೇವೆ. ಎಂದರು. ದೇವತೆಗಳ ಈ ಮಾತನ್ನು ಕೇಳಿ ರಾಮನು ದೃಢಮನಸ್ಸುಳ್ಳವನಾಗಿ ಆ ದೇವೇಂದ್ರನೇ ಮುಂತಾದ ದೇವತೆಗಳನ್ನು ಕುರಿತು ಕೈ ಮುಗಿದುಕೊಂಡು ಇಂತೆಂದನು.

॥ ಶ್ರೀರಾಮ ಉವಾಚ ॥

ಯದಿ ದೇವಾಃ ಪ್ರಸನ್ನಾ ಮೇ ದ್ವಿಜಪುತ್ರಸ್ಸ ಜೀವತು ।
ದಿಶಂತು ವರಮೇತಂ ಮ ಈಪ್ಸಿತಂ ಪರಮಂ ಮಮ ॥ ೪೭ ॥

॥ ವಸಿಷ್ಠ ಉವಾಚ ॥

ರಾಘವಸ್ಯ ತು ತದ್ವಾಕ್ಯಂ ಶ್ರುತ್ವಾ ವಿಬುಧಸತ್ತಮಾಃ ।
ಪ್ರತ್ಯೂಚೂ ರಾಘವಂ ಪ್ರೀತಾ ದೇವಾಃ ಶಕ್ರಪುರೋಗಮಾಃ ॥ ೪೮ ॥

॥ ದೇವಾ ಊಚುಃ ॥

ಯಸ್ಮಿನ್ ಮುಹೂರ್ತೇ ಕಾಕುತ್ಸ್ಥ ಶೂದ್ರೋಽಯಂ ವಿನಿಪಾತಿತಃ ।
ತಸ್ಮಿನ್ ಮುಹೂರ್ತೇ ವಿಪ್ರೋಽಸೌ ಜೀವೇನ ಸಮಯುಜ್ಯತ ॥ ೪೯ ॥

ಸ್ವಸ್ತಿ ಪ್ರಾಪ್ನು ಹಿ ಭದ್ರಂ ತೇ ಸಾಧಯಾಮೋ ನರರ್ಷಭ ॥ ೫೦ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವಾ ಪ್ರಯಯುರ್ದೇವಾ ರಾಮೋಽಪಿ ಸ್ವಪುರಂ ಯಯೌ ।
ದೃಷ್ಟ್ವಾ ದ್ವಿಜಸುತಂ ತತ್ರ ಲಬ್ಧಪ್ರಾಣಂ ನಿರಾಮಯಂ ॥ ೫೧ ॥

---

೪೭. ಶ್ರೀ ರಾಮನು ಹೇಳಿದನು—ದೇವತೆಗಳಿರ! ನೀವು ನನ್ನ ವಿಷಯದಲ್ಲಿ ಪ್ರಸನ್ನರಾಗಿದ್ದರೆ ಆ ಬ್ರಾಹ್ಮಣನ ಮಗನು ಬದುಕಲಿ. ಈ ವರವನ್ನು ನನಗೆ ಕೊಡಿರಿ. ಇದೇ ನನಗೆ ಬೇಕಾದ ವರವು.

೪೮. ವಸಿಷ್ಠನು ಹೇಳಿದನು—ಆಗ ಆ ದೇವತೆಗಳು ರಾಘವನ ಆ ಮಾತನ್ನು ಕೇಳಿ ಪ್ರೀತಿಗೊಂಡವರಾಗಿ ರಾಮನನ್ನು ಕುರಿತು ಅವರೆಲ್ಲರೂ ಇಂತೆಂದರು.

೪೯-೫೦. ದೇವತೆಗಳು ಹೇಳಿದರು—ಎಲೈ ಶ್ರೀರಾಮನೆ! ಯಾವ ಗಳಿಗೆಯಲ್ಲಿ ನೀನು ಆ ಶಂಬೂಕನನ್ನು ಕೊಂದೆಯೋ ಅದೇ ಗಳಿಗೆಯಲ್ಲಿ ಆ ಬ್ರಾಹ್ಮಣನ ಕುಮಾರನು ಜೀವದಿಂದೆದ್ದನು. ನಿನಗೆ ಒಳ್ಳೆಯದಾಗಲಿ. ಮಂಗಳವಾಗಲಿ.

೫೧-೫೨ ವಸಿಷ್ಠನು ಹೇಳಿದನು—ಹೀಗೆಂದು ಹೇಳಿ ದೇವತೆಗಳು ಹೊರಟು ಹೋದರು. ರಾಮನೂ ಕೂಡ ತನ್ನ ಊರಿಗೆ ಹೋದನು. ಅಲ್ಲಿ ಪ್ರಾಣವನ್ನು

ಪ್ರಹರ್ಷಮತುಲಂ ಲೇಭೇ ಸಾನುಜೋ ರಾಘುಸ್ತದಾ ।
ಸಂಹೃಷ್ಟಾಸ್ಸರ್ವಶೋ ವಿಪ್ರಾಃ ಪ್ರಶಶಂಸುಶ್ಚ ರಾಘವಂ ॥ ೫೨ ॥

॥ ವಿಪ್ರಾ ಊಚುಃ ॥

ಅಹೋ ಧನ್ಯೋಽಸಿ ರಾಜೇಂದ್ರ ಯತೋ ಧರ್ಮೇ ಮತಿರ್ದೃಢಾ ।
ಧರ್ಮೇ ಧೀರ್ದುರ್ಲಭಾ ನೃಣಾಂ ವಿಶೇಷೇಣ ಮಹೀಭೃತಾಂ ॥ ೫೩ ॥

ಕ್ಷತ್ರಿಯೋ ಯಸ್ಸ್ವಧರ್ಮೇಣ ಪೃಥಿವೀಮನುಶಾಸ್ತಿ ವೈ ।
ಸ ಲೋಕೇ ಲಭತೇ ಕೀರ್ತಿಂ ನರಃ ಪ್ರೇತ್ಯ ಚ ಸದ್ಗತಿಂ ॥ ೫೪ ॥

ಬ್ರಹ್ಮಣ್ಯಃ ಶಸ್ತ್ರವಿಜ್ಞಾನೀ ಶೂರಶ್ಚ ತ್ವಂ ರಘೂದ್ವಹ ।
ಅಪ್ರಮತ್ತಸ್ಸದಾ ದಕ್ಷಃ ಪೃಥಿವೀ ಪರಿಪಾಲಯ ॥ ೫೫ ॥

---

ಹೊಂದಿದ ಆ ಬ್ರಾಹ್ಮಣ ಬಾಲಕನನ್ನು ನೋಡಿ ಬಹು ಸಂತೋಷಗೊಂಡನು. ಅದರಿಂದ ಸಂತೋಷಗೊಂಡ ಬ್ರಾಹ್ಮಣರೆಲ್ಲರೂ ರಾವುನನ್ನು ಬಹುವಾಗಿ ಹೊಗಳಿದರು.

೫೩. ವಿಪ್ರರು ಹೇಳಿದರು—ಎಲೈ ರಾಜೇಂದ್ರನಾದ ರಾಮನೇ! ನೀನೇ ಧನ್ಯನು. ನಿನಗೆ ಧರ್ಮದಲ್ಲಿ ಈ ರೀತಿಯಾದ ಸ್ಥಿರ ಬುದ್ಧಿಯಿರುವುದಲ್ಲ! ಪ್ರಪಂಚದಲ್ಲಿ ಮನುಷ್ಯರಿಗೆ ಧರ್ಮದಲ್ಲಿ ಬುದ್ಧಿಯು ಹುಟ್ಟುವುದು ಕಷ್ಟವು. ಅದರಲ್ಲಿಯೂ ರಾಜರಿಗಂತೂ ಬಹುವಾಗಿ ಕಷ್ಟವು.

೫೪. ಯಾವ ಕ್ಷತ್ರಿಯನು ತಾನು ಧರ್ಮದಿಂದ ಭೂಮಿಯನ್ನು ಆಳುತ್ತಾನೆಯೋ ಆತನು ಲೋಕದಲ್ಲಿ ಕೀರ್ತಿಯನ್ನು ಹೊಂದಿ ಸತ್ತಮೇಲೆ ಸದ್ಗತಿಯನ್ನು ಹೊಂದುತ್ತಾನೆ.

೫೫. ಎಲೈ ರಘುರಾಮನೆ! ನೀನು ಬ್ರಾಹ್ಮಣರಲ್ಲಿ ಹಿತ ಕೋರುವವನೂ ಶಸ್ತ್ರವನ್ನು ಬಲ್ಲವನೂ, ಶೂರನೂ ಆಗಿದ್ದೀಯೆ. ಜಾಗರೂಕನಾಗಿಯೂ, ದಕ್ಷನಾಗಿಯೂ, ಯಾವಾಗಲೂ ಭೂಮಿಯನ್ನು ಆಳುತ್ತಿರು.

॥ ವಸಿಷ್ಠ ಉವಾಚ ॥

ಏವಂ ಸಂವರ್ಧಿತೋ ವಿಪ್ರೈಃ ರಾಮೋ ರಾಜ್ಯಮುಪಾಲಯತ್ ।
ಬ್ರಾಹ್ಮಣಸ್ತೇನ ಶಿಶುನಾ ಪ್ರಹೃಷ್ಟಃ ಸ್ವಗೃಹಂ ಯಯೌ ॥ ೫೬ ॥

ಗತಾಸೋರ್ದ್ವಿಜಪುತ್ರಸ್ಯ ಪುನರಾಗಮನಂ ಮಯಾ ।
ಉಕ್ತಂ ಶೃಣುಷ್ವ ಕೃಷ್ಣಸ್ಯ ಗುರುಪುತ್ರ ಸಮಾಗಮಂ ॥ ೫೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ದ್ವಿಜಪುತ್ರಾಖ್ಯಾನಂ ನಾಮ ತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೬. ವಸಿಷ್ಠನು ಹೇಳಿದನು-ಬ್ರಾಹ್ಮಣರಿಂದ ಈ ರೀತಿಯಾಗಿ ಆಶೀರ್ವಾದಿಸಲ್ಪಟ್ಟವನಾಗಿ ರಾಮನು ರಾಜ್ಯವನ್ನು ಆಳುತ್ತಿದ್ದನು. ಇತ್ತ ಬ್ರಾಹ್ಮಣನು ಸಂತೋಷಗೊಂಡವನಾಗಿ ಆ ಮಗನೊಂದಿಗೆ ಮನೆಗೆ ಹೋದನು.

೫೭. ಬ್ರಾಹ್ಮಣನ ಮಗನು ಪ್ರಾಣವನ್ನು ಕಳೆದುಕೊಂಡು ಮತ್ತೆ ಹೊಂದಿದುದನ್ನು ವಿವರಿಸಿದೆನು- ಶ್ರೀಕೃಷ್ಣನು ತನ್ನ ಗುರುವಿನ ಮಗನನ್ನು ತಂದ ರೀತಿಯನ್ನು ವಿವರಿಸುತ್ತೇನೆ. ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ದ್ವಿಜಪುತ್ರಾಖ್ಯಾನ ಎಂಬ ಇನ್ನೂರ ಮೂವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕತ್ರಿಂಶದಧಿಕದ್ವಿಶತತಮೋಽಧ್ಯಾಯಃ ||



|| ವಸಿಷ್ಠ ಉವಾಚ ||

ಅವಂತೀಪುರಮಿತ್ಯಸ್ತಿ ದ್ವಿಜವೃಂದ ಸಮಾಕುಲಂ |
ನದೀನದಸಮಾಯುಕ್ತಂ ನಾನಾವೃಕ್ಷೋಪಶೋಭಿತಂ || ೧ ||

ಯೋಜನಾಯಾಮವಿಸ್ತಾರಂ ಧನಧಾನ್ಯಸಮಾಕುಲಂ |
ವೇದಶಾಸ್ತ್ರಾರ್ಥ ತತ್ವಜ್ಞೈರ್ಮಹದ್ಭಿಶ್ಚ ವಿರಾಜಿತಂ || ೨ ||

ತಸ್ಮಿನ್ನೇವ ಪುರೇ ರಮ್ಯೇ ಸಾಂದೀಪಿನಿರಿತಿ ಶ್ರುತಃ |
ಪ್ರಖ್ಯಾತಗುಣಸಂಪನ್ನಃ ಸ್ವಾಶ್ರಮಾಚಾರತತ್ಪರಃ || ೩ ||

---

## ಇನ್ನೂರ ಮೂವತ್ತೊಂದನೆಯ ಅಧ್ಯಾಯವು



೧-೨. ವಸಿಷ್ಠನು ಹೇಳಿದನು-ಅವಂತಿಪುರವೆಂಬ ಒಂದು ಪಟ್ಟಣವಿರುವುದು. ಅದರಲ್ಲಿ ಅನೇಕ ಜನ ಬ್ರಾಹ್ಮಣರು ವಾಸವಾಗಿರುವರು. ಅನೇಕವಾದ ನದಿಗಳೂ, ನದಗಳೂ, ಇರುವುವು. ಅಲ್ಲಿ ಅನೇಕ ಬಗೆಯಾದ ಮರಗಳು ಇವೆ. ಒಂದು ಯೋಜನದಗಲ ವಿಸ್ತಾರವಾಗಿದೆ. ಬಹುವಾಗಿ ಧನಧಾನ್ಯಗಳಿಂದ ಕೂಡಿದೆ. ವೇದಗಳನ್ನೂ, ಶಾಸ್ತ್ರಗಳನ್ನೂ ತಿಳಿದ ಜನರು ಅಲ್ಲಿ ಬಹುವಾಗಿದ್ದಾರೆ.

೩-೬. ಆ ಮನೋಹರವಾದ ಊರಿನಲ್ಲಿ ಸಾಂದೀಪಿನಿ ಎಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಒಳ್ಳೆಯ ಗುಣಗಳಿಂದ ಕೂಡಿದವನು. ಅವನು ಆಶ್ರಮದ ಆಚಾರವನ್ನೂ, ವರ್ಣದ ಆಚಾರವನ್ನೂ ತಪ್ಪದೆ ಮಾಡುತ್ತಿದ್ದನು.

**ಸರ್ವಲಕ್ಷಣಸಂಪನ್ನೋ ವೇದವೇದಾಂಗಪಾರಗಃ।**
**ಸತ್ಯವಾಗನಸೂಯಶ್ಚ ಶೌಚಾದಿಗುಣಸಂಯುತಃ ॥ ೪ ॥**

**ಮಿತಾಶೀ ಮಿತದೃಷ್ಟಿಶ್ಚ ಮಿತವಾಗ್ಯೋಗತತ್ಪರಃ ।**
**ಜಿತೇಂದ್ರಿಯೋ ಜಿತಕ್ರೋಧಸ್ತಪೋ ದಾನದಯಾಪರಃ ॥ ೫ ॥**

**ದೇವದ್ವಿಜಗುರೂಣಾಂ ಚ ಪೂಜಕಶ್ಚ ದೃಢವ್ರತಃ ।**
**ಸ್ಥಿರಬುದ್ಧಿಃ ಸ್ಥಿರಾರಂಭಃ ಕ್ಷಾಂತಃ ಶಾಂತಃ ಪ್ರಸನ್ನಧೀಃ ॥ ೬ ॥**

**ಕುಮಾರಸ್ತಸ್ಯ ಮತಿಮಾನ್ ಚಂದ್ರಬಿಂಬ ಸಮದ್ಯುತಿಃ ।**
**ಲಾಲಿತೋ ವವೃಧೇ ಮಾತ್ರಾ ಪಿತುರಾನಂದವರ್ಧನಃ ॥ ೭ ॥**

**ಕೃತೋಪನಯನಃ ಸೋಥ ವಿದ್ಯಾ ಜಗ್ರಾಹ ಬಾಲಕಃ ।**
**ಕದಾಚಿನ್ಮಾಘಮಾಸೇ ತು ಪ್ರಭಾತೇ ಪೂರ್ಣಿಮಾತಿಥೌ ॥ ೮ ॥**

---

ಎಲ್ಲಾ ಲಕ್ಷಣಗಳಿಂದಲೂ ಕೂಡಿದ್ದನು. ವೇದ ವೇದಾಂಗಗಳನ್ನು ಚೆನ್ನಾಗಿ ತಿಳಿದಿದ್ದನು. ಸತ್ಯವಾದಿಯು. ದ್ವೇಷಿಸದವನು. ಶೌಚ ಆಚಾರಗಳನ್ನು ಆಚರಿಸುವವನು. ಮಿತವಾಗಿ ತಿನ್ನತಕ್ಕವನು. ಮಿತವಾದ ನೋಟವುಳ್ಳವನು. ಮಿತವಾದ ಮಾತುಳ್ಳವನು. ಯೋಗಿಯು. ಜಿತೇಂದ್ರಿಯನು. ಕೋಪವನ್ನು ಜಯಿಸಿದವನು. ತಪಸ್ಸು, ದಾನ, ದಯೆಗಳಲ್ಲಿ ಆಸಕ್ತನು. ದೇವರು, ದ್ವಿಜರು, ಗುರುಗಳನ್ನು ಪೂಜಿಸುವವನು. ದೃಢವಾದ ವ್ರತವುಳ್ಳವನು. ಸ್ಥಿರವಾದ ಬುದ್ಧಿಯುಳ್ಳವನು. ಆರಂಭಿಸಿದುದನ್ನು ಕೊನೆಗಾಣಿಸುವವನು. ಕ್ಷಮಾಶೀಲನು. ಶಾಂತನು. ಪ್ರಸನ್ನವಾದ ಮನಸ್ಸುಳ್ಳವನು. ಕಪಟಿಯಲ್ಲ.

೭–೧೧. ಅವನಿಗೆ ಒಬ್ಬ ಮಗನಿದ್ದನು. ಅವನು ಬುದ್ಧಿವಂತನು. ಚಂದ್ರನಂತೆ ಮುಖವುಳ್ಳವನು. ತಾಯಿಯು ಲಾಲಿಸುತ್ತ ಬೆಳೆಸಿದಳು. ತಂದೆಗೆ ಆತನನ್ನು ನೋಡಿದರೆ ಆನಂದವು ಹೆಚ್ಚುತ್ತಿದ್ದಿತು. ಇವನಿಗೆ ತಂದೆಯು ಉಪನಯನ ಮಾಡಿದನು. ಅನಂತರ ವಿದ್ಯಾಭ್ಯಾಸವನ್ನು ಮಾಡಿಸಲು ಎಲ್ಲವನ್ನೂ ಸಹ ಕಲಿತನು ಒಂದು ಸಾರಿ ಮಾಘಮಾಸ ಬರಲು ಸ್ನಾನ ಮಾಡುವುದಕ್ಕೆ ಪೂರ್ಣಿಮೆಯ ದಿವಸ ಬೆಳಗ್ಗೆ ಪ್ರಭಾಸ ಕ್ಷೇತ್ರದಲ್ಲಿ ಸ್ನಾನ ಮಾಡಲು ಜೊತೆಯು

ಸಬ್ರಹ್ಮಚಾರಿಭಿಃ ಸಾರ್ಧಂ ಪ್ರಭಾತೇ ಸ್ನಾತುಮಭ್ಯಗಾತ್ |
ತತ್ರಾಚಮ್ಯ ವಿಧಾನೇನ ಜಲಮಧ್ಯೇ ಸ್ಥಿತೋಽಜಪತ್ ॥ ೯ ॥

ಕೃಷ್ಣಾಚ್ಯುತ ನಿಮಜ್ಜಾಮಿ ಪ್ರಭಾಸೇಽಸ್ಮಿನ್ ಶುಭೋದಕೇ |
ಅನೇನಮಾಘಸ್ನಾನೇನ ಸುಪ್ರೀತೋ ಮಾಂ ಸಮುದ್ಧರ ॥ ೧೦ ॥

ಇತ್ಯುದೀರ್ಯ ಜಲೇ ಮಗ್ನಃ ಸವಯೋಭಿಃ ಸಹೈವ ತು |
ತೀರಮಾರುರುಹುಃ ಸ್ನಾತ್ವಾ ಸರ್ವೇ ತೇ ವಿಪ್ರಬಾಲಕಾಃ ॥ ೧೧ ॥

ಸಾಂದೀಪಿನಿಕುಮಾರೋಽಯಂ ನ ಕದಾಚಿತ್ಸಮುತ್ಥಿತಃ |
ಸುಹೃದೋಽಸ್ಯ ಸಮಾಗತ್ಯ ತಸ್ಯ ಪಿತ್ರೋರ್ನ್ಯವೇದಯನ್ ॥ ೧೨ ॥

॥ ಬಾಲಾ ಊಚುಃ ॥

ಕೃಷ್ಣಾಚ್ಯುತನಿಮಜ್ಜಾಮಿ ಪ್ರಭಾಸೇಽಸ್ಮಿನ್ ಶುಭೋದಕೇ |
ಅನೇನಮಾಘಸ್ನಾನೇನ ಸುಪ್ರೀತೋ ಮಾಂ ಸಮುದ್ಧರ ॥ ೧೩ ॥

ಇತ್ಯುಕ್ತ್ವಾಥ ಸುತೋ ಮಗ್ನೋ ಜಲೇ ನ ಪುನರುತ್ಥಿತಃ ॥ ೧೪ ॥

---

ಬ್ರಹ್ಮಚಾರಿಗಳೊಡನೆ ಹೋದನು. ಈ ಜಾಗದಲ್ಲಿ ನೀರಿನಲ್ಲಿ ನಿಂತುಕೊಂಡು ಈ ರೀತಿಯಾಗಿ ಜಪಿಸಿದನು. ಕೃಷ್ಣ, ಅಚ್ಯುತ, ಗೋವಿಂದ ಈ ಉತ್ತಮವಾದ ಪ್ರಭಾಸ ತೀರ್ಥದಲ್ಲಿ ಸ್ನಾನ ಮಾಡುತ್ತೇನೆ. ಈ ಮಾಘಸ್ನಾನದಿಂದ ಸುಪ್ರೀತ ನಾಗಿ ನನ್ನನ್ನು ಉದ್ಧಾರಮಾಡು.

೧೧. ಹೀಗೆಂದು ಹೇಳಿ ಜಪಿಸುತ್ತ ಆ ಹುಡುಗನು ತನ್ನ ಜೊತೆಯವ ರೊಡನೆ ನೀರಿನಲ್ಲಿ ಮುಳುಗಿದನು. ಉಳಿದ ಬಾಲಕರೆಲ್ಲರೂ ನೀರಿನಲ್ಲಿ ಸ್ನಾನ ಮಾಡಿ ದಡಕ್ಕೆ ಬಂದರು.

೧೨. ಈ ಸಾಂದೀಪಿನಿಯ ಮಗನು ಮೇಲಕ್ಕೇಳಲೇ ಇಲ್ಲ. ಆಗ ಈತನ ಸ್ನೇಹಿತರೆಲ್ಲ ಬಂದು ಆ ಸಾಂದೀಪಿನಿಗೆ ತಿಳಿಸಿದರು.

೧೩-೧೪. ಬಾಲರು ಹೇಳಿದರು-ಕೃಷ್ಣ, ಅಚ್ಯುತ, ಈ ಪ್ರಭಾಸಕ್ಷೇತ್ರದ ತೀರ್ಥದಲ್ಲಿ ಸ್ನಾನ ಮಾಡುತ್ತೇನೆ. ಈ ಮಾಘಸ್ನಾನದಿಂದ ಸುಪ್ರೀತನಾಗು. ನನ್ನನ್ನು ಉದ್ಧಾರ ಮಾಡು. ಹೀಗೆಂದು ಹೇಳಿ ನೀರಿನಲ್ಲಿ ಮುಳುಗಿದನು. ಮತ್ತೆ ಏಳಲೇ ಇಲ್ಲ.

|| ವಸಿಷ್ಠ ಉವಾಚ ||

ಇತ್ಯಾಕರ್ಣಿತಮಾತ್ರೇಣ ತನ್ಮಾತಾ ನ್ಯಪತದ್ಭುವಿ ।
ಶನೈರಾಶ್ವಾಸಿತಾ ತಸ್ಯ ಮಾತಾ ಬಂಧುಭಿರುತ್ಥಿತಾ || ೧೫ ||

ಪುನಃ ಪ್ರಭಾಸಮುದ್ದಿಶ್ಯ ಪರ್ಯಧಾವತ ದುಃಖಿತಾ ।
ಮುಹುರುತ್ಪತತೇ ಸಾಧ್ವೀ ಮುಹುಃ ಪತತಿ ವಿಹ್ವಲಾ || ೧೬ ||

ಮುಹುರಾಲೀಯತೇ ಶೋಕಾನ್ಮುಹುಃ ಕ್ರೋಶತಿ ರೋದಿತಿ ।
ಸಾ ತೀವ್ರಶೋಕಸಂತಪ್ತಾ ವಿಲಲಾಪಾಕುಲೇಂದ್ರಿಯಾ || ೧೭ ||

ಸಾಂದೀಪನಿಸ್ತು ಭಗವಾನಂತಶ್ಶೋಕಂ ನಿಗೃಹ್ಯ ಚ ।
ತಸ್ಯ ಮಿತ್ರಾಣಿ ಚಾಹೂಯ ಶುಶ್ರಾವ ಚ ಪುನಃ ಪುನಃ || ೧೮ ||

॥ ಸಾಂದೀಪನಿರುವಾಚ ॥

ಕಥಂ ಕಥಂ ಚ ತೇನೋಕ್ತಃ ಪಠ್ಯತಾಂ ಪಠ್ಯತಾಮಿತಿ || ೧೯ ||

---

೧೫. ವಸಿಷ್ಠನು ಹೇಳಿದನು-ಈ ಮಾತನ್ನು ಕೇಳಿದ ಕೂಡಲೇ ಆ ಹುಡುಗನ ತಾಯಿಯು ನೆಲದ ಮೇಲೆ ಬಿದ್ದು ಬಿಟ್ಟಳು ಅನಂತರ ಆಕೆಯು ಬಂಧುಗಳಿಂದ ಸಮಾಧಾನಪಡಿಸಲ್ಪಟ್ಟವಳಾಗಿ ಸ್ವಲ್ಪ ಹೊತ್ತಿನ ಮೇಲೆ ಎದ್ದಳು.

೧೬. ಆಕೆಯು ಎದ್ದು ಒಡನೆಯೇ ದುಃಖದಿಂದ ಪ್ರಭಾಸತೀರ್ಥಕ್ಕೆ ಓಡಿದಳು. ಆಕೆಯು ಓಡುತ್ತಿರುವಾಗ ಆಗಾಗ್ಗೆ ಬೀಳುತ್ತಲೂ ಏಳುತ್ತಲೂ ದುಃಖಿಸುತ್ತಿದ್ದಳು.

೧೭. ದುಃಖದಿಂದ ಆಗಾಗ್ಗೆ ಸಣ್ಣಗಾಗುತ್ತಿದ್ದಳು. ಸೊರಗುತ್ತಿದ್ದಳು. ಗಟ್ಟಿಯಾಗಿ ಕೆಲವು ಬಾರಿ ಅಳುವಳು. ಒಂದೊಂದು ಸಾರಿ ಕೂಗಿಕೊಳ್ಳುವಳು. ಈ ರೀತಿಯಾಗಿ ಬಹುವಾದ ಶೋಕದಿಂದ ಕೂಡಿಕೊಂಡು ಇಂದ್ರಿಯಗಳೇ ಸ್ವಾಧೀನದಲ್ಲಿ ಇಲ್ಲದಂತೆ ಆದಳು.

೧೮. ತಂದೆಯಾದ ಸಾಂದೀಪನಿಯು ದುಃಖವನ್ನು ಒಳಗೇ ತಡೆದು ಕೊಂಡು ಅವನ ಸ್ನೇಹಿತರನ್ನು ಕರೆದು ಏನಾಯಿತು ? ಹೇಗೆ ? ಎಂಬುದಾಗಿ ಪದೇ ಪದೇ ಕೇಳುತ್ತಿದ್ದನು.

೧೯. ಸಾಂದೀಪನಿಯು ಹೇಳಿದನು-ಏನು ? ಏನು ? ಹೇಗೆ ? ಅವನು ಹೇಳಿದುದನ್ನು ಹೇಳಿರಿ. ಹೇಳಿರಿ ಎನ್ನುತ್ತಿದ್ದನು.

॥ ಬಾಲಾ ಊಚುಃ ॥

ಕೃಷ್ಣಾಚ್ಯುತ ನಿಮಜ್ಜಾಮಿ ಪ್ರಭಾಸೇಸ್ಮಿನ್ ಶುಭೋದಕೇ ।
ಅನೇನಮಾಘಸ್ನಾನೇ ನ ಸುಪ್ರೀತೋ ಮಾಂ ಸಮುದ್ಧರ ॥
ಇತ್ಯುಕ್ತ್ವಾಥ ಸುತೋ ಮಗ್ನೋ ಜಲೇನ ಪುನರುತ್ಥಿತಃ ॥ ೨೦ ॥

॥ ವಸಿಷ್ಠ ಉವಾಚ ॥

ಪಠಿತಂ ತತ್ಪರ್ಣ ಶಶ್ವತ್ ಸ್ವಸ್ಥಚಿತ್ತೋ ಭವನ್ಮುನಿಃ ॥ ೨೧ ॥

॥ ಸಾಂದೀಪನಿರುವಾಚ ॥

ಶ್ಲೋಕಾರ್ಥೋ ನ ವೃಥಾ ಭೂಯಾತ್ ಕೃಷ್ಣ ಏವ ಸ ರಕ್ಷತಿ ॥ ೨೨ ॥

॥ ವಸಿಷ್ಠ ಉವಾಚ ॥

ಇತಿ ಭಾರ್ಯಾಂ ಸಮಾಶ್ವಾಸ್ಯ ಸುಖೇನ ನ್ಯವಸಚ್ಚಿರಂ ।
ಅಥ ಶೂರಸುತೋ ರಾಜನ್ ಪುತ್ರಯೋಃ ಸಮಕಾರಯತ್ ॥ ೨೩ ॥

---

೨೦. ಬಾಲರು ಹೇಳಿದರು-ಕೃಷ್ಣ, ಅಚ್ಯುತ, ಈ ಪ್ರಭಾಸಕ್ಷೇತ್ರದ ತೀರ್ಥದಲ್ಲಿ ಸ್ನಾನ ಮಾಡುತ್ತೇನೆ. ಈ ಮಾಘಸ್ನಾನದಿಂದ ಸುಪ್ರೀತನಾಗಿ ನನ್ನನ್ನು ಉದ್ಧಾರಮಾಡು. ಹೀಗೆಂದು ಹೇಳಿ ನೀರಿನಲ್ಲಿ ಮುಳುಗಿದನು. ಅನಂತರ ಏಳಲೇ ಇಲ್ಲ.

೨೧. ವಸಿಷ್ಠನು ಹೇಳಿದನು-ಆ ಹುಡುಗನು ಹೇಳಿದುದನ್ನು ಹೇಳುತ್ತ ಸಾಂದೀಪನಿಯು ಸ್ವಸ್ಥವಾಗಿದ್ದುಬಿಟ್ಟನು

೨೨. ಸಾಂದೀಪನಿಯು ಹೇಳಿದನು-ಈ ಶ್ಲೋಕದ ಅರ್ಥವು ವ್ಯರ್ಥವಾಗುವುದೇ ಇಲ್ಲ. ಕೃಷ್ಣನೇ ಅವನನ್ನು ರಕ್ಷಿಸುತ್ತಾನೆ.

೨೩. ವಸಿಷ್ಠನು ಹೇಳಿದನು-ಆ ಸಾಂದೀಪನಿಯು ಹೆಂಡತಿಯನ್ನು ಸಮಾಧಾನಪಡಿಸಿ ಬಹುಕಾಲ ಸುಮ್ಮನಿದ್ದುಬಿಟ್ಟನು. ಇತ್ತ ಶೂರನ ಮಗನಾದ ವಸುದೇವನು ಮಕ್ಕಳಾದ ರಾಮಕೃಷ್ಣರಿಗೆ ಜಾತಿಗೆ ತಕ್ಕಂತೆ ಕ್ರಿಯೆಗಳನ್ನು ಮಾಡಿಸಿದನು.

ಪುರೋಧಸಾ ಬ್ರಾಹ್ಮಣೈಶ್ಚ ಯಥಾವದ್ದ್ವಿಜಸಂಸ್ಕೃತಿಂ ।
ತೇಭ್ಯೋದಾದ್ದಕ್ಷಿಣಾ ಗಾಶ್ಚ ರುಕ್ಮಮಾಲ್ಯಾಸ್ಸ್ವಲಂಕೃತಾಃ ॥ ೨೪ ॥

ಅಲಂಕತ್ಯತೇಭ್ಯಃ ಸಂಪೂಜ್ಯ ಸವತ್ಸಾಃ ಕ್ಷೌಮಮಾಲಿನೀಃ ।
ಯಾಃ ಕೃಷ್ಣರಾಮಜನ್ಮರ್ಕ್ಷೇ ಮನೋದತ್ತಾ ಮಹಾಮತಿಃ ॥ ೨೫ ॥

ತಾಶ್ಚಾಪ್ಯದಾದಸುಸ್ಕೃತ್ಯ ಕಂಸೇ ಚ ವಿನಿಪಾತಿತೇ ।
ತತಶ್ಚ ಲಬ್ಧಸಂಸ್ಕಾರೌ ದ್ವಿಜತ್ವಂ ಪ್ರಾಪ್ಯ ಸುವ್ರತೌ ॥ ೨೬ ॥

ಗರ್ಗಾದ್ಯದುಕುಲಾಚಾರ್ಯಾದ್ಗಾಯತ್ರೀವ್ರತಮಾಸ್ಥಿತೌ ।
ಪ್ರಭವೌ ಸರ್ವವಿದ್ಯಾನಾಂ ಸರ್ವಜ್ಞೌ ಜಗದೀಶ್ವರೌ ॥ ೨೭ ॥

ಸಾನ್ಯಸಿದ್ಧಾಮಲಜ್ಞಾನಂ ಗೂಹಮಾನೌ ವರೇಂಗಿತೌ ।
ಅಥೋ ಗುರುಕುಲಾವಾಸಮಿಚ್ಛಂತಾವಧಿಜಗ್ಮತುಃ ॥ ೨೮ ॥

---

೨೪. ವಸುದೇವನು ಪುರೋಹಿತನಿಂದಲೂ, ಬ್ರಾಹ್ಮಣರಿಂದಲೂ, ದ್ವಿಜರಿಗೆ ಆಗಬೇಕಾದ ಸಂಸ್ಕಾರಗಳನ್ನು ಮಾಡಿಸಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ, ಗೋಗಳನ್ನೂ, ಚಿನ್ನಗಳನ್ನೂ, ಮಾಲೆಗಳನ್ನೂ. ಅಲಂಕಾರಗಳನ್ನೂ ಕೊಟ್ಟನು.

೨೫. ಆ ರಾಮಕೃಷ್ಣರ ಜನ್ಮ ನಕ್ಷತ್ರದ ದಿವಸ ಆ ಉದಾರ ಬುದ್ಧಿಯುಳ್ಳ ವಸುದೇವನು ಬ್ರಾಹ್ಮಣರನ್ನು ಕರೆದು ಅವರಿಗೆ ಅಲಂಕಾರ ಮಾಡಿಸಿ ಅವರನ್ನು ಪೂಜಿಸಿ, ಕರೆಯುವ ಹಸುಗಳನ್ನೂ ತರಿಸಿ, ಹಸುವಿಗೂ, ಕರುವಿಗೂ ಅಲಂಕಾರ ಮಾಡಿಸಿ ಅವನ್ನು ಅವರಿಗೆ ಕೊಟ್ಟನು.

೨೬–೨೭. ಅವರುಗಳಿಬ್ಬರೂ ಸೇರಿ ಕಂಸನನ್ನು ಕೊಂದಮೇಲೆಯೂ ಅದಕ್ಕೋಸ್ಕರವಾಗಿಯೂ ಬ್ರಾಹ್ಮಣರಿಗೆ ಅನೇಕ ದಾನಗಳನ್ನು ಮಾಡಿದನು. ಈ ದ್ವಿಜರೂಪ ಸಂಸ್ಕಾರವಾದಮೇಲೆ ಆ ಬ್ರಹ್ಮಚಾರಿಗಳಾದ ರಾಮ ಕೃಷ್ಣರಿಗೆ ತಮ್ಮ ಯದುಕುಲಕ್ಕೆ ಆಚಾರ್ಯನಾದ ಗರ್ಗನಿಂದ ಗಾಯತ್ರಿಯನ್ನು ಉಪದೇಶ ಮಾಡಿಸಿದನು. ಅವರಿಬ್ಬರೂ ಎಲ್ಲಾ ವಿದ್ಯೆಗಳನ್ನೂ ಕಲಿತರು. ಸರ್ವಜ್ಞರಾದರು. ಪ್ರಪಂಚಕ್ಕೆ ಒಡೆಯರಾದರು.

೨೮. ಇವರಲ್ಲಿರುವ ಜ್ಞಾನವು ಮತ್ತೊಬ್ಬರಿಗೆ ಬರುವುದೇ ಇಲ್ಲ. ಮತ್ತು ನಿರ್ಮಲವೂ ಆದುದು. ಇವರು ವರಮನುಷ್ಯರು. ಇಂತಹವರು ಇವೆಲ್ಲವನ್ನೂ ಹೊರಗೆಡವದಂತೆ ಗುಟ್ಟಾಗಿದ್ದರು. ಉಪನಯನವಾದ ಮೇಲೆ ಗುರುಕುಲದಲ್ಲಿ ವಾಸಮಾಡಬೇಕೆಂಬುದಾಗಿ ಉದ್ದೇಶಿಸಿ ಹೊರಟರು.

ಕಾಶ್ಯಂ ಸಾಂದೀಪನಿ ನಾಮ್ನಾ ಹ್ಯವಂತೀಪುರವಾಸಿನಂ ।
ತನೋವಾಸಾದ್ಯ ತೌ ದಾನ್ತೌ ಗುರುವೃತ್ತಿಮನಿಂದಿತಾಂ ॥ ೨೯ ॥

ಗ್ರಾಹಯಂತಾವುಪೇತೌ ಸ್ಮ ಭಕ್ತ್ಯಾ ದೇವಮಿವಾದೃತೌ ।
ತತೋ ದ್ವಿಜವರಸ್ತುಷ್ಟಃ ಶುದ್ಧಭಾವಾನುವೃತ್ತಿಭಿಃ ॥ ೩೦ ॥

ಪ್ರೋವಾಚ ನಿಖಿಲಾನ್ ವೇದಾನ್ ಸಾಂಗೋಪನಿಷದೋ ಗುರುಃ ।
ಸರಹಸ್ಯಂ ಧನುರ್ವೇದಂ ಧರ್ಮಾನ್ನ್ಯಾಯಪಥಸ್ತಥಾ ॥ ೩೧ ॥

ತಥಾ ಚಾನ್ವೀಕ್ಷಿಕೀಂ ವಿದ್ಯಾಂ ದಂಡನೀತಿಂ ಚ ಷಡ್ವಿಧಾಂ ।
ಸರ್ವಂ ತದಮರಶ್ರೇಷ್ಠೌ ಸರ್ವವಿದ್ಯಾಪ್ರವರ್ತಕೌ ॥ ೩೨ ॥

ಸರ್ವಂ ನಿಗದಮಾತ್ರೇಣ ತೌ ಸಂಜಗೃಹತುರ್ನೃಪ ।
ಅಹೋರಾತ್ರೈಶ್ಚತುಷ್ಷಷ್ಟ್ಯಾ ಸಂಯುತೌ ತಾವತೀಃ ಕಲಾಃ ।
ಗುರುದಕ್ಷಿಣಯಾಚಾರ್ಯಂ ಛಂದಯಾಮಾಸತುರ್ನೃಪ ॥ ೩೩ ॥

---

೨೯-೩೨. ಕಾಶ್ಯಪ ಗೋತ್ರದವನಾದ ಅವಂತಿ ಪಟ್ಟಣದಲ್ಲಿ ವಾಸ ಮಾಡುವ ಈ ಸಾಂದೀಪನಿಯ ಬಳಿಗೆ ಹೋಗಿ ಅವನಲ್ಲಿ ಗುರು ವೃತ್ತಿಗೋಸ್ಕರ ಅವರನ್ನು ಒಪ್ಪಿಸಿ ಭಕ್ತಿಯಿಂದ ಸೇವಿಸುತ್ತಾ ಇದ್ದರು. ಈ ರಾಮ ಕೃಷ್ಣರ ಶುದ್ಧ ಭಾವದಿಂದಲೂ ಇವರ ಶುಶ್ರೂಷೆಯಿಂದಲೂ ಸಂತೋಷಗೊಂಡ ಸಾಂದೀಪನಿಯು ಎಲ್ಲಾ ವೇದಗಳನ್ನೂ, ವೇದಾಂಗಗಳನ್ನೂ, ಉಪನಿಷತ್ತುಗಳನ್ನೂ, ರಹಸ್ಯವಾದ ಧನುರ್ವೇದವನ್ನೂ, ಧರ್ಮಶಾಸ್ತ್ರ, ನ್ಯಾಯಶಾಸ್ತ್ರಗಳನ್ನೂ ಆನ್ವೀಕ್ಷಕಿಯನ್ನೂ, ಆರು ವಿಧವಾದ ದಂಡನೀತಿಗಳನ್ನೂ ಹೇಳಿಕೊಟ್ಟನು. ದೇವಶ್ರೇಷ್ಠರೂ, ಸರ್ವ ವಿದ್ಯೆಗಳಿಗೂ ಮೂಲಭೂತರೂ ಆದ ಈ ರಾಮ ಕೃಷ್ಣರು, ಅವನು ಹೇಳಿಕೊಟ್ಟ ಕೂಡಲೇ ಎಲ್ಲವನ್ನೂ ಗ್ರಹಿಸಿಕೊಂಡರು.

೩೩. ಹಗಲೂ ರಾತ್ರಿಯೂ ಅಧ್ಯಯನ ಮಾಡುತ್ತಾ ಅರವತ್ತುನಾಲ್ಕು ದಿನಗಳಲ್ಲಿಯೇ ಅರವತ್ತುನಾಲ್ಕು ಕಲೆಗಳನ್ನೂ ಕಲಿತರು. ಅನಂತರ ಗುರು ದಕ್ಷಿಣೆಗೋಸ್ಕರ ಆಚಾರ್ಯನನ್ನು ನಿನಗೇನು ಬೇಕು ? ಎಂದು ಕೇಳಿದರು.

ದ್ವಿಜಸ್ತಯೋಸ್ತಂ ಮಹಿಮಾನಮದ್ಭುತಂ
ಸಮೀಕ್ಷ್ಯ ರಾಜನ್ನತಿಮಾನುಷೀಂ ಮತಿಂ ।
ಸಮ್ಮಂತ್ರ್ಯ ಪತ್ನ್ಯಾ ಸ ಮಹಾರ್ಣವೇ ಮೃತಂ
ಬಾಲಂ ಪ್ರಭಾಸೇ ವರಯಾಂಬಭೂವ ಹ ॥ ೩೪ ॥

ತಥೇತ್ಯಥಾರುಹ್ಯ ಮಹಾರಥೌ ರಥಂ
ಪ್ರಭಾಸಮಾಸಾದ್ಯ ದುರಂತವಿಕ್ರಮೌ ।
ವೇಲಾಮುಪವ್ರಜ್ಯ ನಿಷೇದತುಃ ಕ್ಷಣಂ
ಸಿಂಧುರ್ವಿದಿತ್ವಾರ್ಹಣಮಾಹರತ್ತಯೋಃ ॥ ೩೫ ॥

ತಮಾಹ ಭಗವಾನಾಶು ಗುರುಪುತ್ರಃ ಪ್ರದೀಯತಾಂ ।
ಯೋಽಸಾವಿಹ ತ್ವಯಾ ಗ್ರಸ್ತೋ ಬಾಲಕೋ ಮಹತೋರ್ಮಿಣಾ ॥ ೩೬ ॥

॥ ವಸಿಷ್ಠ ಉವಾಚ ॥

ತಾವಾಹ ವರುಣೋ ದೇವೋ ವಿನಯಾವನತಸ್ಥಿತಃ ।
ನ ಚಾಹಾರ್ಷಮಹಂ ದೇವ ದೈತ್ಯಃ ಪಂಚಜನೋ ಮಹಾನ್ ॥ ೩೭ ॥

---

೩೪. ಆ ಸಾಂದೀಪನಿಯು ಇವರ ಮಹಿಮೆಯನ್ನೂ ಮನುಷ್ಯರಿಗೆ ಮೀರಿದ ಬುದ್ಧಿಯನ್ನೂ ನೋಡಿ ಹೆಂಡತಿಯೊಡನೆ ಯೋಚಿಸಿ ಪ್ರಭಾಸ ಕ್ಷೇತ್ರದಲ್ಲಿ ಬಿದ್ದು ಸತ್ತ ಮಗನನ್ನು ತಂದುಕೊಡೆಂದು ಕೇಳಿದನು.

೩೫. ಮಹಾರಥರಾದ, ಬಹು ಪರಾಕ್ರಮಿಗಳಾದ ಆ ರಾಮ ಕೃಷ್ಣರು ಪ್ರಭಾಸದ ಬಳಿಗೆ ಹೋಗಿ ಅದರ ದಡದಲ್ಲಿ ಕ್ಷಣಕಾಲ ಕುಳಿತುಕೊಂಡರು. ಆಗ ಪ್ರಭಾಸವು ಅವರ ಮನೋಭಾವವನ್ನು ತಿಳಿದು ಅವರಿಗೆ ಪೂಜೆ ಮಾಡಿತು.

೩೬. ಎಲೈ ಪ್ರಭಾಸನೇ ! ನೀರು ನಿನ್ನ ದೊಡ್ಡ ಅಲೆಯಿಂದ ಮುಳುಗಿಸಿ ಕೊಂಡ ಆ ಬಾಲಕನನ್ನು ತಂದು ಕೊಡು. ಅವನು ನನ್ನ ಗುರುಪುತ್ರನು ಎಂದು ಹೇಳಿದರು.

೩೭. ವಸಿಷ್ಠನು ಹೇಳಿದನು—ಆಗ ವರುಣನು ಬಂದು ವಿನಯದಿಂದ ಇಂತೆಂದನು. ಎಲೈ ದೇವನೇ ! ನಾನು ಆ ಹುಡುಗನನ್ನು ಅಪಹರಿಸಲಿಲ್ಲ. ನನ್ನ ನೀರಿನೊಳಗೆ ಒಬ್ಬ ಪಂಚಜನನೆಂಬ ದೈತ್ಯನಿರುವನು.

ಅನ್ತರ್ಜಲಚರಃ ಕೃಷ್ಣ ಶಂಖರೂಪಧರೋಽಸುರಃ ।
ಜಲಮಾವಿಶ್ಯ ತಂ ಹತ್ವಾ ಗೃಹ್ಯತಾಂ ಇತ್ಯುವಾಚ ಸಃ ॥ ೩೮ ॥

ತತಸ್ಸ ಜಲಮಾವಿಶ್ಯ ಹತ್ವಾ ತಂ ಜಲವಾಸಿನಂ ।
ವಿದಾರ್ಯ ಹೃದಯಂ ತಸ್ಯ ನಾಪಶ್ಯದುದರೇಽರ್ಭಕಂ ॥ ೩೯ ॥

ತದಂಗಪ್ರಭವಂ ಶಂಖಮಾದಾಯ ರಥಮಾಗಮತ್ ।
ತತಃ ಸಂಯಮನೀಂ ನಾಮ ಯಮಸ್ಯ ದಯಿತಾಂ ಪುರೀಂ ॥ ೪೦ ॥

ಗತ್ವಾ ಜನಾರ್ದನಃ ಶಂಖಂ ಪ್ರದಧ್ಮೌ ಸಹಲಾಯುಧಃ ।
ಶಂಖನಿರ್ಹ್ರಾದಮಾಕರ್ಣ್ಯ ಪ್ರಜಾ ಸಂಯಮನೋ ಯಮಃ ॥ ೪೧ ॥

ತಯೋಸ್ಸಪರ್ಯಾಂ ಮಹತೀಂ ಚಕ್ರೇ ಭಕ್ತ್ಯಾಭಿಬೃಂಹಿತಃ ।
ಉವಾಚಾವನತಃ ಕೃಷ್ಣಂ ಸರ್ವಭೂತಾಶಯಾಲಯಂ ॥ ೪೨ ॥

---

೩೮. ಆ ಪಂಚಜನನೆಂಬ ಅಸುರನು ಶಂಖದ ಆಕಾರವುಳ್ಳವನು. ನೀರಿನಲ್ಲಿಯೇ ಸಂಚರಿಸುತ್ತಿರುವವನು. ಅವನು ತಿಂದಿರುವನು. ನೀನು ನೀರಿನೊಳಕ್ಕೆ ನುಗ್ಗಿ ಅವನನ್ನು ಕೊಂದು ಆ ಬಾಲಕನನ್ನು ತೆಗೆದುಕೋ ಎಂದನು.

೩೯. ಒಡನೆಯೇ ಕೃಷ್ಣನು ನೀರಿನೊಳಕ್ಕೆ ನುಗ್ಗಿ ಆ ನೀರಿನಲ್ಲಿ ಸಂಚರಿಸುವ ಆ ಪಂಚಜನನನ್ನು ಕೊಂದು ಅವನ ಹೃದಯವನ್ನು ಸೀಳಿ ನೋಡಲು ಆ ಬಾಲಕನು ಅಲ್ಲಿರಲಿಲ್ಲ.

೪೦-೪೨ ಅಲ್ಲಿ ಆ ಬಾಲಕನು ಸಿಕ್ಕದಿರಲು ಅವನ ಅವಯವದಿಂದ ಸಿಕ್ಕಿದ ಶಂಖವನ್ನು ತೆಗೆದುಕೊಂಡು ರಥವನ್ನು ಹತ್ತಿದನು. ಆಮೇಲೆ ಯಮನ ಪ್ರೀತಿಪಾತ್ರವಾದ ಸಂಯಮನೀ ಪಟ್ಟಣಕ್ಕೆ ಆ ರಾಮಕೃಷ್ಣರಿಬ್ಬರೂ ಹೋದರು. ಅಲ್ಲಿಗೆ ಅವರಿಬ್ಬರೂ ಹೋದ ಮೇಲೆ ಹೊರಗಡೆಯಲ್ಲಿಯೇ ಕೃಷ್ಣನು ಶಂಖವನ್ನು ಊದಿದನು. ಎಲ್ಲರನ್ನೂ ತನ್ನ ಹದ್ದಿನಲ್ಲಿಟ್ಟಿರುವ ಯಮನು ಆ ಶಂಖದ ಧ್ವನಿಯನ್ನು ಕೇಳಿ ಭಕ್ತಿಯಿಂದ ಅವರಿಬ್ಬರಿಗೂ ಪೂಜೆಯನ್ನು ಮಾಡಿದನು. ಅನಂತರ ಆ ಸರ್ವಪ್ರಾಣಿಗಳಿಗೂ ಆಶ್ರಯ ಸ್ಥಾನವಾದ ಶ್ರೀ ಕೃಷ್ಣನನ್ನು ಕುರಿತು ಇಂತೆಂದು ಕೇಳಿದನು.

|| ಯಮ ಉವಾಚ ||

ಲೀಲಾಮನುಷ್ಯಯೋಃ ಕೃಷ್ಣ ಯುವಯೋಃ ಕರವಾಣಿ ಕಿಂ || ೪೩ ||

|| ಶ್ರೀ ಭಗವಾನುವಾಚ ||

ಗುರುಪುತ್ರಮಿಹಾನೀತಂ ನಿಜಕರ್ಮನಿಬಂಧನಂ |
ಆನಯಸ್ವ ಮಹಾರಾಜ ಮಚ್ಛಾಸನಪುರಸ್ಕೃತಃ || ೪೪ ||

|| ವಸಿಷ್ಠ ಉವಾಚ ||

ತಥೇತಿ ತೇನೋಪನೀತಂ ಗುರುಪುತ್ರಂ ಯದೂದ್ವಹೌ |
ದತ್ವಾ ಸ್ವಗುರವೇ ಭೂಯೋ ಗೃಹ್ಣೀಷ್ವೇತಿ ಸಮೂಚತುಃ || ೪೫ ||

|| ಗುರುರುವಾಚ ||

ಸಮ್ಯಕ್ ಸಂಪಾದಿತೋ ವತ್ಸೌ ಭವದ್ಭ್ಯಾಂ ಗುರನಿಷ್ಕ್ರಯಃ |
ಕೋ ನು ಯುಷ್ಮದ್ವಿಧಗುರೋಃ ಕಾಮೋ ನಾವಾವಶಿಷ್ಯತೇ ||
ಗಚ್ಛಂತಂ ಸ್ವಗೃಹಂ ವೀರೌ ಕೀರ್ತಿರ್ವಾಮಸ್ತು ಪಾವನೀ || ೪೬ ||

---

೪೩. ಯಮನು ಹೇಳಿದನು-ಎಲೈ ಕೃಷ್ಣನೇ ! ನೀವಿಬ್ಬರೂ ಲೀಲಾರ್ಥವಾಗಿ ಮನುಷ್ಯರಾಗಿರುವವರು. ನಿಮಗೆ ನಾನೇನನ್ನು ಮಾಡಬೇಕು ? ಹೇಳಿ.

೪೪. ಭಗವಂತನು ಹೇಳಿದನು-ತನ್ನ ಕರ್ಮಕ್ಕೆ ಕಟ್ಟುಬಿದ್ದು ಇರುವ ನನ್ನ ಗುರುಪುತ್ರನನ್ನು ಇಲ್ಲಿಗೆ ತಂದಿದ್ದೀಯೆ. ನನ್ನ ಅಪ್ಪಣೆಯಂತೆ ಆ ಬಾಲಕನನ್ನು ಕರೆದುಕೊಂಡು ಬಾ |

೪೫. ವಸಿಷ್ಠನು ಹೇಳಿದನು-ಹಾಗೇ ಆಗಲೆಂದು ಯಮನು ತಂದು ಆ ಬಾಲಕನನ್ನು ಒಪ್ಪಿಸಿದನು. ಆ ರಾಮಕೃಷ್ಣರು ಆ ಗುರುಪುತ್ರನನ್ನು ಕರೆದುಕೊಂಡು ಬಂದು ಗುರುವಿಗೆ ಕೊಟ್ಟು ತೆಗೆದುಕೋ ಎಂದರು.

೪೬. ಗುರುವು ಹೇಳಿದನು-ಎಲೈ ವತ್ಸನೆ ! ನೀವಿಬ್ಬರೂ ಗುರುವಿಗೆ ಬೇಕಾದ ದಕ್ಷಿಣೆಯನ್ನು ಸರಿಯಾಗಿ ತಂದು ಕೊಟ್ಟಿರಿ. ನಿಮ್ಮಂಥಹವರ ಗುರುವಿಗೆ ಯಾವ ಆಸೆಯು ತಾನೆ ಪೂರೈಸದಿರುವುದಿಲ್ಲ ! ಎಲೈ ವೀರರಿರಾ ! ನಿಮ್ಮ ಮನೆಗೆ ಹೋಗಿರಿ ! ನಿಮಗೆ ಪವಿತ್ರವಾದ ಕೀರ್ತಿಯು ಬರಲಿ

|| ವಸಿಷ್ಠ ಉವಾಚ ||

ಗುರುಣೈವಮನುಜ್ಞಾತೌ ರಥೇನಾನಿಲರಂಹಸಾ ।
ಆಯತಾ ಸ್ವಪುರಂ ಯಾತೌ ಪರ್ಜನ್ಯನಿನದೇನ ವೈ || ೪೭ ||

ಸಮನಂದರ್ನ ಪ್ರಜಾಸ್ಸರ್ವಾ ದೃಷ್ಟ್ವಾ ರಾಮಜನಾರ್ದನೌ ।
ಅಪಶ್ಯನ್ತ್ಯೋ ಬಹ್ವಹಾನಿ ನಷ್ಟಲಬ್ಧಧನಾ ಇವ || ೪೮ ||

ಇತ್ಥಂ ಪರಾಸುಃ ಸಲಿಲೇ ಪ್ರಭಾಸೇ
ನಿಮಜ್ಜ್ಯ ಪರ್ವಣ್ಯಪಿ ಮಾಘಮಾಸೇ ।
ಕೃಷ್ಣ ಪ್ರಭಾವಾತ್ಪುನರಾಜಗಾಮ
ಸಾಂದೀಪನೇಸ್ತಸ್ಯ ಮುನೇಃ ಕುಮಾರಃ || ೪೯ ||

ಅನ್ಯೇಽಪಿ ಪುನರಾಯಾತಾ ಯಮಲೋಕಾದನೇಕಶಃ ।
ದೇವತಾನುಗ್ರಹಂ ಪ್ರಾಪ್ಯ ಮಯಾವಕ್ತುಂ ನ ಶಕ್ಯತೇ || ೫೦ ||

---

೪೭. ವಸಿಷ್ಠನು ಹೇಳಿದನು-ಗುರುವಿನಿಂದ ಹೀಗೆ ಅಪ್ಪಣೆಹೊಂದಿ ಅವರು ವಾಯುವೇಗವುಳ್ಳ ದೊಡ್ಡದಾದ ಗುಡುಗಿನಂತೆ ಶಬ್ದಮಾಡುವ ರಥದಲ್ಲಿ ಕುಳಿತು ತಮ್ಮ ಊರಿಗೆ ಬಂದರು.

೪೮. ಆಗ ಆ ದ್ವಾರಕೆಯ ಪ್ರಜೆಗಳು ಆ ರಾಮಕೃಷ್ಣರನ್ನು ಬಹುದಿನದಿಂದ ಕಾಣದಿದ್ದು ಈಗ ಅವರು ಬಂದುದನ್ನು ನೋಡಿ ಹಾಳಾಗಿ ಹೋದ ಧನವನ್ನು ಮತ್ತೆ ಹೊಂದಿದವರಂತೆ ಸಂತೋಷಪಟ್ಟರು.

೪೯. ಈ ರೀತಿಯಾಗಿ ಪರ್ವದಿನದಲ್ಲಿ ಮಾಘಮಾಸದಲ್ಲಿ ಪ್ರಭಾಸ ಕ್ಷೇತ್ರದಲ್ಲಿ ಸ್ನಾನಮಾಡಿ ಸತ್ತುಹೋದ ಕೃಷ್ಣನ ಗುರುವಾದ ಆ ಸಾಂದೀಪನಿಯ ಮಗನು ಕೃಷ್ಣನ ಪ್ರಭಾವದಿಂದ ಮತ್ತೆ ಬಂದನು.

೫೦. ಇನ್ನೂ ಬಹು ಜನರು ಯಮಲೋಕಕ್ಕೆ ಹೋದವರು ದೇವತಾನುಗ್ರಹದಿಂದ ಬಂದಿರುವರು. ಅದೆಲ್ಲವನ್ನೂ ಹೇಳಲು ನನ್ನಿಂದ ಸಾಧ್ಯವಾಗುವುದಿಲ್ಲ.

॥ ದಿಲೀಪ ಉವಾಚ ॥

ಸಮ್ಯಗುಕ್ತ ಮಹೋ ಚಿತ್ರಮೋ ತತ್ಪ್ರಶ್ನತ್ರಯಂ ಮುನೇ ।
ಚರಿತಂ ಪುಷ್ಕರಸ್ಯಾದ್ಯ ಪ್ರಭಾವೋ ರಾಮಕೃಷ್ಣಯೋಃ ॥ ೫೧ ॥

ಸೂರ್ಯಾನ್ವಯಾನಾಮವನೀಪತೀನಾಂ
ಕೋಟೀರ ರತ್ನಾಂಚಿತಪಾದುಕಾಯ
ಇಕ್ಷ್ವಾಕುಗೋತ್ರೈಕಹಿತೇ ರತಾಯ
ನಮೋ ವಸಿಷ್ಠಾಯ ಮುನೀಶ್ವರಾಯ ॥ ೫೨ ॥

॥ ಸೂತ ಉವಾಚ ॥

ಇತಿಕೃತ್ವಾ ನಮಸ್ಕಾರಂ ಗುರವೇ ನೃಪಪುಂಗವಃ ।
ಉಪರ್ಯುಪರಿಮಾಘಸ್ಯ ಮಾಹಾತ್ಮ್ಯ ಶ್ರವಣೋತ್ಸುಕಃ ॥ ೫೩ ॥

ದಿಲೀಪೋ ನೃಪತಿಃ ಶ್ರೀಮಾನ್ ಶ್ರೇಯಸೇ ಯತಮಾನಸಃ ।
ಪುನಃ ಪಪ್ರಚ್ಛ ಧರ್ಮಾತ್ಮಾ ವಸಿಷ್ಠಂ ಮುನಿಪುಂಗವಂ ॥ ೫೪ ॥

---

೫೧. ದಿಲೀಪನು ಹೇಳಿದನು-ಎಲೈ ಗುರುವೆ ! ಪುಷ್ಕರ ಚರಿತ್ರೆ, ರಾಮ ಚರಿತ್ರೆ, ಕೃಷ್ಣ ಚರಿತ್ರೆಯ ರೂಪವಾದ ಮೂರು ಪ್ರಶ್ನೆಯನ್ನು ಚೆನ್ನಾಗಿ ಹೇಳಿದೆ. ವಿಚಿತ್ರವಾಗಿದೆ. ಕೇಳಿ ಬಹು ಸಂತೋಷವಾಯಿತು.

೫೨. ಸೂರ್ಯವಂಶದ ರಾಜರ ತಲೆಯ ಕಿರೀಟದಲ್ಲಿರುವ ರತ್ನಗಳಿಂದ ಅವರು ನಮಸ್ಕರಿಸುವಾಗ ಪ್ರಕಾಶಮಾನವಾಗುವ ಪಾದಗಳುಳ್ಳ ಇಕ್ಷ್ವಾಕುವಿನ ಗೋತ್ರಕ್ಕೆ ಹಿತಕಾರಿಯಾದ ಮುನೀಶ್ವರನಾದ ವಸಿಷ್ಠನಿಗೆ ನಮಸ್ಕಾರವು.

೫೩. ಸೂತನು ಹೇಳಿದನು-ಆ ದಿಲೀಪನು ಗುರುವಿಗೆ ನಮಸ್ಕರಿಸಿ ಮಾಘ ಮಾಸದ ಮಹಿಮೆಯನ್ನು ಮತ್ತೆ ಮತ್ತೆ ಕೇಳಬೇಕೆಂದು ಆಸೆಪಟ್ಟನು.

೫೪. ಆ ಮಹಿಮನಾದ ದಿಲೀಪರಾಜನು ತನ್ನ ಶ್ರೇಯಸ್ಸಿನಲ್ಲಿ ದೃಷ್ಟಿಯನ್ನಿಟ್ಟವನಾಗಿ ಮುನಿಶ್ರೇಷ್ಠನಾದ ವಸಿಷ್ಠನನ್ನು ಕುರಿತು ಮತ್ತೆ ಹೇಳಿದನು.

|| ದಿಲೀಪ ಉವಾಚ ||

ಶೃಗವಿಷಾಣ ಮುನೇಶ್ಚರಿತಂ ಮುನೇ
ಕಥಯ ಲೋಕಹಿತಾಯ ಮಹಾತ್ಮನಃ ।
ಸ್ಪರ್ಶಭಾಷಣದರ್ಶನ ಸಂಶ್ರಯಾ
ದಖಿಲಪಾಪಭಿದಃ ಖಲು ತಾದೃಶಃ || ೫೫ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ
ಸಂವಾದೇ ಮಾಘ ಮಾಹಾತ್ಮ್ಯೇ ಸಾಂದೀಪನಿ ಕುಮಾರಾಖ್ಯಾನಂ
ನಾಮ ಏಕತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೫೫. ದಿಲೀಪನು ಹೇಳಿದನು-ಎಲೈ ಮುನಿಯೇ ! ಲೋಕ ಹಿತಕ್ಕೋಸ್ಕರ ಮಹಾಮಹಿಮನಾದ ಶೃಗಶೃಂಗ ಮುನಿ ಋಷಿಯ ಚರಿತ್ರೆಯನ್ನು ಹೇಳು. ಅಂತಹವರನ್ನು ಮುಟ್ಟುವುದು, ಅವರೊಡನೆ ಮಾತನಾಡುವುದು, ಅವರನ್ನು ನೋಡುವುದು ಇವುಗಳಿಂದ ಎಲ್ಲಾ ಪಾಪವೂ ನಾಶವಾಗುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ
ಸಂವಾದದ ಮಾಘ ಮಹಿಮೆಯಲ್ಲಿ ಸಾಂದೀಪನಿ ಕುಮಾರಾಖ್ಯಾನ
ಎಂಬ ಇನ್ನೂರ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಾತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಕೃತ ಗುರುಕುಲವಾಸೋ ಬ್ರಹ್ಮಚಾರೀ
ಯಥಾವಲ್ಲಲಿತಮಖಿಲವೇದಾ೯ ಲಕ್ಷಣಾನ್ತಾನಧೀತ್ಯ ।
ಅಥ ನಿಜಗುರುಣೋಕ್ತಾಂ ದಕ್ಷಿಣಾಂ ಚ ಪ್ರದಾಯ
ಕೃತ ವಿಧಿರನುಲಾತ್ಮಾ ತೇನ ಮುಕ್ತೋ ಗೃಹಾಯ ॥ ೧ ॥

ಉಚಥ್ಯ ಐಚ್ಛಸ್ಸ್ವಸುತಾಂ ಪ್ರದಾತುಂ
ವತ್ಸ್ಯಾಯ ತಾಂ ಕುತ್ಸಸುತಾಯ ತಸ್ಮೈ ।
ಉದ್ವೋಢುಮೈಚ್ಛನ್ಮೃಗಶೃಂಗನಾಮಾ
ಮುನೀಶ್ವರಃ ಪ್ರಾಜ್ಞಮನಸಾ ವೃತಾಂ ತಾಂ ॥ ೨ ॥

---

### ಇನ್ನೂರ ಮೂವತ್ತೆರಡನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಬ್ರಹ್ಮಚಾರಿಯಾದ ಆ ಮೃಗಶೃಂಗನು ಗುರುಕುಲದಲ್ಲಿ ವಾಸಮಾಡಿ ಲಕ್ಷಣಾಂತವಾಗಿ ವೇದಗಳನ್ನೂ, ಕ್ರಮವಾಗಿ ಅಧ್ಯಯನ ಮಾಡಿ ತನ್ನ ಗುರುವು ಹೇಳಿದ ಗುರುದಕ್ಷಿಣೆಯನ್ನು ಕೊಟ್ಟು ಸ್ನಾತಕನಾಗಿ ಆ ಗುರುವಿನ ಅಪ್ಪಣೆಯನ್ನು ಹೊಂದಿ ಮನೆಗೆ ಹೋದನು.

೨. ಆಗ ಉಚಥ್ಯನೂ ಕೂಡ ವತ್ಸ ಋಷಿಯ ಮಗನಾದ ಆ ಮೃಗಶೃಂಗನಿಗೆ ತನ್ನ ಮಗಳನ್ನು ಕೊಡಲು ಅಪೇಕ್ಷಿಸಿದನು. ಮೃಗಶೃಂಗನೂ ಕೂಡ ಮೊದಲೇನೇ ಆಕೆಯನ್ನು ಮದುವೆಯಾಗಬೇಕೆಂದು ಅಪೇಕ್ಷಿಸಿದ್ದವಳನ್ನು ಈಗ ಸರಿಯಾಗಿ ಮದುವೆಯಾಗಲು ಸಿದ್ಧನಾದನು.

ಪ್ರದಾತುಕಾಮಃ ಕನ್ಯಾಂ ತಾಮುಚಥ್ಯಸ್ಸಮಲಂಕೃತಾಂ ।
ಆಹೂಯ ಚಕ್ರೇ ವಿಪ್ರೇಂದ್ರಾನಂಕುರಾರ್ಪಣಮಾದರಾತ್ ॥ ೩ ॥

ಕುತ್ಸಃ ಪುತ್ರವಿವಾಹಾರ್ಥಮಾನಯಾಮಾಸ ವೈ ಮುನೀನ್ ।
ಆಜಗ್ಮುರಖಿಲಾಸ್ತತ್ರ ಋಷಯೋ ಬ್ರಹ್ಮವಾದಿನಃ ॥ ೪ ॥

ಜೈಮಿನಿರ್ಜಮದಗ್ನಿಶ್ಚ ಕಪಿಲಃ ಪೈಲ ಏವ ಚ ।
ಸುಮತಿರ್ವಾಮದೇವಶ್ಚ ಜಾಬಾಲಿಃ ಕಾಶ್ಯಪೋ ಭೃಗುಃ ॥ ೫ ॥

ಪರ್ವತಶ್ಶರಭಂಗಶ್ಚ ಸುತೀಕ್ಷ್ಣೋಗಸ್ತ್ಯ ಏವ ಚ ।
ಆಪಸ್ತಂಬೋಣಿಮಾಂಡವ್ಯಃ ಸತ್ಯಃ ಕಾತ್ಯಾಯನಸ್ತಥಾ ॥ ೬ ॥

ಅಂಗಿರಾಃ ಕೌಶಿಕೋಽಪ್ಯತ್ರಿರ್ಹಾರೀತೋ ರೈಭ್ಯ ಆರುಣಿಃ ।
ಮುದ್ಗಲೋ ಗೌತಮಃ ಕಣ್ವೋ ವ್ಯಾಸೋಽಪಿ ಕವಷೋ ಗುರುಃ ॥ ೭ ॥

ಕಾಣಶ್ಚ ಶೌನಕೋ ದಾಲ್ಭ್ಯೋ ಬೈದ ಉದ್ದಾಲಕಃ ಶಠಃ ।
ಏತೇ ಚಾನ್ಯೇ ಚ ಬಹವೋ ವಿವಾಹಾರ್ಥಂ ಸಮಾಗತಾಃ ॥ ೮ ॥

---

೩. ಉಚಥ್ಯನು ಸಾಲಂಕಾರವಾಗಿ ಕನ್ಯಾದಾನ ಮಾಡಬೇಕೆಂದು ಅದಕ್ಕೋಸ್ಕರವಾಗಿ ಬ್ರಾಹ್ಮಣರನ್ನು ಕರೆಯಿಸಿ ಅಂಕುರಾರ್ಪಣವೆಂಬ ಕರ್ಮವನ್ನು ಮಾಡಿಸಿದನು.

೪. ಕುತ್ಸನೂ ಕೂಡ ಮಗನ ಮದುವೆಗೋಸ್ಕರ ಅನೇಕ ಮುನಿಗಳನ್ನು ಕರೆಯಿಸಿದನು. ಬ್ರಹ್ಮನನ್ನು ಬಲ್ಲ ವೇದವಿತ್ತುಗಳಾದ ಅನೇಕ ಜನ ಮುನಿಗಳೂ ಅದರಂತೆ ಬಂದರು.

೫-೮. ಜೈಮಿನಿ, ಜಮದಗ್ನಿ, ಕಪಿಲ, ಪೈಲ, ಸುತೀಕ್ಷ್ಣ, ಸುಮತಿ, ವಾಮದೇವ, ಜಾಬಾಲಿ, ಕಾಶ್ಯಪ, ಭೃಗು, ಪರ್ವತ, ಶರಭಂಗ, ಅಗಸ್ತ್ಯ, ಆಪಸ್ತಂಬ, ಅಣಿಮಾಂಡವ್ಯ, ಸತ್ಯ, ಕಾತ್ಯಾಯನ, ಅಂಗಿರ, ಕೌಶಿಕ, ಅತ್ರಿ, ಹಾರೀತ, ರೈಭ್ಯ, ಆರುಣಿ, ಮುದ್ಗಲಿ, ಗೌತಮ, ಕಣ್ವ, ವ್ಯಾಸ, ಕವಷ, ಗುರು, ಕಾಣ, ಶೌನಕ, ದಾಲ್ಭ್ಯ, ಬೈದ, ಉದ್ದಾಲಕ, ಶಠ ಇವರೂ ಇನ್ನೂ ಅನೇಕರೂ ಮದುವೆಗೋಸ್ಕರ ಬಂದರು.

ಕುತ್ಸಃ ಪರಮಧರ್ಮಾತ್ಮಾ ಮಧುಪರ್ಕಪುರಸ್ಸರಂ ।
ಸಮ್ಯಗಭ್ಯರ್ಚಯಾಮಾಸ ಭಕ್ಷ್ಯಭೋಜ್ಯೈರ್ದ್ವಿಜೋತ್ತಮಾನ್ ॥ ೯ ॥

ಶುಭೇ ಮುಹೂರ್ತೇ ಸುದಿನೇ ಸುಲಗ್ನೇ
ಮನೋಜ್ಞಲಾಜಾಜ್ಯ ಕುಶೈಸ್ಸಮಿದ್ಭಿಃ ।
ಹುತಾಗ್ನಿಮಗ್ರೇ ಮಹತಾಮೃಷೀಣಾಂ
ಚಕ್ರೇ ವಿವಾಹಂ ವಿಧಿವತ್ಸ ವತ್ಸಃ ॥ ೧೦ ॥

ದೃಷ್ಟ್ವೋಚಥ್ಯಸ್ಯ ಕನ್ಯಾಯಾಃ ಪಾಣಿಗ್ರಹಣ ಮಂಗಳಂ ।
ಸುವೃತ್ತಾಯಾಸ್ತತಃ ಸಖ್ಯಸ್ತಿಸ್ರೋಪ್ಯತ್ರ ಸಮಾಯಯುಃ ।
ಕಮಲಾ ವಿಮಲಾ ಚೈವ ಸುರಸೇತಿ ಸುಮಧ್ಯಮಾಃ ॥ ೧೧ ॥

॥ ಕನ್ಯಾ ಊಚುಃ ॥

ಅಸ್ಮಾಕಂ ಪಾಣಿಮದ್ಯೈವ ಗೃಹ್ಣೀಷ್ವ ದ್ವಿಜಪುಂಗವ ।
ಯದಿ ಪಾಣಿಂ ನ ಗೃಹ್ಣಾಸಿ ಶಾಪೋತ್ರ ಭವಿತಾ ತವ ॥ ೧೨ ॥

---

೯. ಪರಮ ಧರ್ಮಿಷ್ಠನಾದ ಕುತ್ಸನು ಮಧುಪರ್ಕವನ್ನು ಕೊಟ್ಟು ಆ ಋಷಿಗಳನ್ನು ಪೂಜಿಸುತ್ತಲು ಉತ್ತಮವಾದ ಭಕ್ಷ್ಯ ಭೋಜ್ಯಗಳಿಂದ ಊಟ ಮಾಡಿಸಿದನು.

೧೦. ಶುಭಮುಹೂರ್ತ, ಶುಭದಿನ, ಶುಭಲಗ್ನದಲ್ಲಿ ಉತ್ತಮವಾದ ಅರಳು, ತುಪ್ಪ, ಸಮಿತ್ತು, ದರ್ಭೆಗಳಿಂದ ಅಗ್ನಿಯಲ್ಲಿ ಹೋಮಮಾಡಿ ಆ ಋಷಿಗಳ ಎದುರಿಗೆ ಶಾಸ್ತ್ರದ ರೀತಿಯಂತೆ ವಿವಾಹವನ್ನೂ ಮಾಡಿದನು.

೧೧. ಉಚಥ್ಯನ ಕನ್ಯೆಗೆ ಮದುವೆಯಾಗುವುದನ್ನು ತಿಳಿದು ಅವಳ ಮೂವರು ಸಖಿಯರಾದ ಕಮಲೆ, ವಿಮಲೆ, ಸುರಸೆಯರು ಅಲ್ಲಿಗೆ ಬಂದರು.

೧೨. ಕನ್ಯೆಯರು ಹೇಳಿದರು-ಎಲೈ ಬ್ರಾಹ್ಮಣ ಶ್ರೇಷ್ಠನೇ ! ನಮ್ಮ ಪಾಣಿ ಗ್ರಹಣವನ್ನು ಈಗಲೇ ಮಾಡಿಕೋ. ಇಲ್ಲದಿದ್ದರೆ ನಿನಗೆ ಶಾಪವನ್ನು ಕೊಡುತ್ತೇವೆ.

|| ವಸಿಷ್ಠ ಉವಾಚ ||

ಇತಿ ತಾಸಾಂ ವಚಶ್ಶ್ರುತ್ವಾ ವತ್ಸಶ್ಚಿರಮಚಿಂತಯತ್ ।
ಏಕಕಾಲೇ ಸಮುದ್ವೋಢುಂ ಯುಕ್ತಂ ವಾಯುಕ್ತಮೇವ ವಾ || ೧೩ ||

ಇತಿ ಚಿಂತಾಕುಲೇ ತಸ್ಮಿನ್ ಮೃಗಶೃಂಗೇ ಮಹಾತ್ಮನಿ ।
ಋಷೀಣಾಂ ಮಹತಾಂ ಮಧ್ಯೇ ವೇದವ್ಯಾಸಸ್ತಮಬ್ರವೀತ್ || ೧೪ ||

|| ವ್ಯಾಸ ಉವಾಚ ||

ಗೃಹ್ಣೀಷ್ವ ಪಾಣಿಮಾಸಾಂ ಚ ನ ದೋಷಸ್ತತ್ರ ವಿದ್ಯತೇ ।
ಸಂದೇಹಂ ಮಾ ಕುರಷ್ವಾತ್ರ ಕೃತಪೂರ್ವಸ್ತ್ವಯಂ ವಿಧಿಃ || ೧೫ ||

ಪುರಾ ನೃಪಸ್ಯ ಮಾಂಧಾತುಃ ಪಂಚಾಶತ್ಸಂಖ್ಯಕನ್ಯಕಾಃ ।
ಏತಸ್ಮಿನ್ನೇವ ದಿವಸೇ ಉಪಯೇಮೇ ಚ ಸೌಭರಿಃ ॥
ಪುನರ್ದಕ್ಷಸುತಾಶ್ಚೈವ ಸೋಮೋಪ್ಯುದವಹತ್ಕಿಲ || ೧೬ ||

---

೧೩. ವಸಿಷ್ಠನು ಹೇಳಿದನು-ಅವರ ಈ ರೀತಿಯಾದ ಮಾತನ್ನು ಕೇಳಿ ವತ್ಸನು ಏಕಕಾಲದಲ್ಲಿ ಅವರೆಲ್ಲರನ್ನೂ ಪಾಣಿಗ್ರಹಣ ಮಾಡುವುದು ಯುಕ್ತವೇ ? ಅಲ್ಲವೇ ! ಎಂದು ಯೋಚಿಸುತ್ತಿದ್ದನು.

೧೪. ಅಂತೆಯೇ ಮಗನೂ ಕೂಡ ಯೋಚಿಸುತ್ತಿದ್ದನು. ಹೀಗೆ ಇಬ್ಬರೂ ಯೋಚಿಸುತ್ತಿರಲು ಅಲ್ಲಿ ಬಂದಿದ್ದ ಆ ಮಹರ್ಷಿಗಳ ಮಧ್ಯದಲ್ಲಿ ವೇದವ್ಯಾಸನು ಅವರನ್ನು ಕುರಿತು ಇಂತೆಂದನು.

೧೫. ವ್ಯಾಸನು ಹೇಳಿದನು–ಎಲೈ ಮೃಗಶೃಂಗನೇ! ಇವರ ಪಾಣಿಗ್ರಹಣ ವನ್ನು ಮಾಡು. ಇದರಲ್ಲಿ ದೋಷವಿರುವುದಿಲ್ಲ. ಸಂದೇಹವನ್ನು ಮಾಡಬೇಡ. ಈ ರೀತಿಯಾದ ವಿವಾಹವು ಹಿಂದೆ ನಡೆದಿರುವುದು.

೧೬. ಪೂರ್ವದಲ್ಲಿ ಮಾಂಧಾತೃ ಮಹಾರಾಜನ ಐವತ್ತು ಜನ ಕನ್ಯೆಯ ರನ್ನು ಸೌಭರಿಋಷಿಯು ಒಂದೇ ಕಾಲದಲ್ಲಿ ಮದುವೆಯಾದನು. ದಕ್ಷನ ಇಪ್ಪತ್ತೇಳು ಜನ ಕನ್ನಿಕೆಯರನ್ನು ಸೋಮನು ಏಕಕಾಲದಲ್ಲಿ ಮದುವೆಯಾದನು.

॥ ವಸಿಷ್ಠ ಉವಾಚ ॥

ಇತಿ ವ್ಯಾಸವಚಃ ಶ್ರುತ್ವಾ ತತ್ರ ತಾಸಾಮಪಿ ದ್ವಿಜಃ ।
ಕ್ರಮೇಣ ಪಾಣಿಂ ಜಗ್ರಾಹ ಕೃತ್ವಾ ಹೋಮಂ ವಿಧಾನತಃ ॥ ೧೭ ॥

ಬ್ರಾಹ್ಮೋ ವಿವಾಹ ಉತ್ಕೃಷ್ಟೋ ವಿಪ್ರಾಣಾಮಿತಿ ಹಿ ಶ್ರುತಿಃ ।
ತಸ್ಮಾದ್ಬ್ರಾಹ್ಮ ವಿವಾಹೇನ ಚತಸ್ರೋಽಪ್ಯಗೃಹೀನ್ಮುನಿಃ ॥ ೧೮ ॥

ಇತ್ಥಂ ವಿವಾಹೇ ವಿಹಿತೇ ಮುನೀಂದ್ರಃ
ಸಂಭಾವಯಾಮಾಸ ಋಷೀ ನಶೇಷಾ ।
ಮುನೀಶ್ವರಾಸ್ತೇ ವಿಹಿತಾಶಿಷಸ್ತ್ವಮಾ
ಮಂತ್ರ್ಯ ಜಗ್ಮುರ್ನಿಜಪರ್ಣಶಾಲಾಃ ॥ ೧೯ ॥

॥ ದಿಲೀಪ ಉವಾಚ ॥

ಚತುರ್ಣಾಮಪಿ ವರ್ಣಾನಾಂ ವಿವಾಹಾಃ ಕತಿ ವಾ ಸ್ಮೃತಾಃ ।
ಅಚಕ್ಷ್ವ ಯದಿ ಗುಹ್ಯಂ ಮೇ ವಸಿಷ್ಠಾರುಂಧತೀ ಪತೇ ॥ ೨೦ ॥

---

೧೭. ವಸಿಷ್ಠನು ಹೇಳಿದನು-ಈ ರೀತಿಯಾಗಿ ವ್ಯಾಸನು ಹೇಳಿದುದನ್ನು ಕೇಳಿ ಆ ಮೃಗಶೃಂಗನು ಹೋಮದ ವಿಧಿಯಿಂದ ಅವರೆಲ್ಲರನ್ನೂ ಮದುವೆಯಾದನು.

೧೮. ಬ್ರಾಹ್ಮಣರಿಗೆ ಬ್ರಾಹ್ಮವೆಂಬ ವಿವಾಹವು ಉತ್ಕೃಷ್ಟವಾದುದು. ಎಂದು ವೇದದಲ್ಲಿ ಹೇಳಿದೆ. ಆದ್ದರಿಂದಲೇ ಈ ಮೃಗಶೃಂಗನು ಬ್ರಾಹ್ಮ ವಿವಾಹ ವಿಧಿಯಿಂದ ಈ ನಾಲ್ವರನ್ನೂ ವಿವಾಹವಾದನು.

೧೯. ಈ ರೀತಿಯಾಗಿ ವಿವಾಹವೆಲ್ಲವೂ ಕ್ರಮವಾಗಿ ನಡೆಯಲು ಆ ವತ್ಸನು ಋಷಿಗಳಿಗೆ ಉಚಿತವಾದ ಸಂಭಾವನೆಗಳನ್ನು ಮಾಡಿದನು. ಆ ಮುನಿಗಳೂ, ಆ ವಧೂವರರಿಗೆ ಆಶೀರ್ವದಿಸಿ ತಮ್ಮ ತಮ್ಮ ಆಶ್ರಮಗಳಿಗೆ ಹೊರಟುಹೋದರು.

೨೦. ದಿಲೀಪನು ಹೇಳಿದನು-ಎಲೈ ಗುರುವಾದ ವಸಿಷ್ಠನೇ! ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರಿಗೆ ಎಷ್ಟೆಷ್ಟು ಬಗೆಯಾದ ವಿವಾಹಗಳಿವೆ? ಅವುಗಳಲ್ಲಿ ಗುಟ್ಟೇನೂ ಇಲ್ಲದಿದ್ದರೆ ನನಗೆ ಹೇಳು.

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ವಿವಾಹಾನ್ ಕ್ರಮಶಸ್ತವ ।
ವಿವಾಹಾ ಬ್ರಾಹ್ಮದೈವಾರ್ಷಾಃ ಪ್ರಾಜಾಪತ್ಯಾ ಸುರೌ ತಥಾ ॥ ೨೧ ॥

ಗಾಂಧರ್ವೋ ರಾಕ್ಷಸಶ್ಚಾಪಿ ಪೈಶಾಚೋಽಷ್ಟಮ ಉಚ್ಯತೇ ।
ಬ್ರಾಹ್ಮೋ ವೈ ವರಮಾಹೂಯ ಯತ್ರ ಕನ್ಯಾ ಸ್ವಲಂಕೃತಾ ॥ ೨೨ ॥

ದೀಯತೇ ತತ್ಸುತಃ ಪೂಯಾತ್ ಪುರುಷಾನೇಕವಿಂಶತಿಂ ।
ಯಜ್ಞಾರ್ಥಮೃತ್ವಿಜೇ ದೈವಃ ತಜ್ಜಃ ಪಾತಿ ಚತುರ್ದಶ ॥ ೨೩ ॥

ವರಾದಾದಾಯ ಗೋದ್ವಂದ್ವಮಾರ್ಷಸ್ತಜ್ಜಃ ಪುನಾತಿ ಷಟ್ ।
ಸಹೋಭೌ ಚರತಾಂ ಧರ್ಮಮಿತ್ಯುಕ್ತ್ವಾ ದೀಯತೇಽರ್ಥಿನೇ ॥ ೨೪ ॥

---

೨೧-೨೨ ವಸಿಷ್ಠನು ಹೇಳಿದನು-ಎಲೈ ರಾಜನೇ ಕೇಳು! ನಿನಗೆ ಕ್ರಮವಾಗಿ ವಿವಾಹಗಳೆಲ್ಲವನ್ನೂ ಹೇಳುತ್ತೇನೆ. ಈ ವಿವಾಹಗಳು ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಗಾಂಧರ್ವ, ರಾಕ್ಷಸ, ಪೈಶಾಚ, ಎಂಬುದಾಗಿ ಎಂಟು ಬಗೆಯಾಗಿವೆ. ವರನನ್ನು ಕರೆದು ಅಲಂಕಾರ ಮಾಡಿದ ಕನ್ಯೆಯನ್ನು ಕೊಟ್ಟು ಪಾಣಿಗ್ರಹಣ ಮಾಡಿಸಿದರೆ ಅದು ಬ್ರಾಹ್ಮವೆಂಬ ವಿವಾಹವು. ಈ ಬ್ರಾಹ್ಮವಿವಾಹದ ವಿಧಿಯ ರೀತಿಯಲ್ಲಿ ಮದುವೆಯಾದವರಲ್ಲಿ ಹುಟ್ಟಿದ ಮಗನು ಇಪ್ಪತ್ತೊಂದು ತಲೆಗಳನ್ನು ಉದ್ಧರಿಸುತ್ತಾನೆ.

೨೩. ಯಾಗವನ್ನು ಮಾಡುತ್ತಿರುವಾಗ ಯಜ್ಞದಲ್ಲಿ ಆ ಋತ್ವಿಕ್ಕಿಗೆ ಕನ್ಯೆಯನ್ನು ದಾನಮಾಡಿದರೆ ಅದು ದೈವವಿವಾಹವೆಂದೆನಿಸಿಕೊಳ್ಳುತ್ತದೆ. ಇದರಲ್ಲಿ ಹುಟ್ಟಿದ ಮಗನು ಹದಿನಾಲ್ಕು ತಲೆಗಳನ್ನು ಉದ್ಧರಿಸುತ್ತಾನೆ.

೨೪-೨೫. ವರನಿಂದ ಎರಡು ಗೋವುಗಳನ್ನು ತೆಗೆದುಕೊಂಡು ಕನ್ಯೆಯನ್ನು ಕೊಟ್ಟು ಮದುವೆ ಮಾಡುವ ಪಕ್ಷದಲ್ಲಿ ಅದಕ್ಕೆ ಆರ್ಷ ವಿವಾಹವೆಂದು ಹೆಸರು. ಆ ಮದುವೆಯಾದ ಹೆಂಗಸಿನಲ್ಲಿ ಹುಟ್ಟಿದ ಮಗನು ಹಿಂದೆ ಮೂರು, ಮುಂದೆ ಮೂರು ಈ ರೀತಿಯಾಗಿ ಆರು ಜನರನ್ನು ಉದ್ಧಾರ ಮಾಡುತ್ತಾನೆ. ಕನ್ಯೆಯನ್ನು ಯಾಚಿಸಲು ಬಂದವನಿಗೆ ಆ ಕನ್ಯೆಯನ್ನು ಕೊಟ್ಟು ನೀವಿಬ್ಬರೂ

ತತ್ರ ಯಾ ದೀಯತೇ ಕನ್ಯಾ ತಜ್ಜೋ ವಂಶಾ ಪುನಾತಿ ಷಟ್ |
ಚತ್ವಾರ ಏತೇ ವಿಪ್ರಾಣಾಂ ಧರ್ಮ್ಯಾ ಪಾಣಿಗ್ರಹಾಃ ಸ್ಮೃತಾಃ || ೨೫ ||

ಆಸುರಃ ಕ್ರಯಣಾದ್ದ್ರವ್ಯೈಃ ಗಾಂಧಾರ್ವೋನ್ಯೋನ್ಯ ಮೈತ್ರತಃ |
ಪ್ರಸಹ್ಯ ಕನ್ಯಾಹರಣಂ ರಾಕ್ಷಸೋ ನಿಂದಿತಃ ಸತಾಂ || ೨೬ ||

ಛಲೇನ ಕನ್ಯಾಹರಣಾತ್ಪೈಶಾಚೋ ಗರ್ಹಿತೋಷ್ಟಮಃ |
ಪ್ರಾಯಃ ಕ್ಷತ್ರವಿಶಾಮುಕ್ತಾ ಗಾಂಧರ್ವಾಸುರರಾಕ್ಷಸಾಃ || ೨೭ ||

---

ಜೊತೆಯಲ್ಲಿಯೇ ಧರ್ಮವನ್ನು ಮಾಡಿರಿ. ಎಂದು ಹೇಳಿಕೊಟ್ಟರೆ ಅದಕ್ಕೆ ಪ್ರಾಜಾಪತ್ಯವೆಂದು ಹೆಸರು. ಈ ವಿವಾಹವಾದವರ ಹೊಟ್ಟೆಯಲ್ಲಿ ಹುಟ್ಟಿದವನು ಆರು ಜನವನ್ನು ಉದ್ಧಾರ ಮಾಡುವನು. ಈ ಮೇಲೆ ಹೇಳಿದ ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಈ ನಾಲ್ಕು ವಿವಾಹಗಳು ಬ್ರಾಹ್ಮಣರಿಗೆ ಧರ್ಮವಾದುವುಗಳು. ಎಂದು ತಿಳಿಯಬೇಕು.

೨೬ ಕನ್ಯೆಯನ್ನು ಹಣಕೊಟ್ಟು ಕೊಂಡುಕೊಂಡು ಮದುವೆಯಾದರೆ ಅದಕ್ಕೆ ಆಸುರ ವಿವಾಹವೆಂದೂ, ಹೆಣ್ಣು ಗಂಡುಗಳು ಸ್ನೇಹದಿಂದ ಮದುವೆಯಾದರೆ ಅದಕ್ಕೆ ಗಾಂಧರ್ವವೆಂದೂ ಕನ್ಯೆಯನ್ನು ಬಲಾತ್ಕಾರದಿಂದ ಕದ್ದುಕೊಂಡು ಹೋದರೆ ರಾಕ್ಷಸ ವಿವಾಹವೆಂದೂ ಎನಿಸಿಕೊಳ್ಳುತ್ತವೆ. ಇವು ಸತ್ಪುರುಷರಿಗೆ ಸಮ್ಮತವಾದುವಲ್ಲ. ನಿಂದಿತವು.

೨೭. ಮೋಸದಿಂದ ಕನ್ಯೆಯನ್ನು ಕರೆದುಕೊಂಡು ಹೋಗಿ ಮದುವೆಯಾದರೆ ಪೈಶಾಚವೆಂದು ಎನ್ನಿಸಿಕೊಳ್ಳುತ್ತದೆ. ಈ ಎಂಟನೆಯ ಪೈಶಾಚ ವಿವಾಹವು ಬಹು ನಿಂದಿತವು. ಸಾಧಾರಣವಾಗಿ ಕ್ಷತ್ರಿಯ ವೈಶ್ಯರಿಗೆ ಗಾಂಧರ್ವ, ಅಸುರ, ರಾಕ್ಷಸ ವಿವಾಹಗಳು ವಿಹಿತವಾಗಿವೆ.

**ಅಷ್ಟಮಶ್ಚೈಷ ಪಾಪಿಷ್ಠಃ ಪಾಪಿಷ್ಠಾನಾಂ ಹಿ ಸಂಭವೇತ್ ।**
**ಸವರ್ಣಯಾ ಕುಶೋ ಗ್ರಾಹ್ಯೋ ಧಾರ್ಯಃ ಕ್ಷತ್ರಿಯಯಾ ಶರಃ ॥ ೨೮ ॥**

**ಪ್ರತೋದೋ ವೈಶ್ಯಯಾ ಧಾರ್ಯೋ ವಾಸೋಂತಃ ಪಜ್ಜಯಾ ತಥಾ ।**
**ಅಸವರ್ಣಾಸ್ವೇಷ ವಿಧಿಃ ಸ್ಮೃತ ಉತ್ಕೃಷ್ಟವೇದನೈಃ ॥ ೨೯ ॥**

**ಸವರ್ಣಾಭಿಸ್ತು ಸರ್ವಾಭಿಃ ಪಾಣಿಗ್ರಾಹ್ಯಸ್ತ್ವಯಂ ವಿಧಿಃ ।**
**ಧರ್ಮ್ಯೈರ್ವಿವಾಹೈರ್ಜಾಯಂತೇ ಧರ್ಮ್ಯಾ ಏವ ಶತಾಯುಷಃ ॥ ೩೦ ॥**

---

೨೮-೨೯. ಈ ಎಂಟನೆಯದಾದ ಪೈಶಾಚ ವಿವಾಹವು ಪಾಪಿಷ್ಠರಿಗೆ ಹೇಳಲ್ಪಟ್ಟಿದೆ. ಅವರಲ್ಲಿಯೇ ಅದು ನಡೆಯತಕ್ಕುದಾಗಿರುವುದು. ಬ್ರಾಹ್ಮಣನಿಗೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿಯೂ ಕ್ಷತ್ರಿಯನಿಗೆ ಕ್ಷತ್ರಿಯ ವೈಶ್ಯ, ಶೂದ್ರರಲ್ಲಿಯೂ ವೈಶ್ಯನಿಗೆ ವೈಶ್ಯಶೂದ್ರರಲ್ಲಿಯೂ, ಶೂದ್ರನಿಗೆ ಶೂದ್ರನಲ್ಲಿಯೂ ಕನ್ಯೆಯನ್ನು ತಂದುಕೊಂಡು ವಿವಾಹವಾದರೆ ಅದಕ್ಕೆ ಅನುಲೋಮ ವಿವಾಹವೆಂದು ಹೆಸರು. ಸಮಾನ ಜಾತಿಯುವರಲ್ಲಿ ಮಾಡಿಕೊಳ್ಳುವ ವಿವಾಹಕ್ಕೆ ಸವರ್ಣ ವಿವಾಹವೆಂದು ಹೆಸರು. ಬ್ರಾಹ್ಮಣನು ಬ್ರಾಹ್ಮಣ ಕನ್ನಿಕೆಯನ್ನು ಮದುವೆಯಾಗುವಾಗ ಆಕೆಯು ತನ್ನ ಜಾತಿಯ ಕುರುಹನ್ನು ತೋರಿಸಲು ದರ್ಭೆಯನ್ನೂ, ಕ್ಷತ್ರಿಯಳು ಬಾಣವನ್ನೂ, ವೈಶ್ಯಳು ಚಾವಟಿಯನ್ನೂ, ಶೂದ್ರಳು ಬಟ್ಟೆಯ ತುದಿಯನ್ನೂ ಹಿಡಿದುಕೊಳ್ಳಬೇಕು. ವಿಲೋಮದಲ್ಲಿ ಅವರವರಿಗೆ ಹೇಳಿದ ಪದಾರ್ಥಗಳನ್ನು ಹಿಡಿದುಕೊಳ್ಳಬೇಕು. ಆಸವರ್ಣರಾದವರ ಮದುವೆಯಲ್ಲಿಯೇ ಈ ರೀತಿಯಾಗಿ ಆಯಾ ಪದಾರ್ಥಗಳನ್ನು ಹಿಡಿದುಕೊಳ್ಳಬೇಕೆಂಬ ನಿಯಮ. ಅದು ಅವರ ಉತ್ಕೃಷ್ಟತೆಯನ್ನು ತಿಳಿಯಲು ಕಾರಣವಾದುದಾಗಿದೆ.

೩೦. ಮೇಲೆ ಹೇಳಿದ ಎಂಟು ವಿಧಗಳು ಸವರ್ಣರಲ್ಲಿ ಆಯಾ ರೀತಿಯಲ್ಲಿ ನಡೆದು ವಿವಾಹವಾದರೆ ಅವು ಈ ಹೆಸರುಗಳನ್ನು ಹೊಂದುತ್ತವೆ. ಧರ್ಮಯುಕ್ತವಾದ ವಿವಾಹದಲ್ಲಿ ಹುಟ್ಟಿದವರು ಧರ್ಮಿಷ್ಠರಾಗಿಯೂ, ನೂರು ವರ್ಷ ಬದುಕುವವರಾಗಿಯೂ ಆಗುತ್ತಾರೆ.

ಅಧರ್ಮೈರ್ಧರ್ಮರಹಿತಾ ಮಂದಭಾಗ್ಯಧನಾಯುಷಃ ।
ತಸ್ಮಾದ್ಬ್ರಹ್ಮೋ ವಿವಾಹಸ್ತು ಬ್ರಾಹ್ಮಣಾನಾಂ ವಿಶಿಷ್ಯತೇ ॥
ಪ್ರಾಜಾಪತ್ಯೇ ವಿವಾಹೋ ಹಿ ಸ ತು ಸೌಭರಿಣಾ ಕೃತಃ ॥ ೩೧ ॥

॥ ದಿಲೀಪ ಉವಾಚ ॥

ಕಿಮರ್ಥಮುಪಯೇಮೇ ಸ ಸೌಭರಿರ್ಭಗವಾನ್ಋಷಿಃ ।
ಪಂಚಾಶತ್ಕನ್ಯಕಾಃ ಪೂರ್ವಮೇತದ್ವಿಸ್ತರತೋ ವದ ॥ ೩೨ ॥

॥ ವಸಿಷ್ಠ ಉವಾಚ ॥

ಕಾಂಪಿಲ್ಯನಗರೇ ಪೂರ್ವಂ ಸೌಭರಿರ್ನಾಮತೋ ದ್ವಿಜಃ ।
ಸರ್ವವೇದಾರ್ಥ ತತ್ವಜ್ಞಃ ಸರ್ವಭೂತದಯಾಪರಃ ॥ ೩೩ ॥

ಯೋಗಾಭ್ಯಾಸರತೋ ನಿತ್ಯಂ ವಿಷಯೇಷು ಪರಾಙ್ಮುಖಃ ।
ಆದೌ ಚಾಂದ್ರಾಯಣಂ ಚಕ್ರೇ ಪುನರ್ಮಾಸೋಪವಾಸಕೃತ್ ॥ ೩೪ ॥

---

೩೧. ಅಧರ್ಮದಿಂದ ಮಾಡಿಕೊಂಡ ವಿವಾಹದಲ್ಲಿ ಧರ್ಮಿಷ್ಠರಲ್ಲದವರೂ, ಅಯೋಗ್ಯರೂ, ನಿರ್ಭಾಗ್ಯರೂ, ಅಲ್ಪಾಯುಸ್ಸಿನವರೂ ಹುಟ್ಟುತ್ತಾರೆ. ಆದ್ದರಿಂದ ಬ್ರಾಹ್ಮಣರಿಗೆ ಬ್ರಾಹ್ಮವಿವಾಹವೇ ಉತ್ತಮವಾದುದು. ಪ್ರಾಜಾಪಾತ್ಯ ವಿವಾಹವನ್ನು ಸೌಭರಿಯು ಮಾಡಿಕೊಂಡನು.

೩೨. ದಿಲೀಪನು ಹೇಳಿದನು-ಪೂಜ್ಯನಾದ ಸೌಭರಿ ಋಷಿಯು ಐವತ್ತು ಜನ ಕನ್ನಿಕೆಯರನ್ನು ಪೂರ್ವದಲ್ಲಿ ಮದುವೆಯಾದನೆಂದು ಕೇಳಿದ್ದೇನೆ ಅವನು ಅಷ್ಟು ಜನರನ್ನು ಏಕೆ ಮದುವೆಯಾದನು? ಎಂಬುದನ್ನು ವಿಸ್ತಾರವಾಗಿ ಹೇಳು.

೩೩-೩೪. ವಸಿಷ್ಠನು ಹೇಳಿದನು-ಪೂರ್ವಕಾಲದಲ್ಲಿ ಕಾಂಪಿಲ್ಯ ನಗರದಲ್ಲಿ ಸೌಭರಿಯೆಂಬುವನೊಬ್ಬ ಬ್ರಾಹ್ಮಣನಿದ್ದನು. ಅವನು ಸರ್ವವೇದಗಳನ್ನೂ ಬಲ್ಲವನು. ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯುಳ್ಳವನು. ಯಾವಾಗಲೂ ಯೋಗಾಭ್ಯಾಸವನ್ನು ಮಾಡುತ್ತಿದ್ದನು. ಅವನು ಇಂದ್ರಿಯಗಳನ್ನು ಜಯಿಸಿದ್ದನು. ಮೊದಲು ಚಾಂದ್ರಾಯಣ ವ್ರತವನ್ನೂ ಮಾಡಿದನು. ಅನಂತರ ಮಾಸೋಪವಾಸವನ್ನೂ ಮಾಡಿದನು.

ಶೀರ್ಣಪರ್ಣಾಶನಃ ಪಶ್ಚಾನ್ನಿರಹಾರಸ್ತತಃ ಪುನಃ ।
ಅನ್ತರ್ಜಲೇ ಪುನಃ ಸ್ಥಿತ್ವಾ ದ್ವಾದಶಾಬ್ದಮತಪ್ಯತ ॥ ೩೫ ॥

ತಸ್ಮಿನ್ ಸರೋವರೇ ರಮ್ಯೇ ಹ್ಯಗಾಧೇ ನಿರ್ಮಲಾಂಭಸಿ ।
ಮತ್ಸ್ಯಃ ಸಾಮಮದೋ ನಾಮ್ನಾ ಮತ್ಸ್ಯಯೂಥಸಮಾವೃತಃ ॥ ೩೬ ॥

ಸರ್ವೇಷಾಮೇವ ಮತ್ಸ್ಯಾನಾಮಗ್ರಣೀರಂಚಿತಾಕೃತಿಃ ।
ಶರವೇಗಗತಿಶ್ಚಂಚತ್ಕೇಸರೋ ನಯನಪ್ರಿಯಃ ॥ ೩೭ ॥

ಪುತ್ರೈಃ ಪೌತ್ರೈಃ ನಪ್ತೃಭಿಶ್ಚ ಭಾರ್ಯಾಭಿರ್ಮಿತ್ರಬಾಂಧವೈಃ ।
ಭ್ರಾತೃಭಿಃ ಪಿತೃಭಿಃ ಸಾರ್ಧಮಿತಶ್ಚೇತಶ್ಚ ಧಾವತಿ ॥ ೩೮ ॥

ತಂ ದೃಷ್ಟ್ವಾ ಚಿಂತಯಾಮಾಸ ಮತ್ಸ್ಯೇಂದ್ರಂ ಸೌಭರಿರ್ಮುನಿಃ ।
ಅನೇಕದುಹಿತೃದೌಹಿತ್ರ ಸಂತತ್ಯಾ ಪರಿವಾರಿತಃ ॥ ೩೯ ॥

ಅತೀವ ರಮಮಾಣೋಽಸಾವುತ್ಪಾದಯತಿ ನಃ ಸ್ಪೃಹಾಂ ।
ಭಾರ್ಯಾದುಹಿತೃದೌಹಿತ್ರಪುತ್ರಪೌತ್ರೈಶ್ಚ ನಪ್ತೃಭಿಃ ॥ ೪೦ ॥

---

೩೫. ಅನಂತರ ಹಣ್ಣಾಗಿ ಕೆಳಗೆ ಬಿದ್ದ ಎಲೆಗಳನ್ನು ತಿಂದುಕೊಂಡಿದ್ದನು. ಅನಂತರ ಆ ರೀತಿಯಾದ ಆಹಾರವನ್ನು ಬಿಟ್ಟನು. ಆಗ ನೀರಿನ ಒಳಗೆ ನಿಂತುಕೊಂಡು ಹನ್ನೆರಡು ವರ್ಷಗಳ ಕಾಲದವರೆಗೂ ತಪಸ್ಸು ಮಾಡಿದನು.

೩೬-೩೮. ಆ ರಮ್ಯವಾದ ಸರೋವರದಲ್ಲಿ ನೀರು ಬಹಳ ಆಳವಾಗಿಯೂ ನಿರ್ಮಲವಾಗಿಯೂ ಇದ್ದಿತು. ಅಲ್ಲಿ ಸಾಮಮದವೆಂಬ ಒಂದು ಮೀನು ವಾಸಿಸುತ್ತಿದ್ದಿತು. ಅದು ಬಹು ಮೀನುಗಳಿಗೆ ಯಜಮಾನನಾಗಿ ಅವುಗಳಿಂದ ಕೂಡಿದ್ದಿತು. ಎಲ್ಲ ಮೀನುಗಳಿಗೂ ಯಜಮಾನನಾಗಿಯೂ, ಮುಂದಾಳಾಗಿಯೂ ಇದ್ದಿತು ಮನೋಹರವಾಗಿದ್ದಿತು. ಬಾಣದ ವೇಗವಂತೆ ವೇಗದಿಂದ ಸಂಚಾರ ಮಾಡುತ್ತಿದ್ದಿತು. ಅದು ಓಡಾಡುವಾಗ ತನ್ನ ಕೂದಲುಗಳನ್ನು ನಿಮಿರುಸುತ್ತ ಮನೋಹರವಾಗುವಂತೆ ಮಾಡುತ್ತಿದ್ದಿತು. ನೋಡಲು ಕಣ್ಣಿಗೆ ಬಹು ಮನೋಹರವಾಗಿದ್ದಿತು. ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಹೆಂಡಿರು, ಮಿತ್ರರು, ಬಾಂಧವರು, ಸಹೋದರರು, ತಂದೆಯರು, ಇವರೊಡನೆ ಕೂಡಿಕೊಂಡು ಓಡಾಡುತ್ತ ಬಹು ಮನೋಹರವಾಗಿದ್ದಿತು.

೩೯-೪೩. ಆ ಮೀನನ್ನು ನೋಡಿ ಸೌಭರಿಯು ಇಂತೆಂದು ಯೋಚಿಸಿದನು. ಈ ಮೀನು ಬಹುವಾದ ಮಕ್ಕಳು, ಮೊಮ್ಮಕ್ಕಳು, ಬಂಧುಗಳು,

ವಿಹರಾಮ ವಯಂ ಚೈವಮಿತಿ ಕೃತ್ವಾ ಮತಿಂ ಮುನಿಃ ।
ಉತ್ಥಿತಸ್ಸಲಿಲಾತಸ್ಮಾಮ್ಮುರ್ನಿರ್ವಿಕಟವೇಷ ಭೃತ್ || ೪೧ ||

ನಿವೇಷ್ಟುಕಾಮಃ ಕನ್ಯಾರ್ಥಂ ಮಾಂಧಾತಾರಮುಪಾಗಮತ್ ।
ಋಷೇರಭ್ಯಾಗಮಂ ಶ್ರುತ್ವಾ ಸಮುತ್ಥಾಯಾಸನಾನ್ನೃಪಃ || ೪೨ ||

ಅರ್ಘಾರ್ಘ್ಯಾದಿಭಿಸ್ಸಮಭ್ಯರ್ಚ್ಯ ಕಲ್ಪಯಾಮಾಸ ಚಾಸನಂ ।
ಆಸನೇ ಸಮ್ಯಗಾಸಿನೋ ನೃಪಂ ಸೌಭರಿರಬ್ರವೀತ್ || ೪೩ ||

|| ಸೌಭರಿರುವಾಚ ||

ನಿವೇಷ್ಟು ಕಾಮೋಸ್ಮಿ ನರೇಂದ್ರ ಕನ್ಯಾಃ
ಪ್ರಯಚ್ಛ ಮೇ ಮಾಪ್ರಣಯಂ ಹ್ಯಭಾಂಕ್ಷೀಃ ।
ನ ಹ್ಯರ್ಥಿನಃ ಕಾರ್ಯವಶಾದುಪೇತಾಃ
ಕಾಕುತ್‌ಸ್ಥವಂಶೇ ವಿಮುಖಾಃ ಪ್ರಯಾಂತಿ ||
ಶತಾರ್ಧಕನ್ಯಾಸ್ತವ ಸಂತಿಸೌಮ್ಯಾಃ
ತಾಸಾಂ ಮಮೈಕಾಂ ನೃಪತೇ ಪ್ರಯಚ್ಛ || ೪೪ ||

---

ಸಂತತಿಗಳೊಡನೆ ಸೇರಿಕೊಂಡು ಸುಖವಾಗಿ ಸಂಚರಿಸುತ್ತಾ ಅದರಂತೆಯೇ ನಾನೂ ಇರುವಂತೆ ನನ್ನ ಮನಸ್ಸಿಗೆ ಆಸೆಯನ್ನು ಉಂಟು ಮಾಡುತ್ತಿದೆ. ಹೆಂಡತಿ, ಮಕ್ಕಳು, ಮೊಮ್ಮಕ್ಕಳು, ಹೆಣ್ಣು ಮಕ್ಕಳ ಮಕ್ಕಳು ಮರಿಮಕ್ಕಳು ಇವರೊಡನೆ ನಾನೂ ಇದರಂತೆ ವಿಹರಿಸುತ್ತಾ ಇರಬೇಕು. ಎಂದು ಯೋಚಿಸಿಕೊಂಡು ಒಡನೆಯೇ ಆ ನೀರಿನಿಂದ ಮೇಲಕ್ಕೆದ್ದು ವಿಕಾರವಾದ ವೇಷವುಳ್ಳವನಾಗಿ ಹೊರಟನು. ಅನಂತರ ಕನ್ಯಾರ್ಥಿಯಾಗಿ ಪಾಣಿಗ್ರಹಣ ಮಾಡಿಕೊಳ್ಳಲು ಮಾಂಧಾತೃರಾಜನ ಬಳಿಗೆ ಹೋದನು. ಆಗ ಆ ಮಾಂಧಾತೃವು ಸೌಭರಿಯನ್ನು ಎದುರುಗೊಂಡು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಆಸನವನ್ನು ಕೊಟ್ಟು ಕೂರಿಸಿದನು. ಆಸನದಲ್ಲಿ ಕುಳಿತುಕೊಂಡಮೇಲೆ ಸೌಭರಿಯು ರಾಜನನ್ನು ಕುರಿತು ಇಂತೆಂದನು.

೪೪. ಸೌಭರಿಯು ಹೇಳಿದನು-ಎಲೈ ದೊರೆಯೇ ! ಕನ್ಯಾರ್ಥಿಯಾಗಿ ಬಂದಿದ್ದೇನೆ. ನನಗೆ ಕನ್ಯೆಯನ್ನು ಕೊಡು ನನ್ನ ಆಸೆಯನ್ನು ವ್ಯರ್ಥಮಾಡಬೇಡ. ಕಾರ್ಯವನ್ನು ಉದ್ದೇಶಿಸಿ ಬಂದ ಅರ್ಥಿಗಳು. ಕಕುತ್‌ಸ್ಥನ ವಂಶದವರ ಬಳಿಯಿಂದ ವ್ಯರ್ಥವಾಗಿ ಹೋಗುವುದಿಲ್ಲ. ನಿನಗಾವರೋ ಐವತ್ತು ಜನರು ಹೆಣ್ಣು ಮಕ್ಕಳಿರುವರು. ಒಬ್ಬರಿಗೂ ಇನ್ನೂ ಮದುವೆಯೇ ಇಲ್ಲ. ಅವರಲ್ಲಿ ಒಬ್ಬಳನ್ನು ನನಗೆ ಕೊಡು.

॥ ವಸಿಷ್ಠ ಉವಾಚ ॥

ಇತಿ ಶ್ರುತ್ವಾ ಋಷೇರ್ವಾಕ್ಯಂ ಮಾಂಧಾತಾ ಮನುನಂದನಃ ।
ಝುರ್ಝರೀಕೃತಸರ್ವಾಂಗಂ ವಿಲೋಕ್ಯ ವಿಕಟಾಕೃತಿಂ ॥ ೪೫ ॥

ಪ್ರತ್ಯಾದೇಶಭಯಾತ್ತಸ್ಮಾಚ್ಛಾಪಭೀತ್ಯಾ ಚ ಪಾರ್ಥಿವಃ ।
ಸಾಂತ್ವಪೂರ್ವಮಿದಂ ವಾಕ್ಯಮುವಾಚ ವಿನಯಾನತಃ ॥ ೪೬ ॥

॥ ಮಾಂಧಾತೋವಾಚ ॥

ಶೃಣುಷ್ವ ಮುನಿಶಾರ್ದೂಲ ಕ್ಷತ್ರಿಯಾಣಾಂ ಕುಲಸ್ಥಿತಿಂ ।
ಕನ್ಯಾದೃಷ್ಟಿಪ್ರಿಯೋಯಸ್ತು ಕುಲೀನೋ ರೂಪವಾನ್ ಯುವಾ ॥ ೪೭ ॥

ಸರ್ವಲಕ್ಷಣಸಂಪನ್ನಸ್ತಸ್ಮೈ ಕನ್ಯಾ ಪ್ರದೀಯತೇ ।
ಕ್ಷತ್ರಿಯಾಣಾಮಿಯಂ ರೀತಿಃ ಕಾಚಿದಾಸೀನ್ಮುನೀಶ್ವರ ॥
ಭಗವನ್ಮುನಿಶಾರ್ದೂಲ ಕಿಂ ಕುರ್ಮಃ ಪುನರುಚ್ಯತಾಂ ॥ ೪೮ ॥

॥ ವಸಿಷ್ಠ ಉವಾಚ ॥

ಆಕರ್ಣ್ಯ ರಾಜ್ಞೋ ವಚನಮಿತಿ ಪ್ರತ್ಯಾಹ ಸೌಭರಿಃ ॥ ೪೯ ॥

---

೪೫-೪೬. ವಸಿಷ್ಠನು ಹೇಳಿದನು-ಮನುವಿನ ಮಗನಾದ ಮಾಂಧಾತನು ಸೌಭರಿ ಋಷಿಯ ಮಾತನ್ನು ಕೇಳಿ ಅವನ ದೇಹವೆಲ್ಲವೂ ಸುಕ್ಕುಸುಕ್ಕಾಗಿ ಬಡಕಲಾಗಿರುವುದನ್ನೂ ಕುರೂಪವನ್ನೂ ನೋಡಿದನು. ತನ್ನ ಮಗಳನ್ನು ಕೊಡಲು ಮನಸ್ಸು ಬರಲಿಲ್ಲ. ಈ ಮಾತನ್ನು ತಿರಸ್ಕರಿಸಿದರೆ ಶಾಪವನ್ನು ಕೊಟ್ಟಾನೆಂಬ ಭಯವು ಹುಟ್ಟಿತು. ಆಗ ವಿನಯದಿಂದ ಈ ರೀತಿಯಾದ ಸಮಾಧಾನಕರವಾದ ಮಾತುಗಳನ್ನು ಆಡಿದನು.

೪೭-೪೮. ಎಲೈ ಮುನಿಶ್ರೇಷ್ಠನೇ! ಕ್ಷತ್ರಿಯರ ಕುಲದ ರೀತಿಯನ್ನು ಕೇಳು. ಕನ್ಯೆಯ ಕಣ್ಣಿಗೆ ಚೆನ್ನಾಗಿದ್ದು ಕುಲೀನನಾಗಿ ರೂಪವಂತನಾಗಿ, ಯುವಕನಾಗಿ, ಎಲ್ಲ ಲಕ್ಷಣಗಳಿಂದಲೂ ಕೂಡಿದ್ದರೆ ಅವನಿಗೆ ಕ್ಷತ್ರಿಯರು ಮಗಳನ್ನು ಕೊಡುತ್ತಾರೆ. ಕ್ಷತ್ರಿಯರಿಗೆ ಈ ರೀತಿಯಾದ ಒಂದು ರೀತಿಯಿರುವಾಗ ನಾನು ಏನು ಮಾಡಬೇಕೆಂಬುದನ್ನು ಹೇಳು. ನೀನಾದರೋ ಋಷಿಶ್ರೇಷ್ಠನು. ನೀನು ಹೇಳಿದಂತೆ ಮಾಡುತ್ತೇನೆ.

೪೯. ವಸಿಷ್ಠನು ಹೇಳಿದನು-ಸೌಭರಿಯು ರಾಜನ ಈ ಮಾತನ್ನು ಕೇಳಿ ಇಂತೆಂದನು.

॥ ಸೌಭರಿರುವಾಚ ॥

ಯದ್ಯೇವಂ ಕ್ಷತ್ರಿಯಾರೀತಿಃ ನೃಪ ಧನ್ಯಾ ವಯಂ ಪುನಃ ।
ತಸ್ಮಾದ್ವರ್ಷವರಂ ರಾಜನ್ನಾಹೂಯಾಂತಃಪುರಸ್ಥಿತಂ ॥ ೫೦ ॥

ಮಾಂ ಪ್ರದರ್ಶಯ ಕನ್ಯಾನಾಂ ಯದಿ ತಾಸಾಂ ರುಚಿರ್ಭವೇತ್ ।
ತದಾ ದಿಶ ಸುತಾ ರಾಜನ್ನೋ ಚೇದ್ಯಾಸ್ಯೇ ಯಥಾಗತಂ ॥ ೫೧ ॥

॥ ವಸಿಷ್ಠ ಉವಾಚ ॥

ಮುನೇಸ್ತದ್ವಾಕ್ಯಮಾಕರ್ಣ್ಯ ತಥಾಸ್ತ್ವಿತಿ ನೃಪೋತ್ತಮಃ ।
ಆದಿದೇಶ ತಮಾಹೂಯ ಸದ್ಯೋ ವರ್ಷವರಂ ತದಾ ॥ ೫೨ ॥

ಅಂತಃ ಪುರಂ ವಿಶನ್ನೇವ ಭಗವಾನ್ಮುನಿಸತ್ತಮಃ ।
ದೇವಗಂಧರ್ವಸಿದ್ಧೇಭ್ಯೋಽಪ್ಯತಿರೂಪಧರೋಽಭವತ್ ॥ ೫೩ ॥

ಅಂತರ್ವರ್ಷವರೋ ವಿಪ್ರಂ ನಿನಾಯ ನೃಪಶಾಸನಾತ್ ।
ತಾಸಾಂ ಪ್ರದರ್ಶಯಾಮಾಸ ಮುನೀಂದ್ರಂ ಮದನೋಪಮಂ ॥ ೫೪ ॥

---

೫೦-೫೧, ಸೌಭರಿಯು ಹೇಳಿದನು-ಎಲೈ ದೊರೆಯೇ ! ಈ ರೀತಿಯಾದ ಕ್ಷತ್ರಿಯ ನಿಯಮವಿದ್ದರೆ ನಾನು ಧನ್ಯನಾದೆನು. ನನಗೆ ಅನುಕೂಲವೇ ಆಯಿತು. ಹಾಗಾದರೆ ಒಬ್ಬ ಅಂತಃಪುರದ ನಪುಂಸಕ ಆಳನ್ನು ಕರೆಸಿ ನಿನ್ನ ಕನ್ಯೆಯರಿಗೆ ನನ್ನನ್ನು ತೋರಿಸು. ಅವರಿಗೆ ನಾನು ಸರಿಯಾಗಿ ಕಂಡು ಇಷ್ಟ ಪಟ್ಟರೆ ಆಗ ಅವರನ್ನು ನನಗೆ ಕೊಟ್ಟು ಮದುವೆಮಾಡು. ಇಲ್ಲದಿದ್ದರೆ ನಾನು ಬಂದಂತೆಯೇ ಹಿಂತಿರುಗಿ ಹೋಗುತ್ತೇನೆ.

೫೨. ವಸಿಷ್ಠನು ಹೇಳಿದನು-ಮುನಿಯ ಈ ಮಾತನ್ನು ಕೇಳಿ ಆ ರಾಜನು ಹಾಗೆಯೇ ಆಗಲೆಂದು ಹೇಳಿ ಆ ಅಂತಃಪುರಕ್ಕೆ ಕರೆದುಕೊಂಡು ಹೋಗಿ ಕನ್ಯೆಯರಿಗೆ ತೋರಿಸೆಂದು ಅಪ್ಪಣೆ ಮಾಡಿದನು.

೫೩. ಈತನ ಅಂತಃಪುರದ ಆಳು ಅಂತಃಪುರಕ್ಕೆ ಕರೆದುಕೊಂಡು ಹೋಗಲು ಆ ಋಷಿಯು ಅಲ್ಲಿಗೆ ಹೋದೊಡನೆಯೇ, ದೇವತೆಗಳು, ಗಂಧರ್ವರು, ಸಿದ್ಧರು, ಇವರಿಗಿರುವ ರೂಪಕ್ಕಿಂತಲೂ ಉತ್ಕೃಷ್ಟವಾದ ರೂಪವನ್ನು ಹೊಂದಿದನು.

೫೪. ಆ ಅಂತಃಪುರದ ಆಳು ರಾಜನ ಅಪ್ಪಣೆಯಂತೆ ಅವರನ್ನು ಅಂತಃಪುರಕ್ಕೆ ಕರೆದುಕೊಂಡು ಹೋಗಿ ಮನ್ಮಥನಂತಿರುವ ಆ ಋಷಿಯನ್ನು ಆ ಕನ್ಯೆಯರಿಗೆ ತೋರಿಸಿದನು.

ಭವತೀನಾಂ ಪಿತಾ ಪ್ರಾಹ ಇಮಂ ಯಾ ವೃಣುತೇ ಪತಿಂ |
ಅಸ್ಮೈ ತಾಂ ಪ್ರದದಾಮೀತಿ ತಾ ಇತಿ ಪ್ರಾಹ ಕಂಚುಕೀ || ೫೫ ||

ಶ್ರುತ್ವಾ ಕಂಚುಕೀನೋ ವಾಕ್ಯಂ ತಂ ಚ ದೃಷ್ಟ್ವಾ ಮನೋಹರಂ |
ಸಾನುರಾಗಾಸ್ತತಃ ತನ್ಯಾಃ ಪರಿವಾರ್ಯ ತಮಬ್ರುವನ್ || ೫೬ ||

ಅಹಂ ಭಾರ್ಯಾಸ್ಮ್ಯಹಂ ಭಾರ್ಯಾಸ್ಮ್ಯಹಂ ಭಾರ್ಯೇತಿ ತಾ ಮಿಥಃ |
ಇತಿ ಕನ್ಯಾಸ್ಸಮಾವವ್ರುಃ ವಾಶಿತಾ ಇವ ವಾರಣಂ || ೫೭ ||

ಮಾಂಧಾತಾ ನೃಪತಿರ್ದೃಷ್ಟ್ವಾ ಕುಮಾರೀಣಾಂ ಮನೋರಥಂ |
ದಿದೇಶ ಸಕಲಾ ಏವ ತಸ್ಮೈ ಸೌಭರಯೇ ತದಾ || ೫೮ ||

ಕೃತ್ವಾ ವಿವಾಹಂ ವಿಧಿವದ್ವಿಧಿಜ್ಞಃ ಸ ಮಹಾಮುನಿಃ |
ಆದಾಯ ರಾಜಕನ್ಯಾಸ್ತಾ ಜಗಾಮ ಸ್ವಂ ನಿವೇಶನಂ || ೫೯ ||

---

೫೫. ಎಲೈ ಕನ್ಯೆಯರಿರಾ! ಈತನನ್ನು ನಿಮ್ಮಲ್ಲಿ ಯಾರು ಗಂಡನನ್ನಾಗಿ ವರಿಸುವಿರೋ ಅವಳನ್ನು ಈತನಿಗೆ ಕೊಟ್ಟು ಮದುವೆ ಮಾಡುತ್ತೇನೆಂದು ನಿಮ್ಮ ತಂದೆಯು ಹೇಳಿರುವನು. ಎಂದು ಕಂಚುಕಿಯು ಆ ಕನ್ಯೆಯರಿಗೆ ಹೇಳಿದನು.

೫೬. ಕಂಚುಕಿಯ ಮಾತನ್ನು ಕೇಳಿ ಆ ಕನ್ಯೆಯರೆಲ್ಲರೂ ಆ ಋಷಿಯ ಮನೋಹರವಾದ ರೂಪವನ್ನು ನೋಡಿ ಆಸೆಪಡುತ್ತಾ ಅವನ ಸುತ್ತಲೂ ಸುತ್ತಿಕೊಂಡು ಇಂತೆಂದರು.

೫೭. ನಾನು ಹೆಂಡತಿಯಾಗುತ್ತೇನೆ. ನಾನು ಹೆಂಡತಿಯಾಗುತ್ತೇನೆ. ನಾನು ಹೆಂಡತಿಯಾಗುತ್ತೇನೆ ಎಂಬುದಾಗಿ ಆ ಕನ್ಯೆಯರೆಲ್ಲರೂ ಅವನನ್ನು ಮದಿಸಿದ ಸಲಗವನ್ನು ಕೊಬ್ಬಿದ ಹೆಣ್ಣಾನೆಗಳು ಸುತ್ತಿಕೊಳ್ಳುವಂತೆ ಸುತ್ತಿಕೊಂಡರು.

೫೮. ಮಾಂಧಾತನು ಕುಮಾರಿಯರ ಈ ಮನೋರಥವನ್ನು ನೋಡಿ ಆ ಸೌಭರಿಯನ್ನೇ ಮದುವೆಯಾಗುವಂತೆ ಹೇಳಿಕೊಟ್ಟನು.

೫೯. ವಿಧಿಯನ್ನು ತಿಳಿದಿರುವ ಆ ಸೌಭರಿಯು ಆ ಕನ್ಯೆಯರನ್ನು ಮದುವೆ ಮಾಡಿಕೊಂಡು ಅವರೆಲ್ಲರನ್ನೂ ಕರೆದುಕೊಂಡು ತನ್ನ ಆಶ್ರಮಕ್ಕೆ ಹೋದನು.

ಸೋಥ ಸೋಪಾನಸಂಯುಕ್ತಂ ವಲ್ಲಭೀಮಂಡಪಾನ್ವಿತಂ |
ಸ್ಫಾಟಿಕಸ್ತಂಭಸಂಯುಕ್ತಂ ಚಂದ್ರಶಾಲಾ ವಿರಾಜಿತಂ || ೬೦ ||

ದಾಸೀದಾಸಸಮಾಯುಕ್ತಂ ಹೇಮಪ್ರಾಕಾರಸಂವೃತಂ |
ವಿಚಿತ್ರದ್ವಾರರಕ್ಷಾಢ್ಯಂ ರತ್ನವಾತಾಯನೋಜ್ಜ್ವಲಂ || ೬೧ ||

ರತ್ನತೋರಣ ಸೌವರ್ಣಪತಾಕಾಭಿಸ್ಸಮುಜ್ಜ್ವಲಂ |
ಮನೋಹರಂ ಮಹಾಶಾಲಂ ಮಹಾನಸವಿರಾಜಿತಂ || ೬೨ ||

ಪೃಥಕ್ಪೃಥಗಸಂಬಾಧಹರ್ಮ್ಯ ಪ್ರಾಸಾದಸಂಕುಲಂ |
ಧನಧಾನ್ಯ ಸಮೃದ್ಧಂ ಚ ಸರ್ವೋಪಕರಣಾನ್ವಿತಂ | || ೬೩ ||

ಕಾರಯಾಮಾಸ ಸರ್ವಾಸಾಂ ಪ್ರತ್ಯೇಕಂ ಭವನೋತ್ತಮಂ |
ವಿಶ್ವಕರ್ಮಾಣಮಾಹೂಯ ಸೌಭರಿಃ ಶಿಲ್ಪಿನಾಂ ವರಂ || ೬೪ ||

---

೬೦-೬೪. ಸೌಭರಿಯು ತನ್ನ ಆಶ್ರಮಕ್ಕೆ ಹೋದೊಡನೆಯೇ ಶಿಲ್ಪಿಗಳಲ್ಲಿ ಶ್ರೇಷ್ಠನಾದ ವಿಶ್ವಕರ್ಮನನ್ನು ಕರೆಸಿ ಮನೆಯನ್ನು ಕಟ್ಟುವಂತೆ ಅಪ್ಪಣೆ ಮಾಡಿದನು. ಆತನು ಆ ಋಷಿಯ ಅಪ್ಪಣೆಯಂತೆ ಮನೆಗಳನ್ನು ಕಟ್ಟಿದನು. ಆ ಮನೆಗಳು ಮೆಟ್ಟಿಲುಗಳಿಂದಲೂ, ಲೋದಿಗೆಗಳಿಂದಲೂ, ಮಂಟಪಗಳಿಂದಲೂ ಕೂಡಿದ್ದುವು. ಸ್ಫಟಿಕದ ಕಂಬಗಳನ್ನು ಹಾಕಿದ್ದರು. ಮಹಡಿಗಳಿಂದ ಕೂಡಿದ್ದಿತು. ದಾಸರೂ, ದಾಸಿಯರೂ ಅಲ್ಲಿ ಬಹು ಮಂದಿ ಇದ್ದರು. ಚಿನ್ನದ ಹೊರಗಿನ ಗೋಡೆಯಿರುತ್ತಿದ್ದಿತು. ಚಿತ್ರ ಚಿತ್ರವಾದ ಬಾಗಿಲುಗಳಿದ್ದುವು. ಅನೇಕವಾದ ಕೊಟಡಿಗಳಿದ್ದುವು. ಅಲ್ಲಿರುವ ಕಿಟಕಿಗಳಿಗೆಲ್ಲಾ ರತ್ನಗಳನ್ನು ಹಾಕಿದ್ದರು. ರತ್ನವನ್ನು ಹಾಕಿ ಹೆಬ್ಬಾಗಿಲುಗಳನ್ನು ಮಾಡಿದ್ದರು. ಚಿನ್ನದ ಪತಾಕೆಗಳಿಂದ ಕೂಡಿದ್ದಿತು. ರಮ್ಯವಾಗಿದ್ದಿತು. ದೊಡ್ಡದಾದ ಅಂಗಳವಿದ್ದಿತು. ಚೆನ್ನಾಗಿರುವ ಎಲ್ಲಾ ಸಲಕರಣೆಗಳಿಂದಲೂ ಕೂಡಿದ ಅಡಿಗೆಯ ಮನೆಗಳಿದ್ದುವು. ಪ್ರತಿಯೊಬ್ಬರಿಗೂ ಬೇರೆಬೇರೆಯಾದ ಮನೆಗಳು ಇದ್ದುವು ಒಂದೊಂದಕ್ಕೆ ಸಂಪರ್ಕವೇ ಇರಲಿಲ್ಲ. ಇದರಲ್ಲಿ ಧನವೂ, ಧಾನ್ಯವೂ ಸಮೃದ್ಧಿಯಾಗಿದ್ದುವು. ಮನೆಯಲ್ಲಿ ಸಂಸಾರಕ್ಕೆ ಬೇಕಾದ ಎಲ್ಲಾ ಪದಾರ್ಥಗಳೂ ಇದ್ದುವು. ಇಂತಹ ಮನೆಗಳನ್ನು ಒಬ್ಬೊಬ್ಬರಿಗೂ ಬೇರೆಬೇರೆಯಾಗಿ ಮಾಡಿಸಿದನು.

ಗೃಷೇಷು ತೇಷು ತಾಃ ಕನ್ಯಾ ವ್ಯಾದಿಷ್ಟಾಃ ಪರಮರ್ಷಿಣಾ ।
ಸುಖಮೂಷುಃ ಸುರಸ್ತ್ರೀವತ್ಸರ್ವ ಸಂಪತ್ಸಮನ್ವಿತಾಃ ॥ ೬೫ ॥

ಏಕದಾ ದುಹಿತೃಸ್ನೇಹಸಮಾಕೃಷ್ಟಮನಾ ನೃಪಃ ।
ಸೌಭರೇಸ್ತಸ್ಯ ಜಾಪಾತುರಾಶ್ರಮಂ ಪ್ರಾಪದಶ್ರಮಃ ॥ ೬೬ ॥

ಸೌವರ್ಣಶಾಲಾಂ ಸ್ಫುರದಂಶುಜಾಲಾಂ
ಪ್ರಾಸಾದಮಾಲಾಂ ಬಹುಹೇಮಶಾಲಾಂ ।
ಆಲೋಲಮಾಲಾಂ ವಿಮಲಾಂ ವಿಲೋಕ್ಯ
ನೃಪೋಽಭವದ್ವಿಸ್ಮೃತ ಚಿತ್ತವೃತ್ತಿಃ ॥ ೬೭ ॥

ಅಥೈಕಭವನಂ ರಾಜಾ ಪ್ರವಿಶ್ಯಾಪಶ್ಯದಾತ್ಮಜಾಂ ।
ಸಾ ಸಂಭ್ರಮೇಣ ಪಿತರಂ ಸಮಾಲಿಂಗ್ಯ ನನಾಮ ಹ ॥ ೬೮ ॥

---

೬೫. ಆ ಮಹರ್ಷಿಯು ಹೇಳಿದಂತೆ ಅವರೆಲ್ಲರೂ ಒಬ್ಬೊಬ್ಬರು ಒಂದೊಂದು ಮನೆಯಲ್ಲಿದ್ದರು. ದೇವತಾ ಸ್ತ್ರೀಯರಂತೆ ಎಲ್ಲಾ ಸಂಪತ್ತಿನಿಂದಲೂ ಕೂಡಿಕೊಂಡು ಅವರು ಆ ಮನೆಗಳಲ್ಲಿ ಸುಖವಾಗಿದ್ದರು.

೬೬. ಹೀಗಿರುತ್ತಿರಲು ಒಂದು ಸಾರಿ ಆ ರಾಜನಾದ ಮಾಂಧಾತನು ಮಕ್ಕಳ ಮೇಲಿನ ಪ್ರೀತಿಯಿಂದ ಅವರನ್ನು ನೋಡಲು ಆ ಸೌಭರಿಯ ಆಶ್ರಮಕ್ಕೆ ಹೋದನು.

೬೭. ಚಿನ್ನದ ಜಗಲಿಗಳುಳ್ಳ, ಪ್ರಕಾಶಮಾನವಾಗಿರುವ, ಅನೇಕ ಮಹಡಿಗಳುಳ್ಳ, ಸುವರ್ಣವನ್ನು ತುಂಬಿರುವ ಎಲ್ಲಾ ಕಡೆಯಲ್ಲಿಯೂ ಮಾಲೆಗಳನ್ನು ನೇತುಹಾಕಿರುವ, ಕೊಳೆಯಿಲ್ಲದಿರುವ ಆ ಮಕ್ಕಳ ಮನೆಯನ್ನು ನೋಡಿ ಮಾಂಧಾತನು ತನ್ನ ಮನಸ್ಸನ್ನೇ ತನ್ನ ಅಧೀನದಲ್ಲಿ ಇಟ್ಟುಕೊಳ್ಳಲಾರದೆ ಹೋದನು.

೬೮. ಆಗ ರಾಜನು ಒಂದು ಮನೆಗೆ ಹೋದನು. ಅಲ್ಲಿ ಒಬ್ಬಳು ಮಗಳನ್ನು ನೋಡಲು ಆಕೆಯು ಸಂಭ್ರಮದಿಂದ ಬಂದು ಆ ತಂದೆಗೆ ನಮಸ್ಕರಿಸಿ ಆಲಿಂಗಿಸಿಕೊಂಡಳು.

ಸಸ್ನೇಹಂ ತಾಮುವಾಚೇತಿ ಸುಖೇನ ಸ್ಥೀಯತೇ ಕಿಮು ।
ಉತಸ್ನಿಹ್ಯತಿ ತೇ ಭರ್ತಾ ಕಿಂ ಮಾಂ ಸ್ಮರಸಿ ಮಾತರಂ ॥
ಇತಿ ಪೃಷ್ಟಾ ಸುತಾ ತೇನ ಪಿತರಂ ಪುನರಬ್ರವೀತ್ ॥ ೬೯ ॥

॥ ಸುತೋವಾಚ ॥

ಮಿಷ್ಟಾನ್ನಂ ಮೃದುಶಯ್ಯಾ ಚ ವಸ್ತ್ರಾಣ್ಯಾಭರಣಾನಿ ಚ ।
ತಿಲಾಜ್ಯಧಾನ್ಯಲವಣ ದಧಿಕ್ಷೀರ ಮಧೂನಿ ಚ ॥ ೭೦ ॥

ಧನಾನಿ ಗಂಧದ್ರವ್ಯಾಣಿ ಫಲಮೂಲಾನಿ ಚೇಂಧನಂ ।
ರಸಾಯನಾನಿ ಸರ್ವಾಣಿ ಭೋಜ್ಯಾನಿ ವಿವಿಧಾನಿ ಚ ॥ ೭೧ ॥

ಸರ್ವಾಶ್ಚ ಸಂಪದಸ್ಸಂತಿ ಮದ್ಗಾರ್ಹಸ್ಥ್ಯ ಸಮಂ ನ ಹಿ ।
ಇದಮೇಕಂ ಮಹದ್ದುಃಖಂ ಶೃಣು ವಕ್ಷ್ಯಾಮಿತೇ ಪಿತಃ ॥ ೭೨ ॥

ಮಯ್ಯೇವ ಸ್ನೇಹವಾನ್ ಭರ್ತಾ ವಿಹಾಯಾನ್ಯಾಸ್ಸಹೋದರಾಃ ।
ಅತ್ರೈವ ನಿಯತಂ ಭುಂಕ್ತೇ ಶೇತೇತ್ರೈವ ನಿಶಾಸು ಚ ॥
ಇದಮೇಕಂ ಹಿ ದುಃಖಂ ಮೇ ನಾನ್ಯತ್ಕಿಂಚನ ವಿದ್ಯತೇ ॥ ೭೩ ॥

---

೬೯. ಅಮ್ಮ ಸುಖವಾಗಿದ್ದೀಯಾ! ನಿನ್ನ ಗಂಡನು ನಿನ್ನಲ್ಲಿ ಸ್ನೇಹದಿಂದಿರುವನೇ ? ನನ್ನನ್ನಾಗಲೀ, ನಿಮ್ಮ ತಾಯಿಯನ್ನಾಗಲೀ ಜ್ಞಾಪಿಸಿಕೊಳ್ಳುತ್ತಿರುವಿರಾ ? ಎಂಬುದಾಗಿ ಪ್ರೀತಿಯಿಂದ ಅವಳ ತಂದೆಯು ಕೇಳಿದನು.

೭೦-೭೩. ಮಗಳು ಹೇಳಿದಳು-ರುಚಿಯಾದ ಅನ್ನ ಮೆತ್ತಗಿರುವ ಹಾಸಿಗೆ ಬಟ್ಟೆ ಒಡವೆ ಎಳ್ಳು (ಎಣ್ಣೆ) ತುಪ್ಪ ಧಾನ್ಯಗಳು ಉಪ್ಪು ಹಾಲು ಮೊಸರು ಜೇನುತುಪ್ಪ ಹಣ ಗಂಧದ್ರವ್ಯಗಳು ಹಣ್ಣು ಗೆಡ್ಡೆಗೆಣಸು ಸೌದೆ ರುಚಿರುಚಿಯಾದ ರಸಾಯನಗಳು ನಾನಾಬಗೆಯಾದ ಊಟಗಳು ಎಲ್ಲಾ ಸಂಪತ್ತುಗಳೂ ನಮ್ಮ ಮನೆಯಲ್ಲಿ ತುಂಬಿವೆ. ನನ್ನ ಗ್ರಹಸ್ಥತನಕ್ಕೆ ಸಮಾನವಾದ ಗ್ರಹಸ್ಥತನವು ಇನ್ನೆಲ್ಲಿಯೂ ಇಲ್ಲವೇ ಇಲ್ಲ. ಆದರೆ ನನಗೆ ಒಂದು ಮಾತ್ರ ಬಹು ದೊಡ್ಡದಾದ ದುಃಖವಾಗಿದೆ. ಹೇಳುತ್ತೇನೆ ಕೇಳು. ನನ್ನಲ್ಲಿಯೇ ನನ್ನ ಗಂಡನು ಸ್ನೇಹದಿಂದಿದ್ದಾನೆ. ನನ್ನ ಸಹೋದರಿಯರ ಮೇಲೆ ಸ್ವಲ್ಪವೂ ಸ್ನೇಹವೇ ಇಲ್ಲದ ಅವರನ್ನು ಬಿಟ್ಟು ಬಿಟ್ಟಿದ್ದಾನೆ. ಯಾವಾಗಲೂ ಇಲ್ಲಿಯೇ ಊಟಮಾಡುತ್ತಾನೆ. ರಾತ್ರಿಯೆಲ್ಲವೂ ಇಲ್ಲಿಯೇ ಮಲಗಿರುತ್ತಾನೆ. ಮಿಕ್ಕವರನ್ನೆಲ್ಲಾ ಬಿಟ್ಟಿರುವನಲ್ಲ! ಎಂಬುದೊಂದು ದುಃಖವು ನನಗಿರುವುದೇ ಹೊರತು ಮತ್ತಾವದುಃಖವೂ ಸ್ವಲ್ಪವೂ ಇಲ್ಲ.

॥ ವಸಿಷ್ಠ ಉವಾಚ ॥

ಇತ್ಯುಕ್ತೋ ನೃಪತಿಃ ಪುತ್ರ್ಯಾ ದ್ವಿತೀಯಂ ಭವನಂ ಗತಃ ।
ಏವಂ ತಯಾಪಿ ಕಥಿತಃ ತೃತೀಯಂ ಭವನಂ ಗತಃ ॥ ೭೪ ॥

ಏವಂ ಸಮಸ್ತಭವನಂ ಸಂಪ್ರಾಪ್ಯ ಚ ಮಹೀಪತಿಃ ।
ಸುತಾಭಿಸ್ತಾಭಿರಿತ್ಯುಕ್ತಃ ಸಂತೋಷಂ ಪರಮಂ ಯಯೌ ॥ ೭೫ ॥

ಆಶ್ಚರ್ಯಮೇತದಾಲೋಕ್ಯ ವಿಸ್ಮಯೋತ್ಫುಲ್ಲಲೋಚನಃ ।
ಉವಾಚ ಸೌಭರಿಂ ರಾಜಾ ದೃಷ್ಟೋದ್ಯ ಮಹಿಮಾ ತವ ॥ ೭೬ ॥

ಅದೃಷ್ಟಪೂರ್ವಃ ಕುತ್ರಾಪಿ ತವ ಭಾವೋಯಮುದ್ಭುತಃ ।
ಇತಿ ಸಂತೋಷ್ಯ ವಿಪ್ರೇಂದ್ರಂ ಜಗಾಮ ಸ್ವಪುರಂ ನೃಪಃ ॥ ೭೭ ॥

ಅಥ ಕಾಲೇನ ತಾಃ ಕನ್ಯಾಃ ಪ್ರತ್ಯೇಕಂ ತನಯತ್ರಯಂ ।
ಲೇಭಿರೇ ಮುನಿಶಾರ್ದೂಲಾಜ್ಜ್ವಲತ್ಪಾವಕ ತೇಜಸಃ ॥ ೭೮ ॥

---

೭೪-೭೫. ವಸಿಷ್ಠನು ಹೇಳಿದನು–ಆ ಮಗಳು ಹೀಗೆಂದು ಹೇಳಲು ಎರಡನೆಯ ಮನೆಗೆ ಹೋದನು. ಅಲ್ಲಿ ಆ ಮಗಳೂ ಮೊದಲಿನವಳಂತೆಯೇ ಹೇಳಿದಳು. ಅದನ್ನು ಕೇಳಿ ಆಮೇಲೆ ಮೂರನೆಯವಳ ಮನೆಗೆ ಹೋದನು. ಅವಳೂ ಹಾಗೆಯೇ ಹೇಳಿದಳು. ಈ ರೀತಿಯಾಗಿ ಆ ಐವತ್ತು ಹೆಣ್ಣುಮಕ್ಕಳ ಐವತ್ತುಮನೆಗೂ ಹೋದನು. ಎಲ್ಲರೂ ಒಂದೇ ರೀತಿಯಾಗಿ ಹೇಳಿದರು. ಆಗ ಈತನಿಗೆ ಬಹುವಾದ ಸಂತೋಷವಾಯಿತು.

೭೬-೭೭. ಈ ಆಶ್ಚರ್ಯವನ್ನು ನೋಡಿ ಅವನಿಗೆ ಸಂತೋಷದಿಂದ ಕಣ್ಣುಗಳು ಅರಳಿದುವು. ಆಗ ರಾಜನು ಸೌಭರಿ ಋಷಿಯನ್ನು ಕುರಿತು ಎಲೈ ಋಷಿಯೇ! ಈಗ ನಿನ್ನ ಮಹಿಮೆಯು ಗೊತ್ತಾಯಿತು. ಈ ರೀತಿಯಾದ ಮಹಿಮೆಯನ್ನು ಎಲ್ಲಿಯೂ ನೋಡಿಯೂ ಇಲ್ಲ. ಕೇಳಿಯೂ ಇಲ್ಲ. ಈ ನಿನ್ನ ರೀತಿಯು ಬಹು ಆಶ್ಚರ್ಯಕರವಾಗಿದೆ. ಎಂಬದಾಗಿ ಹೊಗಳಿ ಸಂತೋಷಪಡಿಸಿ ತಾನೂ ಸಂತೋಷಪಟ್ಟು ಊರಿಗೆ ಹೊರಟು ಹೋದನು.

೭೮-೭೯. ಹೀಗೆಯೇ ಕೆಲವು ಕಾಲವು ಕಳೆಯಲು ಆ ರಾಜಪುತ್ರಿಯರು ಒಬ್ಬೊಬ್ಬರೂ ಮೂರು ಮೂರು ಮಕ್ಕಳುಗಳನ್ನು ಹೊಂದಿದರು. ಅವರು ಅಗ್ನಿಯಂತೆ ತೇಜಸ್ವಿಗಳಾಗಿದ್ದರು. ಕೊನೆಗೆ ಹೆಂಡಿರು ಮಕ್ಕಳು ಮೊಮ್ಮಕ್ಕಳು

ಏವಂ ಪುತ್ರಾಶ್ಚ ಪೌತ್ರಾಶ್ಚ ನಪ್ತಾರೋ ಬಹುವೋಽಭವನ್ ।
ಏವಂ ಸಹಸ್ರಸಂತಾನಃ ಸೌಭರಿರ್ನೃಪಸತ್ತಮ ॥ ೭೯ ॥

ಸಂಸಾರಸೌಖ್ಯಭುಕ್ತಸ್ಥೌ ಚಿರಕಾಲಂ ನಿಜಾಶ್ರಮೇ ।
ಏವಂ ದ್ವಾದಶ ಮಾಘಾ ವೈ ಜಲೇ ಮಗ್ನೇನ ತಿಷ್ಠತಾ ॥ ೮೦ ॥

ನೀತಾಃ ಸೌಭರೀಣಾ ರಾಜನ್ನೇವಂ ಸ್ಯಾನ್ಮಾಘ ವೈಭವಃ ।
ಏವಂ ವ್ಯಾಜೇನ ಸಿದ್ಧ್ಯನ್ತಿ ಮಾಘಾಃ ಪುಣ್ಯವತಾಂ ನೃಣಾಂ ॥ ೮೧ ॥

ಸೌಭರೇರಿದಮಾಖ್ಯಾನಂ ಯೇ ಶೃಣ್ವಂತಿ ನರೋತ್ತಮಾಃ ।
ತೇಷಾಂ ನ ಸಂತತಿಚ್ಛೇದೋ ಭವಿತಾ ನಾತ್ರ ಸಂಶಯಃ ॥ ೮೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ
ಸಂವಾದೇ ಮಾಘ ಮಾಹಾತ್ಮ್ಯೇ ಸೌಭರ್ಯುಪಾಖ್ಯಾನಂ ನಾಮ
ದ್ವಾತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

ಮರಿಮಕ್ಕಳು ಹೆಣ್ಣುಮಕ್ಕಳಿಗೆ ಮಕ್ಕಳು ಅವರ ಮಕ್ಕಳು ಈ ರೀತಿಯಾಗಿ ಬಹು ಜನರಾದರು. ಈ ರೀತಿಯಾಗಿ ಸೌಭರಿಯು ಸಾವಿರಾರು ಸಂತಾನ ವುಳ್ಳವನಾದನು.

೮೦-೮೧. ಈ ರೀತಿಯಾಗಿ ಆ ಸೌಭರಿಯು ಸಂಸಾರ ಸೌಖ್ಯವನ್ನು ಅನುಭವಿಸುತ್ತ ತನ್ನ ಆಶ್ರಮದಲ್ಲಿದ್ದನು. ಆ ಸೌಭರಿಯು ಹನ್ನೆರಡು ವರ್ಷ ಮಾಘಮಾಸಗಳ ಕಾಲ ನೀರಿನಲ್ಲಿ ಇದ್ದುದರಿಂದ ಅವನಿಗೆ ಈ ರೀತಿಯಾದ ಶಕ್ತಿಯು ಬಂದಿತು. ಮಾಘದ ವೈಭವವು ಈ ರೀತಿಯಾಗಿರುವುದು. ಈ ರೀತಿಯಾಗಿ ಯಾವುದಾದರೂ ಒಂದು ನೆವದಿಂದ ಮಾಘಮಾಸದ ಫಲವು ಮನುಷ್ಯರಿಗೆ ಲಭಿಸುತ್ತದೆ.

೮೨. ಸೌಭರಿಯ ಈ ಚರಿತ್ರೆಯನ್ನು ಯಾರು ಕೇಳುತ್ತಾರೆಯೋ ಅವರಿಗೆ ಸಂತತಿಯು ನಾಶವಾಗುವುದೇ ಇಲ್ಲ. ಇದರಲ್ಲಿ ಸಂಶಯವೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ
ಸಂವಾದದ ಮಾಘ ಮಹಿಮೆಯಲ್ಲಿ ಸೌಭರ್ಯುಪಾಖ್ಯಾನ ಎಂಬ
ಇನ್ನೂರ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಯಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ ||



॥ ವಸಿಷ್ಠ ಉವಾಚ ॥

ವಿವಾಹಂ ವಿಧಿವತ್ಕೃತ್ವಾ ಮೃಗಶೃಂಗೋ ಮಹೀಶ್ವರಃ ।
ಗಾರ್ಹಸ್ಥ್ಯಂ ಸಮ್ಯಗಕರೋದ್ವೇದೋಕ್ತೇ ನೈವ ವರ್ತ್ಮನಾ || ೧ ||

ತಸ್ಯ ಗಾರ್ಹಸ್ಥ ಸದೃಶಂ ನ ಭೂತಂ ನ ಭವಿಷ್ಯತಿ ।
ಸುವೃತ್ತಾ ಕಮಲಾ ಚೈವ ವಿಮಲಾ ಸುರಸಾ ತಥಾ || ೨ ||

ಪಾತಿವ್ರತ್ಯರತಾ ನಿತ್ಯಂ ಪತಿಶುಶ್ರೂಷಣೇ ರತಾಃ ।
ತಥೈವ ತಸ್ಸ ಭಾರ್ಯಾಣಾಂ ಪಾತಿವ್ರತ್ಯಸಮಂ ನಹಿ ||
ಏವಂ ತಾಭಿಸ್ಸ ಧರ್ಮಾತ್ಮಾ ಸಮ್ಯಗ್ಧರ್ಮಂ ಚಚಾರ ಹ || ೩ ||

---

### ಇನ್ನೂರ ಮೂವತ್ತಮೂರನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಈ ಮೃಗಶೃಂಗ ಮುನಿಯು ವಿಧಿವತ್ತಾಗಿ ವಿವಾಹವನ್ನು ಮಾಡಿಕೊಂಡು ವೇದೋಕ್ತವಾದ ರೀತಿಯಿಂದಲೇ ಗ್ರಹಸ್ಥಾಶ್ರಮ ವನ್ನು ಅನುಸರಿಸಿಕೊಂಡಿದ್ದನು.

೨-೩. ಆ ಮೃಗಶೃಂಗನ ಗೃಹಸ್ಥಾಶ್ರಮಕ್ಕೆ ಸಮವಾದುದು ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ ಸುವೃತ್ತೆ ಕಮಲೆ ವಿಮಲೆ ಸುರಸೆ ಇವರು ಪಾತಿವ್ರತ್ಯವನ್ನು ಹೊಂದಿ ನಿತ್ಯವೂ ಪತಿಯ ಶುಶ್ರೂಷಣೆಯಲ್ಲಿ ನಿರತರಾಗಿದ್ದರು. ಅದೇ ರೀತಿಯಲ್ಲಿ ಆ ಮೃಗಶೃಂಗನ ಹೆಂಡತಿಯರ ಸಮವಾದ ಪತಿವ್ರತೆಯರೇ ಇಲ್ಲ. ಈ ರೀತಿಯಾಗಿ ಅವರೊಡನೆ ಆ ಋಷಿಯು ಗಾರ್ಹಸ್ಥ್ಯಧರ್ಮವನ್ನು ಚೆನ್ನಾಗಿ ಅನುಸರಿಸುತ್ತ ಇದ್ದನು.

॥ ದಿಲೀಪ ಉವಾಚ ॥

ಪತಿವ್ರತಾಲಕ್ಷಣಂ ಚ ಗೃಹಸ್ಥಾಶ್ರಮಲಕ್ಷಣಂ ।
ಅಹಂ ವೇದಿತುಮಿಚ್ಛಾಮಿ ಸಮ್ಯಗೇತದ್ದ್ವಯಂ ವದ ॥ ೪ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಗೃಹಸ್ಥಾಶ್ರಮಲಕ್ಷಣಂ ।
ಸದಾಚಾರವತಾ ಪುಂಸಾ ಜಿತೌ ಲೋಕಾವುಭಾವಪಿ ॥ ೫ ॥

ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಧರ್ಮಮರ್ಥಂ ಚ ಚಿಂತಯೇತ್ ।
ಕಾಯಕ್ಲೇಶಂ ತದುದ್ಭೂತಂ ಚಿಂತಯನ್ ಮನಸೇಶ್ವರಂ ॥ ೬ ॥

ನೈಋುತ್ಯಾಮಿಷುವಿಕ್ಷೇಪಮತೀತ್ಯಾಭ್ಯಧಿಕಂ ಭುವಃ ।
ದೂರಾದಾವಸಥಾನ್ಮೂತ್ರಂ ಪುರೀಷಂ ಚ ವಿಸರ್ಜಯೇತ್ ॥ ೭ ॥

ದಿವಾಸಂಧ್ಯಾಸು ಕರ್ಣಸ್ಥಬ್ರಹ್ಮಸೂತ್ರ ಉದಙ್ಮುಖಃ ।
ಕುರ್ಯಾನ್ಮೂತ್ರಪುರೀಷೇ ಚ ರಾತ್ರೌ ಚೇ ದಕ್ಷಿಣಾಮುಖಃ ॥ ೮ ॥

---

೪. ದಿಲೀಪನು ಹೇಳಿದನು-ಎಲೈ ಗುರುವೇ ! ಪತಿವ್ರತಾ ಲಕ್ಷಣವನ್ನೂ ಗೃಹಸ್ಥಾಶ್ರಮದ ಲಕ್ಷಣವನ್ನೂ ಕೇಳಬೇಕೆಂದಿದ್ದೇನೆ. ಈ ಎರಡನ್ನೂ ಸರಿಯಾಗಿ ಹೇಳು.

೫. ವಸಿಷ್ಠನು ಹೇಳಿದನು-ಎಲೈ ರಾಜನೇ ! ಕೇಳು ! ಗೃಹಸ್ಥಾಶ್ರಮದ ಲಕ್ಷಣವನ್ನು ಹೇಳುತ್ತೇನೆ. ಸದಾಚಾರವುಳ್ಳ ಮನುಷ್ಯನು ಇಹಪರಗಳೆರಡನ್ನೂ ಜಯಿಸುವನು.

೬-೭. ಬ್ರಹ್ಮದೇವತಾಕವಾದ ಮುಹೂರ್ತದಲ್ಲಿ ಎದ್ದು ಧರ್ಮಮಾಡುವ ಬಗೆಯನ್ನೂ ಹಣವು ಬರುವ ರೀತಿಯನ್ನೂ ಆಲೋಚಿಸಬೇಕು. ಅದರಿಂದ ಉತ್ಪನ್ನವಾಗುವ ದೇಹದ ಕ್ಲೇಶವನ್ನೂ ಅದರಿಂದುಂಟಾಗುವ ಪರಿಣಾಮವನ್ನೂ ಯೋಚಿಸಬೇಕು. ಅಂತೆಯೇ ಈಶ್ವರನನ್ನೂ ಧ್ಯಾನಿಸಬೇಕು. ಅನಂತರ ಮನೆಯಿಂದ ನೈರುತ್ಯದಿಕ್ಕಿಗೆ ಒಂದು ಬಾಣವನ್ನು ಬಿಟ್ಟರೆ ಅದು ಎಷ್ಟು ದೂರ ಹೋಗುವುದೋ ಅಷ್ಟುದೂರದವರೆಗೆ ಹೋಗಬೇಕು. ಅಲ್ಲಿ ಜಲಬಾಧೆ ಮಲಬಾಧೆಗಳನ್ನು ಮುಗಿಸಿಕೊಳ್ಳಬೇಕು.

೮. ಹಗಲು ಮತ್ತು ಸಂಧ್ಯಾಕಾಲಗಳಲ್ಲಿ ಯಜ್ಞೋಪವೀತವನ್ನು ಕಿವಿಗೆ ಸುತ್ತಿಕೊಂಡು ಉತ್ತರ ಮುಖವಾಗಿ ಜಲಮಲಗಳನ್ನು ವಿಸರ್ಜಿಸಬೇಕು. ರಾತ್ರಿಯಲ್ಲಾದರೆ ದಕ್ಷಿಣಕ್ಕೆ ಮುಖವನ್ನು ಮಾಡಿಕೊಂಡು ವಿಸರ್ಜಿಸಬೇಕು.

ಅಂತರ್ಧಾಯ ತೃಣೈರ್ಭೂಮಿಂ ಶಿರಃ ಪ್ರಾವೃತ್ಯ ವಾಸಸಾ ।
ವಾಚಂ ನಿಯಮ್ಯ ಯತ್ನೇನ ಷ್ಠೀವನೋಚ್ಛ್ವಾಸವಿವರ್ಜಿತಃ ॥ ೯ ॥

ತಿಷ್ಠೇನ್ನಾತಿಚಿರಂ ತತ್ರ ಪುರೀಷಂ ನಾವಲೋಕಯೇತ್ ।
ಗೃಹೀತಶಿಶ್ನಶ್ಚೋತ್ಥಾಯ ಶೌಚಂ ಕುರ್ಯಾದತಂದ್ರಿತಃ ॥ ೧೦ ॥

ಆಹೃತ್ಯ ಮೃತ್ತಿಕಾಂ ಕೂಲಾದ್ಗಂಧಲೇಪಾಪಕರ್ಷಣಂ।
ತೀರ್ಥೇ ಶೌಚಂ ನ ಕುರ್ವೀತ ಕುರ್ವೀತೋದ್ಧೃತವಾರಿಣಾ ॥ ೧೧ ॥

ರತ್ನಿಮಾತ್ರಂ ಜಲಂತ್ಯಕ್ತ್ವಾ ಕುರ್ಯಾಚ್ಛೌಚಮನುದ್ಧೃತೇ ।
ಪಶ್ಚಾತ್ತಚ್ಛೋಧಯೇತ್ತೀರ್ಥಮನ್ಯಥಾ ಹ್ಯಶುಚಿರ್ಭವೇತ್ ॥ ೧೨ ॥

---

೯. ಹಾಗೆ ಜಲಮಲಬಾಧೆಗಳನ್ನು ಮಾಡುವಾಗ ತಲೆಗೆ ಬಟ್ಟೆಯನ್ನು ಸುತ್ತಿಕೊಂಡಿರಬೇಕು. ಭೂಮಿಯನ್ನು ತಾನು ಅಶುಚಿಯನ್ನಾಗಿ ಮಾಡುವಲ್ಲಿ ಹುಲ್ಲಿನಿಂದ ಮುಚ್ಚಿರಬೇಕು. ಮಾತನ್ನು ಆಡಬಾರದು. ಉಗಿಯುತ್ತಿರಬೇಕು. ಗಟ್ಟಿಯಾಗಿ ಉಸಿರನ್ನು ಬಿಡಬಾರದು.

೧೦. ಬಹಳ ಹೊತ್ತು ಅಲ್ಲಿರಬಾರದು. ಮಲವನ್ನು ನೋಡಬಾರದು. ಅನಂತರ ಮೂತ್ರಕೋಶವನ್ನು ಹಿಡಿದುಕೊಂಡು ಎದ್ದು ಬಂದು ಸರಿಯಾದ ರೀತಿಯಲ್ಲಿ ಶೌಚವನ್ನು ಮಾಡಿಕೊಳ್ಳಬೇಕು.

೧೧. ದಡದಲ್ಲಿ ಮಣ್ಣನ್ನು ತೆಗೆದುಕೊಂಡು ಬಂದು ಆ ಅಮೇಧ್ಯದ ವಾಸನೆಯು ಹೋಗುವವರೆಗೂ ಮಣ್ಣನ್ನು ಹಾಕಿ ತೊಳೆಯಬೇಕು. ಕೆರೆ ನದಿ ಮುಂತಾದುವುಗಳಲ್ಲಿ ಹೋಗಿ ಅದರೊಳಗೆ ತೊಳೆಯಬಾರದು. ಆದ್ದರಿಂದ ನೀರನ್ನು ಬೇರೆ ಮತ್ತೊಂದು ಪಾತ್ರೆಯಲ್ಲಿ ತೆಗೆದುಕೊಂಡು ಬಂದು ಹೊರಗಡೆಯಲ್ಲಿ ತೊಳೆದುಕೊಳ್ಳಬೇಕು

೧೨. ಒಂದುವೇಳೆ ನೀರುತೆಗೆದುಕೊಳ್ಳಲು ಉಪಪಾತ್ರೆ ಮುಂತಾದುವು ಗಳಿಲ್ಲದೆ ಇದ್ದರೆ ಆ ನೀರಿನ ಬಳಿಯಲ್ಲಿ ಒಂದುಮೊಳದ ದೂರದಲ್ಲಿ ಶೌಚವನ್ನು ಮಾಡಿಕೊಳ್ಳಬಹುದು. ಹಾಗಿಲ್ಲದೆ ಅದೇ ನೀರಿನಲ್ಲಿ ತಾನು ಶೌಚಮಾಡಿಕೊಂಡ ಆ ಜಾಗವು ಅಶುಚಿಯಾಗುತ್ತದೆ. ತಾನೂ ಅಶುಚಿಯಾಗುತ್ತಾನೆ.

ಏಕಾ ಲಿಂಗೇ ಗುದೇ ಪಂಚ ತಥಾ ವಾಮಕರೇ ದಶ |
ಉಭಯೋಃ ಸಪ್ತ ದದ್ಯಾಚ್ಚ ಪಾದಯೋಃ ಪಂಚಪಂಚ ಮೃತ್ || ೧೩ ||

ಕೃತ್ವಾ ತು ಶೌಚಂ ಪ್ರಕ್ಷಾಳ್ಯ ಪಾದೌ ಹಸ್ತೌ ಚ ಮೃಜ್ಜಲೈಃ |
ನಿಬದ್ಧ ಶಿಖಕಚ್ಛಸ್ತು ಕುರ್ಯಾದಾಚಮನದ್ವಯಂ || ೧೪ ||

ಅಂತರ್ಜಾನು ಶುಚೌ ದೇಶೇ ಉದಕ್ ಪ್ರಾಙ್ಮುಖ ಏವ ವಾ |
ಸಪವಿತ್ರೇಣ ಹಸ್ತೇನ ಕಾರ್ಯ್ಯಾದಾಚಮನಕ್ರಿಯಾಂ || ೧೫ ||

ನೋಚ್ಛಿಷ್ಟಂ ತತ್ಪವಿತ್ರಂ ತು ಭುಕ್ತ್ವೋಚ್ಛಿಷ್ಟಂ ತು ವರ್ಜಯೇತ್ |
ಉತ್ಥಾಯ ನೇತ್ರೇ ಪ್ರಕ್ಷಾಳ್ಯ ದಂತಕಾಷ್ಠಂ ಸಮಾಹರೇತ್ || ೧೬ ||

---

೧೩. ಲಿಂಗವನ್ನು ಒಂದು ಸಾರಿ ಮಣ್ಣುಹಾಕಿ ತೊಳೆಯಬೇಕು. ಅನಂತರ ಎರಡು ಕೈಗಳಿಗೂ ಐದು ಐದು ಬಾರಿ ಮಣ್ಣನ್ನು ಹಾಕಿ ತೊಳೆಯಬೇಕು. ಎಡಗೈಗೆ ಎಂದರೆ ಆ ಮಲವನ್ನು ತೊಳೆಯುವುದು ಎಡಗೈಯಾದುದರಿಂದ ಅದಕ್ಕೆ ಹತ್ತುಬಾರಿ ಮಣ್ಣನ್ನು ಹಾಕಿ ತೊಳೆಯಬೇಕು. ಅನಂತರ ಎರಡು ಕೈಗಳಿಗೂ ಏಳೇಳು ಬಾರಿ ಮಣ್ಣನ್ನು ಹಾಕಿ ತೊಳೆಯಬೇಕು. ಕಾಲುಗಳಿಗೆ ಐದೈದು ಬಾರಿ ಮಣ್ಣನ್ನು ಹಾಕಿ ತೊಳೆಯಬೇಕು ಹೀಗೆ ತೊಳೆಯುವಾಗ ಒಂದು ಬಾರಿ ಮಣ್ಣನ್ನು ಹಾಕಿ ಒಂದುಬಾರಿ ತೊಳೆಯಬೇಕು. ಹೀಗೆ ಎಷ್ಟುಬಾರಿ ಮಣ್ಣನ್ನು ಹಾಕುತ್ತೀವೆಯೋ ಅಷ್ಟುಬಾರಿ ತೊಳೆಯಬೇಕು.

೧೪. ಈ ರೀತಿಯಾಗಿ ಶೌಚವಾದ ಮೇಲೆ ಮಣ್ಣನ್ನು ಕದಡಿರುವ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ಇದಾದಮೇಲೆ ಶುದ್ಧವಾದ ನೀರಿನಿಂದ ಅವಶ್ಯಕವಿದ್ದರೆ ತೊಳೆದುಕೊಳ್ಳಬಹುದು. ಅನಂತರ ಜುಟ್ಟನ್ನು ಕಟ್ಟಿಕೊಂಡು ಪಂಚೆಯನ್ನು ಸರಿಯಾಗಿ ಕಚ್ಚೆ ಹಾಕಿಕೊಳ್ಳಬೇಕು. ಅನಂತರ ಎರಡು ಬಾರಿ ಆಚಮನವನ್ನು ಮಾಡಬೇಕು.

೧೫. ಆಚಮನ ಮಾಡುವಾಗ ಶುಚಿಯಾದ ಜಾಗದಲ್ಲಿ ಕುಳಿತುಕೊಳ್ಳಬೇಕು. ಬೆರಳಿಗೆ ಪವಿತ್ರವನ್ನು ಹಾಕಿಕೊಳ್ಳಬೇಕು. ಉತ್ತರ ಮುಖ ಅಥವಾ ಪೂರ್ವ ಮುಖವಾಗಿ ಕುಳಿತುಕೊಳ್ಳಬೇಕು ಎರಡು ಕೈಗಳೂ ಆಚಮನ ಮಾಡುವಾಗ ಮಂಡಿಗಳ ಒಳಗಿರಬೇಕು ಈ ರೀತಿಯಾಗಿದ್ದು ಆಚಮನ ಮಾಡಬೇಕು

೧೬. ಆ ಪವಿತ್ರವು ಕ್ರಿಯೆಯನ್ನು ಮಾಡಿ ಮಿಕ್ಕ ಹಳೆಯದಾಗಿರಬಾರದು. ಆಚಮನ ಮಾಡಿದಮೇಲೆ ಅದನ್ನು ಬಿಟ್ಟುಬಿಡಬೇಕು. ಅನಂತರ ಎದ್ದು ಕಣ್ಣುಗಳನ್ನು ತೊಳೆದುಕೊಳ್ಳಬೇಕು. ಆಮೇಲೆ ಹಲ್ಲುಜ್ಜುವ ಕಡ್ಡಿಯನ್ನು ತರಬೇಕು.

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।
ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ಧೇಹಿ ವನಸ್ಪತೇ ॥ ೧೭ ॥

ಇಮಂ ಮಂತ್ರಂ ಸಮುಚ್ಚಾರ್ಯ ದಂತಧಾವನಮಾಚರೇತ್ ।
ಕಂಟಕ ಕ್ಷೀರವೃಕ್ಷೋತ್ಥಂ ದ್ವಾದಶಾಂಗುಲಮವ್ರಣಂ ॥ ೧೮ ॥

ಕನಿಷ್ಠಾಂಗುಳಿವತ್‌ಸ್ಥೂಲಂ ಪೂರ್ವಾರ್ಧಕೃತಕೂರ್ಚಕಂ ।
ಶುಚಿ ದ್ವಾದಶಗಂಡೂಷೈಃ ನಿಷಿದ್ಧಂ ಭಾನುವಾಸರೇ ॥ ೧೯ ॥

ಆಚಮ್ಯ ಪ್ರಯತಸ್ಸಮ್ಯಕ್ ಪ್ರಾತಸ್ಸ್ನಾನಂ ಸಮಾಚರೇತ್ ।
ಸ್ನಾನಾದನನ್ತರಂ ತಾವತ್ತರ್ಪಯೇತ್ಪಿತೃದೇವತಾಃ ॥ ೨೦ ॥

ಉತ್ಥಾಯ ವಾಸಸೀ ಶುಕ್ಲೇ ಶುದ್ಧೇ ತು ಪರಿಧಾಯ ಚ ।
ಉತ್ತರೀಯಂ ಸದಾ ಧಾರ್ಯಂ ಬ್ರಾಹ್ಮಣೇವ ವಿಜಾನತಾ ॥ ೨೧ ॥

---

೧೭. ಆಯಸ್ಸು, ಬಲ, ಯಶಸ್ಸು, ವರ್ಚಸ್ಸು, ಪ್ರಜೆಗಳು (ಮಕ್ಕಳು) ಪಶುಗಳು, ಧನ, ಬ್ರಹ್ಮಜ್ಞಾನ, ಮೇಧೆ ಇವನ್ನು ನನಗೆ ಎಲೈ ವನಸ್ಪತಿಯೇ ನೀನು ಕೊಡು.

೧೮-೨೦. ಈ ಮಂತ್ರವನ್ನು ಹೇಳಿಕೊಂಡು ಹಲ್ಲನ್ನು ಆ ಕಡ್ಡಿಯಿಂದ ತಿಕ್ಕಿಕೊಳ್ಳಬೇಕು. ಹಲ್ಲುಜ್ಜುವ ಕಡ್ಡಿ ಮುಳ್ಳಿದ್ದು ಹಾಲುಬರುವ ಮರದ್ದಾಗಿ ಇರಬೇಕು. ತನ್ನ ಕೈಯ್ಯಲ್ಲಿ ಹನ್ನೆರಡು ಅಂಗುಲವಿರಬೇಕು. ಅದಕ್ಕೆ ಗಾಯ ಮುಂತಾದುವು ಆಗಿರಕೂಡದು. ಕಿರುಬೆಟ್ಟಿನ ದಪ್ಪವಾಗಿರಬೇಕು. ಮುಂದುಗಡೆ ಯಲ್ಲಿ ಜಜ್ಜಿ ನಾರುಗಳು ಬಿಟ್ಟುಕೊಂಡಿರುವಂತೆ (ಬ್ರಷ್‌ನಂತೆ) ಮಾಡಿಕೊಳ್ಳಬೇಕು ಇಂತಹವರಲ್ಲಿ ತಿಕ್ಕಬೇಕು. ತಿಕ್ಕಿಯಾದನಂತರ ಬಾಯನ್ನು ತೊಳೆದುಕೊಂಡು ಹನ್ನೆರಡು ಬಾರಿ ಬಾಯನ್ನು ಮುಕ್ಕುಳಿಸಿದರೆ ಶುಚಿಯಾಗುತ್ತಾನೆ. ಈ ದಂತ ಕಾಷ್ಠವನ್ನು ಭಾನುವಾರದ ದಿನ ಕೀಳಕೂಡದು. ಅದು ನಿಷಿದ್ಧವು. ಅನಂತರ ಸ್ನಾನ ಮಾಡಬೇಕು. ಸ್ನಾನವಾದನಂತರ ಪಿತೃದೇವತೆಗಳಿಗೆ ತರ್ಪಣವನ್ನು ಕೊಡಬೇಕು.

೨೧. ಹೊರಕ್ಕೆ ಬಂದು ಒರಸಿಕೊಂಡು ಬಟ್ಟೆಯನ್ನು ಉಟ್ಟುಕೊಳ್ಳಬೇಕು. ಬ್ರಾಹ್ಮಣನಾದವನು ಉತ್ತರಿಯ (ಮೇಲುಬಟ್ಟೆ) ವನ್ನು ಧರಿಸಬೇಕು.

ಆಚಮ್ಯ ಭಸ್ಮನಾ ಕಾರ್ಯಂ ತ್ರಿಪುಂಡ್ರಂ ಗೋಪಿಚಂದನಂ ।
ಊರ್ಧ್ವಪುಂಡ್ರಂ ಯಥಾಪೂರ್ವಮನುಷ್ಠಾನಂ ತಥಾಚರೇತ್ ॥ ೨೨ ॥

ಪ್ರಾಣಾಯಾಮಂ ತತಃ ಕೃತ್ವಾ ಸಂಧ್ಯಾವಂದನಮಾಚರೇತ್ ।
ಆಪೋಹಿಷ್ಠೇತಿ ಋಚೇನ ಮಾರ್ಜನಂ ತು ಕುಶೋದಕೈಃ ॥ ೨೩ ॥

ಪ್ರಣವೇನ ಸಮಾಯುಕ್ತಂ ಕ್ಷಿಪೇದ್ವಾರಿ ಪದೇ ಪದೇ ।
ಸೂರ್ಯಶ್ಚೇತಿ ಚ ಮಂತ್ರೇಣ ಮಂತ್ರಿತಂ ಪ್ರಾಶಯೇಜ್ಜಲಂ ॥ ೨೪ ॥

ಕರಾಭ್ಯಾಂ ತೋಯಮಾದಾಯ ಗಾಯತ್ರ್ಯಾ ಚಾಭಿಮಂತ್ರಿತಂ ।
ಆದಿತ್ಯಾಭಿಮುಖಸ್ತಿಷ್ಠಂ ಸ್ತ್ರಿರೂರ್ಧ್ವಮಥ ತತ್ಕ್ಷಿಪೇತ್ ॥ ೨೫ ॥

---

೨೨. ಅನಂತರ ಆಚಮನ ಮಾಡಿ ಭಸ್ಮದಿಂದ ತ್ರಿಪುಂಡ್ರಗಳನ್ನು ಹಾಕಿಕೊಳ್ಳಬೇಕು. ತ್ರಿಪುಂಡ್ರವೆಂದರೆ ಮೂರು ಎಳೆಬರುವಂತೆ ಹಣೆಯಲ್ಲಿ ಧರಿಸುವುದು ಗೋಪಿ ಚಂದನವಾದರೆ ಊರ್ಧ್ವಪುಂಡ್ರ(ಮೇಲು ಮುಖವಾಗಿ ಹಾಕುವಿಕೆ)ವನ್ನು ಹಾಕಿಕೊಳ್ಳಬೇಕು. ಅವರವರ ಆಚಾರದಂತೆ ಮಾಡಿಕೊಳ್ಳಬಹುದು.

೨೩–೨೪. ಅನಂತರ ಪ್ರಾಣಾಯಾಮವನ್ನು ಮಾಡಿ ಸಂಧ್ಯಾವಂದನೆಯನ್ನು ಮಾಡಬೇಕು. "ಆಪೋಹಿಷ್ಠಾಮಯೋಭುವಃ" ಎಂಬ ಋಕ್ಕನ್ನು ಹೇಳಿಕೊಂಡು ದರ್ಭೆಯಿಂದ ನೀರನ್ನು ತಲೆಯ ಮೇಲಕ್ಕೆ ಪ್ರೋಕ್ಷಿಸಿಕೊಳ್ಳುತ್ತಿರಬೇಕು. ಓಂ, ಓಂ, ಎಂಬ ಪ್ರಣವವನ್ನು ಉಚ್ಚರಿಸುತ್ತ ಆಗಾಗ ನೀರನ್ನು ಚಲ್ಲುತ್ತಿರಬೇಕು. "ಸೂರ್ಯಶ್ಚಮಾಮನ್ಯುಶ್ಚ" ಎಂಬ ಮಂತ್ರವನ್ನು ಹೇಳಿಕೊಂಡು ಕೈಯ್ಯಲ್ಲಿ ನೀರನ್ನು ಹಿಡಿದುಕೊಂಡು ಆ ಮಂತ್ರವು ಮುಗಿಯುತ್ತಲೂ ಆ ನೀರನ್ನು ಕುಡಿಯಬೇಕು.

೨೫. ಎರಡು ಕೈಯ್ಯನ್ನೂ ಜೋಡಿಸಿ ಬೊಗಸೆ ಮಾಡಿಕೊಂಡು ಅದರೊಳಗೆ ನೀರನ್ನು ತುಂಬಿಕೊಂಡು ಗಾಯಿತ್ರಿಯನ್ನು ಹೇಳಿ ಮಂತ್ರಿಸಿ ಆ ಸೂರ್ಯನ ಕಡೆಗೆ ನಿಂತುಕೊಂಡು ಮೇಲು ಮುಖವಾಗಿ ಎಸೆಯಬೇಕು. ಈ ರೀತಿಯಾಗಿ ಮೂರು ಬಾರಿ ಮಾಡಬೇಕು.

ಪೂರ್ವಾಂ ಸಂಧ್ಯಾಂ ಸನಕ್ಷತ್ರಾಮುಪಾಸೀತ ಯಥಾವಿಧಿ ।
ಗಾಯತ್ರೀಮಭ್ಯಸೇತ್ತಾವ ದ್ಯಾವದಾದಿತ್ಯ ದರ್ಶನಂ ॥ ೨೬ ॥

ಸಾವಿತ್ರ್ಯೈರನಷ್ಟೈರ್ಮಂತ್ರೈರುಪಸ್ಥಾಯ ಕೃತಾಂಜಲಿಃ ।
ಆತ್ಮಪಾದೌ ತಥಾ ಭೂಮಿಂ ಸಂಧ್ಯಾಕಾಲೇಭಿ ವಾದಯೇತ್ ॥ ೨೭ ॥

ಯಸ್ತು ಸಂಧ್ಯಾಮುಪಾಸೀತ ಶ್ರದ್ಧಯಾ ವಿಧಿವದ್ದ್ವಿಜಃ ।
ನ ತಸ್ಯ ಕಿಂಚಿದ ಪ್ರಾಪ್ಯಂ ತ್ರಿಷು ಲೋಕೇಷು ವಿದ್ಯತೇ ॥ ೨೮ ॥

ಸಂಧ್ಯಾಕಾಲಾವಸಾನೇ ತು ಹೋಮಂ ಕುರ್ಯಾದತಂದ್ರಿತಃ ।
ದಿನಂ ಶೂನ್ಯಂ ನ ಕುರ್ವೀತ ಯತ್ಕಿಂಚಿದ್ದಾನಮಾಚರೇತ್ ॥ ೨೯ ॥

ದಿವಸಸ್ಯಾದಿಮೇ ಭಾಗೇ ಕೃತ್ಯಮೇತದುದೀರಿತಂ ।
ದ್ವಿತೀಯೇ ಚ ತಥಾ ಭಾಗೇ ವೇದಾಭ್ಯಾಸೋ ವಿಧೀಯತೇ ॥ ೩೦ ॥

---

೨೬. ಪ್ರಾತಃಕಾಲದ ಸಂಧ್ಯಾವಂದನೆಯನ್ನು ಇನ್ನೂ ನಕ್ಷತ್ರಗಳು ಕಾಣುತ್ತಿರುವಾಗಲೇ ಮಾಡಬೇಕು. ಸೂರ್ಯನು ಉದಯಿಸಿ ಕಾಣುವವರೆವಿಗೂ ಗಾಯಿತ್ರಿಯನ್ನು ಪುನಶ್ಚರಣೆ ಮಾಡುತ್ತಿರಬೇಕು.

೨೭. ಅನಂತರ ಸೂರ್ಯನನ್ನು ಸ್ತೋತ್ರ ಮಾಡುವ ಉತ್ತಮೋತ್ತಮವಾದ ಮಂತ್ರಗಳಿಂದ ಕೈಮುಗಿದುಕೊಂಡು ಸೂರ್ಯನನ್ನು ಸೇವಿಸಬೇಕು. ಅನಂತರ ತನ್ನ ಪಾದಗಳನ್ನೂ ಭೂಮಿಯನ್ನೂ ಆ ಸಂಧ್ಯಾಕಾಲದಲ್ಲಿ ನಮಸ್ಕರಿಸಬೇಕು.

೨೮. ಯಾವನು ವಿಧಿವತ್ತಾಗಿ ಶ್ರದ್ಧೆಯಿಂದ ಸಂಧ್ಯಾವಂದನೆಯನ್ನು ಮಾಡುವನೋ ಅವನಿಗೆ ಸಿಕ್ಕದಿರತಕ್ಕ ಪದಾರ್ಥವು ಮೂರು ಲೋಕದಲ್ಲಿಯೂ ಇರುವುದಿಲ್ಲ.

೨೯. ಆ ಸಂಧ್ಯೆಯು ಮುಗಿಯುವ ಹೊತ್ತಿಗೆ ಎಚ್ಚರಿಕೆಯಿಂದ ಹೋಮ ಮಾಡಬೇಕು. (ಔಪಾಸನ ಅಥವ ಅಗ್ನಿಕಾರ್ಯವನ್ನು ಮಾಡಬೇಕು) ಆ ದಿನವನ್ನು ವ್ಯರ್ಥಮಾಡದಂತೆ ಯಾವುದನ್ನಾದರೂ, ಸ್ವಲ್ಪವನ್ನಾದರೂ ದಾನವನ್ನು ಮಾಡಬೇಕು.

೩೦. ಈಗ ಹೇಳಿದುದೆಲ್ಲವೂ ದಿವಸದ ಮೊದಲನೆಯಭಾಗದ ಕೆಲಸವಾಯಿತು. ದಿವಸದ ಎರಡನೆಯ ಭಾಗದಲ್ಲಿ ವೇದವನ್ನು ಅಭ್ಯಾಸ ಮಾಡಬೇಕು.

ಸಮಿತ್ಪುಷ್ಪಕುಶಾದೀನಾಂ ಸಕಾಲಸ್ಸಮುದಾಹೃತಃ ।
ತೃತೀಯೇ ತು ಪುನರ್ಭಾಗೇ ನ್ಯಾಯಾದ್ಯತ್ಕಿಂಚಿದರ್ಜಯೇತ್ ॥ ೩೧ ॥

ಅಕ್ಲೇಶೇನ ಶರೀರಸ್ಯ ಯದ್ಯೃಚ್ಛಾಲಾಭಮರ್ಜಯೇತ್ ।
ಷಣ್ಣಾಂ ತು ಕರ್ಮಣಾಮಸ್ಯ ತ್ರೀಣಿ ಕರ್ಮಾಣಿ ಜೀವಿಕಾ ॥ ೩೨ ॥

ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹಃ ।
ಚತುರ್ಥೇ ಚ ತಥಾ ಭಾಗೇ ಪುನಃ ಸ್ನಾನಂ ಸಮಾಚರೇತ್ ॥ ೩೩ ॥

ದರ್ಭೇಷು ದರ್ಭಪಾಣಿಭ್ಯಾಂ ಸಂಗತಾಭ್ಯಾಂ ಕೃತಾಂಜಲಿಃ ।
ಸ್ವಾಧ್ಯಾಯಂ ಚ ಯಥಾಶಕ್ತಿ ಬ್ರಹ್ಮಯಜ್ಞಾರ್ಥಮಾಚರೇತ್ ॥ ೩೪ ॥

ಋಕ್ಸಾಮಾಥರ್ವವೇದೋಕ್ತಾನ್ ಜಪೇನ್ಮಂತ್ರಾನ್ ಯಜೂಂಷಿ ಚ ।
ಜಪಿತ್ವೈವಂ ತತಃ ಕುರ್ಯಾದ್ದೇವರ್ಷಿಪಿತೃತರ್ಪಣಂ ॥ ೩೫ ॥

---

೩೧. ಸಮಿತ್ತು, ಹೂವು, ದರ್ಭೆಗಳನ್ನು ತರಲು ಅದೇ ಕಾಲವು ಸರಿಯಾದುದು. ಮೂರನೆಯ ಭಾಗದ ಹೊತ್ತಿನಲ್ಲಿ ನ್ಯಾಯದಿಂದ ಯಾವುದಾದರೂ ಸ್ವಲ್ಪವನ್ನು ಸಂಪಾದಿಸಬೇಕು.

೩೨. ಶರೀರಕ್ಕೆ ಕಷ್ಟವಾಗದ ರೀತಿಯಲ್ಲಿ ತಾನಾಗಿಯೇ ಯಾವುದಾದರೂ ಲಾಭದಾಯಕವಾಗಿ ಸಿಕ್ಕುವ ಪಕ್ಷದಲ್ಲಿ ಸಂಪಾದಿಸಿಕೊಳ್ಳಬೇಕು. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳಲ್ಲಿ, ಯಾಜನ, ಅಧ್ಯಾಪನ, ಪ್ರತಿಗ್ರಹಗಳು ಮೂರೂ ಜೀವನಕ್ಕೋಸ್ಕರವಿರತಕ್ಕ ಕರ್ಮಗಳು.

೩೩. ಯಾಗ ಮಾಡಿಸುವುದು, ಅಧ್ಯಯನ ಹೇಳಿಕೊಡುವುದು ಯೋಗ್ಯರಾದವರಿಂದ ದಾನ ತೆಗೆದುಕೊಳ್ಳುವುದು ಜೀವನಕ್ಕೆ ವಿಹಿತವಾಗಿವೆ. ಅನಂತರ ಹಗಲಿನ ನಾಲ್ಕನೆಯ ಭಾಗದಲ್ಲಿ ಮತ್ತೆ ಸ್ನಾನವನ್ನು ಮಾಡಬೇಕು.

೩೪. ದರ್ಭೆಯನ್ನು ಹಾಕಿ ಆಸನಮಾಡಿ ಕುಳಿತುಕೊಂಡು ಕೈಯ್ಯಲ್ಲಿ ದರ್ಭೆಯನ್ನು ಹಿಡಿದುಕೊಂಡು ಬೊಗಸೆ ಮಾಡಿಕೊಂಡು ಬ್ರಹ್ಮಯಜ್ಞಕ್ಕೋಸ್ಕರ ಕೈಲಾದಷ್ಟು ಅಧ್ಯಯನವನ್ನು ಹೇಳಬೇಕು.

೩೫. ಋಗ್ವೇದ, ಅಥರ್ವವೇದ, ಸಾಮವೇದ, ಯಜುರ್ವೇದಗಳ ಮಂತ್ರಗಳನ್ನು ಹೇಳಬೇಕು. ಈ ರೀತಿಯಾಗಿ ಜಪಿಸಿದಮೇಲೆ ದೇವತರ್ಪಣ, ಪಿತೃತರ್ಪಣಗಳನ್ನು ಮಾಡಬೇಕು.

ಉಪವೀತೀ ನಿವೀತೀ ಚ ಪ್ರಾಚೀನಾವೀತವಾಂಸ್ತಥಾ |
ತತ್ತ್ರಿತೀರ್ಥೇನ ಸರ್ವೇಷಾಂ ಭೂತಾನಾಂ ಜಲದೋ ಭವೇತ್ || ೩೬ ||

ಆಪೋಹಿಷ್ಠೇತಿ ಮಂತ್ರೇಣ ಸಂಪ್ರೋಕ್ಷ್ಯ ನಿಜಮೂರ್ಧನಿ |
ಆಪಃ ಪುನಂತು ವಿಪ್ರೇಣ ಸಂಮಂತ್ರಿತಂ ಪ್ರಾಶಯೇಜ್ಜಲಂ || ೩೭ ||

ಕರಾಭ್ಯಾಂ ತೋಯಮಾದಾಯ ಸಾವಿತ್ರ್ಯಾ ಚಾಭಿಮಂತ್ರಿತಂ |
ಅರ್ಘ್ಯಮೇಕಂ ರವೇರ್ದತ್ವಾ ಸಾವಿತ್ರೀಂ ಚ ಜಪೇತ್ತತಃ || ೩೮ ||

ಸಾವಿತ್ರ್ಯಾ ತು ಯಥಾಶಕ್ತಿ ಉಪಸ್ಥಾಯ ದಿವಾಕರಂ |
ಪ್ರದಕ್ಷಿಣಂ ಸಮಾವೃತ್ಯ ನಮಸ್ಕೃತ್ಯೋಪವಿಶ್ಯ ಚ || ೩೯ ||

ಜಲದೇವಾನ್ನಮಸ್ಕೃತ್ಯ ಗೃಹಂ ಗತ್ವಾ ಸಮಾಹಿತಃ |
ಕುರ್ವೀತ ದೇವಪೂಜಾಂ ಚ ಜಪಯಜ್ಞಾದನಂತರಂ || ೪೦ ||

---

೩೬. ಉಪವೀತವನ್ನು ಹಾಕಿಕೊಂಡು ದೇವತೆಗಳಿಗೂ, ಪ್ರಾಚೀನಾವೀತವನ್ನು ಹಾಕಿಕೊಂಡು ಋಷಿಗಳಿಗೂ ತರ್ಪಣವನ್ನು ಕೊಡಬೇಕು. ತರ್ಪಣವನ್ನು ಕೊಡುವಾಗ ದೈವತೀರ್ಥದಿಂದ ದೇವತೆಗಳಿಗೂ, ಬ್ರಹ್ಮತೀರ್ಥದಿಂದ ಋಷಿಗಳಿಗೂ, ಪಿತೃತೀರ್ಥದಿಂದ ಪಿತೃಗಳಿಗೂ ತರ್ಪಣವನ್ನು ಕೊಡಬೇಕು.

೩೭. "ಆಪೋಹಿಷ್ಠಾಮಯೋಭುವಃ" ಎಂಬ ಮಂತ್ರವನ್ನು ಪೂರ್ತಿಯಾಗಿ ಹೇಳಿಕೊಂಡು ತಲೆಯಮೇಲೆ ಪ್ರೋಕ್ಷಿಸಿಕೊಳ್ಳಬೇಕು. ಕೈಯ್ಯಲ್ಲಿ ನೀರನ್ನು ಹಿಡಿದುಕೊಂಡು "ಆಪಃಪುನಂತು" ಎಂಬ ಮಂತ್ರವನ್ನು ಹೇಳಿ ಆ ನೀರನ್ನು ಕುಡಿದುಬಿಡಬೇಕು.

೩೮. ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಸಾವಿತ್ರಿಯಿಂದ ಅಭಿಮಂತ್ರಿಸಿ ಸೂರ್ಯನಿಗೆ ಒಂದು ಅರ್ಘ್ಯವನ್ನು ಕೊಡಬೇಕು. ಅನಂತರ ಸಾವಿತ್ರಿಯನ್ನು ಜಪಿಸಬೇಕು.

೩೯-೪೦. ಸಾವಿತ್ರಿಯಿಂದ ಶಕ್ತಿಯಿರುವಮಟ್ಟಿಗೆ ಸೂರ್ಯನನ್ನು ಸೇವಿಸಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಕುಳಿತುಕೊಳ್ಳಬೇಕು. ಅನಂತರ ನೀರಿನ ದೇವತೆಗಳಿಗೆ ನಮಸ್ಕಾರ ಮಾಡಬೇಕು. ಒಂದೇ ಮನಸ್ಸಿನಿಂದ ಜಪಗಳನ್ನು ಪೂರೈಸಿಕೊಂಡು ದೇವತಾರ್ಚನೆಯನ್ನು ಮಾಡಬೇಕು.

ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ ।
ಬ್ರಾಹ್ಮಣಃ ಪಂಚದೇವಾಂಶ್ಚ ಪೂಜಯೇತ್ತತ್ಪರಾಯಣಃ ॥ ೪೧ ॥

ತತಃ ಪಂಚಮಹಾಯಜ್ಞಾನ್ ಕುರ್ಯಾದ್ಭೂತಬಲಿಂ ಪುನಃ ।
ಕಾಕಶ್ವಾನಬಲಿಂಚೈವ ದದ್ಯಾನ್ಮಂತ್ರಂ ಸಮುಚ್ಚರನ್ ॥ ೪೨ ॥

ದೇವಾ ಮನುಷ್ಯಾಃ ಪಶವೋ ವಯಾಂಸಿ
ಸಿದ್ಧಾಶ್ಚ ಯಕ್ಷೋರಗ ದೈತ್ಯಸಂಘಾಃ ।
ಪ್ರೇತಾಃ ಪಿಶಾಚಾ ಉರಗಾಃ ಸಮಸ್ತಾ
ಯೇಚಾನ್ನಮಿಚ್ಛಂತಿ ಮಯಾತ್ರ ದತ್ತಂ ॥ ೪೩ ॥

ಇತ್ಯುಕ್ತ್ವಾ ಸರ್ವಭೂತೇಭ್ಯೋ ಬಲಿಂ ದದ್ಯಾತ್ ಪುನಃ ಪೃಥಕ್ ।
ತತ ಆಚಮ್ಯ ವಿಧಿವತ್ ಶ್ರದ್ಧಯಾ ಪ್ರೀತಮಾನಸಃ ॥ ೪೪ ॥

ದ್ವಾರಾವಲೋಕನಂ ಕುರ್ಯಾದ ತಿಥಿಗ್ರಹಣಾಯ ಚ ।
ಗೋದೋಹಕಮಾತ್ರಂ ತು ಭಾಗ್ಯಾದ್ಪ್ರಾಪ್ತೋತಿಥಿರ್ಯದಿ ॥ ೪೫ ॥

---

೪೧. ಬ್ರಾಹ್ಮಣನು ಆದಿತ್ಯ, ಅಂಬಿಕೆ, ವಿಷ್ಣು, ಗಣನಾಥ, ಮಹೇಶ್ವರರನ್ನು ಪೂಜಿಸಬೇಕು. ಆದರಲ್ಲಿ ಆಸಕ್ತನಾಗಿರಬೇಕು.

೪೨. ಅನಂತರ ಪಂಚಮಹಾಯಜ್ಞಗಳನ್ನು ಮಾಡುತ್ತ ಭೂತಬಲಿಯನ್ನು, ಕಾಕಬಲಿ, ಶ್ವಾನಬಲಿಗಳನ್ನು ಆಯಾಯಾ ಮಂತ್ರಗಳನ್ನು ಹೇಳುತ್ತ ಮಾಡಬೇಕು.

೪೩. ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಸಿದ್ಧರು, ಯಕ್ಷರು, ಉರಗರು, ದೈತ್ಯರು, ಪ್ರೇತಗಳು, ಪಿಶಾಚಗಳು, ಇವರೂ ಇನ್ನೂ ಯಾರು ನನ್ನಿಂದ ಅನ್ನವನ್ನು ಅಪೇಕ್ಷಿಸುತ್ತಾರೋ ಅವರೆಲ್ಲರಿಗೂ ಈ ಅನ್ನವನ್ನು ಹಾಕಿದ್ದೇನೆ. ಎಂದು ಹೇಳಬೇಕು.

೪೪-೪೬. ಈ ಮಂತ್ರವನ್ನು ಹೇಳಿ ಎಲ್ಲಾ ಭೂತಗಳಿಗೂ ಬೇರೆ ಬೇರೆಯಾಗಿ ಬಲಿಯನ್ನು ಹಾಕಬೇಕು. ಅನಂತರ ಆಚಮನ ಮಾಡಿ ಸಂತೋಷದಿಂದ ಬಾಗಿಲಿನ ಬಳಿಗೆ ಬಂದು ಅತಿಥಿಗಳು ಬಂದಿದ್ದಾರೆಯೇ ? ಅಥವಾ ಬರುವರೇ ? ಎಂದು ನೋಡಬೇಕು. ಹಾಗೆ ಅತಿಥಿಯನ್ನು ನಿರೀಕ್ಷಿಸುವಾಗ್ಗೆ ಬಂದು ಹಸುವಿನ ಹಾಲನ್ನು ಕರೆಯುವ ಹೊತ್ತಿನಷ್ಟು ಹೊತ್ತಿನವರೆಗೆ ನಿರೀಕ್ಷಿಸಬೇಕು. ಒಂದುವೇಳೆ ಇವನ ಪುಣ್ಯವಿಶೇಷದಿಂದ ಆ ಹೊತ್ತಿನಲ್ಲಿ

**ದೇವವತ್ಪೂಜಯೇದ್ಭಕ್ತ್ಯಾ ಯಥಾಶಕ್ತ್ಯಾನ್ನಪಾನತಃ ।**
**ಭಿಕ್ಷಾಂ ಚ ಭಿಕ್ಷವೇಪದ್ಯಾದ್ವಿಧಿವದ್ಬ್ರಹ್ಮಚಾರಿಣೇ ॥ ೪೬ ॥**

**ಅಕಲ್ಪಿತಾನ್ನಾಮುದ್ಧೃತ್ಯ ಸರ್ವವ್ಯಂಜನ ಸಂಯುತಾಂ ।**
**ಯತಿಶ್ಚ ಬ್ರಹ್ಮಚಾರೀ ಚ ಪಕ್ವಾನ್ನಸ್ವಾಮಿನಾವುಭೌ ॥ ೪೭ ॥**

**ತಯೋರನ್ನಮದತ್ವೈವ ಭುಕ್ತ್ವಾ ಚಾಂದ್ರಾಯಣಂ ಚರೇತ್ ।**
**ಯತಿಹಸ್ತೇ ಜಲಂ ದದ್ಯಾದ್ಭೈಕ್ಷ್ಯಂ ದದ್ಯಾತ್ಪುನರ್ಜಲಂ ॥ ೪೮ ॥**

**ತದ್ಭೈಕ್ಷ್ಯಂ ಮೇರುಣಾ ತುಲ್ಯಂ ತಜ್ಜಲಂ ಸಾಗರೋಪಮಂ ।**
**ಸತ್ಕೃತ್ಯ ಭಿಕ್ಷವೇ ಭಿಕ್ಷಾಂ ಯಃ ಪ್ರಯಚ್ಛತಿ ಮಾನವಃ ॥ ೪೯ ॥**

**ಗೋಪ್ರದಾನ ಸಮಂ ಪುಣ್ಯಮಿತ್ಯಾಹ ಭಗವಾನ್ಯಮಃ ।**
**ಮಾತಾ ಪಿತಾ ಗುರುರ್ಬಂಧುರ್ಗರ್ಭಿಣೀ ವೃದ್ಧಬಾಲಕಾಃ ॥ ೫೦ ॥**

---

ಅತಿಥಿಯು ಬಂದರೆ ಅವನನ್ನು ದೇವರನ್ನು ಪೂಜಿಸುವಂತೆ ಭಕ್ತಿಯಿಂದ ಪೂಜಿಸಬೇಕು. ಶಕ್ತಿಯನ್ನು ಮೀರದಂತೆ ಅನ್ನಪಾನಗಳನ್ನು ಹಾಕಿ ತೃಪ್ತಿಪಡಿಸಬೇಕು. ಆಗ ಭಿಕ್ಷುಕನು ಅಂದರೆ ಭಿಕ್ಷಾನ್ನದವನು ಯಾವನಾದರೂ ಬಂದರೆ ಭಿಕ್ಷವನ್ನು ಹಾಕಬೇಕು. ಬ್ರಹ್ಮಚಾರಿಯು ಭಿಕ್ಷಾನ್ನಕ್ಕೆ ಬಂದರೆ ಕ್ರಮವಾಗಿ ಅವನಿಗೆ ಎಲ್ಲವನ್ನು ಹಾಕಬೇಕು.

೪೭-೫೦. ತಾನು ಉಪಯೋಗಿಸದೆ ಇರುವ ಅನ್ನದಿಂದ ಅನ್ನವನ್ನು ತೆಗೆದು ಆ ಯತಿಗೂ, ಬ್ರಹ್ಮಚಾರಿಗೂ ಹಾಕಬೇಕು. ಯತಿಯೂ, ಬ್ರಹ್ಮಚಾರಿಯೂ ನಾವು ಮಾಡಿರುವ ಅಡಿಗೆಗೆ ಸ್ವಾಮಿಯಂತೆ ಭಾಗಿಗಳು. ಅವರಿಗೆ ಅನ್ನವನ್ನು ಹಾಕದೆ ಊಟಮಾಡಿದರೆ ಚಾಂದ್ರಾಯಣ ಕೃಚ್ಛ್ರವನ್ನು ಆಚರಿಸಬೇಕು. ಯತಿಯ ಕೈಗೆ ಮೊದಲು ನೀರನ್ನು ಹಾಕಿ ಅನಂತರ ಭಿಕ್ಷವನ್ನು ಹಾಕಬೇಕು. ಅನಂತರ ಮತ್ತೆ ನೀರನ್ನು ಹಾಕಬೇಕು. ಎಂದರೆ ಮೊದಲು ಊಟಕ್ಕೆ ಕುಳಿತಾಗ ಅಪೋಶನವನ್ನು ಹಾಕಿ ಊಟವಾದಮೇಲೆ ಉತ್ತರಾಪೋಶನವನ್ನು ಹಾಕಬೇಕು. ಆ ಭಿಕ್ಷವು ಮೇರುಪರ್ವತಕ್ಕೆ ಸಮವಾಗಿ ಬೆಳೆದು, ಆ ನೀರು ಸಮುದ್ರದಷ್ಟು ಆಗಿ ಅವು ಮುಗಿಯುವವರೆಗೂ ಇವನಿಗೆ ತೃಪ್ತಿಯನ್ನು ಉಂಟುಮಾಡುತ್ತವೆ. ಯತಿಗೆ ಸತ್ಕಾರಮಾಡಿ ಭಿಕ್ಷೆಯನ್ನು ಕೊಟ್ಟರೆ ಆ ಭಿಕ್ಷೆಯು ಒಂದು ಗೋದಾನ ಮಾಡಿದ ಫಲವನ್ನು ಕೊಡುತ್ತದೆ. ಎಂಬುದಾಗಿ ಯಮನು ಹೇಳಿರುವನು. ತಾಯಿ, ತಂದೆ, ಗುರು, ಬಂಧು, ಗರ್ಭಿಣಿ, ವೃದ್ಧ,

**ಅತಿಥಿಷ್ವಾಗತೇಷ್ವೇಷು ಭುಕ್ತವತ್ಸು ತತೋ ಗೃಹೀ |**
**ಉಪಲಿಪ್ತೇ ಶುಚೌ ದೇಶೇ ಪಾದೌ ಪ್ರಕ್ಷಾಲ್ಯ ವಾಗ್ಯತಃ || ೫೧ ||**

**ಪಂಚಾರ್ದ್ರೋ ಭೋಜನಂ ಕುರ್ಯಾತ್ ಪ್ರಾಙ್ಮುಖೋ ಮೌನಮಾಸ್ಥಿತಃ |**
**ಪ್ರಶಸ್ತ ಶುದ್ಧಪಾತ್ರೇಷು ಭುಂಜೀತಾನ್ನಮಕುತ್ಸಯನ್ || ೫೨ ||**

**ನೈಕವಾಸಾಸ್ತಥಾಶ್ನೀಯಾತ್ ಭಿನ್ನಪಾತ್ರೇಷು ಮಾನವಃ |**
**ಏಕ ಏವ ತು ಯೋ ಭುಂಕ್ತೇ ವಿಮಲೇ ಕಾಂಸ್ಯ ಭಾಜನೇ || ೫೩ ||**

**ಚತ್ವಾರಿ ತಸ್ಯ ವರ್ಧಂತೇ ಅಯುಃ ಪ್ರಜ್ಞಾ ಯಶೋ ಬಲಂ |**
**ದದ್ಯಾದ್ ದೇಯಂ ಘೃತಾನ್ನಂ ಚ ಸಮಸ್ತವ್ಯಂಜನಾನಿ ಚ || ೫೪ ||**

---

ಬಾಲಕ, ಅತಿಥಿಗಳು, ಅಭ್ಯಾಗತರು ಅವರು ಊಟಮಾಡಿದ ಮೇಲೆ ಗೃಹಸ್ಥನು ಅವರು ಊಟಮಾಡಿದ ಜಾಗವನ್ನು ಗೋಮಯದಿಂದ ಶುದ್ಧಿಮಾಡಿಸಿ, ಕಾಲನ್ನು ತೊಳೆದುಕೊಂಡು ಆ ಜಾಗದಲ್ಲಿ ಊಟಮಾಡಬೇಕು. ಕೈಗಳು ಎರಡು ಕಾಲುಗಳು ಎರಡು ಬಾಯಿ ಒಂದು ಇವನ್ನು ನೀರಿನಿಂದ ತೊಳೆದು ಒದ್ದೆಮಾಡಿಕೊಂಡು ಊಟಮಾಡಬೇಕು ಊಟಮಾಡುವಾಗ ಪೂರ್ವಕ್ಕೆ ಮುಖಮಾಡಿಕೊಂಡಿರಬೇಕು. ಮಾತನಾಡಬಾರದು. ತಾನು ಊಟಮಾಡುವ ಪಾತ್ರೆಯು ಎಲೆಯಾದರೆ ಎಲೆಯು ಶುದ್ಧವಾಗಿರಬೇಕು. ಅನ್ನವನ್ನು ಹಳಿಯಬಾರದು.

೫೩-೫೫. ಊಟಮಾಡುವಾಗ ಒಂದೇ ಬಟ್ಟೆಯನ್ನು ಧರಿಸಿರಬಾರದು. ಎಂದರೆ ಒಂದು ಬಟ್ಟೆಯನ್ನು ಉಟ್ಟುಕೊಂಡು ಮತ್ತೊಂದನ್ನು ಹೊದ್ದಿರಬೇಕು. ಅದೇ ರೀತಿಯಾಗಿ ವ್ಯತ್ಯಾಸವಾದ ಪಾತ್ರೆಗಳಲ್ಲಿ ಊಟಮಾಡಬಾರದು. ಎಂದರೆ ಬೆಳ್ಳಿಯ ತಟ್ಟೆ, ಕಂಚಿನ ಬಟ್ಟಲು, ಅಥವಾ ಕಂಚಿನ ತಟ್ಟೆ, ಬೆಳ್ಳಿಯ ಬಟ್ಟಲು, ಹೀಗಿರಬಾರದು. ಬಾಳೆ ಎಲೆಯಲ್ಲಿ ಊಟಮಾಡಿದರೆ ಮುತ್ತುಗದ ಎಲೆಯ ದೊನ್ನೆಯನ್ನಾಗಲೀ, ಮುತ್ತುಗದ ಎಲೆಯಲ್ಲಿ ಊಟಮಾಡಿದರೆ ಬಾಳೆ ಎಲೆ ದೊನ್ನೆಯನ್ನಾಗಲೀ ಹಾಕಿಕೊಳ್ಳಬಾರದು. ಕಂಚಿನ ಪಾತ್ರೆಯನ್ನು ಹಾಕಿಕೊಂಡು ಆ ಪಾತ್ರೆಯಲ್ಲಿ ತಾನೊಬ್ಬನೇ ಊಟಮಾಡಿದರೆ ಅವನಿಗೆ ಆಯುಸ್ಸು, ಪ್ರಜ್ಞೆ, ಯಶಸ್ಸು, ಬಲ, ಈ ನಾಲ್ಕೂ ಹೆಚ್ಚುತ್ತವೆ. ತಾನು ಊಟಮಾಡುವಾಗ ಮೊದಲನೆಯ ಅನ್ನದ ಭಾಗವನ್ನು ಎಂದರೆ ಮೊದಲು

ಭೋಜನಾತ್ಕಿಂಚಿದನ್ನಾಗ್ರ್ಯಂ ಧರ್ಮರಾಜಾಯ ವೈ ಬಲಿಂ ।
ದತ್ವಾ ತು ಚಿತ್ರಗುಪ್ತಾಯ ಭೂತೇಭ್ಯ ಇದಮುಚ್ಚರೇತ್ ॥ ೫೫ ॥

ಯತ್ರ ಕ್ವಚನ ಸಂಸ್ಥಾನಾಂ ಕ್ಷುತ್ತೃಷ್ಣೋಪಹತಾತ್ಮನಾಂ ।
ಭೂತಾನಾಂ ತೃಪ್ತಯೇಕ್ಷಯ್ಯಮಿದಮಸ್ತು ಯಥಾಸುಖಂ ॥ ೫೬ ॥

ಸ್ವಾಹಾನ್ತಾಃ ಪ್ರಣವಾದ್ಯಾಶ್ಚ ನಾಮ್ನಾ ಮಂತ್ರಾಸ್ತು ವಾಯವಾಃ ।
ಜಿಹ್ವ ಯಾ ಚಗ್ರಸೇದನ್ನಂ ದಶನೇನ ನ ದಂಶಯೇತ್ ॥ ೫೭ ॥

ಅಶ್ನೀಯಾತ್ತನ್ಮನಾ ಭೂತ್ವಾ ಪೂರ್ವಂ ತು ಮಧುರಂ ರಸಂ ।
ಲವಣಾಮ್ಲೌ ತಥಾ ಮಧ್ಯೇ ಕಟುತಿಕ್ತೌ ತತಃ ಪರಂ ॥ ೫೮ ॥

---

ಸ್ವಲ್ಪ ಭಾಗವನ್ನು ತೆಗೆದು ಧರ್ಮರಾಜನಿಗೆ ಬಲಿಯನ್ನು ಕೊಡಬೇಕು ಅನಂತರ. ಚಿತ್ರಗುಪ್ತನಿಗೆ ಕೊಡಬೇಕು. ಅನಂತರ ಭೂತಗಳಿಗೆ ಅನ್ನವನ್ನು ಕೊಟ್ಟು ಈ ಮಂತ್ರವನ್ನು ಹೇಳಬೇಕು.

೫೬. ಹಸಿವು ಬಾಯಾರಿಕೆಗಳಿಂದ ಕೂಡಿದ ಭೂತಗಳು ಎಲ್ಲಿಯಾದರೂ ಇರಲಿ, ಅವರ ತೃಪ್ತಿಗೋಸ್ಕರವೂ ಸುಖವಾಗುವಂತೆಯೂ ಇದರಿಂದಾಗಲಿ ಎಂದು ಹೇಳಬೇಕು.

೫೭. ವಾಯುಗಳು ಎಂದರೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳು. ಇವುಗಳನ್ನು ಓಂ ಎಂದು ಮೊದಲು ಮಾಡಿ ಸ್ವಾಹಾ ಎಂದು ಕೊನೆಗಾಣಿಸಿ ಅನ್ನವನ್ನು ಬಾಯಿಗೆ ಹಾಕಿಕೊಂಡು ತಿನ್ನಬೇಕು. ಎಂದರೆ ಓಂ ಪ್ರಾಣಾಯಸ್ವಾಹಾ, ಓಂ ಅಪಾನಾಯಸ್ವಾಹಾ, ಓಂ ವ್ಯಾನಾಯಸ್ವಾಹಾ, ಓಂ ಉದಾನಾಯಸ್ವಾಹಾ, ಓಂ ಸಮಾನಾಯಸ್ವಾಹಾ ಎಂದು ಹೇಳಿ ಅನ್ನವನ್ನು ಬಾಯಿಗೆ ಹಾಕಿಕೊಳ್ಳಬೇಕು. ಆ ಅನ್ನವನ್ನು ನಾಲಿಗೆಯಿಂದ ಸರಿಮಾಡಿಕೊಳ್ಳಬೇಕೆ ಹೊರತು ಹಲ್ಲಿನಿಂದ ಅಗಿಯಬಾರದು

೫೮. ಈ ಊಟದಲ್ಲಿಯೇ ಮನಸ್ಸಿಟ್ಟುಕೊಂಡು ಊಟಮಾಡಬೇಕು. ಮೊದಲು ಮಧುರ ರಸವುಳ್ಳ ಪಾಯಸವೇ ಮುಂತಾದುವನ್ನು ಊಟಮಾಡಬೇಕು. ಮಧ್ಯದಲ್ಲಿ ಉಪ್ಪು, ಹುಳಿಯ ಪದಾರ್ಥಗಳನ್ನು ತಿನ್ನಬೇಕು. ಕಹಿ, ಒಗರು ಪದಾರ್ಥಗಳನ್ನು ಅನಂತರ ತಿನ್ನಬೇಕು.

ಪ್ರಾಗ್ದ್ರವಂ ಪುರುಷೋಶ್ನೀಯಾತ್ ಮಧ್ಯೇ ತು ಕಠಿನಾಶನಂ ।
ಅಂತೇ ಪುನರ್ದ್ರವಾಶೀ ತು ಬಲಾರೋಗ್ಯೇ ನ ಮುಂಚತಿ ॥ ೫೯ ॥

ಅಷ್ಟೌ ಗ್ರಾಸಾ ಮುನೇರ್ಭಕ್ಷ್ಯಾಃ ಷೋಡಶಾರಣ್ಯವಾಸಿನಃ ।
ದ್ವಾತ್ರಿಂಶಚ್ಚ ಗೃಹಸ್ಥಸ್ಯ ಅಮಿತಂ ಬ್ರಹ್ಮಚಾರಿಣಃ ॥ ೬೦ ॥

ನಾದ್ಯಾಚ್ಛಾಸ್ತ್ರ ವಿರುದ್ಧಂ ತು ಭಕ್ಷ್ಯಭೋಜ್ಯಾದಿಕಂ ದ್ವಿಜಃ ।
ಅಭೋಜ್ಯಂ ಪ್ರಾಹುರಾಹಾರಂ ಶುಷ್ಕಂ ಪರ್ಯುಷಿತಂ ತಥಾ ॥ ೬೧ ॥

ಭುಕ್ತ್ವಾಚಮ್ಯ ಯಥೋಕ್ತೇನ ವಿಧಾನೇನ ಸಮಾಹಿತಃ ।
ಶೋಧಯೇನ್ಮುಖಹಸ್ತೌ ಚ ಮೃದದ್ಭಿರ್ಘರ್ಷಣೇನ ಚ ॥ ೬೨ ॥

---

೫೯. ಗಂಡಸಾದವನು ಮೊದಲು ನೀರಾಗಿರುವ ಸಾರು ಮುಂತಾದುವನ್ನು ಊಟ ಮಾಡಬೇಕು ಮಧ್ಯದಲ್ಲಿ ಕಠಿಣವಾಗಿರುವ ಕಾಯಿಪಲ್ಯಗಳು, ಪೂರಿ ಮುಂತಾದ ಭಕ್ಷ್ಯಗಳನ್ನು ತಿನ್ನಬೇಕು. ಅನಂತರ ಮತ್ತೆ ನೀರಾಗಿರುವ ಪದಾರ್ಥವನ್ನು ತಿನ್ನಬೇಕು. ಹೀಗೆ ಊಟಮಾಡಿದರೆ ಬಲವೂ, ಆರೋಗ್ಯವೂ ಅವನನ್ನು ಬಿಡುವುದಿಲ್ಲ.

೬೦. ಮುನಿಯು ಎಂಟು ಗ್ರಾಸಗಳನ್ನೂ, ಅರಣ್ಯದಲ್ಲಿರುವವನು ಎಂದರೆ ವಾನಪ್ರಸ್ಥನು ಹದಿನಾರು ಗ್ರಾಸಗಳನ್ನೂ, ಗೃಹಸ್ಥನು ಮೂವತ್ತೆರಡು ಗ್ರಾಸಗಳನ್ನೂ, ಬಹ್ಮಚಾರಿಯು ತನಗೆ ಬೇಕಾದಷ್ಟು ಗ್ರಾಸಗಳನ್ನೂ ತಿನ್ನಬೇಕು.

೬೧. ಶಾಸ್ತ್ರಕ್ಕೆ ವಿರೋಧವಾಗಿ ಭಕ್ಷ್ಯವನ್ನಾಗಲೀ ಭೋಜ್ಯವನ್ನಾಗಲೀ, ಬ್ರಾಹ್ಮಣನು ತಿನ್ನಬಾರದು. ಆರ್ದ್ರವಲ್ಲದ ಎಂದರೆ ಒಣಗಿರುವ ಮತ್ತು ಹಳಸಿದ ಪದಾರ್ಥಗಳನ್ನು ತಿನ್ನಬಾರದು.

೬೨. ಊಟಮಾಡಿದ ಮೇಲೆ ಸಮಾಧಾನವಾಗಿದ್ದುಕೊಂಡು ಆಚಮನ ಮಾಡಬೇಕು. ಕೈ ಬಾಯಿಗಳನ್ನು ತೊಳೆದುಕೊಳ್ಳುವಾಗ ನೀರನ್ನೂ, ಮಣ್ಣನ್ನೂ ಹಾಕಿ ತಿಕ್ಕಿ ತೊಳೆಯಬೇಕು.

ಆಚಮ್ಯ ಚ ತತಃ ಕುರ್ಯಾದ್ದನ್ತಾನ್ತರವಿಶೋಧನಂ ।
ಆಚಮ್ಯ ಪಾತ್ರಮುತ್ಸಾರ್ಯ ಕಿಂಚಿದಾರ್ದ್ರೇಣ ಪಾಣಿನಾ ॥ ೬೩ ॥

ಮುಖಾತ್ಪ್ರಾಣಾ ಸಮಾಲಭ್ಯ ನಾಭಿಂ ಪಾಣಿತಲೇನ ಚ ।
ಶುದ್ಧಪ್ರಶಾಂತಚಿತ್ತಸ್ತು ಕೃತಾಸನ ಪರಿಗ್ರಹಃ ॥ ೬೪ ॥

ಅಭೀಷ್ಟದೇವತಾನಾಂ ಚ ಕುರ್ವೀತ ಸ್ಮರಣಂ ತತಃ ।
ಭೂಯೋಽಪ್ಯಾಚಮ್ಯ ಕರ್ತವ್ಯಂ ತತಸ್ತಾಂಬೂಲ ಭಕ್ಷಣಂ ॥ ೬೫ ॥

ಭುಕ್ತ್ವೋಪವಿಷ್ಟೋ ವಿಶ್ರಾನ್ತೋ ಬ್ರಹ್ಮ ಕಿಂಚಿದ್ವಿಚಾರಯೇತ್ ।
ಸಚ್ಛಾಸ್ತ್ರಾದಿ ವಿನೋದೇನ ಸನ್ಮಾರ್ಗಾದ್ಯವಿರೋಧಿನಾ ॥ ೬೬ ॥

---

೬೩-೬೪. ಆಮೇಲೆ ಆಚಮನವನ್ನು ಮಾಡಬೇಕು. ಆ ಮೇಲೆ ಹಲ್ಲಿನ ಸಂದಿಯಲ್ಲಿ ಸಿಕ್ಕಿಕೊಂಡಿರುವ ಚೂರುಗಳನ್ನು ಕಡ್ಡಿಯಿಂದ ಕುಕ್ಕಿ ತೆಗೆಯಬೇಕು. ಅನಂತರ ಆಚಮನ ಮಾಡಬೇಕು. ಅನಂತರ ನೀರಿನ ಪಾತ್ರೆಯನ್ನು ದೂರ ವಾಗಿಡಬೇಕು. ಕೈಯ್ಯನ್ನು ಸ್ವಲ್ಪ ಒದ್ದೆ ಮಾಡಿಕೊಳ್ಳಬೇಕು. ಬಾಯಲ್ಲಿಯೂ, ಮೂಗಿನಲ್ಲಿಯೂ ಉಸಿರನ್ನು ಬಿಡದಂತೆ ತಡೆದುಕೊಳ್ಳಬೇಕು. ಹೊಕ್ಕಳನ್ನು ಅಂಗೈಯಿಂದ ಅಮುಕಿಕೊಳ್ಳಬೇಕು. ಶುದ್ಧವಾಗಿ ಶಾನ್ತವಾದ ಮನಸ್ಸಿನಿಂದ ಆಸನದ ಮೇಲೆ ಕುಳಿತುಕೊಂಡು ಹೀಗೆ ಮಾಡಬೇಕು.

೬೫. ಅನಂತರ ಆಸನದ ಮೇಲೆ ಸರಿಯಾಗಿ ಕುಳಿತುಕೊಂಡು ತನ್ನ ಇಷ್ಟದೇವತಾಸ್ಮರಣೆಯನ್ನು ಕ್ಷಣಕಾಲ ಮಾಡಬೇಕು. ಮತ್ತೆ ಆಚಮನ ಮಾಡಿ ತಾಂಬೂಲವನ್ನು ಹಾಕಿಕೊಳ್ಳಬೇಕು.

೬೬-೬೭. ಊಟಮಾಡಿ ಹೀಗೆ ಕುಳಿತುಕೊಂಡು ವಿಶ್ರಮಿಸಿಕೊಂಡು ಬ್ರಹ್ಮನ ವಿಚಾರ ಎಂದರೆ ಆತ್ಮದ ವಿಚಾರವನ್ನು ಸ್ವಲ್ಪ ಮಾಡಬೇಕು. ಸತ್ಪುರುಷರ ಮಾರ್ಗವನ್ನು ಮೀರದಂತೆ ಒಳ್ಳೆಯ ಶಾಸ್ತ್ರಾದಿಗಳನ್ನು ನೋಡುತ್ತ

ಇತಿಹಾಸಪುರಾಣಾಭ್ಯಾಂ ಷಷ್ಠಸಪ್ತಮಕೌ ನಯೇತ್ ।
ಅಷ್ಟಮೇ ಲೋಕಯಾತ್ರಾ ಹಿ ಬಹಿಸ್ಸಂಧ್ಯಾ ತತಃ ಪುನಃ ॥ ೬೭ ॥

ಸೂರ್ಯೇಸ್ತಶಿಖರಂ ಪ್ರಾಪ್ತೇ ಪಾದಶೌಚಕ್ರಿಯಾನ್ವಿತಃ ।
ಬಹಿಸ್ಸಂಧ್ಯಾಮುಪಾಸೀತ ಕುಶಪಾಣಿಸ್ಸಮಾಹಿತಃ ॥ ೬೮ ॥

ಸಾದಿತ್ಯಾಂ ಪಶ್ಚಿಮಾಂ ಸಂಧ್ಯಾಮರ್ಧಾಸ್ತಮಿತಭಾಸ್ಕರಾಂ ।
ಪ್ರಾಣಾನಾಯಮ್ಯ ಸಂಪ್ರೋಕ್ಷ್ಯ ಮಂತ್ರೇಣಾಬ್ದೈವತೇನ ತು ॥ ೬೯ ॥

ಸಾಯಮಗ್ನಿಶ್ಚ ಮೇತ್ಯುಕ್ತ್ವಾ ಪ್ರಾತಃ ಸೂರ್ಯೇತ್ಯಪಃ ಪಿಬೇತ್ ।
ಪ್ರತ್ಯಙ್ಮುಖೋಪವಿಷ್ಟಸ್ತು ವಾಗ್ಯತಸ್ಸುಸಮಾಹಿತಃ ॥ ೭೦ ॥

---

ಇತಿಹಾಸ ಪುರಾಣಗಳನ್ನು ಓದುತ್ತಾ ಅಥವಾ ಕೇಳುತ್ತಾ ಹಗಲಿನ ಆರು ಏಳು ಭಾಗಗಳನ್ನು ಕಳೆಯಬೇಕು. ಮತ್ತೆ ಎಂಟನೆಯ ಯಾಮದಲ್ಲಿ ತನಗೆ ಬೇಕಾದ ಮನೆಗೆಲಸವನ್ನಾಗಲೀ, ಸ್ನೇಹಿತರೊಡನೆ ಇರುವುದಾಗಲೀ, ಬೇಕಾದುದನ್ನು ತರುವುದು ಕೊಡುವುದಾಗಲೀ ಮಾಡಬೇಕು. ಅನಂತರ ಊರಿನಿಂದ ಹೊರಗೆ ಹೋಗಿ ಸಂಧ್ಯಾವಂದನೆಯನ್ನು ಮಾಡಬೇಕು.

೬೮. ಸೂರ್ಯನು ಅಸ್ತಪರ್ವತದ ಶಿಖರಕ್ಕೆ ಹೋದೊಡನೆಯೇ ಕೈಕಾಲುಗಳನ್ನು ತೊಳೆದುಕೊಂಡು ದರ್ಭೆಯ ಪವಿತ್ರವನ್ನು ಹಾಕಿಕೊಂಡು ಒಂದೇ ಮನಸ್ಸಿನಿಂದ ಹೊರಗಡೆಯಲ್ಲಿ ಸಂಧ್ಯಾವಂದನೆಯನ್ನು ಮಾಡಬೇಕು.

೬೯. ಸಾಯಂಕಾಲದ ಸಂಧ್ಯಾವಂದನೆಯನ್ನು ಸೂರ್ಯನು ಅರ್ಧವಾಗಿ ಅಸ್ತವಾಗುವಾಗಲೇ ಮಾಡಬೇಕು. ಆಗ ಪ್ರಾಣಾಯಾಮವಮಾಡಿ ವರುಣದೇವತಾಕವಾದ ಮಂತ್ರಗಳಿಂದ ನೀರನ್ನು ತಲೆಯಮೇಲೆ ಪ್ರೋಕ್ಷಿಸಿಕೊಳ್ಳಬೇಕು.

೭೦-೭೧. ಸಾಯಂಕಾಲದಲ್ಲಿ "ಅಗ್ನಿಶ್ಚಮೆ" ಎಂಬ ಮಂತ್ರವನ್ನು ಹೇಳಿಕೊಂಡೂ, ಪ್ರಾತಃಕಾಲದಲ್ಲಿ "ಸೂರ್ಯಶ್ಚಮೆ" ಎಂಬ ಮಂತ್ರವನ್ನು ಹೇಳಿಕೊಂಡೂ ನೀರನ್ನು ಕುಡಿಯಬೇಕು. ಅನಂತರ ಪಶ್ಚಿಮ ಮುಖವಾಗಿ

**ಪ್ರಣವವ್ಯಾಹೃತಿಯುಕ್ತಾಂ ಗಾಯತ್ರೀಂ ತು ಜಪೇತ್ತತಃ ।**
**ಅಕ್ಷಸೂತ್ರಂ ಸಮಾದಾಯ ಸಮ್ಯಗಾತಾರಕೋದಯಾತ್ ॥ ೭೧ ॥**

**ವಾರುಣೀಭಿಸ್ತದಾದಿತ್ಯಮುಪಸ್ಥಾಯ ಪ್ರದಕ್ಷಿಣಂ ।**
**ಕುರ್ವನ್ ದಿಶೋ ನಮಸ್ಕುರ್ಯಾದ್ದಿಗೀಶಾಂಶ್ಚ ಪೃಥಕ್ ಪೃಥಕ್ ॥ ೭೨ ॥**

**ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಹುತ್ವಾಗ್ನಿಮಶ್ನಿಯಾತ್ತತಃ ।**
**ಭೃತ್ಯೈಃ ಪರಿವೃತೋ ಭೂತ್ವಾ ನಾತಿತೃಪ್ತೋಽಥ ಸಂವಿಶೇತ್ ॥ ೭೩ ॥**

**ಸಾಯಂ ಪ್ರಾತರ್ವೈಶ್ವದೇವಃ ಕರ್ತವ್ಯೋ ಬಲಿಕರ್ಮ ಚ ।**
**ಅನಶ್ನತಾಪಿ ಸತತಮನ್ಯಥಾ ಕಿಲ್ಬಿಷೀ ಭವೇತ್ ॥ ೭೪ ॥**

---

ಕುಳಿತುಕೊಂಡು ಮಾತನಾಡದೆ ಏಕಾಗ್ರತೆಯಿಂದ ಓಂಕಾರ ವ್ಯಾಹೃತಿಗಳನ್ನು ಕೂಡಿಸಿಕೊಂಡು ಗಾಯಿತ್ರಿಯನ್ನು, ತಾವರೆಯ ಮಣಿಯನ್ನು ತೆಗೆದುಕೊಂಡು ಅದರಲ್ಲಿ ನಕ್ಷತ್ರಗಳು ಚೆನ್ನಾಗಿ ಕಾಣುವವರೆಗೂ ಲೆಖ್ಖ ಮಾಡುತ್ತಾ ಜಪಿಸಬೇಕು.

೭೨ ವರುಣ ದೇವತಾಕವಾದ "ಇಯಂ ಮೇ ವರುಣ" ಎಂಬ ಮಂತ್ರದಿಂದ ಸೂರ್ಯನನ್ನು ಪ್ರಾರ್ಥಿಸಿ ದಕ್ಷಿಣೋತ್ತರ ದಿಕ್ಕುಗಳನ್ನು ನೋಡಿ ದಿಕ್ಕಿನ ದೇವತೆಗಳನ್ನು ಬೇರೆ ಬೇರೆಯಾಗಿ ನಮಸ್ಕರಿಸಬೇಕು.

೭೩. ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಿ ಅನಂತರ ಅಗ್ನಿ ಹೋತ್ರವನ್ನು ಮಾಡಿ ಆ ಮೇಲೆ ಸೇವಕರಿಂದ ಕೂಡಿಕೊಂಡು ಊಟಮಾಡ ಬೇಕು. ಸಾಯಂಕಾಲದಲ್ಲಿ ತೃಪ್ತಿಯಾಗಿ ಹೊಟ್ಟೆ ತುಂಬುವಂತೆ ಊಟಮಾಡ ಕೂಡದು. ಸ್ವಲ್ಪ ಕಮ್ಮಿಯಾಗಿರುವಂತೆ ಊಟಮಾಡಬೇಕು. ಅನಂತರ ಕುಳಿತುಕೊಳ್ಳಬೇಕು.

೭೪. ಸಾಯಂಕಾಲಗಳಲ್ಲಿ ವೈಶ್ವದೇವನನ್ನು ಮಾಡಬೇಕು ಬಲಿಯನ್ನು ಹಾಕಬೇಕು. ಊಟಕ್ಕೆ ಮುಂಚೆಯೇ ಇವನ್ನು ಮಾಡಬೇಕು. ಊಟ ಮಾಡಿದರೂ, ಮಾಡದಿದ್ದರೂ ಪಾಪಿಯಾಗುತ್ತಾನೆ.

ಅತಿಥಿಂ ಚಾಗತಂ ತತ್ರ ಸ್ವಶಕ್ತ್ಯಾ ಪೂಜಯೇದ್ಗೃಹೀ ।
ಕೃತಪಾದಾದಿಶೌಚಶ್ಚ ಭುಕ್ತ್ವಾ ಸಾಯಂ ತತೋ ಗೃಹೀ ॥ ೭೫ ॥

ಗಚ್ಛೇಚ್ಛಯ್ಯಾಂ ತತೋ ಮೃದ್ವೀಮುಪಧಾನಸಮನ್ವಿತಂ ।
ಸ್ವಗೃಹೇ ಪ್ರಾಕ್‌ಶಿರಾಶ್ಶೇತೇ ಶ್ವಾಶುರೇ ದಕ್ಷಿಣಾಶಿರಾಃ ॥ ೭೬ ॥

ಪ್ರವಾಸೇ ಪಶ್ಚಿಮಶಿರಾ ನ ಕದಾಚಿದುದಕ್ಶಿರಾಃ ।
ರಾತ್ರಿಸೂಕ್ತಂ ಜಪೇತ್ ಸ್ಮೃತ್ವಾ ದೇವಾಂಶ್ಚ ಸುಖಶಾಯಿನಃ ॥ ೭೭ ॥

ನಮಸ್ಕೃತ್ವಾವ್ಯಯಂ ವಿಷ್ಣುಂ ಸಮಾಧಿಸ್ಥಃ ಸ್ವಪೇನ್ನಿಶಿ ।
ಅಗಸ್ತ್ಯೋ ಮಾಧವಶ್ಚೈವ ಮುಚುಕುಂದೋ ಮಹಾಬಲಃ ॥ ೭೮ ॥

ಕಪಿಲೋ ಮುನಿರಾಸ್ತೀಕಃ ಪಂಚೈತೇ ಸುಖಶಾಯಿನಃ ।
ಮಾಂಗಲ್ಯಪೂರ್ಣಕುಂಭಂ ಚ ಶಿರಸ್ಥಾನೇ ನಿಧಾಯ ಚ ॥ ೭೯ ॥

ವೈದಿಕೈರ್ಗಾರುಡೈರ್ಮಂತ್ರೈ ರಕ್ಷಾಂ ಕೃತ್ವಾ ಸ್ವಪೇತ್ತತಃ ।
ಋತುಕಾಲಾಭಿ ಗಾಮೀಸ್ಯಾತ್ಸ್ವದಾರನಿರತಸ್ಸದಾ ॥ ೮೦ ॥

---

೭೫-೮೧. ಗೃಹಸ್ಥನಾದವನು ರಾತ್ರಿಯ ಹೊತ್ತಿನಲ್ಲೂ, ಕೂಡ ಅತಿಥಿಯನ್ನೂ, ಅಭ್ಯಾಗತನನ್ನೂ ಶಕ್ತಿಗನುಗುಣವಾಗಿ ತೃಪ್ತಿಪಡಿಸಬೇಕು. ರಾತ್ರಿಯಲ್ಲಿಯೂ ಕೈಕಾಲುಗಳನ್ನು ತೊಳೆದುಕೊಂಡು ಊಟಮಾಡಬೇಕು. ಅನಂತರ ಮೃದುವಾಗಿರುವ ತಲೆದಿಂಬುಳ್ಳ ಹಾಸಿಗೆಯಲ್ಲಿ ಮಲಗಬೇಕು. ತನ್ನ ಮನೆಯಲ್ಲಿ ಮಲಗುವಾಗ ಪೂರ್ವದಿಕ್ಕಿಗೆ ತಲೆಯನ್ನು ಮಾಡಿಕೊಂಡು ಮಲಗಬೇಕು. ಹೆಣ್ಣು ಕೊಟ್ಟವನ ಮನೆಯಲ್ಲಿ ದಕ್ಷಿಣ ದಿಕ್ಕಿಗೆ ತಲೆಯನ್ನು ಮಾಡಿಕೊಂಡು ಮಲಗಬೇಕು ಪ್ರಯಾಣ ಹೋದಲ್ಲಿ ಎಂದರೆ ಪರಸ್ಥಳದಲ್ಲಿ ಪಶ್ಚಿಮಕ್ಕೆ ತಲೆಯನ್ನು ಮಾಡಿಕೊಂಡು ಮಲಗಬೇಕು. ಉತ್ತರ ದಿಕ್ಕಿಗೆ ತಲೆಯನ್ನು ಮಾಡಿಕೊಂಡು ಮಲಗಲೇ ಬಾರದು. ಸುಖವಾಗಿ ಮಲಗುವ ದೇವತೆಗಳನ್ನು ಸ್ಮರಿಸುತ್ತಾ ರಾತ್ರಿಸೂಕ್ತವನ್ನು ಜಪಿಸಬೇಕು. ಅವ್ಯಯ ಸ್ವರೂಪನಾದ ವಿಷ್ಣುವನ್ನು ನಮಸ್ಕರಿಸಿ ಏಕಚಿತ್ತದಿಂದ ರಾತ್ರಿಯಲ್ಲಿ ಮಲಗಿರಬೇಕು. ಅಗಸ್ತ್ಯ, ಮಾಧವ, ಮುಚುಕುಂದ ಕಪಿಲ, ಆಸ್ತೀಕ ಈ ಐವರೂ ಸುಖವಾಗಿ ಮಲಗತಕ್ಕವರು. ಇವರಿಗೆ ಸುಖಶಾಯಿಗಳೆಂದು ಹೆಸರು. ಮಂಗಳವಾದ ಪದಾರ್ಥಗಳನ್ನೂ, ಪೂರ್ಣ ಕಲಶವನ್ನೂ ತಲೆಯ ಹಿಂದೆ ಇಟ್ಟುಕೊಂಡು ವೇದದಲ್ಲಿ ಹೇಳಿರುವ ಗರುಡ ಮಂತ್ರದಿಂದ ರಕ್ಷೆಯನ್ನು ಮಾಡಿಕೊಂಡು ಎಂದರೆ ದಿಗ್ಬಂಧನವನ್ನು ಮಾಡಿಕೊಂಡು ಅನಂತರ ಮಲಗಬೇಕು. ಹೆಂಡತಿಯಲ್ಲಿ ಋತುಕಾಲದಲ್ಲಿ ಸರಿಯಾಗಿ ರಮಿಸಬೇಕು.

ಪರ್ವವರ್ಜಂ ವ್ರಜೇದೇನಾಂ ತದ್ವ್ರತೋ ರತಿಕಾಮ್ಯಯಾ ।
ಪ್ರದೋಷ ಪಶ್ಚಿಮೌ ಯಾಮೌ ವೇದಾಭ್ಯಾಸೇನ ವೈ ನಯೇತ್ ।
ಯಾಮದ್ವಯಂ ಶಯಾನಸ್ತು ಬ್ರಹ್ಮಭೂಯಾಯ ಕಲ್ಪತೇ ॥ ೮೧ ॥

ಏತತ್ಸರ್ವಮಶೇಷೇಣ ಕೃತ್ಯಜಾತಂ ದಿನೇ ದಿನೇ ।
ಕರ್ತವ್ಯಂ ಗೃಹಿಣಾ ಸಮ್ಯಗ್ಗೃಹಸ್ಥಾಶ್ರಮಲಕ್ಷಣಂ ॥ ೮೨ ॥

ಅಶೇಷವೇದೋದಿತ ಸಚ್ಚರಿತ್ರ ಮೇತದ್ಗೃಹಸಾ ಶ್ರಮ ಲಕ್ಷಣಂ ತೇ ।
ಉಕ್ತಂ ಸಮಾಸೇನ ಚ ಲಕ್ಷಣೇನ ಪತಿವ್ರತಾನಾಂ ಶೃಣು ಲಕ್ಷಣಾನಿ ॥ ೮೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಆಹ್ನಿಕಾಖ್ಯಾನಂ ನಾಮ ತ್ರಯಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

ಯಾವಾಗಲೂ ತನ್ನ ಹೆಂಡತಿಯಲ್ಲಿಯೇ ಆಸಕ್ತನಾಗಿರಬೇಕು. ಈಕೆಯಲ್ಲಿ ರಮಿಸಬೇಕಾದರೆ ಪರ್ವಕಾಲಗಳನ್ನು ಬಿಟ್ಟು ರಮಿಸಬೇಕು. ಅವಳು ಅಪೇಕ್ಷೆ ಪಟ್ಟರೆ ಕರೆದಾಗ ಹೋಗಿ ರಮಿಸಬೇಕು. ಪ್ರದೋಷಕಾಲ ಮತ್ತು ರಾತ್ರಿಯ ಕೊನೆಯ ಯಾಮಗಳಲ್ಲಿ ವೇದಾಭ್ಯಾಸವನ್ನು ಮಾಡಬೇಕು ಆ ರೀತಿ ಆಗ ಕಾಲವನ್ನು ಕಳೆಯಬೇಕು ರಾತ್ರಿಯ ನಾಲ್ಕು ಜಾಮಗಳಲ್ಲಿ ಎರಡು ಮತ್ತು ಮೂರನೆಯ ಯಾಮಗಳಲ್ಲಿ ಮಲಗಿದವನು ಬ್ರಹ್ಮಸಾರೂಪ್ಯವನ್ನು ಹೊಂದುತ್ತಾನೆ.

೮೨. ಈ ಎಲ್ಲಾ ಕೆಲಸಗಳನ್ನೂ ಪ್ರತಿದಿನವೂ ಮಾಡಬೇಕು. ಗೃಹಸ್ಥನಾದವನು ಇವನ್ನು ಮಾಡಿಯೇ ತೀರಬೇಕು. ಇದೇ ಗೃಹಸ್ಥಾಶ್ರಮದ ಲಕ್ಷಣವು.

೮೩. ಈಗ ಹೇಳಿದುದೆಲ್ಲವೂ ವೇದದಲ್ಲಿ ಹೇಳಿರುವಂತೆ ಹೇಳಿರುವ ಗೃಹಸ್ಥಾಶ್ರಮದ ಲಕ್ಷಣಗಳು. ಅವೆಲ್ಲವನ್ನೂ ಸಂಗ್ರಹಮಾಡಿ ನಿನಗೆ ಹೇಳಿದ್ದೇನೆ. ಇನ್ನು ಮುಂದೆ ಪತಿವ್ರತಾ ಸ್ತ್ರೀಯರ ಲಕ್ಷಣವನ್ನು ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಆಹ್ನಿಕಾಖ್ಯಾನ ಎಂಬ ಇನ್ನೂರ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

**ಶೃಣು ರಾಜ್ಞ ಪ್ರವಕ್ಷ್ಯಾಮಿ ಸತೀನಾಂ ವ್ರತಮುತ್ತಮಂ ।**
**ಕುರೂಪೋ ವಾ ಕುವೃತ್ತೋ ವಾ ಸುಸ್ವಭಾವೋಥ ವೈ ಪತಿಃ ॥ ೧ ॥**

**ರೋಗಾನ್ವಿತಃ ಪಿಶಾಚೋ ವಾ ಕ್ರೋಧನೋ ವಾಪಿ ಮದ್ಯಪಃ ।**
**ವೃದ್ಧೋವಾಥ ವಿದಗ್ಧೋ ವಾ ಮೂಕೋಂಧೋ ಬಧಿರೋಪಿ ವಾ ॥ ೨ ॥**

**ರೌದ್ರೋ ವಾಥ ದರಿದ್ರೋ ವಾ ಕದರ್ಯಃ ಕುತ್ಸಿತೋಪಿ ವಾ ।**
**ಕಾತರಃ ಕಿತವೋ ವಾಪಿ ಲಲನಾಲಂಪಟೋಪಿ ವಾ ॥ ೩ ॥**

---

## ಇನ್ನೂರ ಮೂವತ್ತನಾಲ್ಕನೆಯ ಅಧ್ಯಾಯವು



೧-೪. ವಸಿಷ್ಠನು ಹೇಳಿದನು-ಎಲೈ ದೊರೆಯೇ ಕೇಳು! ಪತಿವ್ರತೆಯರ ಉತ್ತಮವಾದ ವ್ರತವನ್ನು ಹೇಳುತ್ತೇನೆ. ಅವರ ಕೈ ಹಿಡಿದಿರುವ ಗಂಡನು ಕುರೂಪಿಯಾಗಲಿ, ಕೆಟ್ಟ ಆಚಾರವುಳ್ಳವನಾಗಲಿ, ಒಳ್ಳೆಯ ಸ್ವಭಾವದವನಾಗಲಿ, ರೋಗಿಷ್ಠನಾಗಲಿ, ಪಿಶಾಚದಂತಿರುವವನಾಗಲಿ, ಕೋಪಿಯಾಗಲಿ, ಹೆಂಡಕುಡುಕನಾಗಲಿ, ಮುದುಕನಾಗಲಿ, ಬುದ್ಧಿವಂತನಾಗಲಿ, ಕಿವುಡನಾಗಲಿ. ಮೂಗನಾಗಲಿ, ಭಯಂಕರನಾಗಲಿ, ದರಿದ್ರನಾಗಲಿ, ಕೃಪಣನಾಗಲಿ, ಯಾತಕ್ಕೂ ಬಾರದವನಾಗಲಿ, ಭಯಿಷ್ಠನಾಗಲಿ, ನಟ್ಟನಾಗಲಿ, ಹಾದರಗಳ್ಳನಾಗಲಿ, ಅವನು

ಸತತಂ ದೇವವತ್ಪೂಜ್ಯಃ ಸಾಧ್ವ್ಯಾ ವಾಕ್ಕಾಯಕರ್ಮಭಿಃ ।
ನ ಜಾತು ವಿಷಮಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂ ಚನ ॥ ೪ ॥

ಬಾಲಯಾ ವಾ ಯುವತ್ಯಾ ವಾ ವೃದ್ಧಯಾ ವಾಪಿ ಯೋಷಿತಾ ।
ನ ಸ್ವತಂತ್ರೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ ॥ ೫ ॥

ಅಹಂಕಾರಂ ವಿಹಾಯಾಥ ಕಾಮಕ್ರೋಧೌ ಚ ಸರ್ವದಾ ।
ಮನಸೋ ರಂಜನಂ ಪತ್ಯುಃ ಕಾರ್ಯಮನ್ಯಸ್ಯ ವರ್ಜನಂ ॥ ೬ ॥

ಸಕಾಮಂ ವೀಕ್ಷಿತಾಪ್ಯನ್ಯೈಃ ಪ್ರಿಯೈರ್ವಾಕ್ಯೈಃ ಪ್ರಲೋಭಿತಾ ।
ಸ್ಪೃಷ್ಟಾ ವಾ ಜನಸಮ್ಮರ್ದೇ ನ ವಿಕಾರಮುಪೈತಿ ಯಾ ॥ ೭ ॥

ಪುರುಷಂ ಸೇವತೇನಾನ್ಯಂ ಮನೋವಾಕ್ಕಾಯಕರ್ಮಭಿಃ ।
ಲೋಭಿತಾಪಿ ಪರೇಣಾರ್ಥೈಃ ಸಾಸತೀ ಲೋಕಭೂಷಣಂ ॥ ೮ ॥

---

ಹೇಗಾದರೂ ಇರಲಿ, ಅವನನ್ನು ಪತಿವ್ರತೆಯಾದವಳು ಮಾತು, ದೇಹ, ಕೆಲಸಗಳಿಂದ ಯಾವಾಗಲೂ ದೇವರಂತೆ ಪೂಜಿಸಬೇಕು. ಅವನು ಹೇಗಿದ್ದರೂ ದೇವತೆಯೆಂದು ತಿಳಿದು ಸೇವಿಸಬೇಕು. ಆ ಸಾಧ್ವಿಯಾದವಳು ಗಂಡನಿಗೆ ಯಾವ ವಿಷಯದಲ್ಲಿಯೂ ವಿರುದ್ಧವಾಗಿ ಹೋಗಲೇ ಕೂಡದು.

೫. ಆಕೆಯು ಹುಡುಗಿಯಾಗಿರಲಿ, ಯುವತಿಯಾಗಿರಲಿ, ಮುದುಕಿಯಾಗಿರಲಿ, ಅವಳು ಗಂಡನ ಅಪ್ಪಣೆ ಇಲ್ಲದೆ ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡಕೂಡದು. ಕೊನೆಗೆ ಮನೆಯಲ್ಲಿಯಾದರೂ ಸ್ವತಂತ್ರಿಸಿ ಅವನನ್ನು ಕೇಳದೆ ಮಾಡಲೇ ಬಾರದು.

೬. ಅಹಂಕಾರ, ಕಾಮ, ಕ್ರೋಧಗಳನ್ನು ಹೆಂಗಸಾದವಳು ಬಿಟ್ಟು ಗಂಡನಿಗೆ ಮನಸ್ಸಿಗೆ ಸಂತೋಷವಾಗುವ ಕೆಲಸವನ್ನು ಮಾಡಬೇಕು. ಇತರವಾದುವನ್ನು ಬಿಡಬೇಕು.

೭-೮. ಇತರರು ಕಾಮದೃಷ್ಟಿಯಿಂದ ಆಸೆಪಟ್ಟು ನೋಡಿದರೂ ಅವರು ಒಳ್ಳೆಯ ಮಾತುಗಳಿಂದ ಆಸೆಯನ್ನು ತೋರಿಸಿದರೂ, ಜನಗಳ ಗುಂಪು ಸೇರಿರುವಾಗ ವ್ಯಾಜದಿಂದ ಮುಟ್ಟಿದರೂ, ಯಾವಳು ವಿಕಾರವನ್ನು ಹೊಂದದೆ ಇತರರು ಹಣದ ಆಸೆಯನ್ನು ತೋರಿಸಿದರೂ ಮನಸ್ಸಿನಿಂದಾಗಲಿ, ದೇಹದಿಂದಾಗಲಿ, ಕರ್ಮದಿಂದಾಗಲಿ, ಪರರನ್ನು ಸೇವಿಸುವುದಿಲ್ಲವೋ ಅವಳೇ ಪತಿವ್ರತೆಯು. ಆಕೆಯೇ ಲೋಕಕ್ಕೆ ಭೂಷಣವು.

ದೌತ್ಯೇನ ವಾ ರ್ಥಿಪ್ರಾವಾಪಿ ಬಲೇನ ವಿಧೃತಾಪಿ ವಾ ।
ವಸ್ತ್ರಾದ್ಯೈರ್ವಾಸಿತಾವಾಪಿ ನೈವಾಸ್ಯಂ ಭಜತೇ ಸತೀ ॥ ೯ ॥

ವೀಕ್ಷಿತಾ ವೀಕ್ಷ್ಯತೇ ನಾನ್ಯೈಃ ಹಸಿತಾ ನ ಹಸತ್ಯಪಿ ।
ಭಾಷಿತಾ ಭಾಷತೇನ್ಯೈವ ಸಾ ಸಾಧ್ವೀ ಸಾಧುಲಕ್ಷಣಂ ॥ ೧೦ ॥

ರೂಪಲಕ್ಷಣಸಂಪನ್ನಾ ಗೀತಕೃತ್ಯೇಪಿ ಕೋವಿದಾ ।
ಸ್ವಾನುರೂಪಂ ನರಂ ದೃಷ್ಟ್ವಾ ನ ಯಾತಿ ವಿಕೃತಿಂ ಸತೀ ॥ ೧೧ ॥

ಸುರೂಪಂ ತರುಣಂ ಸೌಮ್ಯಂ ಕಾಮಿನೀನಾಂ ಚ ವಲ್ಲಭಂ ।
ಯಾ ನೇಚ್ಛತಿ ಪರಂ ಕಾಂತಂ ವಿಜ್ಞೇಯಾ ಸಾ ಮಹಾಸತೀ ॥ ೧೨ ॥

---

೯. ದೂತರನ್ನು ಕಳುಹಿಸಿ ಅವರಿಂದ ಕೇಳಿಸಲಿ, ಬಲಾತ್ಕಾರದಿಂದ ಹಿಡಿದುಕೊಳ್ಳಲಿ, ಬಟ್ಟೆ ಒಡವೆ ಮುಂತಾದುವುಗಳನ್ನು ಕೊಟ್ಟು ಅದರಿಂದ ತನ್ನ ವಶವನ್ನು ಮಾಡಿಕೊಳ್ಳಲು ಪ್ರಯತ್ನಪಡಲಿ, ಯಾವ ರೀತಿಯಲ್ಲಿಯೂ ಇತರರನ್ನು ಹೊಂದದೇ ಇರತಕ್ಕವಳೇ ಸತಿಯು.

೧೦. ಆ ಸತಿಯಾದವಳು ಮತ್ತೊಬ್ಬರು ತನ್ನನ್ನು ನೋಡಿದರೆ ತಾನು ಅವರನ್ನು ನೋಡುವುದಿಲ್ಲ. ಅವರು ತನ್ನನ್ನು ನೋಡಿ ನಕ್ಕರೆ ತಾನು ನಗುವುದಿಲ್ಲ. ಮಾತನಾಡಿಸಿದರೆ ಮಾತನಾಡುವುದಿಲ್ಲ. ಆಕೆಯು ಉತ್ತಮವಾದ ಲಕ್ಷಣವುಳ್ಳ ಪತಿವ್ರತೆಯು.

೧೧. ಸುಂದರಿಯಾಗಿ ಒಳ್ಳೆಯ ಲಕ್ಷಣಗಳಿಂದಲೂ ಕೂಡಿದ್ದು ಸಂಗೀತದಲ್ಲಿಯೂ ಬುದ್ಧಿವಂತಳಾಗಿದ್ದು ಯಾವಳು ತನಗೆ ಅನುರೂಪನಾದವನನ್ನು ನೋಡಿದರೂ ಮನಸ್ಸಿನಲ್ಲಿ ವಿಕಾರವನ್ನು ಹೊಂದುವುದಿಲ್ಲವೋ ಅವಳೇ ಪತಿವ್ರತೆಯು.

೧೨. ಒಳ್ಳೆಯ ರೂಪವುಳ್ಳ ಯುವಕನಾದ, ಮನೋಹರವಾಗಿರುವ ಹೆಂಗಸರೆಲ್ಲರೂ, ಮೋಹಿಸುವುದಕ್ಕೆ ಯೋಗ್ಯನಾದವನನ್ನು ನೋಡಿದರೂ ಕೂಡ ಯಾವಳು ಮನಸ್ಸಿನಲ್ಲಿಯೂ ಇಚ್ಛಿಸುವುದಿಲ್ಲವೋ ಅವಳೇ ಪತಿವ್ರತೆಯು.

ದೇವೋ ಮನುಷ್ಯೋ ಗಂಧರ್ವಃ ಸತೀನಾಂ ನಾಪರಃ ಪ್ರಿಯಃ ।
ಅಪ್ರಿಯಂ ನೈವ ಕರ್ತವ್ಯಂ ಪತ್ಯುಃ ಪತ್ನ್ಯಾ ಕದಾಚನ ॥ ೧೩ ॥

ಭುಂಕ್ತೇ ಭುಂಕ್ತೇಥ ಯಾ ಪತ್ಯೌ ದುಃಖಿತೇ ದುಃಖಿತಾ ಚ ಯಾ ।
ಮುದಿತೇ ಮುದಿತಾತ್ಯರ್ಥಂ ಪ್ರೋಷಿತೇ ಮಲಿನಾಂಬರಾ ॥ ೧೪ ॥

ಸುಪ್ತೇ ಪತ್ಯೌ ಚ ಯಾ ಶೇತೇ ಪೂರ್ವಮೇವ ಪ್ರಬುಧ್ಯತಿ ।
ಪ್ರವಿಶೇಚ್ಚೈವ ಯಾ ವಹ್ನಿಂ ಯಾತಿ ಭರ್ತರಿ ಪಂಚತಾಂ ॥ ೧೫ ॥

ನಾನ್ಯಂ ಕಾಮಯತೇ ಚಿತ್ತೇ ಸಾ ವಿಜ್ಞೇಯಾ ಪತಿವ್ರತಾ ।
ಭಕ್ತಿಂ ಶ್ವಶುರಯೋಃ ಕುರ್ಯಾತ್ ಪತ್ಯುಶ್ಚಾಪಿ ವಿಶೇಷತಃ ॥ ೧೬ ॥

---

೧೩. ಪರಪುರುಷನು ದೇವತೆಯಾಗಿರಲಿ, ಮನುಷ್ಯನಾಗಿರಲಿ, ಗಂಧರ್ವನಾಗಿರಲಿ, ಪತಿವ್ರತೆಗೆ ಗಂಡನನ್ನು ಬಿಟ್ಟು ಮತ್ತೊಬ್ಬನು ಪ್ರೀತಿಪಾತ್ರನಲ್ಲ ಹೆಂಡತಿಯು ಗಂಡನಿಗೆ ಹಿತವಲ್ಲದುದನ್ನು ಒಂದು ಬಾರಿಯೂ ಕೂಡ ಮಾಡಲೇಬಾರದು.

೧೪-೧೫. ಪತಿವ್ರತೆಯಾದವಳು ಗಂಡನು ಊಟಮಾಡಿದಮೇಲೆ ತಾನು ಊಟಮಾಡುತ್ತಾಳೆ. ಗಂಡನಿಗೆ ದುಃಖ ಬಂದರೆ ತಾನೂ ದುಃಖಪಡುತ್ತಾಳೆ. ಗಂಡನಿಗೆ ಸಂತೋಷವಾದರೆ ತಾನೂ ಸಂತೋಷಪಡುತ್ತಾಳೆ. ಗಂಡನು ಊರಲ್ಲಿಲ್ಲದಿದ್ದರೆ ತಾನು ಕೊಳೆಯಬಟ್ಟೆಯನ್ನು ಧರಿಸಿರುತ್ತಾಳೆ. ಗಂಡನು ಮಲಗಿದಮೇಲೆ ತಾನು ಮಲಗಿಕೊಳ್ಳುತ್ತಾಳೆ. ಗಂಡನು ಏಳುವುದಕ್ಕೆ ಮುಂಚೆಯೇ ತಾನು ಏಳುತ್ತಾಳೆ. ಗಂಡನು ಸತ್ತರೆ ತಾನೂ ಆ ಶವದ ಜೊತೆಯಲ್ಲಿ ಬೆಂಕಿಯಲ್ಲಿ ಬೀಳುತ್ತಾಳೆ. ಇದು ಪತಿವ್ರತೆಯ ಲಕ್ಷಣವು.

೧೬. ಮನಸ್ಸಿನಲ್ಲಿಯೂ ಕೂಡ ಮತ್ತೊಬ್ಬನನ್ನು ರಮಿಸಲು ಇಚ್ಛಿಸದಿದ್ದರೆ ಆಕೆಯೇ ಪತಿವ್ರತೆಯು. ಆ ಪತಿವ್ರತೆಯಾದವಳು ಅತ್ತೆ ಮಾವಂದಿರಲ್ಲಿ ಭಕ್ತಿಯನ್ನಿಡಬೇಕು. ಗಂಡನಲ್ಲಿ ಆ ಅತ್ತೆಮಾವಂದಿರಲ್ಲಿಟ್ಟಿರುವ ಭಕ್ತಿಗಿಂತಲೂ ಹೆಚ್ಚು ಭಕ್ತಿಯನ್ನಿಟ್ಟಿರಬೇಕು.

ಧರ್ಮಕಾರ್ಯೇನುಕೂಲತ್ವ ಮರ್ಥಕಾರ್ಯೇಪಿ ಸಂಯಮಂ ।
ಪ್ರಾಗಲ್ಭ್ಯಂ ಗ್ರಾಮ್ಯಕಾರ್ಯೇಷು ಶುಚಿತ್ವಂ ನಿಜವಿಗ್ರಹೇ　　॥ ೧೭ ॥

ಮಂಗಳಂ ಸಮ್ಮತಂ ಪತ್ಯುಃ ಸತತಂ ಪ್ರಿಯಭಾಷಣಂ ।
ಭಾವ್ಯಂ ಮಂಗಳಕಾರಿಣ್ಯಾ ಗೃಹಮಂಡನಶೀಲಯಾ　　॥ ೧೮ ॥

ಗೃಹೋಪಸ್ಕರ ಸಂಸ್ಕಾರಸಜ್ಜಯಾ ಪ್ರತಿವಾಸರೇ ।
ಕ್ಷೇತ್ರಾದ್ವನಾದ್ವಾ ಗ್ರಾಮಾದ್ವಾ ಗೃಹಂ ಭರ್ತಾರಮಾಗತಂ　　॥ ೧೯ ॥

ಪ್ರತ್ಯುತ್ಥಾಯಾಭಿನಂದೇತ ಚಾಸನೇನೋದಕೇನ ಚ ।
ಪ್ರಸನ್ನ ಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ　　॥ ೨೦ ॥

---

೧೭. ಈಕೆಯು ಗಂಡನು ಮಾಡುವ ಧರ್ಮಗಳಿಗೆ ವಿರುದ್ಧವಾಗಿರದೆ ಅನುಕೂಲಳಾಗಿರಬೇಕು. ಹಣವನ್ನು ವ್ಯಯಮಾಡುವಾಗ ಬಿಗಿಯಿಂದಿರಬೇಕು. ಬರಬೇಕಾದುದನ್ನು ಬಿಡದೆ ಬರಮಾಡಿಕೊಳ್ಳಬೇಕು. ಗಂಡನೊಡನೆ ಮೈಥುನ ಮಾಡುವಾಗ ತನ್ನ ಬುದ್ಧಿವಂತಿಕೆಯನ್ನು ತೋರಿಸಬೇಕು. ತನ್ನ ದೇಹವನ್ನು ಶುಚಿಯಾಗಿಟ್ಟಿರಬೇಕು.

೧೮-೨೦. ಗಂಡನಿಗೆ ಇಷ್ಟವಾದ ಶ್ರೇಯಸ್ಕರವಾದ ಮಂಗಳ ಕಾರ್ಯಗಳನ್ನು ಮಾಡಬೇಕು. ಗಂಡನೊಡನೆ ಕೋಪಿಸಿಕೊಳ್ಳದೆ ಅವನಿಗೆ ಪ್ರೀತಿಯನ್ನುಂಟು ಮಾಡುವ ಒಳ್ಳೆಯ ಮಾತುಗಳನ್ನಾಡಬೇಕು. ಯಾವಾಗಲೂ ಮಂಗಳ ಕೆಲಸ ಗಳನ್ನೇ ಮಾಡುತ್ತಿರಬೇಕು. ಮನೆಯನ್ನು ಅಲಂಕಾರ ಮಾಡಿ ಶುಚಿಯಾಗಿಟ್ಟು ಕೊಂಡಿರಬೇಕು. ಮನೆಗೆ ಬೇಕಾಗುವ ಪದಾರ್ಥಗಳನ್ನು ಸಿದ್ಧಮಾಡಿಟ್ಟುಕೊಳ್ಳ ಬೇಕು. ಜಮೀನಿನಿಂದಾಗಲೀ, ಕಾಡಿನಿಂದಾಗಲೀ, ಹಳ್ಳಿಯಿಂದಾಗಲೀ, ಗಂಡನು ಮನೆಗೆ ಬಂದಾಗ ಒಡನೆಯೇ ಎದುರಿಗೆ ಹೋಗಿ ಅವನಿಗೆ ಕುಳಿತುಕೊಳ್ಳಲು ಆಸನವನ್ನು ಕೊಡಬೇಕು. ಕುಡಿಯಲು ನೀರು ಮುಂತಾದುವನ್ನು ಕೊಟ್ಟು ಉಪಚರಿಸಬೇಕು. ಕುಡಿಯುವ ಪಾತ್ರೆಗಳನ್ನೂ, ಅಡಿಗೆಯ ಪಾತ್ರೆಗಳನ್ನೂ ಚೆನ್ನಾಗಿ ಶುದ್ಧವಾಗಿಟ್ಟಿರಬೇಕು. ಅಡಿಗೆಯನ್ನು ಚೆನ್ನಾಗಿ ಮಾಡಬೇಕು. ಕ್ಲಿಪ್ತವಾದ ಕಾಲಕ್ಕೆ ಊಟಕ್ಕೆ ಬಡಿಸಿ ಊಟಮಾಡಿಸಬೇಕು.

ಸಂಯುತಾ ಗುಪ್ತಧಾನ್ಯಾಚ ಸುಸಮ್ಯೃಷ್ಟನಿವೇಶನಾ ।
ಗುರೂಣಾಂ ಪುತ್ರಮಿತ್ರಾಣಾಂ ಬಂಧೂನಾಂ ಕರ್ಮಕಾರಿಣಾಂ ॥ ೨೧ ॥

ಆಶ್ರಿತಾನಾಂ ಚ ಭೃತ್ಯಾನಾಂ ದಾಸೀದಾಸಜನೇಷು ಚ ।
ಅತಿಥ್ಯಭ್ಯಾಗತಾನಾಂ ಚ ಭಿಕ್ಷುಕಾಣಾಂಚ ಲಿಂಗಿನಾಂ ॥ ೨೨ ॥

ಆಸನೇ ಭೋಜನೇ ದಾನೇ ಸಮ್ಮಾನೇ ಪ್ರಿಯಭಾಷಣೇ ।
ತತ್ತದ್ಗುಣಾನು ಸಾರೇಣ ಪ್ರಾಪ್ತೇ ಕಾಲೇ ಯಥೋಚಿತಂ ॥ ೨೩ ॥

ದಕ್ಷಯಾ ಸರ್ವದಾ ಭಾವ್ಯಂ ಭಾರ್ಯಯಾ ಗೃಹಮುಖ್ಯಯಾ ।
ಗೃಹವ್ಯಯಾಯ ಯದ್ದ್ರವ್ಯಂ ದಿಶೇತ್ಪತ್ನ್ಯೈಃ ಕರೇ ಪತಿಃ ॥ ೨೪ ॥

ನಿರ್ವರ್ತ್ಯ ಗೃಹಕಾರ್ಯಂ ಸಾ ಕಿಂಚಿದ್ಬುದ್ಧ್ಯಾವಶೇಷಯೇತ್ ।
ತ್ಯಾಗಾರ್ಥಮರ್ಪಿತೇ ದ್ರವ್ಯೇ ಲೋಭಾತ್ಕಿಂಚಿನ್ನ ಧಾರಯೇತ್ ॥ ೨೫ ॥

---

೨೧-೨೫. ಹೆಚ್ಚು ವ್ಯಸನ ಮಾಡದೆ ಎಲ್ಲದರಲ್ಲಿಯೂ ಹಿಡಿತವಿಡಬೇಕು. ತಿನ್ನತಕ್ಕ ಧಾನ್ಯವನ್ನು ಕಾಣದಂತೆ ಸ್ವಲ್ಪವನ್ನು ಬೇರೆಯಾಗಿಟ್ಟುಕೊಂಡಿರಬೇಕು. ದೊಡ್ಡವರು, ಮಕ್ಕಳು, ಸ್ನೇಹಿತರು, ಬಂಧುಗಳು, ಕೆಲಸಕ್ಕೆ ಬಂದಿರುವವರು, ಆಶ್ರಿತರು, ಆಳುಗಳು, ದಾಸರಾಗಿರುವವರು, ಅತಿಥಿಗಳು, ಅಭ್ಯಾಗತರು, ಭಿಕ್ಷುಕರು, ಆಶ್ರಮಿಗಳು, ಯತಿಗಳು, ಇವರಿಗೆ ಅವರು ಬಂದಾಗ ಅವರ ಗುಣಗಳಿಗೂ ಯೋಗ್ಯತೆಗಳಿಗೂ ಕಾಲಕ್ಕೂ ತಕ್ಕಂತೆ ಆಸನವನ್ನು ಕೊಡಬೇಕು. ಭೋಜನ ಮಾಡಿಸಬೇಕು. ದಾನಮಾಡಬೇಕು. ಗೌರವಿಸಬೇಕು. ಒಳ್ಳೆಯ ಮಾತುಗಳನ್ನಾಡಬೇಕು. ಇವಳೇ ಮನೆಗೆ ಯಜಮಾನಿಯಾಗಿದ್ದುಕೊಂಡು ಯಾವಾಗಲೂ ವಿವೇಕದಿಂದಲೂ, ಸಾಮರ್ಥ್ಯದಿಂದಲೂ ನಡೆದುಕೊಳ್ಳಬೇಕು. ಮನೆಯ ಖರ್ಚಿಗೋಸ್ಕರ ಗಂಡನು ಕೊಡುವ ಹಣದಲ್ಲಿ ಆ ಮನೆಯ ಪದಾರ್ಥಗಳಿಗೆ ಜಾಣತನದಿಂದ ಖರ್ಚುಮಾಡಿ ಕೆಲಸವನ್ನು ಸರಿತೂಗಿಸಿಕೊಂಡು ಸ್ವಲ್ಪ ಹಣವನ್ನು ಉಳಿಸಿಕೊಳ್ಳಬೇಕು. ಅವನದಾನುಕ್ಕೆಂದುಕೊಡುವ ಹಣದಲ್ಲಿ ಸ್ವಲ್ಪವನ್ನೂ ಉಳಿಸಿಕೊಳ್ಳದೆ ಧಾರಾಳವಾಗಿ ದಾನವನ್ನು ಮಾಡಬೇಕು. ಅದರಲ್ಲಿ ಒಂದು ಕಾಸನ್ನೂ ಉಳಿಸಿಕೊಳ್ಳಬಾರದು.

ಭರ್ತುರಾಜ್ಞಾಂ ವಿನಾ ನೈವ ಸ್ವಬಂಧುಭ್ಯೋ ದಿಶೇದ್ಧನಂ ।
ಅನ್ಯಾಲಾಪಮಸಂತೋಷಂ ಪರವ್ಯಾಪಾರಸಂಕಥಾಃ ॥ ೨೬ ॥

ಅತಿಹಾಸಾತಿರೋಷಾಂಶ್ಚ ಕ್ರೋಧಸ್ಥಾನಂ ಚ ವರ್ಜಯೇತ್ ।
ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಖಾದತಿ ॥ ೨೭ ॥

ಯಚ್ಚ ಭರ್ತಾ ನ ಚಾಶ್ನಾತಿ ಸರ್ವಂ ತದ್ವರ್ಜಯೇತ್ಸತೀ ।
ತೈಲಾಭ್ಯಂಗಂ ತಥಾ ಸ್ನಾನಂ ಶರೀರೋದ್ವರ್ತನಕ್ರಿಯಾಂ ॥ ೨೮ ॥

ಮಾರ್ಜನಂಚೈವ ದನ್ತಾನಾಮಲಕಾನಾಂ ಚ ವರ್ತನಂ ।
ಭೋಜನಂ ಚಾಸನಂ ನಿದ್ರಾಂ ಪರಿಧಾನಂ ಚ ವಾಸಸಾಂ ॥ ೨೯ ॥

ಪ್ರಾರಂಭಂ ಮಂಡನಾನಾಂ ಚ ನ ಕುರ್ಯಾತ್ಪ್ರೋಷಿತೇ ಪ್ರಿಯೇ ।
ತ್ರೇತಾಪ್ರಭೃತಿ ನಾರೀಣಾಂ ಮಾಸಿಮಾಸ್ಯಾರ್ತವಂ ನೃಪ ॥ ೩೦ ॥

---

೨೬. ಗಂಡನ ಅಪ್ಪಣೆ ಇಲ್ಲದೆ ತನ್ನ ಬಂಧುಗಳಿಗೆ ಹಣವನ್ನು ಕೊಡಕೂಡದು. ಮತ್ತೊಬ್ಬರೊಡನೆ ಮಾತನಾಡಬಾರದು. ಸಂತೋಷವಿಲ್ಲದೆ ಇರಬಾರದು. ಬಹುವಾಗಿ ಕೋಪಿಸಿಕೊಳ್ಳಬಾರದು. ಮನಸ್ಸಿಗೆ ದುಃಖವಾಗುವಂತೆ ಮಾಡಿಕೊಳ್ಳಬಾರದು. ಅಂತಹ ಜಾಗದಲ್ಲಿ ಇರದೆ ಹೊರಟುಹೋಗಬೇಕು.

೨೭. ಗಂಡನು ಕುಡಿಯದಿರುವ, ತಿನ್ನದಿರುವ, ಊಟಮಾಡದಿರುವ ಪದಾರ್ಥಗಳೆಲ್ಲವನ್ನೂ ಪತಿವ್ರತೆಯಾದ ಹೆಂಡತಿಯು ಬಿಟ್ಟುಬಿಡಬೇಕು.

೨೮-೨೯. ಗಂಡನು ಊರಿನಲ್ಲಿ ಇಲ್ಲದಿರುವಾಗ ಅಭ್ಯಂಜನ, ಸ್ನಾನ, ಮೈಗೆ ಬುಕ್ಕಿಹಿಟ್ಟು ಮುಂತಾದುವನ್ನು ಹಾಕಿಕೊಳ್ಳುವುದು, ಹಲ್ಲನ್ನು ಉಜ್ಜಿಕೊಳ್ಳುವುದು, ಮುಂಗುರುಳನ್ನು ತಿದ್ದಿಕೊಳ್ಳುವುದು, ಉತ್ತಮವಾದ ಊಟ, ಒಳ್ಳೆಯ ಹಾಸಿಗೆ, ಹೆಚ್ಚಾಗಿ ನಿದ್ದೆ, ಒಳ್ಳೆಯ ಬಟ್ಟೆಗಳನ್ನು ಧರಿಸುವುದು, ಅಲಂಕರಿಸಿಕೊಳ್ಳುವುದು, ಹೊಸ ಕೆಲಸಗಳ ಪ್ರಾರಂಭ ಇವುಗಳೊಂದನ್ನೂ ಮಾಡಕೂಡದು.

೩೦-೩೧. ತ್ರೇತಾಯುಗದಿಂದ ಮೊದಲುಗೊಂಡು ಹೆಂಗಸರು ತಿಂಗಳು ತಿಂಗಳಿಗೂ ಮುಟ್ಟಾಗುತ್ತಾರೆ. ಹೀಗೆ ಮುಟ್ಟಾದ ಮೊದಲನೆಯ ದಿನದಲ್ಲಿ

ಪ್ರಥಮೇಽಹನಿ ಚಾಂಡಾಲೀ ಯಥಾ ವರ್ಜ್ಯಾ ತಥಾಂಗನಾ ।
ದ್ವಿತೀಯೇಽಹನಿ ಭೂಪಾಲ ಯಥಾ ವೈ ಬ್ರಹ್ಮಘಾತಿನೀ ॥ ೩೧ ॥

ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುಧ್ಯತೇ ।
ಸ್ನಾನಂ ಶೌಚಂ ತಥಾ ಗಾನಂ ರೋದನಂ ಹಸನಂ ತಥಾ ॥ ೩೨ ॥

ಯಾನಮಭ್ಯಂಜನಂ ನಾರೀ ದ್ಯೂತಂ ಚೈವಾನುಲೇಪನಂ ।
ದಿವಾಸ್ವಪ್ನಂ ವಿಶೇಷೇಣ ತಥಾ ವೈ ದಂತಧಾವನಂ ॥ ೩೩ ॥

ಮೈಥುನಂ ಮಾನಸಂ ವಾಪಿ ವಾಚಿಕಂ ದೇವತಾರ್ಚನಂ ।
ವರ್ಜಯೇಚ್ಚ ನಮಸ್ಕಾರಂ ದೇವತಾನಾಂ ರಜಸ್ವಲಾ ॥ ೩೪ ॥

---

ಆಕೆಯು ಚಂಡಾಲಿಗೆ ಸಮಾನಳು, ಚಂಡಾಲಿಯನ್ನು ಹೇಗೆ ಮಾತನಾಡಿಸದೆ ದೂರವಾಗಿರುವರೋ ಹಾಗೆ ದೂರವಾಗಿರಬೇಕು. ಆಗ ಅವಳ ಸಂಗವು ಕೂಡದು. ಎರಡನೆಯ ದಿವಸ ಬ್ರಹ್ಮಘಾತಕಮಾಡಿದವನು ಪಾಪಿಯೆಂದು ಹೇಗೆ ವರ್ಜಿಸುವೆವೋ ಹಾಗೆ ಬಿಡಬೇಕು. ಆ ದಿನ ಅಷ್ಟು ದೋಷವುಳ್ಳವಳೆಂದು ತಿಳಿಯಬೇಕು. ಮೂರನೆಯ ದಿನದಲ್ಲಿ ಅಗಸರವಳಂತೆ ದೂರದಲ್ಲಿ ಬಿಡಬೇಕು. ಆ ದಿನ ಎಂದರೆ ಮೂರು ದಿನಗಳು ಆಕೆಯನ್ನು ರಮಿಸಬಾರದು. ನಾಲ್ಕನೆಯ ದಿನದಲ್ಲಿ ಆಕೆಯು ಶುದ್ಧಿಯಾಗುತ್ತಾಳೆ. ಎಂದು ತಿಳಿ.

೩೨-೩೪. ಮುಟ್ಟಾದವಳು ಸ್ನಾನಮಾಡಬಾರದು. ಶೌಚವನ್ನು ಎಂದರೆ ಮಣ್ಣು ಹಾಕಿ ತಿಕ್ಕುವುದು, ಇತ್ಯಾದಿಗಳನ್ನು ಮಾಡಬಾರದು. ಗಾನ ಮಾಡಬಾರದು, ಅಳಬಾರದು, ನಗಬಾರದು, ಗಾಡಿ ಮುಂತಾದುವನ್ನು ಹತ್ತಬಾರದು. ಅಭ್ಯಂಜನ ಮಾಡಬಾರದು, ಜೂಜಾಡಬಾರದು. ಗಂಧ ಮುಂತಾದುವನ್ನು ಹಚ್ಚಿಕೊಳ್ಳಬಾರದು, ಹಗಲು ಮಲಗಬಾರದು, ಮನಸ್ಸಿನಲ್ಲಿಯೂ ಕೂಡ ರತಿಯ ಯೋಚನೆಯನ್ನೇ ಮಾಡಬಾರದು. ಬಾಯಲ್ಲಿ ದೇವರಿಗೆ ನಮಸ್ಕಾರವು ಎನ್ನುವುದೇ ಮುಂತಾದ ಪೂಜೆಯ ಮಾತುಗಳನ್ನು ಆಡಬಾರದು. ದೇವರಿಗೆ ದೇಹದಿಂದಲೂ ಕೂಡ ನಮಸ್ಕಾರವನ್ನು ಮಾಡಕೂಡದು.

ರಜಸ್ವಲಾಯಾಃ ಸಂಸ್ಪರ್ಶಂ ಸಂಭಾಷಂ ಚ ತಯಾ ಸಹ ।
ಸಂತ್ಯಾಗಂ ಚೈವ ವಸ್ತ್ರಾಣಾಂ ವರ್ಜಯೇತ್ಸರ್ವಯತ್ನತಃ ॥ ೩೫ ॥

ಸ್ನಾತ್ವಾನ್ಯಂ ಪುರುಷಂ ನಾರೀ ನ ಪಶ್ಯೇಚ್ಚ ರಜಸ್ವಲಾ ।
ಈಕ್ಷತೇ ಭಾಸ್ಕರಂ ದೇವಂ ಬ್ರಹ್ಮಕೂರ್ಚಂ ತತಃ ಪಿಬೇತ್ ॥ ೩೬ ॥

ಕೇವಲಂ ಪಂಚಗವ್ಯಂ ವಾ ಕ್ಷೀರಂ ವಾತ್ಮವಿಶುದ್ಧಯೇ ।
ಯಥೋಪದೇಶಂ ನಿಯತಾ ವರ್ತೇತ ಚ ವರಾಂಗನಾ ॥ ೩೭ ॥

ಅಲಂಕೃತಾ ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ ।
ಗರ್ಭಿಣೀ ಚೇದ್ಯಥಾ ನಾರೀ ನಿಯಮೇನ ಸಮಾಚರೇತ್ ॥ ೩೮ ॥

---

೩೫. ಮುಟ್ಟಾದವಳನ್ನು ಇತರರು ಮುಟ್ಟಬಾರದು. ಆಕೆಯೊಡನೆ ಮಾತನಾಡಬಾರದು. ಆಕೆಯು ಈ ಮೂರು ದಿನಗಳೂ ಬೇರೆಯ ಬಟ್ಟೆಯನ್ನು ಹಾಕಿಕೊಳ್ಳಕೂಡದು.

೩೬. ಮುಟ್ಟಾದವಳು ಮುಟ್ಟುಸ್ನಾನ ಮಾಡಿದಮೇಲೆ ಬೇರೆ ಗಂಡಸರನ್ನು ನೋಡಬಾರದು. ಸ್ನಾನವಾದೊಡನೆಯೇ ಸರ್ವಚಕ್ಷುಷ್ಕನಾದ ಸೂರ್ಯನನ್ನು ನೋಡಬೇಕು. ಅನಂತರ ಚುಳುಕದಲ್ಲಿ ನೀರನ್ನು ತೆಗೆದುಕೊಂಡು ಅದಕ್ಕೆ ಅರಶಿನವನ್ನು ಸೇರಿಸಿ ಅಂದರೆ ಓಕುಳಿಯನ್ನು ಮಾಡಿ ಅದನ್ನು ಕುಡಿಯಬೇಕು.

೩೭. ಅದಿಲ್ಲದಿದ್ದರೆ ಪಂಚಗವ್ಯವನ್ನಾಗಲೀ, ಹಾಲನ್ನಾಗಲೀ ಕುಡಿಯಬೇಕು. ಇದನ್ನು ಕುಡಿದರೆ ದೇಹವು ಶುದ್ಧಿಯಾಗುತ್ತದೆ. ಅನಂತರ ನಿಯಮದಿಂದ ಯಾವುದಾದರೂ ಒಂದು ಜಾಗದಲ್ಲಿ ಇರಬೇಕು.

೩೮. ಆಗ ಆಕೆಯು ಅಲಂಕಾರ ಮಾಡಿಕೊಂಡು ಗಂಡನಿಗೆ ಅನುಕೂಲವಾಗುವ ಕೆಲಸದಲ್ಲಿಯೇ ಆಸಕ್ತಳಾಗಿರಬೇಕು. ಗರ್ಭಿಣಿಯಾದವಳು ಹೇಗಿರಬೇಕೆಂಬುದನ್ನು ಹೇಳುತ್ತೇನೆ. ಕೇಳು.

ಕೃತರಕ್ಷಾ ಸುಭೂಷಾ ಚ ವಾಸ್ತುಪೂಜನ ತತ್ಪರಾ |
ತಿಷ್ಠೇತ್ಪ್ರಸನ್ನವದನಾ ಭರ್ತುಃ ಪ್ರಿಯಹಿತೇ ರತಾ || ೩೯ ||

ಕುಸ್ತ್ರೀಭಿರ್ನಾಭಿಭಾಷೇತ ಶೂರ್ಪವಾತಂ ವಿವರ್ಜಯೇತ್ |
ಮೃತವತ್ಸಾದಿ ಸಂಸರ್ಗಂ ಪರಪಾಕಂ ಚ ಸುಂದರೀ || ೪೦ ||

ನ ಭೀಭತ್ಸಂ ಕಿಂಚಿದೀಕ್ಷೇನ್ನ ರೌದ್ರಾಂ ಶೃಣುಯಾತ್ಕಥಾಂ |
ಗುರುಂ ವಾತ್ಯುಷ್ಣಮಾಹಾರಮಜೀರ್ಣಂ ನ ಸಮಾಹರೇತ್ || ೪೧ ||

ಅನೇನ ವಿಧಿನಾ ಸಾಧ್ವೀ ಶೋಭನಂ ಪುತ್ರಮಾಪ್ನುಯಾತ್ |
ಅನ್ಯಥಾ ಗರ್ಭಪತನಂ ಸ್ತಂಭನಂ ವಾ ಪ್ರಪದ್ಯತೇ || ೪೨ ||

---

೩೯-೪೦. ತನ್ನನ್ನು ತಾನೇ ರಕ್ಷಣೆ ಮಾಡಿಕೊಳ್ಳುತ್ತಿರಬೇಕು. ಅಲ್ಲದೆ ರಕ್ಷೆಯಾದ ಪದಾರ್ಥಗಳನ್ನು ಇಟ್ಟುಕೊಂಡಿರಬೇಕು. ಅಲಂಕಾರ ಮಾಡಿಕೊಳ್ಳಬೇಕು. ಮನೆಯನ್ನು ಅಲಂಕರಿಸುವುದರಲ್ಲಿ ಆಸಕ್ತಳಾಗಿರಬೇಕು. ಸಂತೋಷಗೊಂಡ ಮನಸ್ಸುಳ್ಳವಳಾಗಿರಬೇಕು. ಗಂಡನಿಗೆ ಒಳ್ಳೆಯದಾಗುವ ವಿಷಯದಲ್ಲಿ ಆಸಕ್ತಳಾಗಿರಬೇಕು. ಅಯೋಗ್ಯರಾದ ಹೆಂಗಸರೊಡನೆ ಮಾತನಾಡಬಾರದು. ಮೊರದ ಗಾಳಿಯನ್ನು ಸೋಕಿಸಿಕೊಳ್ಳಬಾರದು. ಮಕ್ಕಳು ಸಾಯುತ್ತಿರುವವರೊಡನೆ ಸೇರಬಾರದು. ಪರರು ಮಾಡಿದ ಅಡಿಗೆಯನ್ನು ಊಟ ಮಾಡಬಾರದು. ಎಂದರೆ ಸ್ವಜನರು ಮಾಡಿದುದನ್ನು ಊಟಮಾಡಬಹುದು.

೪೧. ಭಯಂಕರವಾದ ವಸ್ತುಗಳನ್ನು ನೋಡಬಾರದು. ಭಯಂಕವಾದ ಕಥೆಗಳನ್ನು ಕೇಳಲೂಬಾರದು. ಗುರುವಿಂದ ಆಹಾರವನ್ನು ತೆಗೆದು ಕೊಳ್ಳಬಾರದು. ಅತ್ಯುಷ್ಣವಾದ ಆಹಾರವನ್ನು ತೆಗೆದುಕೊಳ್ಳಬಾರದು. ಅಜೀರ್ಣವಾಗುವಂತೆ ಮಾಡಿಕೊಳ್ಳಬಾರದು.

೪೨. ಈ ರೀತಿಯಾಗಿದ್ದರೆ ಆಕೆಯು ಮಂಗಳವನ್ನು ಹೊಂದುತ್ತಾಳೆ. ಹೀಗೆ ಮಾಡದಿದ್ದರೆ ಗರ್ಭಪತನವಾಗಿ ಹೋಗುತ್ತದೆ. ಇಲ್ಲದಿದ್ದರೆ ಗರ್ಭಸ್ತಂಭನವಾಗಿರುತ್ತದೆ.

ಯದಾ ಪ್ರವಿಶತೇ ಭರ್ತಾ ಕೂಟಂ ವಾರ್ಥೇನ ಕೇನಚಿತ್ |
ಸುಮನಾ ವರ್ಣಕೋಪೇತಾ ತದಾ ಚ ವ್ರತಚಾರಿಣೀ || ೪೩ ||

ತರುಣೀ ವಾ ಸುರೂಪಾ ವಾ ಪುತ್ರಿಣೀ ವಾ ಹಿತಾ ಭವೇತ್ |
ಜ್ಯೇಷ್ಠಾ ವಾಪಿ ಕನಿಷ್ಠಾ ವಾ ಪರೋಕ್ಷೇ ಸಮ್ಮುಖೇಪಿ ವಾ || ೪೪ ||

ಹೀನಾಂ ನಿಜಗುಣೈರನ್ಯಾಂ ಸಪತ್ನೀಂ ನ ವಿಗರ್ಹಯೇತ್ |
ಈರ್ಷ್ಯಾರಾಗಸಮುದ್ಭೂತೇ ವಿದ್ಯಮಾನೇಪಿ ಮತ್ಸರೇ || ೪೫ ||

ಅಪ್ರಿಯಂ ನೈವ ಕರ್ತವ್ಯಂ ಸಪತ್ನೀಭಿಃ ಪರಸ್ಪರಂ |
ನ ಗಾಯೇದನ್ಯನಾಮಾನಿ ನ ಕುರ್ಯಾದನ್ಯವರ್ಣನಂ || ೪೬ ||

ನ ವಸೇದ್ದೂರತಃ ಪತ್ಯುಃ ಸ್ಥೇಯಂ ವಲ್ಲಿಭಸನ್ನಿಧೌ |
ನಿರ್ದಿಷ್ಟೇ ಚ ಮಹೀಭಾಗೇ ವಲ್ಲಭಾಭಿಮುಖೀ ವಸೇತ್ || ೪೭ ||

---

೪೩. ಗಂಡನು ಯಾವುದಾದರೂ ಜನಗಳ ಗುಂಪಿಗೆ ಹೋಗುವ ಪಕ್ಷದಲ್ಲಿ ತಾನೂ ಹೋಗಬೇಕಾಗಿ ಬಂದಾಗ ಹರ್ಷಯುಕ್ತಳಾಗಿ ಮೈಕೈಗಳಿಗೆ ಅಲಂಕಾರವನ್ನು ಮಾಡಿಕೊಂಡು ತಾನೂ ಹೋಗಬೇಕು. ಆಗ ತಾನೂ ಉತ್ತಮವಾದ ವ್ರತವನ್ನು ಆಚರಿಸಬೇಕು.

೪೪-೪೭. ತಾನು ತನ್ನ ಸವತಿಯರಿಗಿಂತಲೂ ತರುಣಿಯಾಗಿದ್ದರೂ, ಸುಂದರಿಯಾಗಿದ್ದರೂ, ಮಕ್ಕಳೊಂದಿಗಿತ್ತಿಯಾಗಿದ್ದರೂ, ದೊಡ್ಡವಳಾಗಿದ್ದರೂ, ಚಿಕ್ಕವಳಾಗಿದ್ದರೂ, ಅವರಿಗೆ ಪರೋಕ್ಷದಲ್ಲಿಯಾಗಲೀ, ಪ್ರತ್ಯಕ್ಷದಲ್ಲಿಯಾಗಲೀ ಹಿತವನ್ನೇ ಮಾಡಬೇಕು. ಸವತಿಯು ತನಗಿಂತಲೂ ಗುಣದಲ್ಲಿ ಹೀನಳಾಗಿದ್ದರೆ ಆಕೆಯನ್ನು ತಿರಸ್ಕರಿಸಿ ಬಯ್ಯಬಾರದು. ಕೋಪದಿಂದಾಗಲೀ, ಹೊಟ್ಟೆಕಿಚ್ಚಿನಿಂದಾಗಲೀ ಸವತಿಯ ಮೇಲೆ ಮತ್ಸರವು ಹುಟ್ಟಿದರೆ ಅವಳಿಗೆ ಕೆಡುಕನ್ನು ಮಾಡಲೇಬಾರದು. ಬೇರೆಯವರ ಹೆಸರನ್ನು ಹಾಡಬಾರದು. ಪರರನ್ನು ವರ್ಣಿಸಬಾರದು. ಗಂಡನಿಗಿಂತಲೂ ದೂರದಲ್ಲಿರಬಾರದು. ಗಂಡನಿರುವಲ್ಲಿಯೇ ಇರಬೇಕು. ತನ್ನ ಮನೆಯಲ್ಲಿ ತನಗೋಸ್ಕರವಾಗಿ ಇಟ್ಟುಕೊಂಡಿರುವ ಚಿಕ್ಕ ಮನೆಯೇ ಮುಂತಾದ ಭಾಗಗಳಲ್ಲಿ ಗಂಡನನ್ನು ಎದುರು ನೋಡುತ್ತಿರಬೇಕು.

ನಾವಲೋಕ್ಯಾ ದಿಶಸ್ಸ್ವೈರಂ ನಾವಲೋಕ್ಯಃ ಪರೋ ಜನಃ ।
ವಿಲಾಸ್ಯೈರವಲೋಕ್ಯಂ ಸ್ಯಾತ್ಪತ್ಯುರಾನನಪಂಕಜಂ ॥ ೪೮ ॥

ಕಥ್ಯಮಾನಾ ಕಥಾ ಭರ್ತ್ರಾ ಶ್ರೋತ್ರವ್ಯಾ ಸಾದರಂ ಸ್ತ್ರಿಯಾ ।
ಪತ್ಯುಸ್ಸಂಭಾಷಮಾಣಸ್ಯ ನಾನ್ಯಂ ಸಂಭಾಷಯೇತ್ ಸ್ವಯಂ ॥ ೪೯ ॥

ಆಹೂತಾ ಸತ್ವರಂ ಗಚ್ಛೇತ್ ರತಿಸ್ಥಾನಂ ರತೋತ್ಸುಕಾ ।
ಪತ್ಯಾ ಗಾಯತಿ ಸೋತ್ಸಾಹಂ ಶ್ರೋತವ್ಯಂ ಹೃಷ್ಟಚೇತಸಾ ॥ ೫೦ ॥

ನೃತ್ಯಂತಂ ವಲ್ಲಭಂ ಪಶ್ಯೇತ್ ಪ್ರಹರ್ಷೋತ್ಫುಲ್ಲಲೋಚನಾ ।
ಶಾಸ್ತ್ರಾದಿಕೌಶಲಂ ವಿದ್ಯಾಂ ಕಲಾಪ್ರಾಗಲ್ಭ್ಯಮೇವ ಚ ॥ ೫೧ ॥

ದರ್ಶಯನ್ತಂ ಪತಿಂ ದೃಷ್ಟ್ವಾ ಭವೇದಾನಂದ ನಿರ್ಭರಾ ।
ಭರ್ತುಸ್ಸಮೀಪೇ ನ ಸ್ಥೇಯಂ ಸೋದ್ವೇಗವ್ಯಗ್ರಚಿತ್ತಯಾ ॥ ೫೨ ॥

---

೪೮-೪೯. ಅತ್ತಿತ್ತಲಾಗಿ ಸ್ವೇಚ್ಛೆಯಾಗಿ ನೋಡಬಾರದು. ಪರರನ್ನು ಸ್ವೇಚ್ಛೆಯಿಂದ ನೋಡಲೇಬಾರದು. ಕಡೆಗಣ್ಣು ನೋಟ ಮುಂತಾದ ವೈಖರಿಗಳಿಂದ ನೋಡಬೇಕಾದರೆ ಗಂಡನ ಮುಖವನ್ನು ನೋಡಬೇಕು. ಗಂಡನು ಕಥೆಯನ್ನು ಹೇಳುತ್ತಿದ್ದರೆ ಪ್ರೀತಿಯಿಂದ ಕೇಳಬೇಕು. ಗಂಡನೊಡನೆ ಮಾತನಾಡಲು ಬಂದಿರುವವರರೊಡನೆ ತಾನು ಮಾತನಾಡಬಾರದು.

೫೦. ಗಂಡನು ರತಿಗೋಸ್ಕರ ಕರೆದರೆ ಜಾಗ್ರತೆಯಾಗಿ ರತಿಯಲ್ಲಿ ಆಶೆಯುಳ್ಳವಳಾಗಿ ಹೋಗಬೇಕು. ಗಂಡನು ಗಾನಮಾಡುತ್ತಿದ್ದರೆ ಹೆಂಡತಿಯು ಸಂತೋಷದಿಂದ ಕೇಳುತ್ತಿರಬೇಕು.

೫೧-೫೨. ಗಂಡನು ಕುಣಿಯುತ್ತಿದ್ದರೆ ಸಂತೋಷದಿಂದ ಅರಳಿದಕಣ್ಣುಳ್ಳವಳಾಗಿ ನೋಡುತ್ತಿರಬೇಕು. ಶಾಸ್ತ್ರಗಳಲ್ಲಾಗಲೀ, ಕುಶಲ ವಿದ್ಯೆಗಳಲ್ಲಾಗಲಿ ತನ್ನ ಪ್ರೌಢಿಮೆಯನ್ನು ತೋರಿಸುತ್ತಿರುವ ಗಂಡನನ್ನು ನೋಡಿ ಆನಂದ ಪಡಬೇಕು. ಬದಲಾವಣೆಯನ್ನು ಹೊಂದಿದ ಮನಸ್ಸಿರುವಾಗಲೂ ದುಃಖಗೊಂಡಾಗಲೂ ಗಂಡನ ಬಳಿಯಲ್ಲಿರಕೂಡದು.

**ಕಲಿಹೋ ನೈವ ಕರ್ತವ್ಯಃ ಪ್ರಣಯೇನ ಬಹಿಷ್ಕೃತಃ ।**
**ಆತ್ಮಾರ್ಥಂ ನಿಜಬಂಧ್ವರ್ಥಂ ಸಪತ್ನ್ಯರ್ಥಂ ಸಕೋಪಯಾ ॥ ೫೩ ॥**

**ಕಲಹೋ ನ ವಿಧಾತವ್ಯಃ ಕಲ್ಪಯೋಗ್ಯೇ ಪ್ರಿಯೇ ಸ್ತ್ರಿಯಾ ।**
**ಭರ್ತ್ಸಿತಾ ನಿಂದಿತಾತ್ಯರ್ಥಂ ತಾಡಿತಾ ಪ್ರೇಯಸೀ ಪ್ರಿಯಂ ॥ ೫೪ ॥**

**ವ್ಯಥಿತಾಪಿ ಭಯಂ ತ್ಯಕ್ತ್ವಾ ಕಂಠೇ ಗೃಹ್ಣೀತ ವಲ್ಲಭಂ ।**
**ಉಚ್ಚೈರ್ನರೋದನಂ ಕುರ್ಯಾನ್ನೈವಾಕ್ರೋಶೇಜ್ಜನಂ ಪ್ರತಿ ॥ ೫೫ ॥**

**ಪಲಾಯನಂ ನ ಕರ್ತವ್ಯಂ ನಿಜಗೇಹಾದ್ಬಹಿಃ ಸ್ತ್ರಿಯಾ ।**
**ತ್ವಂ ಪಿತಾ ತ್ವಂ ಮಮ ಭ್ರಾತಾ ನೇಚ್ಛಾಮಿ ತ್ವಾಮತಃ ಪರಂ ॥ ೫೬ ॥**

**ವಿರಕ್ತಲಕ್ಷಣಂ ವಾಕ್ಯಂ ನೇದೃಗ್ವಾಚ್ಯಂ ಕದಾಚನ ।**
**ಉತ್ಸವಾದಿಷು ಬಂಧೂನಾಂ ಸದನಂ ಯದಿ ಗಚ್ಛತಿ ॥ ೫೭ ॥**

---

೫೩-೫೯. ಗಂಡನೊಡನೆ ಪ್ರಣಯದಿಂದ ಜಗಳವು ಬಂದರೆ ಅದನ್ನೇ ದೊಡ್ಡದು ಮಾಡಿಕೊಂಡು ಹೊರಗೂ ಜಗಳವಾಡಬಾರದು. ತನಗೋಸ್ಕರವಾಗಲೀ ತನ್ನ ನೆಂಟರಿಗೋಸ್ಕರವಾಗಲಿ, ಸವತಿಯರಿಗೋಸ್ಕರವಾಗಲಿ, ಕೋಪಗೊಂಡು ತನ್ನ ಸೌಭಾಗ್ಯಕ್ಕೆಲ್ಲಾ ಮೂಲಭೂತನಾದ ಗಂಡನೊಡನೆ ಜಗಳವಾಡಬಾರದು. ಅವನು ಒಂದು ವೇಳೆ ಅಯೋಗ್ಯನಾಗಿದ್ದರೂ ಅವನೊಡನೆ ಜಗಳವಾಡಬಾರದು. ಗಂಡನು ಹೆದರಿಸಲಿ, ಬಯ್ಯಲಿ, ಹೊಡೆಯಲಿ, ಯಾವ ಬಗೆಯಾದ ವ್ಯಥೆಯನ್ನು ಕೊಡಲಿ ಏನುಮಾಡಿದರೂ ಭಯವನ್ನು ಬಿಟ್ಟು ಧಾರ್ಷ್ಟ್ಯದಿಂದ ಗಂಡನ ಕತ್ತನ್ನು ಹಿಡಿದು ಆಲಂಗಿಸಿಕೊಳ್ಳಬೇಕು. ಗಂಡನು ಹಿಂಸಿಸಿದರೂ ಗಟ್ಟಿಯಾಗಿ ಅಳಬಾರದು ಮನೆಯಲ್ಲಿರುವ ಇತರರನ್ನು ಕುರಿತು ಕೋಪಿಸಿಕೊಂಡು ಬಯ್ಯುತ್ತಿರಬಾರದು. ಕೋಪಿಸಿಕೊಂಡು ಗಂಡನ ಮನೆಯಿಂದ ಹೊರಕ್ಕೆ ಓಡಿಹೋಗಬಾರದು. ನೀನೇ ತಂದೆಯು. ನೀನೇ ಸಹೋದರನು. ಆದ್ದರಿಂದ ನಿನ್ನನ್ನು ಇನ್ನುಮೇಲೆ ರತಿಯಲ್ಲಿ ಪ್ರೀತಿಸಲಾರೆ. ಈ ರೀತಿಯಾದ ವೈರಾಗ್ಯದ ಮಾತುಗಳನ್ನು ಯಾವಾಗಲೂ ಹೇಳಬಾರದು. ಮದುವೆ, ಮುಂಜಿ ಮುಂತಾದ ಉತ್ಸವಗಳಿಗೆ ಬಂಧುಗಳ ಮನೆಗೆ ಹೋಗಬೇಕಾಗಿ ಬಂದಲ್ಲಿ ಗಂಡನ ಒಪ್ಪಿಗೆಯನ್ನು

ಲಬ್ಧ್ವಾನುಜ್ಞಾಂ ಸದಾಭರ್ತುರ್ಗಚ್ಛೇ ದಧ್ಯಕ್ಷ ರಕ್ಷಿತಾ ।
ನ ವಸೇತ್ಸುಚಿರಂ ತತ್ರ ಪ್ರತ್ಯಾಗಚ್ಛೇದ್ಗೃಹಂ ಸತೀ ॥ ೫೮ ॥

ಪ್ರಸ್ಥಾನಾಭಿಮುಖೇ ಪತ್ಯೌ ಭವೇನ್ಮಂಗಳಭಾಷಿಣೀ ।
ನ ವಾರ್ಯೋಽಸೌ ನಿಷೇಧೋಕ್ತ್ಯಾ ನ ಕಾರ್ಯಂ ರೋದನಂ ತದಾ ॥ ೫೯ ॥

ಅಕೃತ್ಯೋದ್ವರ್ತನಂ ನಿತ್ಯಂ ಪತ್ಯೌ ದೇಶಾಂತರಂ ಗತೇ ।
ವಧೂರ್ಜೀವನ ರಕ್ಷಾರ್ಥಂ ಕರ್ಮ ಕುರ್ಯಾದನಿಂದಿತಂ ॥ ೬೦ ॥

ಕೃತ್ವಾ ವೃತ್ತಿಂ ಯದಾ ಭರ್ತಾ ವ್ರಜೇದ್ದೇಶಾನ್ತರಂ ತದಾ ।
ಪತಿಕಲ್ಪಿತ ವೃತ್ತ್ಯೈವ ವರ್ತೇತ ಗೃಹಮೇಧಿನೀ ॥ ೬೧ ॥

ಶ್ವಶ್ರೂಶ್ವಶುರಯೋಃ ಪಾರ್ಶ್ವೇ ನಿದ್ರಾ ಕಾರ್ಯಾ ನ ಚಾನ್ಯತಃ ।
ಪ್ರತ್ಯಹಂ ಪತಿವಾರ್ತಾ ಚ ತಯಾನ್ವೇಷ್ಯಾ ಪ್ರಯತ್ನತಃ ॥ ೬೨ ॥

---

ಹೊಂದಿ ಜೊತೆಗೆ ರಕ್ಷಣೆಗೆ ಯಾರನ್ನಾದರೂ ಕರೆದುಕೊಂಡು ಅವರ ಜೊತೆಯಲ್ಲಿ ಹೋಗಬೇಕು. ಆ ಬಂಧುಗಳ ಮನೆಯಲ್ಲಿ ಬಹುಕಾಲವಿರದೆ ಮನೆಗೆ ಬಂದು ಬಿಡಬೇಕು. ಗಂಡನು ಪರಸ್ಥಳಕ್ಕೆ ಪ್ರಯಾಣಮಾಡುವಾಗ್ಗೆ ಮಂಗಳದ ಮಾತನ್ನು ಆಡಬೇಕು. ಬೇಡ ಕೂಡದು. ಇವೇ ಮುಂತಾದ ನಿಷೇಧದ ಮಾತಿನಿಂದ ಅವನನ್ನು ತಡೆಯಬಾರದು. ಆಗ ಅಳಲೂ ಬಾರದು.

೬೦. ಗಂಡನು ಮನೆಯನ್ನು ಬಿಟ್ಟು ಬೇರೆ ಊರಿಗೆ ಹೋದಾಗ್ಗೆ ದೇಹಕ್ಕೆ ಅಲಂಕಾರ ಬಣ್ಣ ಬಳಿದುಕೊಳ್ಳುವುದು ಮುಂತಾದುವನ್ನು ಮಾಡಬಾರದು. ತನ್ನ ಜೀವನವನ್ನು ಕಾಪಾಡಿಕೊಳ್ಳುವ ನಿರ್ದುಷ್ಟವಾದ ಕೆಲಸಗಳನ್ನು ಮಾತ್ರ ಮಾಡಿಕೊಳ್ಳಬೇಕು.

೬೧. ಗಂಡನಾದವನು ಯಾವ ಜೀವನೋಪಾಯವನ್ನು ಹೆಂಡತಿಗೆ ಕಲ್ಪಿಸಿ ದೇಶಾಂತರಕ್ಕೆ ಹೋಗಿರುವನೋ ಅದೇ ವೃತ್ತಿಯಿಂದ ಹೆಂಡತಿಯಾದವಳು ಮನೆಯವರನ್ನು ಕಾಪಾಡಿಕೊಂಡು ಇರಬೇಕು.

೬೨. ಅತ್ತೆ ಮಾವಂದಿರ ಹತ್ತಿರದಲ್ಲಿಯೇ ಮಲಗಿ ನಿದ್ದೆಮಾಡಬೇಕೇ ಹೊರತು ಬೇರೆ ಜಾಗದಲ್ಲಿ ನಿದ್ದೆಮಾಡಬಾರದು. ಮಲಗಲೂ ಬಾರದು ಪ್ರತಿದಿನವೂ ಗಂಡನ ಕಡೆಯ ಸಮಾಚಾರವೇನೆಂಬುದನ್ನು ಪ್ರಯತ್ನದಿಂದ ತಿಳಿಯುತ್ತಿರಬೇಕು.

ದೂತಾಃ ಪ್ರಸ್ಥಾಪನೀಯಾಶ್ಚ ಪ್ರತ್ಯ್ಮಃ ಕ್ಷೇಮೋಪಲಬ್ಧಯೇ ।
ದೇವತಾನಾಂ ಪ್ರಸಿದ್ಧಾನಾಂ ಕರ್ತವ್ಯಮುಪಚಾಯನಂ ॥ ೬೩ ॥

ಏವಮಾದಿವಿಧಾತವ್ಯಂ ಸತ್ಯಾ ಪ್ರೋಷಿತಯೋಷಯಾ ।
ಅಪ್ರಕ್ಷಾಳನಮಂಗಾನಾಂ ಮಲಿನಾಂಬರಧಾರಣಂ ॥ ೬೪ ॥

ತಿಲಕಾಂಜನ ಹೀನತ್ವಂ ಗಂಧಮಾಲ್ಯವಿವರ್ಜನಂ ।
ನಖರೋಮ್ಣಾಮಸಂಸ್ಕಾರೋ ದಶನಾನಾಮಮಾರ್ಜನಂ ॥ ೬೫ ॥

ತಾಂಬೂಲಚರ್ವಣಾಲಸ್ಯಮತಿ ಕಶ್ಮಲತಾ ಸ್ತ್ರಿಯಾಃ ।
ಬಹ್ವಾಲಸ್ಯಂ ಸದಾ ನಿದ್ರಾ ಕಲಹೇ ಸರ್ವದಾ ರುಚಿಃ ॥ ೬೬ ॥

ಉಚ್ಚೈರ್ಹಾಸೋ ಪರೈರ್ನರ್ಮ ಪರಚೇಷ್ಟಾವಿಚಿಂತನಂ ।
ಸ್ವೇಚ್ಛಾಪರ್ಯಟನಂ ಚೈವ ಪರಪುಂಸೋಂಗಮರ್ದನಂ ॥ ೬೭ ॥

---

೬೩. ಗಂಡನ ಯೋಗಕ್ಷೇಮವನ್ನು ತಿಳಿಯಲು ದೂತರನ್ನು ಕಳುಹಿಸಿ ತಿಳಿದುಕೊಳ್ಳಬೇಕು. ಪ್ರಸಿದ್ಧವಾದ ದೇವತೆಗಳಿಗೆ ಹರಕೆಯನ್ನು ಹಾಕಿಕೊಳ್ಳಬೇಕು.

೬೪-೬೮. ಗಂಡನು ಊರನ್ನು ಬಿಟ್ಟು ಪರಸ್ಥಳಕ್ಕೆ ಹೋದಾಗ ಹೆಂಡತಿಯು ಹೀಗೆಲ್ಲವನ್ನೂ ಮಾಡಬೇಕು. ಮತ್ತು ಮೈಕೈಗಳನ್ನು ತೊಳೆದುಕೊಳ್ಳಬಾರದು. ಕೊಳೆಯಾದ ಬಟ್ಟೆಯನ್ನು ಧರಿಸಿರಬೇಕು. ತಿಲಕ ಕಾಡಿಗೆಗಳನ್ನು ಹಚ್ಚಿಕೊಳ್ಳಕೂಡದು. ಗಂಧ ಹೂವುಗಳನ್ನು ಧರಿಸಿಕೊಳ್ಳಬಾರದು. ಉಗುರುಗಳಿಗೆ ಬಣ್ಣ ಹಾಕಿಕೊಳ್ಳುವುದೂ ತಲೆಗೆ ಸುಗಂಧತೈಲ ಮುಂತಾದುವನ್ನು ಹಾಕಿಕೊಂಡು ಬಾಚಿಕೊಳ್ಳುವುದೂ ಕೂಡದು. ಹಲ್ಲನ್ನು ಉಜ್ಜಿಕೊಳ್ಳಬಾರದು. ತಾಂಬೂಲವನ್ನು ಹಾಕಿಕೊಳ್ಳುವುದೂ ಬಹು ಅಲ್ಪವಾಗಿರಬೇಕು. ಒಟ್ಟಿನಲ್ಲಿ ಆಕೆಯು ಕೊಳಕಿಯಾಗಿರಬೇಕು. ಬಹುವಾದ ಸೋಮಾರಿತನ, ಯಾವಾಗಲೂ ನಿದ್ದೆಮಾಡುವುದು, ಪರರೊಡನೆ ಗುಟ್ಟುಮಾತನ್ನಾಡುವುದು, ಯಾವಾಗಲೂ ಜಗಳದಲ್ಲಿ ಆಸೆ, ಗಟ್ಟಿಯಾಗಿ ನಗುವುದು, ಪರರ ಕೆಲಸಗಳನ್ನೇ ಆಡುತ್ತ ಯೋಚಿಸುತ್ತಾ ಇರುವುದು, ಮನಸ್ಸಿಗೆ ಬಂದಂತೆ ತಿರುಗುವುದು, ಪರ ಪುರುಷನ

ಅಟನಂ ಚೈಕವಸ್ತ್ರೇಣ ನಿರ್ಲಜ್ಜತ್ವಂ ವೃಥಾ ಗತಿಃ ।
ಇತ್ಯಾದಿದೋಷಾಃ ಕಥಿತಾ ಯೋಷಿತೋ ಭರ್ತೃದುಃಖದಾಃ ॥ ೨೮ ॥

ನಿರ್ವರ್ತ್ಯ ಗೃಹಕಾರ್ಯಾಣಿ ಹರಿದ್ರಾಲೇಪನೈಸ್ತನುಂ ।
ಪ್ರಕ್ಷಾಲ್ಯ ಶುಚಿತೋಯೇನ ಕುರ್ಯಾನ್ಮಂಡನಮುಜ್ಜ್ವಲಂ ॥ ೨೯ ॥

ಸಮೀಪಂ ಪ್ರೇಯಸೋ ಗಚ್ಛೇತ್ ವಿಕಸನ್ಮುಖ ಪಂಕಜಾ ।
ಅನೇನ ನಾರೀವೃತ್ತೇನ ಮನೋವಾಗ್ದೇಹಸಂಯುತಾ ।
ಇಹಾಗ್ರ್ಯಾಂ ಕೀರ್ತಿಮಾಪ್ನೋತಿ ಪತಿಲೋಕೇ ಪರತ್ರ ಚ ॥ ೩೦ ॥

ನೈತಾದೃಶಂ ದೈವತಮಸ್ತಿ ಕಿಂಚಿತ್ಸರ್ವೇಷು
ಲೋಕೇಷು ಸ ದೈವತೇಷು ।
ಯದಾ ಪತಿಸ್ತುಷ್ಯತಿ ಸರ್ವಕಾಮಾಂ
ಲಭ್ಯಾತ್ಪ್ರಕಾಮಂಕುಪಿಶ್ಚ ಹನ್ಯಾತ್ ॥ ೩೧ ॥

---

ಕೈಕಾಲುಗಳನ್ನು ಅಮುಕುವುದು, ಒಂದೇ ಬಟ್ಟೆಯಲ್ಲಿ ಓಡಾಡುವುದು, ನಾಚಿಕೆಯನ್ನು ಬಿಟ್ಟಿರುವುದು, ಕೆಲಸವಿಲ್ಲದೆ ತಿರುಗುತ್ತಿರುವುದು, ಇವೇ ಮುಂತಾದುವು ಹೆಂಗಸರಿಗೆ ದೋಷಗಳು. ಇವು ಗಂಡಂದಿರಿಗೆ ಯಾವಾಗಲೂ ದುಃಖವನ್ನುಂಟುಮಾಡುತ್ತವೆ.

೨೯–೩೦ ಮನೆಯ ಕೆಲಸಗಳನ್ನು ಮಾಡಿಕೊಂಡು ಅರಶಿನ ಕುಂಕುಮಗಳನ್ನು ಹಚ್ಚಿಕೊಂಡು ಒಳ್ಳೆಯ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡಿರಬೇಕು. ಚೆನ್ನಾಗಿ ಕಾಣುವಂತೆ ಅಲಂಕರಿಸಿಕೊಂಡಿರಬೇಕು. ಈರೀತಿ ಮಾಡಿಕೊಂಡು ಮುಗುಳುನಗೆಯನ್ನು ನಗುತ್ತ ಗಂಡನ ಬಳಿಗೆ ಹೋಗಬೇಕು. ಹೆಂಗಸಾದವಳು ಈ ರೀತಿಯಾಗಿದ್ದುಕೊಂಡು ಮನಸ್ಸು ಮತ್ತು ದೇಹಗಳನ್ನು ತನ್ನ ಕೈಯ್ಯಲ್ಲಿಟ್ಟುಕೊಂಡು ಇರಬೇಕು ಹೇಗಿದ್ದರೆ ಈ ಲೋಕದಲ್ಲಿ ಉತ್ತಮವಾದ ಕೀರ್ತಿಯನ್ನು ಹೊಂದಿ ಪರಲೋಕದಲ್ಲಿಯೂ ಸಹ ಸುಖಿಸುತ್ತಾಳೆ.

೩೧. ಈ ಗಂಡನಿಗೆ ಸಮವಾದ ದೇವರು ಯಾವ ಲೋಕದಲ್ಲಿಯೂ ಇಲ್ಲ. ಯಾವ ದೇವತೆಗಳಲ್ಲಿಯೂ ಇಲ್ಲ. ಗಂಡನು ಸಂತೋಷಪಟ್ಟರೆ ಈಕೆಯು ಬೇಕಾದ ಇಷ್ಟಗಳನ್ನು ಹೊಂದಬಹುದು. ಅವನಿಗೆ ಕೋಪಬಂದರೆ ಎಲ್ಲವೂ ನಾಶವಾಗುತ್ತದೆ.

ತಸ್ಮಾದಪತ್ಯಂ ವಿವಿಧಾಶ್ಚ ಭೋಗಾಃ
ಶಯ್ಯಾಸನಾನ್ಯ ದ್ಭುತ ದರ್ಶನಾನಿ ।
ವಸ್ತ್ರಾಣಿ ಮಾಲ್ಯಾನಿ ತಥೈವ ಗಂಧಾಃ
ಸ್ವರ್ಗಶ್ಚ ಲೋಕೇ ವಿವಿಧಾ ಚ ಕೀರ್ತಿಃ ॥ ೭೨ ॥

ಇತ್ಯಾದಿ ಧರ್ಮನಯನೀತಿಗುಣೋತ್ತರಾಭಿಃ ।
ತಾಭಿಃ ಸಹೈವ ಚಿರಕಾಲಮಸೌ ಮುನೀಂದ್ರಃ ।
ಸಂಸಾರಸೌಖ್ಯ ನಿಯುತೋಽಪ್ಯಮಲಾಂತರಾತ್ಮಾ
ಚಕ್ರೇತಿರಾತ್ರಚಯನಕ್ರತುವಾಜಪೇಯಾನ್ ॥ ೭೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಪತಿವ್ರತಾ ಲಕ್ಷಣಾಖ್ಯಾನಂ ನಾಮ ಚತುಸ್ತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೨. ಆ ಗಂಡನಿಂದಲೇ ಮಕ್ಕಳು ನಾನಾಬಗೆಯ ಭೋಗಗಳು ಹಾಸಿಗೆ ಆಸನ ವಿಧ ವಿಧವಾದ ನೋಟಗಳು ಬಟ್ಟೆಗಳು ಮಾಲೆಗಳು ಗಂಧಗಳು ಸ್ವರ್ಗವೂ ಲೋಕದಲ್ಲಿ ಒಳ್ಳೆಯ ಕೀರ್ತಿಯು ಎಲ್ಲವೂ ಉಂಟಾಗುತ್ತವೆ.

೭೩. ಇವೇ ಮುಂತಾದ ನಯನೀತಿಗುಣಗಳಿಂದ ಕೂಡಿರುವ ಅವರೊಡನೆ ಕೂಡಿಕೊಂಡು ಈ ಮೃಗಶೃಂಗನು ಸಂಸಾರ ಸೌಖ್ಯವನ್ನು ಹೊಂದುತ್ತಾ ಸಂತೋಷದಿಂದ ಅತಿರಾತ್ರ ವಾಜಪೇಯ ಮುಂತಾದ ಯಾಗಗಳನ್ನು ಮಾಡಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಪತಿವ್ರತಾ ಲಕ್ಷಣಾಖ್ಯಾನ ಎಂಬ ಇನ್ನೂರ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಏವಂ ಗೃಹೇ ನಿವಸತೋ ಮೃಗಶೃಂಗ ಮಹಾಮುನೇಃ ।
ಕಾಲೇನ ಮಹಿಷೀ ತಸ್ಯ ಸುವೃತ್ತಾ ಸುಷುವೇ ಸುತಂ ॥ ೧ ॥

ತತಃ ಪಿತೃಋಣಾನ್ಮುಕ್ತಃ ಕೃತಾರ್ಥೋ ಮುನಿಪುಂಗವಃ ।
ಜಾತಕರ್ಮ ಕುಮಾರಸ್ಯ ಸಮ್ಯಕ್ ಚಕ್ರೇ ವಿಧಾನವತ್ ॥ ೨ ॥

ಚಕಾರ ನಾಮಕರಣಂ ತ್ರಿಕಾಲಜ್ಞೋ ಮಹಾಮತಿಃ ।
ಭವಿಷ್ಯಕರ್ಮಸದೃಶಂ ಮೃಕಂಡುರಿತಿ ವಿಶ್ರುತಂ ॥ ೩ ॥

---

## ಇನ್ನೂರ ಮೂವತ್ತೈದನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಈ ರೀತಿಯಾಗಿ ಗೃಹಸ್ಥಾಶ್ರಮವನ್ನು ಅನುಸರಿಸುತ್ತಿರುವ ಆ ಮೃಗಶೃಂಗ ಮುನಿಯು ಹೆಂಡತಿಯಾದ ಸುವೃತ್ತೆಯು ಕೆಲವು ಕಾಲದ ಮೇಲೆ ಒಂದು ಗಂಡು ಮಗುವನ್ನು ಹೆತ್ತಳು.

೨. ಈ ಋಷಿಯು ಗಂಡು ಮಗನು ಹುಟ್ಟಲು ಪಿತೃ ಋಣದಿಂದ ಮುಕ್ತನಾದನು. ಅನಂತರ ಆ ಮಗನಿಗೆ ಜಾತಕರ್ಮವನ್ನು ಚೆನ್ನಾಗಿ ವಿಧಿಯಲ್ಲಿ ಹೇಳಿರುವಂತೆಯೇ ಮಾಡಿದನು.

೩. ಭೂತಭವಿಷ್ಯತ್ ವರ್ತಮಾನ ಕಾಲಗಳ ವಿಷಯವನ್ನು ತಿಳಿದಿರುವ ಈ ಮೃಗಶೃಂಗನು ತನ್ನ ಮಗನಿಗೆ ಮುಂದೆ ಆಗುವ ಕೆಲಸಕ್ಕೆ ತಕ್ಕಂತೆ ಮೃಕಂಡು ಎಂಬ ಹೆಸರನ್ನಿಟ್ಟನು.

ಯದ್ವಿಶಂಕಾ ಮೃಗಗಣಾಃ ಕಂಡೂಯಂತೇಽಸ್ಯ ವಿಗ್ರಹೇ |
ತಸ್ಮಾನ್ಮೃಕಂಡುರಿತ್ಯಸ್ಯ ನಾಮ ಚಕ್ರೇ ಪಿತಾ ಸ್ವಯಂ || ೪ ||

ಕುಲೋಜ್ಜ್ವಲೋ ಗುಣನಿಧಿಃ ಜ್ವಲತ್ಪಾವಕ ಸನ್ನಿಭಃ |
ಕೃತೋಪನಯನಃ ಪಿತ್ರಾ ಬ್ರಹ್ಮಚರ್ಯ ಪರಾಯಣಃ || ೫ ||

ಅಧ್ಯೈಷ್ಟ ವೇದಾನಖಿಲಾನ್ ಮುನಿರ್ಗುರು ಕುಲೇ ವಸನ್ |
ಗುರುಣಾನುಮತಃ ಪಶ್ಚಾತ್ ದ್ವಿತೀಯಾಶ್ರ ಮಮಗ್ರಹೀತ್ || ೬ ||

ಮುದ್ಗಲಸ್ಯ ಮುನೇಃ ಕನ್ಯಾಮುಪಯೇಮೇ ಮರುದ್ವತೀಂ |
ಕಮಲಾ ಪೀಡತಃ ಕಾಲಾದಸೂತ ಸುತಮುತ್ತಮಂ । || ೭ ||

ಆಚಾರೇಣ ಶ್ರುತೇನೈವ ವಿದ್ಯಯಾ ವಿನಯೇನ ಚ |
ಸರ್ವತಶ್ಚೋತ್ತರೋ ಯಸ್ಮಾತ್ತಸ್ಮಾದುತ್ತಮ ಇತ್ಯಭೂತ್ || ೮ ||

---

೪. ಮೃಗಗಳ ಗುಂಪು ಸ್ವಲ್ಪವೂ ಹೆದರದೆ ಇವನ ಶರೀರವನ್ನು ತಿಕ್ಕಿ ತಮ್ಮ ನವೆಯನ್ನು ಹೋಗಲಾಡಿಸಿಕೊಳ್ಳುತ್ತಿವಾದ್ದರಿಂದ ತಂದೆಯು ತಾನು ಮೃಕಂಡು ಎಂದು ಈ ಮಗನಿಗೆ ಹೆಸರಿಟ್ಟನು.

೫-೬. ಅವನು ಕುಲದಲ್ಲಿ ಪ್ರಸಿದ್ಧನಾಗಿಯೂ, ಗುಣಗಳಿಗೆ ನಿಧಿಯಾಗಿಯೂ, ಉರಿಯುವ ಬೆಂಕಿಯಂತೆ ಕಾಂತಿಯುಳ್ಳವನಾಗಿಯೂ ಇದ್ದನು. ಅನಂತರದಲ್ಲಿ ತಂದೆಯು ಉಪನಯವನ್ನು ಮಾಡಲು ಬ್ರಹ್ಮಚರ್ಯದಲ್ಲಿ ಆಸಕ್ತನಾಗಿ ಗುರುಕುಲದಲ್ಲಿರುತ್ತಾ ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದನು. ಅನಂತರ ಗುರುವಿನ ಅಪ್ಪಣೆಯನ್ನು ಹೊಂದಿ ದ್ವಿತೀಯಾಶ್ರಮವಾದ ಗೃಹಸ್ಥಾಶ್ರಮಕ್ಕೆ ಬರಲು ಉದ್ಯುಕ್ತನಾದನು.

೭-೮. ಅವನು ಮುದ್ಗಲನ ಮಗಳಾದ ಮರುದ್ವತಿ ಎಂಬ ಹುಡುಗಿಯನ್ನು ಮದುವೆಯಾದನು. ಕಮಲದಂತಿದ್ದ ಆಕೆಯು ಕಾಲಾನುಕಾಲದಲ್ಲಿ ಒಬ್ಬ ಉತ್ಕೃಷ್ಟನಾದ ಮಗನನ್ನು ಹೆತ್ತಳು ಅವನು ಆಚಾರ, ವಂಶ, ವಿದ್ಯೆ, ವಿನಯಗಳಲ್ಲಿ ಎಲ್ಲರಿಗಿಂತಲೂ ಉತ್ತಮನಾದುದರಿಂದ ಅವನಿಗೆ ಉತ್ತಮನೆಂದು ಹೆಸರಿಟ್ಟನು.

ಸ ಪಿತ್ರಾ ಕೃತಸಂಸ್ಕಾರಃ ಕೃತೋಪನಯನಕ್ರಿಯಃ ।
ಅಧೀತ್ಯ ವೇದಾನಖಿಲಾನುಪಯೇಮೇ ವಿಧಾನತಃ ॥ ೯ ॥

ಕಾನ್ತಾಲಕಾನ್ತಾಂ ಕಮನೀಯರೂಪಾಂ
ಕಣ್ವಸ್ಯ ಕನ್ಯಾಂ ಕಮಲಾಯತಾಕ್ಷೀಂ ।
ಕಲ್ಯಾಣಶೀಲಾಂ ಚ ಕುಶಾಭಿಧಾನಾಂ
ಕುಟುಂಬಿನೀ ಸಾ ಭವದುತ್ತಮಸ್ಯ ॥ ೧೦ ॥

ವಿಮಲಾಪಿಸುತಂ ಲೇಭೇ ಸುಮತಿಂ ನಾಮವಿಶ್ರುತಂ ।
ಸುಮತಿಃ ಸಕಲಾನ್ವೇದಾನಧೀತ್ಯ ಗೃಹವಾನಭೂತ್ ॥ ೧೧ ॥

ಸತ್ಯಾಖ್ಯಾ ತಸ್ಯ ಭಾರ್ಯಾಭೂತ್ ಸುಮತೇಸ್ತನಯಾ ಶುಭಾ ।
ಸುರಸಾಪಿ ತತಃ ಕಾಲಾತ್ಸುವ್ರತಂ ಸುಷುವೇ ಸುತಂ ॥ ೧೨ ॥

ಸುವ್ರತಸ್ಸುರಸಾ ಸೂನುಃ ಸರ್ವಾನ್ ವೇದಾನಧೀತ್ಯ ಚ ।
ದಕ್ಷಿಣಾಂ ಗುರವೇ ದತ್ವಾ ದ್ವಿತೀಯಾಶ್ರಮಮುಗ್ರಹೀತ್ ॥ ೧೩ ॥

---

೯. ಮೃಗಶೃಂಗನು ಅವನಿಗೂ ಉಪನಯನಾದಿಗಳನ್ನು ಶಾಸ್ತ್ರದಂತೆ ಕಾಲಕ್ಕೆ ಸರಿಯಾಗಿ ಮಾಡಲು ಗುರುಕುಲದಲ್ಲಿ ವೇದಶಾಸ್ತ್ರಗಳೆಲ್ಲವನ್ನೂ ಓದಿ ಮದುವೆಯನ್ನು ಮಾಡಿಕೊಂಡನು.

೧೦. ಚೆನ್ನಾಗಿರುವ ಮುಂಗುರುಳುಳ್ಳ ಸುಂದರಿಯಾದ ಕಮಲದಂತೆ ಕಣ್ಣುಗಳುಳ್ಳ ಮಂಗಳಶೀಲಳಾದ ಕಣ್ವನ ಮಗಳಾದ ಕುಶೆ ಎಂಬುವಳನ್ನು ಮದುವೆ ಮಾಡಲು ಆಕೆಯು ಈತನ ಹೆಂಡತಿಯಾದಳು.

೧೧-೧೨. ವಿಮಲೆಯು ಸುಮತಿಯೆಂಬ ಮಗನನ್ನು ಹೆತ್ತಳು. ಆ ಸುಮತಿಯು ಸಕಲ ವೇದಗಳನ್ನು ಓದಿ ಮದುವೆಯಾದನು. ಸುಮತಿಯು ಮಗಳಾದ ಸತ್ಯೆ ಎಂಬುವಳು ಅವನಿಗೆ ಹೆಂಡತಿಯಾದಳು. ಸುರಸೆಯೂ ಕೂಡ ಸುವ್ರತನೆಂಬ ಮಗನನ್ನು ಹೆತ್ತಳು.

೧೩. ಸುರಸೆಯ ಮಗನಾದ ಸುವ್ರತನೂ ಎಲ್ಲಾ ವೇದಗಳನ್ನೂ ಓದಿ ಗುರುವಿಗೆ ದಕ್ಷಿಣೆಯನ್ನು ಕೊಟ್ಟು ದ್ವಿತೀಯಾಶ್ರಮವಾದ ಗೃಹಸ್ಥಾಶ್ರಮವನ್ನು ಸ್ವೀಕರಿಸಿದನು.

ಧರ್ಮಪತ್ನೀ ಬಭೂವಾಸ್ಯ ಪೃಥೋಃ ಪುತ್ರೀ ಪ್ರಿಯಂವದಾ ।
ಸರ್ವಾನಯಾಜಯತ್ಪುತ್ರಾನ್ ಕ್ರತುಭಿಃ ಪ್ರಾಪ್ತ ದಕ್ಷಿಣೈಃ ॥
ತೇ ಚ ಶುಶ್ರೂಷಯಾ ಸರ್ವೇ ನಿತ್ಯಂ ಚಕ್ರುಃ ಪಿತುಃ ಪ್ರಿಯಂ ॥ ೧೪ ॥

ಆಭಿಃ ಸ್ನುಷಾಭಿಃ ಶುಭಲಕ್ಷಣಾಭಿಃ
ಶುಭೈಸ್ಸುತೈಸ್ತೈಃ ಶ್ರುತಿಪಾರಗೈಶ್ಚ ।
ಭಾರ್ಯಾಭಿರುತ್ಕೃಷ್ಟ ಗುಣೋತ್ತರಾಭಿಃ
ಚಕಾರ ಗಾರ್ಹಸ್ಥ್ಯಮುಪಾಸ್ಯಮಾನಃ ॥ ೧೫ ॥

ಸುಮತೇರುತ್ತಮಸ್ಯಾಪಿ ಸುವ್ರತಸ್ಯ ಮಹಾತ್ಮನಃ ।
ಪ್ರತ್ಯೇಕಮಭವನ್ ಪುತ್ರಾ ಬಹವೋ ವೇದಪಾರಗಾಃ ॥ ೧೬ ॥

ಭಾರ್ಯಾಭಿಶ್ಚ ಸ್ನುಷಾಭಿಶ್ಚ ಪುತ್ರೈಃ ಪೌತ್ರೈರಯಂ ಮುನಿಃ ।
ಮಾಘಮಾಸೇ ತು ಸಂಪ್ರಾಪ್ತೇ ಪ್ರಾತಃಕಾಲೇ ನಿಮಜ್ಜತಿ ॥ ೧೭ ॥

---

೧೪. ಅವನು ಪೃಥುವಿನ ಮಗಳಾದ ಪ್ರಿಯಂವದೆಯನ್ನು ಮದುವೆಯಾದನು. ಈ ಮೃಗಶೃಂಗನು ಎಲ್ಲಾ ಮಕ್ಕಳ ಕೈಯ್ಯಿಂದಲೂ ಸರಿಯಾದ ದಕ್ಷಿಣೆಯನ್ನು ಕೊಡಿಸಿ ಯಾಗಗಳನ್ನು ಮಾಡಿಸಿದನು. ಆ ಮಕ್ಕಳೂ ಕೂಡ ತಂದೆಯು ಹೇಳಿದಂತೆ ಕೇಳುತ್ತಾ, ಆತನಿಗೆ ಶುಶ್ರೂಷೆಯನ್ನು ಮಾಡುತ್ತಿದ್ದರು.

೧೫. ಒಳ್ಳೆಯ ಲಕ್ಷಣವತಿಯರಾದ ಈ ಸೊಸೆಯರೊಡನೆಯೂ, ವೇದ ವೇದಾಂಗಗಳನ್ನು ತಿಳಿದಿರುವ ಈ ಮಕ್ಕಳೊಡನೆಯೂ ತನ್ನ ಮಾತಿನಂತೆ ನಡೆಯುವ ಒಳ್ಳೆಯ ಗುಣಶಾಲಿಗಳಾದ ಹೆಂಡತಿಯರೊಡನೆಯೂ ಇದ್ದುಕೊಂಡು ಈ ಮೃಗಶೃಂಗನು ಗೃಹಸ್ಥಾಶ್ರಮವನ್ನು ನಡೆಸುತ್ತಿದ್ದನು.

೧೬. ಸುಮತಿ, ಉತ್ತಮ, ಸುವ್ರತರುಗಳಿಗೆ ಬೇರೆಬೇರೆಯಾಗಿ ಬಹುಜನ ಮಕ್ಕಳಾದರು. ಅವರೆಲ್ಲರೂ ಗುಣವಂತರಾಗಿ ವೇದಗಳನ್ನು ಓದಿದರು.

೧೭-೧೯. ಹೆಂಡತಿಯರು, ಸೊಸೆಯರು, ಮಕ್ಕಳು, ಮೊಮ್ಮಕ್ಕಳು, ಇವರೊಡನೆ ಆ ಮೃಗಶೃಂಗನು ಸುಖವಾಗಿರುತ್ತ ಮಾಘಮಾಸ ಬಂದಾಗ ಬೆಳಗ್ಗೆ ಸ್ನಾನ ಮಾಡುತ್ತಿದ್ದನು. ಆ ಮಾಘಮಾಸವನ್ನು ಒಂದು ಸಾರಿಯೂ ಸ್ನಾನವನ್ನು

ಮೋಘಂ ಚ ಕುರುತೇ ಮಾಘಂ ನ ಕದಾಚಿದಪಿ ದ್ವಿಜಃ ।
ಮಾಘಮಾಸೇ ತು ಸಂಪ್ರಾಪ್ತೇ ಸ್ನಾನಂ ದಾನಂ ಶಿವಾರ್ಚನಂ ॥ ೧೮ ॥

ವ್ರತಾನಿ ನಿಯಮಾಶ್ಚೈವ ಗೃಹಸ್ಥಾಶ್ರಮಭೂಷಣಂ ।
ಇತಿ ಮತ್ವಾ ದ್ವಿಜಶ್ರೇಷ್ಠೋ ಮಾಘೇ ಮಾಘೇ ನಿಮಜ್ಜತಿ ॥ ೧೯ ॥

ಏನಂ ಸಂಪಾತಸೌಭಾಗ್ಯ ಮನುಭೂಯ ಮಹಾಮುನಿಃ ।
ಪುತ್ರೇಷು ಭಾರ್ಯಾ ನಿಕ್ಷಿಪ್ಯ ಸಮಾರೋಪ್ಯಾಗ್ನಿಮಾತ್ಮನಿ ॥ ೨೦ ॥

ದೃಷ್ಟ್ವಾಪತ್ಯಸ್ಯ ಚಾಪತ್ಯಂ ವಪುರ್ದೃಷ್ಟ್ವಾ ಚ ಜರ್ಜರಂ ।
ತಪೋನಿಧಿಸ್ತಪಸ್ತಪ್ತುಂ ತಪೋವನಮುಪೇಯಿವಾನ್ ॥ ೨೧ ॥

ಪರ್ಣಾಶನಾತ್ಪಲ್ವಲ ವಾರಿಪಾನಾ
ದುಗ್ರೇ ಗತಃ ಶರ್ಕರ ಭೂಮಿವಾಸಾತ್ ।
ಸಮಾನಧರ್ಮಾ ಮೃಗಯೂಥ ಮಧ್ಯೇ
ಚರಂಶ್ಚಿರಂ ಬ್ರಹ್ಮಪದಂ ಪ್ರಪೇದೇ ॥ ೨೨ ॥

---

ಮಾಡದೆ ವ್ಯರ್ಥವಾಗಿ ಕಳೆಯಲಿಲ್ಲ. ಮಾಘಮಾಸವು ಬಂದೊಡನೆಯೇ ಆ ಪ್ರಾತಸ್ನಾನವನ್ನೂ ಮಾಡುತ್ತಾ ದಾನ, ಶಿವಾರ್ಚನೆ, ವ್ರತ, ನಿಯಮ ಇವೆಲ್ಲವನ್ನೂ ಮಾಡುತ್ತ ಇವೆಲ್ಲವೂ ಗೃಹಸ್ಥಾಶ್ರಮಕ್ಕೆ ಭೂಷಣವೆಂದು ತಿಳಿದು ಮಾಡುತ್ತಿದ್ದನು. ಈ ರೀತಿಯಾಗಿ ಮಾಡುತ್ತ ಪ್ರತಿ ಮಾಘದಲ್ಲಿಯೂ ಪ್ರಾತಸ್ನಾನವನ್ನು ಬಿಡದೆ ಮಾಡುತ್ತಿದ್ದನು.

೨೦-೨೧. ಈ ರೀತಿಯಾಗಿ ಆ ಮುನಿಯು ಸಂಸಾರ ಸುಖವನ್ನು ಅನುಭವಿಸಿದನು. ಅನಂತರ ಮಕ್ಕಳಿಗೆ ಮಕ್ಕಳಾದುದನ್ನು ತನ್ನ ದೇಹದಲ್ಲಿ ಮುಪ್ಪಿನಿಂದ ಸುಕ್ಕುಗಳು ಬಂದಿರುವುದನ್ನೂ ಗಳಿತವಾಗಿರುವುದನ್ನೂ ನೋಡಿ ಹೆಂಡತಿಯರನ್ನೂ ಅವರವರ ಮಕ್ಕಳ ಅಧೀನಕ್ಕೆ ಬಿಟ್ಟು ಔಪಾಸಾಗ್ನಿಯನ್ನು ಆತ್ಮಾರೋಪಣೆ ಮಾಡಿಕೊಂಡು ತಪಸ್ಸನ್ನು ಮಾಡಲು ತಪೋವನಕ್ಕೆ ಹೊರಟುಹೋದನು.

೨೨. ಅವನು ತಪಸ್ಸು ಮಾಡುತ್ತ ಎಲೆಗಳನ್ನು ತಿನ್ನುವುದರಿಂದಲೂ ಅಲ್ಲಲ್ಲಿಯೇ ಇರುವ ಕುಂಟೆಗಳ ನೀರನ್ನು ಕುಡಿಯುವುದರಿಂದಲೂ ಮನಸ್ಸಿನಲ್ಲಿ ತಪಸ್ಸಿನ ಯೋಚನೆಯು ಬಹುವಾಗಿರುವುದರಿಂದಲೂ ಕಲ್ಲು ಭೂಮಿಯಲ್ಲಿ ವಾಸ ಮಾಡುವುದರಿಂದಲೂ ಈ ಮೃಗಶೃಂಗನು ಮೃಗಗಳ ಮಧ್ಯದಲ್ಲಿ ಅವುಗಳಂತೆಯೇ ಇರುತ್ತ ಕೊನೆಗೆ ಶಾಶ್ವತವಾದ ಬ್ರಹ್ಮನ ಪದವನ್ನು ಹೊಂದಿದನು.

ಸಂಭಾವಿತಸ್ತತ್ರ ಚತುರ್ಮುಖೇಣ
ಸಮೋಯಿವಾನ್ಸಿಂಹ ಸಮಾನಪೀಠಂ ।
ಸ್ವೇನಾರ್ಜಿತಾನಪ್ರತಿಮಾನನಂತಾನ್
ಲೋಕಾನನೇಕಾನ್ ಬುಭುಜೇ ಮುನೀಂದ್ರಃ || ೨೩ ||

ತತಃ ಕದಾಚಿತ್ಪ್ರಲಯಾವಸಾನೇ
ಪ್ರಾಪ್ತೇ ಪುನಃ ಶ್ವೇತವರಾಹಕಲ್ಪೇ ।
ಭೂತ್ವಾಜಪುತ್ರೋ ಹ್ಯೃಭು ನಾಮಧೇಯ
ಚಕ್ರೇ ನಿದಾಘಾಯ ಹಿತೋಪದೇಶಂ || ೨೪ ||

ಚತಸ್ರಸ್ತಸ್ಯ ತಾ ಭಾರ್ಯಾಃ ಶೀಲವೃತ್ತಸಮನ್ವಿತಾಃ ।
ಪುತ್ರೇಷು ವ್ರತಚಾರಿಣ್ಯೋ ದಿನಾನಿ ಕತಿಚಿತ್ ಸ್ಥಿತಾಃ || ೨೫ ||

ತತಸ್ತು ಚರಮೇ ಭಾಗೇ ಜರಯಾ ಚ ಪಲೀಕೃತಾಃ ।
ಕುಬ್ಜಾ ವಿರಲದಂತಾಶ್ಚ ಪ್ರ ನಷ್ಟೇಂದ್ರಿಯ ವೃತ್ತಯಃ || ೨೬ ||

---

೨೩. ಆ ಬ್ರಹ್ಮಲೋಕದಲ್ಲಿ ಬ್ರಹ್ಮನಿಂದ ಗೌರವಿತನಾಗಿ ಅಲ್ಲಿರುವ ಸಿಂಹಾಸನದ ಮೇಲೆ ಕುಳಿತುಕೊಂಡನು. ಮತ್ತು ತಾನು ತಪಸ್ಸಿನಿಂದ ಸಂಪಾದಿಸಿರುವ ಉತ್ತಮೋತ್ತಮವಾದ ಲೋಕಗಳನ್ನು ಅನುಭವಿಸುತ್ತಿದ್ದನು.

೨೪. ಅನಂತರ ಮಹಾ ಪ್ರಳಯವಾದಮೇಲೆ ಮತ್ತೆ ಶ್ವೇತ ವರಾಹ ಕಲ್ಪದಲ್ಲಿ ಬ್ರಹ್ಮನಿಗೆ ಋಭುವೆಂಬ ಹೆಸರಿನಿಂದ ಮಗನಾಗಿ ಹುಟ್ಟಿ ನಿದಾಘನೆಂಬುವನಿಗೆ ಹಿತೋಪದೇಶವನ್ನು ಮಾಡಿದನು.

೨೫–೨೬. ಇತ್ತ ಆ ನಾಲ್ಕು ಜನ ಹೆಂಡತಿಯರೂ ಅವರವರ ಮಕ್ಕಳ ಅಧೀನದಲ್ಲಿರುತ್ತ ಬೇಕಾದ ಎಲ್ಲಾ ವ್ರತಗಳನ್ನೂ ಮಾಡಿಕೊಳ್ಳುತ್ತಾ ಕೆಲವು ಕಾಲ ಇದ್ದರು. ಅನಂತರ ಅವರಿಗೂ ಕೊನೆಗಾಲದಲ್ಲಿ ಮುಪ್ಪು ಬಂದು ಮೈ ಕೈಗಳೆಲ್ಲಾ ಸಡಿಲವಾಗಿ ಸ್ವಾಧೀನವಿಲ್ಲದಂತಾಗಿ ಸುಕ್ಕು ಕಟ್ಟಿಕೊಂಡಿತು. ಬಗ್ಗಿಹೋಗಿ ಸಣ್ಣಗಾದರು. ಹಲ್ಲುಗಳು ಸಡಿಲವಾದುವು. ಇಂದ್ರಿಯಗಳು ಪಾಟವವನ್ನು ಕಳೆದುಕೊಂಡುವು. ಈ ರೀತಿಯಾಗಿ ಪರಾಧೀನತೆಯು ಎಲ್ಲಾ ವಿಷಯದಲ್ಲಿಯೂ ಬಂದಿತು.

ಅಥೋವನ್ನಥ ತಾ ದೃಷ್ಟ್ವಾ ಮೃಕಂಡುರ್ಮುನಿಸತ್ತಮಃ ।
ಅನಪತ್ಯೋ ಮರುದ್ವತ್ಯಾಮಿದಮೇವಾಭ್ಯಚಿಂತಯತ್ ॥ ೨೭ ॥

ಅಹಂ ಸದಾರೋ ಗಚ್ಛಾಮಿ ಮಾತೃಭಿಸ್ಸಹಧೂರ್ಜಟೇಃ ।
ರಾಜಧಾನೀಂ ಶಿವೋ ಯತ್ರ ಕರ್ಣೇ ಜಪತಿ ತಾರಕಂ ॥ ೨೮ ॥

ಅಥ ತದ್ದೇಶಭೂಪಾಲೋ ನಾಮ್ನಾ ರಾಷ್ಟ್ರವಿವರ್ಧನಃ ।
ಕಾಶೀಯಾತ್ರಾಂ ಸಮುದ್ದಿಶ್ಯ ಪ್ರತಸ್ಥೇ ಬಹುಸೈನಿಕೈಃ ।
ತೇನ ಸಾರ್ಥೇನ ಮಹತಾ ತೇ ನಿರ್ಜಗ್ಮುಃ ಶನೈಶ್ಶನೈಃ ॥ ೨೯ ॥

॥ ಮೃಕಂಡುರುವಾಚ ॥

ಮಾತ್ರಾ ಪಿತ್ರಾ ಪರಿತ್ಯಕ್ತಾ ಯೇ ತ್ಯಕ್ತಾ ನಿಜಬಂಧುಭಿಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಣಾಸೀ ಗತಿಃ ॥ ೩೦ ॥

---

೨೭. ಆ ತಾಯಿಯರು ಈ ರೀತಿಯಾಗಿ ಚರಮಾವಸ್ಥೆಗೆ ಬಂದುದನ್ನು ಮೃಕಂಡುವೆಂಬ ಮಗನು ನೋಡಿದನು. ಮತ್ತು ತನಗೆ ಮರುದ್ವತಿಯೆಂಬ ಹೆಂಡತಿಯಲ್ಲಿ ಮಕ್ಕಳು ಆಗದೆ ತಾನು ಪುತ್ರಹೀನನಾದೆನು ಎಂಬುದನ್ನು ತಿಳಿದು ಈ ರೀತಿಯಾಗಿ ಯೋಚಿಸಿದನು.

೨೮. ಯಾವ ಕಾಶಿಪಟ್ಟಣದಲ್ಲಿ ಪ್ರಾಣಬಿಡುವಾಗ ಪ್ರಾಣಿಗಳ ಕಿವಿಯಲ್ಲಿ ಶಿವನು ತಾರಕ ಮಂತ್ರೋಪದೇಶವನ್ನು ಮಾಡುತ್ತಾನೆಯೋ ಅಂತಹ ಕಾಶಿಗೆ ಈ ತಾಯಿಯರನ್ನು ತನ್ನ ಹೆಂಡತಿಯನ್ನು ಕರೆದುಕೊಂಡು ಹೋಗಬೇಕು ಎಂದು ಯೋಚಿಸಿದನು.

೨೯. ಆಗ ಆ ಮೃಕಂಡುವು ಇದ್ದ ದೇಶದ ರಾಜನಾದ ರಾಷ್ಟ್ರವಿವರ್ಧನನು ಕಾಶಿಯಾತ್ರೆಗೋಸ್ಕರ ಬಹು ಸೈನಿಕರನ್ನು ಕರೆದುಕೊಂಡು ಹೊರಡಲು ಮೃಕಂಡುವೂ ತಾಯಿಯರನ್ನು ಹೆಂಡತಿಯನ್ನು ಕರೆದುಕೊಂಡು ನಿಧಾನವಾಗಿ ತಾನೂ ಅವರ ಜೊತೆಯಲ್ಲಿ ಹೊರಟನು.

೩೦. ಮೃಕಂಡುವು ಹೇಳಿದನು-ತಾಯಿಯರಿಂದಲೇ ಆಗಲಿ ತಂದೆಯಿಂದಲಾಗಲೀ ಬಂಧುಗಳಿಂದಾಗಲಿ ಬಿಡಲ್ಪಟ್ಟು ಎಲ್ಲೆಲ್ಲಿಯೂ ಯಾರಿಗೆ ಗತಿಯು ಸಿಕ್ಕದಿರುವುದೋ ಅವರಿಗೆ ಈ ವಾರಣಾಸಿ ಗತಿಯನ್ನೂ ಭಕ್ತಿ ಮುಕ್ತಿಗಳನ್ನೂ ಕೊಡುತ್ತದೆ.

ಜರಯಾ ಪರಿಭೂತಾ ಯೇ ವ್ಯಾಧಿಭಿರ್ವಿಕಲೀಕೃತಾಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಣಾಸೀ ಗತಿಃ ॥ ೩೧ ॥

ಪದೇ ಪದೇ ಸಮಾಕ್ರಾನ್ತಾ ಯೇ ವಿಪದ್ಭಿರಹರ್ನಿಶಂ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಣಾಸೀ ಗತಿಃ ॥ ೩೨ ॥

ಸಂಸಾರಪರಿಭೂತಾ ಯೇ ಬದ್ಧಾ ಯೇ ಕರ್ಮಬಂಧನೈಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಣಾಸೀ ಗತಿಃ ॥ ೩೩ ॥

ಪಾಪರಾಶಿಭಿರಾಕ್ರಾನ್ತಾ ಯೇ ದಾರಿದ್ರ್ಯಪರಾಜಿತಾಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಣಾಸೀ ಗತಿಃ ॥ ೩೪ ॥

ಯೇ ಚ ಯೋಗಪರಿಭ್ರಷ್ಟಾ ಯೇ ತಪೋದಾನ ವರ್ಜಿತಾಃ ।
ಯೇಷಾಂ ಕ್ವಾಪಿ ಗತಿರ್ನಾಸ್ತಿ ತೇಷಾಂ ವಾರಣಾಸೀ ಗತಿಃ ॥ ೩೫ ॥

---

೩೧ ಯಾರು ಮುಪ್ಪಿನಿಂದ ತೊಂದರೆ ಪಡುವರೋ, ಯಾರಿಗೆ ರೋಗವು ತೊಂದರೆ ಕೊಡುತ್ತಿರುವುದೋ, ಯಾರಿಗೆ ಎಲ್ಲಿಯೂ ಇರಲು ಗತಿಯಿರುವುದಿಲ್ಲವೋ ಅವರಿಗೆ ವಾರಣಾಸಿಯು ಉತ್ತಮವಾದ ಗತಿಯನ್ನು ಕೊಡುವ ಜಾಗವು.

೩೨-೩೩. ಯಾರು ಹಗಲೂ ರಾತ್ರಿಯೂ ಮತ್ತು ಆಗಾಗ್ಗೂ ರೋಗದಿಂದ ತೊಂದರೆ ಪಡುತ್ತಾರೆಯೋ ಅವರಿಗೂ ಯಾರು ಸಂಸಾರದಲ್ಲಿ ತೊಂದರೆ ಪಡುತ್ತಲಿರುವರೋ, ಯಾರು ಕರ್ಮಗಳಿಗೆ ಕಟ್ಟು ಬಿದ್ದಿರುವರೋ ಅವರಿಗೂ ಮತ್ತು ಯಾರಿಗೆ ಎಲ್ಲಿಯೂ ಯಾರು ಗತಿಯಿರುವುದಿಲ್ಲವೋ ಅಂತಹವರಿಗೂ ಈ ವಾರಣಾಸಿಯು ಗತಿಯನ್ನು ಕೊಡುತ್ತದೆ.

೩೪-೩೫. ಯಾರು ಅತ್ಯಂತ ಪಾಪಿಗಳೋ, ಯಾರು ಅತ್ಯಂತ ದರಿದ್ರರೋ ಯಾರಿಗೆ ಯೋಗಾಭ್ಯಾಸದಿಂದ ಮುಕ್ತಿಯನ್ನು ಹೊಂದಲಾಗುವುದಿಲ್ಲವೋ, ಯಾರು ತಪಸ್ಸು, ದಾನಗಳನ್ನು ಮಾಡದಿರುವರೋ, ಅವರಿಗೂ, ಯಾರಿಗೆ ಎಲ್ಲಿಯೂ ಯಾರೂ ಗತಿಯುರುವುದಿಲ್ಲವೋ ಅವರಿಗೂ ಈ ವಾರಣಾಸಿಯು ಗತಿಯನ್ನು ಕೊಡತಕ್ಕದ್ದು.

ಮಧ್ಯೇ ಬಂಧುಜನಾನಾಂ ತು ಮಾನಹಾನಿಃ ಪದೇ ಪದೇ ।
ತೇಷಾಮಾನಂದದಂ ಚೈಕಂ ಶಂಭೋರಾನಂದಕಾನನಂ ॥ ೩೬ ॥

ಆನಂದಕಾನನೇ ಯೇಷಾಂ ವಸತಾಂ ಪಾಪತಾಮಪಿ ।
ವಿಶ್ವೇಶಾನುಗೃಹೀತಾನಾಂ ಸಸ್ಯಾದಾನಂದಜೋದಯಃ ॥ ೩೭ ॥

ಭಜ್ಯಂತೇ ಕರ್ಮಬೀಜಾನಿ ತತ್ರ ವಿಶ್ವೇಶವಹ್ನಿನಾ ।
ಅತೋ ಮಹಾಶ್ಮಶಾನಂ ತದಗತೀನಾಂ ಪರಾಗತಿಃ ॥ ೩೮ ॥

ಸಂಸಾರ ಸರ್ಪದಷ್ಟಾನಾಂ ಜಂತೂನಾಂ ಯತ್ರ ಶಂಕರಃ ।
ಉಭಾಭ್ಯಾಮಪಿ ಪಾಣಿಭ್ಯಾಂ ಬ್ರೂತೇ ಬ್ರಹ್ಮ ಸ್ಪೃಶ್ಯ ಶ್ರುತೌ ॥ ೩೯ ॥

---

೩೬. ಬಂಧು ಜನಗಳ ಮಧ್ಯದಲ್ಲಿದ್ದುಕೊಂಡು ಯಾರು ಆಗಿಂದಾಗ್ಗೆ ಮಾನವನ್ನು ಹಾಳುಮಾಡಿಕೊಳ್ಳುತ್ತಾರೆಯೋ ಅವರಿಗೆ ಶಂಭುವಿಗೆ ಆನಂದವನ್ನು ಉಂಟು ಮಾಡುವ ಕಾಶಿಯು ಸಂತೋಷವನ್ನು ಕೊಡುತ್ತದೆ.

೩೭. ಶಂಭುವಿನ ಆನಂದ ಕಾನನವಾದ ಕಾಶಿಯಲ್ಲಿ ವಾಸ ಮಾಡುತ್ತಿರುವ ಪಾಪಿಗಳಿಗೂ ಅದು ವಿಶ್ವೇಶ್ವರನ ಅನುಗ್ರಹವನ್ನು ಉಂಟುಮಾಡಿ ಮೋಕ್ಷವನ್ನು ಕೊಡುತ್ತದೆ.

೩೮. ಆ ವಾರಣಾಸಿಯಲ್ಲಿ ಪ್ರಾಣಿಗಳ ಕರ್ಮ ಬೀಜಗಳು ವಿಶ್ವೇಶ್ವರನೆಂಬ ಬೆಂಕಿಯಿಂದ ಹುರಿಯಲ್ಪಟ್ಟು ನಾಶವಾಗುತ್ತವೆ. ಆದ್ದರಿಂದಲೇ ಈ ಕಾಶಿಗೆ ಮಹಾಶ್ಮಶಾನವೆಂದು ಹೆಸರು. ಗತಿಯಿಲ್ಲದವರಿಗೆ ಉತ್ತಮವಾದ ಗತಿಯನ್ನು ಕೊಡತಕ್ಕದ್ದು.

೩೯. ಸಂಸಾರವೆಂಬ ಕೃಷ್ಣ ಸರ್ಪದಿಂದ ಕಚ್ಚಲ್ಪಟ್ಟ ಪ್ರಾಣಿಗಳಿಗೆ ಈ ಮಹಾಶ್ಮಶಾನದಲ್ಲಿ ಶಂಕರನು ಎರಡು ಕೈಗಳಿಂದಲೂ, ಕಿವಿಯನ್ನು ಮುಟ್ಟಿ ಕಿವಿಯಲ್ಲಿ ಬ್ರಹ್ಮವನ್ನು ಬೋಧಿಸುತ್ತಾನೆ.

ನ ಕಾಪಿಲೇನ ಯೋಗೇನ ನ ಸಾಂಖ್ಯೇನ ನ ಚ ವ್ರತೈಃ ।
ಯಾ ಗತಿಃ ಪ್ರಾಪ್ಯತೇ ಪುಂಭಿಸ್ತಾಂ ದದ್ಯಾನ್ಮೋಕ್ಷ ಭೂರಿಯಂ ॥ ೪೦ ॥

ಕಾಶೀ ಪ್ರಾಪ್ತಿರಿಯಂ ಯೋಗಃ ಕಾಶೀ ಪ್ರಾಪ್ತಿಸ್ತು ಕರ್ಮಯತ್ ।
ಕಾಶೀ ಪ್ರಾಪ್ತಿರಿಯಂ ಸ್ವರ್ಗಃ ಕಾಶೀ ಪ್ರಾಪ್ತಿರಿಯಂ ಸುಖಂ ॥ ೪೧ ॥

ಕಃ ಕಾಮಃ ಕೋ ಮದಃ ಕ್ರೋಧಃ ಕೋ ಲೋಭಃ ಕಾ ಹ್ಯಹಂಕೃತಿಃ ।
ಕಿಂ ಮಾತ್ಸರ್ಯಂ ಕಿಮಜ್ಞಾನಂ ಕರ್ಮ ಕಿಂ ಜಾತ್ಯತಾ ಚ ಕಾ ॥ ೪೨ ॥

ಕಾ ಭೀತಿಃ ಕೋಥವಾ ಕಾಲಃ ಕಾಜರಾ ಕಿಂ ಚ ದುಷ್ಕೃತಂ ।
ಕಿಂ ರಜಃ ಕೋನ್ತರಾಯೋ ವಾ ನೃಣಾಂ ಕಾಶೀ ನಿವಾಸಿನಾಂ ॥ ೪೩ ॥

ವದನ್ನಿತ್ಥಂ ಸ್ವಮಾತೄಣಾಮಧ್ವಖೇದಾಪನುತ್ತಯೇ ।
ಶನೈರ್ವಾರಾಣಸೀಂ ಪ್ರಾಪ ಮೃಕಂಡುಃ ಸಹ ಮಾತೃಭಿಃ ॥ ೪೪ ॥

---

೪೦. ಕಪಿಲ ಋಷಿಯ ಯೋಗ ಶಾಸ್ತ್ರದಿಂದಾಗಲೀ, ಸಾಂಖ್ಯದಿಂದಾಗಲೀ, ಅನೇಕ ವ್ರತಗಳಿಂದಾಗಲೀ, ಪ್ರಾಣಿಗಳಿಗೆ ಸಿಕ್ಕದಿರುವ ಸದ್ಗತಿಯನ್ನು ಈ ವಾರಣಾಸಿಯು ಕೊಡುತ್ತದೆ. ಎಂದರೆ ಈ ವಾರಣಾಸಿಯಲ್ಲಿ ಸಿಕ್ಕುವ ಮೋಕ್ಷದಂತ ಮೋಕ್ಷವನ್ನು ಕಪಿಲನ ಯೋಗಶಾಸ್ತ್ರವು ಕೊಡಲಾರದು. ಸಾಂಖ್ಯ ಶಾಸ್ತ್ರವು ಕೊಡಲಾರದು. ಅನೇಕ ವ್ರತಗಳೂ ಕೊಡಲಾರವು.

೪೧. ಕಾಶೀ ಪ್ರಾಪ್ತಿಯೆಂಬುದೇ ಯೋಗವು, ಕಾಶೀ ಪ್ರಾಪ್ತಿಯೇ ಕರ್ಮವು. ಕಾಶೀ ಪ್ರಾಪ್ತಿಯೇ ಸ್ವರ್ಗವು. ಕಾಶೀ ಪ್ರಾಪ್ತಿಯೇ ಸುಖವು.

೪೨ ೪೩. ಕಾಶಿಯಲ್ಲಿ ವಾಸಮಾಡುವವನಿಗೆ ಕಾಮವಾಗಲಿ, ಮದವಾಗಲೀ, ಕ್ರೋಧವಾಗಲೀ, ಲೋಭವಾಗಲೀ, ಅಹಂಕಾರವಾಗಲೀ, ಮಾತ್ಸರ್ಯವಾಗಲೀ, ಅಜ್ಞಾನವಾಗಲೀ, ಕರ್ಮವಾಗಲೀ, ಜಡತ್ವವಾಗಲೀ, ಭೀತಿಯಾಗಲೀ, ಯಮನಾಗಲೀ, ಮುಪ್ಪಾಗಲೀ, ಪಾಪವಾಗಲೀ, ರಜೋಗುಣವಾಗಲೀ, ವಿಘ್ನಗಳಾಗಲಿ, ಯಾವುವೂ ಏನನ್ನೂ ಮಾಡಲಾರವು.

೪೪. ಆ ಮೃಕಂಡುವು ತನ್ನ ತಾಯಿಯರಿಗೆ ಮಾರ್ಗದ ಆಯಾಸವು ಕಾಣದ ಹಾಗೆ ನಿವಾರಣೆಯಾಗಬೇಕೆಂದು ಈ ರೀತಿಯಾಗಿ ಹೇಳುತ್ತ ನಿಧಾನವಾಗಿ ಅವರೊಡನೆ ಕಾಶಿಗೆ ಹೋದನು.

ಅವಿಲಂಬಂ ಪ್ರಥಮತೋ ಮಣಿಕರ್ಣ್ಯಾಂ ವಿಧಾನತಃ ।
ಸಚ್ಚೈಲಂ ಸ ಮುನಿಃ ಸ್ನಾತ್ವಾ ಕೃತಸಂಧ್ಯಾದಿ ಸತ್ಕ್ರಿಯಃ ॥ ೪೫ ॥

ಸಂತರ್ಪ್ಯ ಸರ್ವದೇವರ್ಷೀನ್ ಶುಚಿರ್ಗಂಧಕುಶೋದಕೈಃ ।
ತೀರ್ಥವಾಸಾರ್ಥಿನಸ್ಸರ್ವಾನ್ ಸಂತರ್ಪ್ಯ ಚ ಪೃಥಕ್ ಪೃಥಕ್ ॥ ೪೬ ॥

ಅಮೃತಸ್ವಾದುಪಕ್ವಾನ್ನೈಃ ಪಾಯಸೈಶ್ಚ ಸಶರ್ಕರೈಃ ।
ಸಗೋರಸೈರನ್ನದಾನೈರ್ಧಾನ್ಯದಾನೈರನೇಕಧಾ ॥ ೪೭ ॥

ಗಂಧಚಂದನ ಕರ್ಪೂರೈಸ್ತಾಂಬೂಲೈರ್ವಸನೈಶ್ಶುಭೈಃ ।
ದೀನಾನಾಥಾನ್ಸಮಭ್ಯರ್ಚ್ಯ ಪಶ್ಚಾದ್ದುಂಡಿವಿನಾಯಕಂ ॥ ೪೮ ॥

ಅನ್ವಲಿಂಪತ್ತತೋ ಭಕ್ತ್ಯಾ ಸ್ರಾಜ್ಯ ಸಿಂಧೂರಕರ್ದಮೈಃ ।
ನಿವೇದ್ಯ ಮೋದಕಾನ್ ಪಂಚ ವರ್ಜಯನ್ ಸ ನಿಜಂ ಜನಂ ॥ ೪೯ ॥

---

೪೫-೪೬. ಆ ಮಣಿಕರ್ಣಿಕೆಯಲ್ಲಿ ಸ್ವಲ್ಪವೂ ಸಾವಕಾಶಮಾಡದೆ ಸಚ್ಚೈಲ ಸ್ನಾನವನ್ನು ಮಾಡಿ ಸಂಧ್ಯಾವಂದನಾದಿಗಳನ್ನು ಮಾಡಿ ದೇವತೆಗಳು ಋಷಿಗಳು ಪಿತೃಗಳಿಗೆ ಶುಚಿಯಾಗಿ ಗಂಧವನ್ನೂ ಕುಶವನ್ನೂ ಹಾಕಿರುವ ನೀರಿನಿಂದ ತರ್ಪಣ ಗಳನ್ನು ಕೊಟ್ಟು ಅಲ್ಲಿರುವ ತೀರ್ಥವಾಸಿಗಳೆಲ್ಲರನ್ನೂ (ಆ ದೇವತೆಗಳನ್ನು) ಬೇರೆ ಬೇರೆಯಾಗಿ ತರ್ಪಣದಿಂದ ಸಂತೋಷ ಪಡಿಸಿದನು.

೪೭-೪೮. ಅಮೃತದಂತೆ ಚೆನ್ನಾಗಿರುವ ಅನ್ನದಿಂದಲೂ, ಪಾಯಸ, ಸಕ್ಕರೆಗಳಿಂದಲೂ, ಹಾಲು ಮೊಸರುಗಳಿಂದಲೂ ಕೂಡಿದ ಅನ್ನವನ್ನು ದಾನ ಮಾಡುತ್ತಾ ಅವರಿಗೆಲ್ಲಾ, ಗಂಧ, ಹೂ, ತಾಂಬೂಲಗಳನ್ನು ಕೊಟ್ಟು ತೃಪ್ತಿ ಪಡಿಸಿ ಅನಂತರ ದೀನರು, ಅನಾಥರುಗಳನ್ನು ತೃಪ್ತಿಪಡಿಸಿ ಆಮೇಲೆ ದುಂಡಿವಿನಾ ಯಕನ ಬಳಿಗೆ ಹೋದನು.

೪೯. ಆ ದುಂಡಿವಿನಾಯಕನಿಗೆ ಭಕ್ತಿಯಿಂದ ಚಂದ್ರವನ್ನು ಕಲೆಸಿ ಬಳಿದು ಐದು ಕಡುಬುಗಳನ್ನು ನಿವೇದನ ಮಾಡಿದನು.

ಉಪಸರ್ಗ ನಿಸರ್ಗೇಭ್ಯಃ ತತೋಽಂತಃ ಕ್ಷೇತ್ರಮಾವಿಶತ್ ।
ಸರ್ವಾವರಣ ದೇವಾಂಶ್ಚ ಪೂಜಯಾಮಾಸ ಶಕ್ತಿತಃ ॥ ೫೦ ॥

ತತೋ ವಿಶ್ವೇಶ್ವರಂ ದೇವಂ ನತ್ವಾ ಸ್ತುತ್ವಾ ಮಹಾಮನಾಃ ।
ಕ್ಷೇತ್ರೋಪವಾಸಂ ವಿಧಿವತ್ ಚಕಾರ ನಿಜಮಾತೃಭಿಃ ॥ ೫೧ ॥

ಜಾಗರೇಣ ನಿಶಾಂ ನೀತ್ವಾ ವಿಶ್ವನಾಥಸ್ಯ ಸನ್ನಿಧೌ ।
ಪ್ರಭಾತೇ ವಿಮಲೇ ಸ್ನಾತ್ವಾ ಮಣಿಕರ್ಣ್ಯಾಂ ಸಮಾಹಿತಃ ॥ ೫೨ ॥

ಅನುಷ್ಠಾನಮಶೇಷಂ ಚ ನಿರ್ವರ್ತ್ಯ ನಿಯತಶ್ಶುಚಿಃ ।
ಮಹದ್ಭಿರ್ಬ್ರಾಹ್ಮಣೈಸ್ಸಾರ್ಧಂ ವೇದವೇದಾಂಗಪಾರಗೈಃ ॥ ೫೩ ॥

ಲಿಂಗಂ ಸಂಸ್ಥಾಪಯಾಮಾಸ ಸ್ವನಾಮ್ನಾ ಸರ್ವಸಿದ್ಧಿದಂ ।
ಪ್ರತ್ಯೇಕಂ ಸ್ಥಾಪಯಾಮಾಸುಸ್ತಾಶ್ಚ ತಸ್ಯೋಽಸ್ಯ ಮಾತರಃ ॥ ೫೪ ॥

---

೫೦. ತನ್ನ ಆ ತಾಯಿಯರನ್ನು ಇಲ್ಲಿನ ಜನಗಳ ತಿಕ್ಕಾಟ ನೂಕಾಟಗಳ ದೆಸೆಯಿಂದ ಕಾಪಾಡಿಕೊಂಡು ಅವರನ್ನು ಕರೆದುಕೊಂಡು ಒಳಗೆ ಹೋಗಿ ಆವರಣ ದೇವತೆಗಳನ್ನೆಲ್ಲಾ ಪೂಜೆ ಮಾಡಿದನು.

೫೧. ಅನಂತರ ಆ ವಿಶ್ವೇಶ್ವರದೇವನನ್ನು ನಮಸ್ಕರಿಸಿ ಒಳ್ಳೆಯ ಮನಸ್ಸಿನಿಂದ ಸ್ತೋತ್ರವನ್ನು ಮಾಡಿ ಶಾಸ್ತ್ರದಲ್ಲಿ ಹೇಳಿರುವಂತೆ ತನ್ನ ತಾಯಿಯರೊಡನೆ ಆ ಕ್ಷೇತ್ರೋಪವಾಸವನ್ನು ಮಾಡಿದನು.

೫೨-೬೧. ಆ ವಿಶ್ವನಾಥದೇವರ ಸನ್ನಿಧಿಯಲ್ಲಿ ರಾತ್ರಿಯೆಲ್ಲವೂ ಜಾಗರಣೆ ಮಾಡುತ್ತ ಕಳೆದು ಬೆಳಗ್ಗೆ ಮಣಿಕರ್ಣಿಕೆಗೆ ಹೋಗಿ ಸ್ನಾನಮಾಡಿ ಅನುಷ್ಠಾನಗಳೆಲ್ಲವನ್ನೂ ಮುಗಿಸಿಕೊಂಡು ಶುಚಿಯಾಗಿದ್ದನು. ಅನಂತರ ವೇದಾಂಗಗಳನ್ನು ಚೆನ್ನಾಗಿ ಬಲ್ಲ ಯೋಗ್ಯರಾದ ಬ್ರಾಹ್ಮಣರೊಡನೆ ತನ್ನ ಹೆಸರಿನಲ್ಲಿ ಸಮಸ್ತ ಇಷ್ಟಗಳನ್ನೂ ಕೊಡುವ ಲಿಂಗವನ್ನು ಅಲ್ಲಿ ಸ್ಥಾಪಿಸಿದನು. ಮತ್ತು ತನ್ನ ತಾಯಿಯರು ನಾಲ್ವರ ಕೈಯಲ್ಲಿಯೂ ಅವರವರ ಹೆಸರಿನ ನಾಲ್ಕು ಲಿಂಗಗಳನ್ನು ಸ್ಥಾಪಿಸಿದನು.

ಸ್ವಸ್ವನಾಮ್ನ್ಯೈವಲಿಂಗಾನಿ ಮುಕ್ತಿದಾನಿ ವಿಲೋಕನಾತ್ |
ಢುಂಢಿ ವಿಶ್ವೇಶ್ವರಸ್ಯಾಗ್ರೇ ಮೃಕಂಡ್ವೀಶ್ವರ ದರ್ಶನಾತ್ || ೫೫ ||

ಸಿಧ್ಯಂತಿ ಸರ್ವಕಾರ್ಯಾಣಿ ಕಾಶೀವಾಸೋಽಪಿ ಸಿಧ್ಯತೇ |
ತಸ್ಯ ಲಿಂಗಸ್ಯ ಪುರತಃ ಸುವೃತ್ತೇಶ್ವರ ದರ್ಶನಾತ್ || ೫೬ ||

ನಾಭಿಭೂಯೇತ ವಿಘ್ನೌಘೈಃ ಸುವೃತ್ತೋ ಜಾಯತೇ ನರಃ |
ತಸ್ಯ ಪ್ರಾಚ್ಯಾಂ ಕಮಲಯಾ ಸ್ಥಾಪಿತಂ ಲಿಂಗಮುತ್ತಮಂ || ೫೭ ||

ತದ್ವಿಲೋಕನಮಾತ್ರೇಣ ಸರ್ವಕಾಮಾಂಲ್ಲಭೇನ್ನರಃ |
ದೇಹಳೀ ವಿಘ್ನರಾಜಸ್ಯ ಸನ್ನಿಧೌ ವಿಮಲೇಶ್ವರಃ || ೫೮ ||

ದರ್ಶನಾತ್ತಸ್ಯಲಿಂಗಸ್ಯ ವಿಮಲಂ ಜ್ಞಾನಮಾಪ್ನುಯಾತ್ |
ಐಶಾನ್ಯಾಂ ತಸ್ಯ ಲಿಂಗಸ್ಯ ಸುರಸೇಶ್ವರ ವೀಕ್ಷಣಾತ್ || ೫೯ ||

---

ಅವುಗಳು ಅಲ್ಲಿದ್ದುಕೊಂಡು ಈಗಲೂ ಕೂಡ ತಮ್ಮನ್ನು ದರ್ಶನ ಮಾಡಿದವರಿಗೆ ಮುಕ್ತಿಯನ್ನು ಕೊಡುತ್ತ ಮೃಕಂಡು ಅವರ ತಾಯಿಯರ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಢುಂಢಿವಿಶ್ವೇಶ್ವರನ ಎದುರಿಗೆ ಮೃಕಂಡ್ವೀಶ್ವರನಿರುವುದು. ಅದರ ದರ್ಶನದಿಂದಲೇ ಎಲ್ಲಾ ಕೆಲಸಗಳೂ ಸಿದ್ಧಿಸುತ್ತವೆ. ಕಾಶಿವಾಸವೂ ಕೂಡ ಸಿದ್ಧಿಸುತ್ತದೆ. ಆ ಲಿಂಗದ ಎದುರಿಗೇನೇ ಅವನ ತಾಯಿಯು ಸ್ಥಾಪಿಸಿದ ಸುವೃತ್ತೇಶ್ವರನಿರುವುದು. ಅದರ ದರ್ಶನದಿಂದ ವಿಘ್ನಗಳೆಲ್ಲವೂ ನಾಶವಾಗಿ ಆ ಮನುಷ್ಯನು ಒಳ್ಳೆಯ ಸ್ವಭಾವವುಳ್ಳವನಾಗುತ್ತಾನೆ. ಆ ಸುವೃತ್ತೇಶ್ವರನ ಪೂರ್ವಕ್ಕೆ ಕಮಲೆಯು ಸ್ಥಾಪಿಸಿರುವ ಲಿಂಗವಿರುವುದು ಅದನ್ನು ನೋಡಿದ ಮಾತ್ರದಿಂದಲೇ ಮನುಷ್ಯನಿಗೆ ಇಷ್ಟಾರ್ಥಗಳೆಲ್ಲವೂ ಸಿದ್ಧಿಸುತ್ತದೆ. ದೇಹಲೀ ವಿಘ್ನರಾಜನ ಸಮೀಪದಲ್ಲಿ ವಿಮಲೆಯು ಸ್ಥಾಪಿಸಿದ ಲಿಂಗವಿರುವುದು. ಆ ಲಿಂಗದ ದರ್ಶನವನ್ನು ಮಾಡಿದರೆ ಉತ್ತಮವಾದ ಜ್ಞಾನವು ಬರುವುದು. ಆ ವಿಮಲೇಶ್ವರನಿಂದ ಈಶಾನ್ಯಕ್ಕೆ ಸುರಸೇಶ್ವರನಿರುವುದು ಅದರ ದರ್ಶನದಿಂದ

ಅವಾಪ್ಯ ಸುರಸಾಮ್ರಾಜ್ಯಂ ಕಾಶ್ಯಾಂ ಮುಕ್ತೋ ಭವಿಷ್ಯತಿ ।
ಮರುದ್ವತ್ಯಾರ್ಚಿತಂ ಲಿಂಗಂ ಮಣಿಕರ್ಣ್ಯಾಸ್ತು ಪಶ್ಚಿಮೇ ॥ ೬ ॥

ತಸ್ಯ ದರ್ಶನಮಾತ್ರೇಣ ನ ಮರ್ತ್ಯೋ ಜಾಯತೇ ಪುನಃ ।
ಏವಂ ಲಿಂಗಾನಿ ಸಂಸ್ಥಾಪ್ಯ ತಸ್ಥೌ ಕಾಶ್ಯಾಂ ತು ವತ್ಸರಂ ॥ ೬೧ ॥

ಪುನಃ ಪುನಶ್ಚ ತತ್ಕ್ಷೇತ್ರಮತಿಥೀಕೃತ್ಯನೇತ್ರಯೋಃ ।
ವಿಚಿತ್ರಂ ಚ ಪವಿತ್ರಂ ಚ ತೃಪ್ತಿಂ ನೈವ ಜಗಾಮ ಹ ॥ ೬೨ ॥

ತೀರ್ಥಯಾತ್ರಾಂ ಪ್ರತಿದಿನಂ ತತ್ರ ಕುರ್ವ್ವನ್ ಸ ವತ್ಸರಂ ।
ನ ಪ್ರಾಪ ಸರ್ವತೀರ್ಥಾನಿ ತೀರ್ಥಂ ಕಾಶ್ಯಾಂ ಪದೇ ಪದೇ ॥ ೬೩ ॥

ಅಥೈಕದಾ ತಾ ಮಣಿಕರ್ಣಿಕಾಯಾಂ
ಮಾಧ್ಯಂದಿನಸ್ನಾನವಿಧಿಂ ವಿಧಾಯ ।
ಪ್ರದಕ್ಷಿಣೀಕೃತ್ಯ ಶಿವಾಲಯಂ ತಂ
ಜಾತಶ್ರಮಾಃ ಪೂರ್ಣದೃಶೋ ನಿಪೇತುಃ ॥ ೬೪ ॥

---

ದೇವಸಾಮ್ರಾಜ್ಯವನ್ನು ಹೊಂದಿ ಮತ್ತೆ ಕಾಶಿಯಲ್ಲಿಯೇ ಮುಕ್ತನಾಗುತ್ತಾನೆ. ಮಣಿಕರ್ಣಿಕೆಯ ಪಶ್ಚಿಮದಲ್ಲಿ ಮರುದ್ವತಿಯು ಸ್ಥಾಪಿಸಿದ ಲಿಂಗವಿರುವುದು ಅದರದರ್ಶನದಿಂದ ಮನುಷ್ಯನು ಮತ್ತೆ ಜನ್ಮವನ್ನೆತ್ತುವುದಿಲ್ಲ. ಈ ರೀತಿಯಾಗಿ ಕಾಶಿಯಲ್ಲಿ ಲಿಂಗಗಳನ್ನು ಸ್ಥಾಪಿಸಿ ಒಂದು ವರ್ಷಕಾಲವಿದ್ದರು.

೬೨-೬೩. ಆ ಕಾಶಿಯನ್ನು ನಿತ್ಯವೂ ದರ್ಶನಮಾಡುತ್ತ ವಿಚಿತ್ರವಾಗಿಯೂ ಪವಿತ್ರವಾಗಿಯೂ ಇರುವುದೆಲ್ಲವನ್ನೂ ನೋಡುತ್ತಲಿದ್ದರೂ ತೃಪ್ತಿಯೇ ಉಂಟಾಗಲಿಲ್ಲ. ಹೀಗೆ ಒಂದು ವರ್ಷದವರೆಗೆ ತೀರ್ಥಯಾತ್ರೆಯನ್ನು ಮಾಡುತ್ತಿದ್ದರೂ ಆ ಕಾಶಿಯಲ್ಲಿರುವ ಎಲ್ಲಾ ತೀರ್ಥಗಳನ್ನೂ ಅವನು ಸೇವಿಸಲಾಗಲೇ ಇಲ್ಲ. ಕಾಶಿಯಲ್ಲಿ ಹೆಜ್ಜೆ ಹೆಜ್ಜೆಗೂ ಕ್ಷೇತ್ರಗಳಿರುವುವು.

೬೪-೬೫. ಹೀಗಿರುತ್ತಿರಲು ಒಂದುದಿನ ಅವರು ಮಣಿಕರ್ಣಿಕೆಯಲ್ಲಿ ಮಧ್ಯಾಹ್ನದ ಸ್ನಾನವನ್ನು ಮಾಡಿ ಆ ಶಿವಾಲಯವನ್ನು ಪ್ರದಕ್ಷಿಣೆಮಾಡಿ ಆಯಾಸದಿಂದ ಕೂಡಿದವರಾಗಿ ಬಿದ್ದು ಬಿಟ್ಟರು. ಆಗ ಕೃಪಾಶಾಲಿಯಾದ

ಕಾಶೀಪತಿಃ ಕಾರುಣಿಕಃ ಕರಾಭ್ಯಾಂ
ಆದಾಯ ಮೂರ್ಧಾನಮತೀವ ಹಾರ್ದಾತ್ ।
ಆಗತ್ಯ ವೇಗಾದ್ಯುಪಚ್ಚ ತಾಸಾ
ಓಂಕಾರ ಮುಚ್ಚಾರಯತಿ ಸ್ಮ ಕರ್ಣೇ ॥ ೭೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಕಾಶೀ ಮಾಹಾತ್ಮ್ಯಾಖ್ಯಾನಂ ನಾಮ ಪಂಚತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

ಕಾಶೀಪತಿಯಾದ ವಿಶ್ವೇಶ್ವರನು ಆ ಹೆಂಗಸರನ್ನು ಕೈಗಳಿಂದ ಎತ್ತಿಕೊಂಡು ಕೃಪೆಯಿಟ್ಟು ಸ್ನೇಹದಿಂದ ಎಲ್ಲರ ಕಿವಿಯಲ್ಲಿಯೂ ಓಂಕಾರವನ್ನು ಉಚ್ಚಾರ ಮಾಡಿದನು

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಕಾಶೀ ಮಾಹಾತ್ಮ್ಯಾಖ್ಯಾನ ಎಂಬ ಇನ್ನೂರ ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್ತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಮೃಕಂಡುರ್ವಿಧಿವತ್ಕೃತ್ವಾ ಮಾತ್ೃಣಾ ಮೌರ್ಧ್ವದೈಹಿಕಂ ।
ಉವಾಸ ಸುಚಿರಂ ಕಾಲಂ ಕಾಶ್ಯಾಮೇವ ಮಹಾಮುನಿಃ ॥ ೧ ॥

ತಸ್ಯ ಪುತ್ರೋ ಮಹಾತೇಜಾ ಮಾರ್ಕಂಡೇಯ ಇತಿಶ್ರುತಃ ।
ಪ್ರಸಾದಾದೇವ ರುದ್ರಸ್ಯ ಮರುದ್ವತ್ಯಾಮಜಾಯತ ॥ ೨ ॥

ಮಾರ್ಕಂಡೆಯೋ ಮುನಿಶ್ರೇಷ್ಠಮಾನಾರಾಧ್ಯ ತಪಸಾ ಶಿವಂ ।
ದೀರ್ಘಮಾಯುಶ್ಶಿವಾಲ್ಲಬ್ಧ್ವಾ ದದರ್ಶ ಪ್ರಲಯಾನ್ ಬಹೂನ್ ॥ ೩ ॥

---

## ಇನ್ನೂರ ಮೂವತ್ತಾರನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು–ಇತ್ತ ಮೃಕುಂಡವು ಆ ತಾಯಿಯರಿಗೆಲ್ಲಾ ಉತ್ತರ ಕ್ರಿಯೆಗಳನ್ನು ಮಾಡಿ ಆ ಕಾಶಿಯಲ್ಲಿಯೇ ಬಹು ಕಾಲದವರೆಗೆ ವಾಸವಾಗಿದ್ದನು.

೨. ಕಡೆಗೆ ಆ ರುದ್ರನ ಅನುಗ್ರಹದಿಂದ ಮೃಕುಂಡುವಿನ ಹೊಟ್ಟೆಯಲ್ಲಿ ಮಾರ್ಕಂಡೇಯನೆಂಬ ಮಗನು ಹುಟ್ಟಿದನು. ಅವನು ಬಹು ತೇಜಸ್ವಿಯಾಗಿದ್ದನು.

೩. ಮಾರ್ಕಂಡೇಯನೆಂಬ ಆ ಋಷಿಯು ತಪಸ್ಸುಮಾಡಿ ಶಿವನನ್ನು ಆರಾಧಿಸಿ ಆ ಶಿವನಿಂದ ದೀರ್ಘವಾದ ಆಯುಸ್ಸನ್ನು ಹೊಂದಿ ಅನೇಕವಾದ ಪ್ರಲಯಗಳನ್ನು ನೋಡಿದನು.

|| ದಿಲೀಪ ಉವಾಚ ||

ಅನಪತ್ಯೋ ಮರುದ್ವತ್ಯಾಂ ಮೃಕಂಡುರಿತಿ ಹಿ ತ್ವಯಾ ।
ಪ್ರೋಕ್ತಶ್ಶಿವಪ್ರಸಾದೇನ ಪಶ್ಚಾದಾಪ ಕಥಂ ಸುತಂ || ೪ ||

ದೀರ್ಘಾಯುರಭವತ್ಸೋಪಿ ಕಥಮೀಶಪ್ರಸಾದತಃ ।
ವಿಸ್ತರಾಚ್ಛ್ರೋತುಮಿಚ್ಛಾಮಿ ವದೈತನ್ಮುನಿಪುಂಗವ || ೫ ||

|| ವಸಿಷ್ಠ ಉವಾಚ ||

ಶೃಣು ರಾಜನ್ ಪ್ರವಕ್ಷ್ಯಾಮಿ ಮಾರ್ಕಂಡೇಯ ಸಮುದ್ಭವಂ ।
ಅನಪತ್ಯೋ ಮೃಕಂಡುಶ್ಚ ಭಾರ್ಯಯಾ ಸ ಮಹಾಮುನಿಃ || ೬ ||

ಶಂಕರಂ ತೋಷಯಾಮಾಸ ತಪಸಾ ನಿಯಮೇನ ಚ ।
ತುಷ್ಟಶ್ಚಾಹ ಪಿನಾಕೀ ತು ಭಾರ್ಯಯಾ ಸಹಿತಂ ಮುನಿಂ ||
ಮತ್ತೋ ವರಂ ಗೃಹಾಣೇತಿ ಸೋಪಿ ವವ್ರೇ ವರಂ ಮುನಿಃ || ೭ ||

---

೪. ದಿಲೀಪನು ಹೇಳಿದನು-ಎಲೈ ಶಿವನೆ ! ಮೃಕುಂಡುವಿಗೆ ಮರುದ್ವತಿಯಲ್ಲಿ ಮಕ್ಕಳಾಗಲಿಲ್ಲವೆಂದು ನೀನು ಹೇಳಿದೆಯಷ್ಟೆ | ಈಗ ಶಿವನ ಪ್ರಸಾದದಿಂದ ಮಗನನ್ನು ಹೊಂದಿದನೆಂದು ಹೇಳುತ್ತಿರುವೆಯಲ್ಲ! ಅದು ಹೇಗೆ ?

೫. ಆತನು ಈಶ್ವರನ ಅನುಗ್ರಹದಿಂದ ದೀರ್ಘಾಯುವಾದುದು ಹೇಗೆ ? ಅದನ್ನು ವಿಸ್ತಾರವಾಗಿ ಕೇಳಲು ಇಚ್ಛಿಸುತ್ತೇನೆ. ಅದನ್ನು ಹೇಳು.

೬. ವಸಿಷ್ಠನು ಹೇಳಿದನು-ಎಲೈ ದೊರೆಯೆ! ಕೇಳು, ಮಾರ್ಕಂಡೇಯನ ವಿಷಯವಾದ ಕಥೆಯನ್ನು ಹೇಳುತ್ತೇನೆ. ಆ ಮೃಕಂಡುವು ಮಕ್ಕಳಿಲ್ಲದುದರಿಂದ ಹೆಂಡತಿಯೊಡನೆ ಶಂಕರನನ್ನು ಕುರಿತು ತಪಸ್ಸುಮಾಡಿದನು.

೭. ಆ ತಪಸ್ಸಿನಿಂದ ಶಂಕರನನ್ನು ಸಂತೋಷಪಡಿಸಿದನು. ಸಂತೋಷಗೊಂಡ ಶಂಕರನು ಆ ಮೃಕಂಡುವನ್ನೂ ಆತನ ಹೆಂಡತಿಯನ್ನೂ ಕುರಿತು ನಾನು ವರವನ್ನು ಕೊಡಲು ಬಂದಿದ್ದೇನೆ. ನನ್ನಿಂದ ವರವನ್ನು ತೆಗೆದುಕೋ ಎನ್ನಲು ಆ ಋಷಿಯು ವರವನ್ನು ಕೇಳಿದನು.

॥ ಮೃಕಂಡುರುವಾಚ ॥

ಯತೋ ಮೇ ಭಗವಾನ್ ಸ್ತೋತ್ರೈಸ್ತುಷ್ಟೋತಃ ಪರಮೇಶ್ವರ ।
ಅನಪತ್ಯೋಽಹಮಿಚ್ಛಾಮಿ ಪುತ್ರಂ ತ್ವತ್ತೋ ಮಹೇಶ್ವರ ॥ ೮ ॥

॥ ಶ್ರೀ ಶಂಕರ ಉವಾಚ ॥

ಕಿಮಿಹೇಚ್ಛಸಿ ಪುತ್ರಂ ತ್ವಂ ನಿರ್ಗುಣಂ ಚಿರಜೀವಿನಂ ।
ಆಹೋಸ್ವಿದೇಕಂ ಸಗುಣಂ ಸರ್ವಜ್ಞಂ ಷೋಡಶಾಬ್ದಿಕಂ ॥ ೯ ॥

॥ ವಸಿಷ್ಠ ಉವಾಚ ॥

ಇತ್ಯುಕ್ತಸ್ಸೋಽಪಿ ಧರ್ಮಾತ್ಮಾ ನಾಹಮಿಚ್ಛಾಮಿ ನಿರ್ಗುಣಂ ।
ಅಲ್ಪಾಯುರಪಿ ಪುತ್ರೋ ಮೇ ಸರ್ವಜ್ಞೋಽಸ್ತು ಜಗತ್ಪತೇ ॥ ೧೦ ॥

॥ ಶ್ರೀ ಶಂಕರ ಉವಾಚ ॥

ತರ್ಹಿ ತೇ ಭವಿತಾ ಪುತ್ರಃ ಷೋಡಶಾಯುಸ್ಸುಧಾರ್ಮಿಕಃ ।
ಸರ್ವಜ್ಞೋ ಗುಣವಾಂಲ್ಲೋಕೇ ಕೀರ್ತಿಮಾನ್ ಜ್ಞಾನಸಾಗರಃ ॥ ೧೧ ॥

---

೮. ಮೃಕಂಡುವು ಹೇಳಿದನು-ಎಲೈ ಭಗವಂತನೇ! ನನ್ನ ಸ್ತೋತ್ರಗಳಿಂದ ನೀನು ಸಂತೋಷಗೊಂಡಿದ್ದೀಯೆ. ನನಗೆ ಮಕ್ಕಳಿಲ್ಲ. ಆದ್ದರಿಂದ ನನಗೆ ಮಕ್ಕಳಾಗುವಂತೆ ನಿನ್ನಿಂದ ವರವನ್ನು ಅಪೇಕ್ಷಿಸುತ್ತೇನೆ.

೯. ಶ್ರೀ ಶಂಕರನು ಹೇಳಿದನು-ಎಲೈ ಮೃಕಂಡುವೆ! ನಿನಗೆ ಗುಣಹೀನನಾದ ಚಿರಂಜೀವಿಯಾದ ಪುತ್ರನು ಬೇಕೆ? ಇಲ್ಲದಿದ್ದರೆ ಒಳ್ಳೆಯ ಗುಣವಂತನಾದ ಹದಿನಾರು ವರ್ಷಗಳವರೆಗೂ ಬದುಕಿರುವ ಮಗನು ಬೇಕೇ? ಎರಡರಲ್ಲಿ ಯಾವುದನ್ನು ಇಚ್ಛಿಸುತ್ತೀಯೆ?

೧೦. ವಸಿಷ್ಠನು ಹೇಳಿದನು-ಆ ಶಂಕರನು ಹೀಗೆಂದು ಹೇಳಲು ಧರ್ಮಿಷ್ಠನಾದ ಮೃಕಂಡುವು ಎಲೈ ಪರಮೇಶ್ವರನೇ! ನನಗೆ ಗುಣಹೀನನಾದ ಮಗನು ಬೇಕಿಲ್ಲ. ಅಲ್ಪಾಯುಸ್ಸುಳ್ಳವನಾದರೂ ಚಿಂತೆಯಿಲ್ಲ. ಸರ್ವಜ್ಞನೂ ಗುಣವಂತನೂ ಆದ ಮಗನನ್ನು ಕೊಡು.

೧೧. ಶ್ರೀ ಶಂಕರನು ಹೇಳಿದನು-ಹಾಗಾದರೆ ನಿನಗೆ ಧರ್ಮಜ್ಞನೂ ಗುಣವಂತನೂ ಆದ ಹದಿನಾರು ವರ್ಷದವರೆಗೆ ಬದುಕುವ ಮಗನು ಹುಟ್ಟುವನು ಲೋಕದಲ್ಲಿ ಅವನ ಕೀರ್ತಿಯು ಹರಡುತ್ತದೆ. ಜ್ಞಾನಿಯಾಗುತ್ತಾನೆ.

|| ವಸಿಷ್ಠ ಉವಾಚ ||

ಏವಮುಕ್ತ್ವಾ ಯಯೌ ದೇವಃ ಸೋಽಪಿ ಲಬ್ಧವರೋ ಮುನಿಃ |
ಪ್ರಕಾಮಂ ಸಂತುಷ್ಟಮನಾಃ ಪ್ರಪೇದೇ ನಿಜಮಾಶ್ರಮಂ || ೧೨ ||

ಭಾರ್ಯಾ ತಸ್ಯ ಚಿರಾದಾಸೀದಂತರ್ವತ್ನೀ ಮರುದ್ವತೀ |
ವಿಧಿವದ್ವಿಹಿತೇ ತೇನ ಗರ್ಭಾಧಾನಸ್ಯ ಕರ್ಮಣಿ || ೧೩ ||

ತತಃ ಪುಂಸವನಂ ತೇನ ಸ್ಪಂದನಾತ್ ಪ್ರಾಕ್ಶುಭೇ ದಿನೇ |
ಗೃಹ್ಯೋಕ್ತವಿಧಿನಾ ಸಮ್ಯಕ್ ತತಃ ಪುಂಸೋ ವಿವೃದ್ಧಯೇ || ೧೪ ||

ಸೀಮಂತೋಪ್ಯಷ್ಟಮೇ ಮಾಸಿ ಗರ್ಭರೂಪಸಮೃದ್ಧಿಮತ್ |
ಸುಖಪ್ರಸವಸಿದ್ಧ್ಯೈ ಚ ತೇನಾಕಾರಿ ಕ್ರಿಯಾವಿದಾ || ೧೫ ||

ತನಯಸ್ತಪನಾಕಾರೋ ಮರುದ್ವತ್ಯಾಮಜಾಯತ |
ದೇವ ದುಂದುಭಯೋ ನೇದುಃ ಪ್ರಸೇದುಃ ಸರ್ವತೋ ದಿಶಃ || ೧೬ ||

---

೧೨. ವಸಿಷ್ಠನು ಹೇಳಿದನು-ಈ ರೀತಿಯಾಗಿ ವರವನ್ನು ಕೊಟ್ಟು ಈಶ್ವರನು ಹೊರಟು ಹೋದನು. ಆ ಮೃಕಂಡುವು ಶಿವನಿಂದ ವರವನ್ನು ಪಡೆದು ಬಹುವಾಗಿ ಸಂತೋಷಗೊಂಡು ತನ್ನ ಆಶ್ರಮಕ್ಕೆ ಹೋದನು.

೧೩. ಅನಂತರ ಆ ಮರುದ್ವತಿಯು ಋತುವಾಗಲು ಶಾಸ್ತ್ರೋಕ್ತವಾಗಿ ಗರ್ಭಾಧಾನವನ್ನು ಮಾಡಲು ಆಕೆಯು ಬಹುಕಾಲವಾಗಿದ್ದರೂ ಗರ್ಭಿಣಿಯಾದಳು.

೧೪. ಗರ್ಭವು ಅಲ್ಲಾಡುವುದಕ್ಕಿಂತಲೂ ಮೊದಲು ಶುಭದಿನದಲ್ಲಿ ಪುಂಸವನವನ್ನು ಗೃಹ್ಯಸೂತ್ರದಲ್ಲಿ ಹೇಳಿರುವ ನಿಯಮದಂತೆ ಮಾಡಿದನು. ಅದರಿಂದ ಪುಂಸ್ತ್ವವು ವೃದ್ಧಿಯಾಗುತ್ತದೆ.

೧೫. ಎಂಟನೆಯ ತಿಂಗಳಲ್ಲಿ ಗರ್ಭವು ವೃದ್ಧಿಹೊಂದತಕ್ಕ ಸೀಮಂತವನ್ನು ಮಾಡಿದನು. ಮತ್ತು ಅದರಿಂದ ಸುಖಪ್ರಸವವೂ ಆಗುತ್ತದೆಯಾದುದರಿಂದ ಆ ಕ್ರಿಯಾಕಲಾಪಗಳನ್ನು ತಿಳಿದಿರುವ ಆತನು ಅವೆಲ್ಲವನ್ನೂ ಮಾಡಿದನು.

೧೬. ಸೂರ್ಯನಂತೆ ತೇಜಸುಳ್ಳ ಮಗನು ಆ ಮರದ್ವತಿಯಲ್ಲಿ ಹುಟ್ಟಿದನು. ಆಗ ದೇವ ದುಂದುಭಿಗಳು ಮೊಳಗಿದುವು. ಎಲ್ಲಾ ಕಡೆಯಲ್ಲಿಯೂ ದಿಕ್ಕುಗಳು ನಿರ್ಮಲವಾದುವು.

ಕಲ್ಯಾಣೀ ಸರ್ವತೋ ವಾಣೀ ಪ್ರಾಣಿನಃ ಪ್ರೀಣಯಂತ್ಯಭೂತ್ ।
ತಿಲೋತ್ತಮಾದ್ಯಪ್ಸರಸೋ ದೇವೇಂದ್ರಾದ್ಯಮರಾ ಅಪಿ ॥ ೧೭ ॥

ವೇದವ್ಯಾಸಾದಿ ಮುನಯಸ್ತಚ್ಛಾನ್ತ್ಯರ್ಥಂ ಸಮಾಯಯುಃ ।
ಜಾತಕರ್ಮ ಸ್ವಯಂ ಚಕ್ರೇ ವೇದವ್ಯಾಸೋ ಮಹಾಮುನಿಃ ॥ ೧೮ ॥

ನಾಮಕರ್ಮ ತತಶ್ಚಕ್ರೇ ಮುನಿರೇಕಾದಶೇ ಹನಿ ।
ವೇದೋಕ್ತೈರ್ವಿವಿಧೈರ್ಮಂತ್ರೈ ರಾಶೀರ್ಭಿರಭಿನಂದ್ಯ ಚ ॥ ೧೯ ॥

ಕೃತ್ವಾ ಬಾಲೋಚಿತಾಂ ರಕ್ಷಾಂ ತೇನ ಸಂಭಾವಿತಾ ಯಯುಃ ।
ಅಹೋ ರೂಪಮಹೋ ರೂಪಸ್ತ್ವಹೋ ಸರ್ವಾಂಗಲಕ್ಷಣಂ ॥ ೨೦ ॥

ಅಹೋ ಮರುದ್ವತೀ ಭಾಗ್ಯಾದಾವಿರಾಸೀತ್ ಸ್ವಯಂ ಹರಃ ।
ಇತಿ ಹೃಷ್ಯಂತಿ ಚಾನ್ಯೋನ್ಯಂ ಪೌರಜಾನಪದಾ ಜನಾಃ ॥ ೨೧ ॥

---

೧೭–೨೧. ಎಲ್ಲಾ ಕಡೆಯಲ್ಲಿಯೂ ಮಂಗಳಕರವಾದ ಮಾತುಗಳು ಹೊರಟುವು. ಪ್ರಾಣಿಗಳು ಎಲ್ಲವೂ ಸಂತೋಷದಿಂದಿದ್ದುವು. ತಿಲೋತ್ತಮೆಯೇ ಮುಂತಾದ ಅಪ್ಸರಸ್ತ್ರೀಯರೂ ದೇವೇಂದ್ರನೇ ಮುಂತಾದ ದೇವತೆಗಳೂ ವೇದವ್ಯಾಸನೇ ಮುಂತಾದ ಋಷಿಗಳೂ ಆ ಮಗುವಿನ ಶಾನ್ತಿಗೋಸ್ಕರ ಬಂದರು. ವೇದವ್ಯಾಸ ಮಹಾಮುನಿಯು ಜಾತಕರ್ಮವನ್ನು ತಾನೇ ಮಾಡಿದನು ಅನಂತರ ಹನ್ನೊಂದನೆಯ ದಿನದಲ್ಲಿ ತಾನೇನೇ ನಾಮಕರಣವನ್ನು ಮಾಡಿದನು. ಅನಂತರ ಬಂದಿದ್ದವರೆಲ್ಲರೂ ವೇದೋಕ್ತವಾದ ನಾನಾ ಬಗೆಯಾದ ಮಂತ್ರಗಳಿಂದಲೂ ಆಶೀರ್ವಾದಗಳಿಂದಲೂ ಆ ಮಗುವನ್ನು ಆಶೀರ್ವದಿಸಿ ಆ ಮಗುವಿಗೆ ಬಾಲನಿಗೆ ಯೋಗ್ಯವಾದ ರಕ್ಷೆಯನ್ನೂ ಮಾಡಿದರು. ಇದಾದಮೇಲೆ ಆ ಮೃಕಂಡುವು ಅವರನ್ನೆಲ್ಲಾ ಯಥೋಚಿತವಾಗಿ ಗೌರವಿಸಲು ಅವರೆಲ್ಲರೂ ಹೊರಟು ಹೋದರು. ಈ ಮಗುವಿನ ರೂಪವೂ ತೇಜಸ್ಸೂ ಆಶ್ಚರ್ಯಕರವಾಗಿವೆ. ಎಲ್ಲಾ ಅವಯಗಳೂ ಕೂಡ ಬಹು ಲಕ್ಷಣವಾಗಿವೆ. ಮರುದ್ವತಿಯ ಅದೃಷ್ಟವಿಶೇಷದಿಂದಲೇ ಸಾಕ್ಷಾದೀಶ್ವರನೇ ಅವಳ ಹೊಟ್ಟೆಯಲ್ಲಿ ಹುಟ್ಟಿರುವನು. ಎಂಬುದಾಗಿ ಪಟ್ಟಣಿಗರೂ ದೇಶದವರೂ ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತ ಸಂತೋಷ ಗೊಳ್ಳುತ್ತಿದ್ದರು.

ನಿಷ್ಕ್ರಾಮೋ ವೈ ಚತುರ್ಥೇಽಸ್ಯ ಮಾಸಿ ಪಿತ್ರಾ ಕೃತೋ ಗೃಹಾತ್ ।
ಅನ್ನಪ್ರಾಶನಮಬ್ದಾರ್ಧೇ ಚೂಡಾದ್ಯರ್ಧಾಬ್ಧಿಕ ದ್ವಯೇ ॥ ೨೨ ॥

ಕರ್ಣವೇಧಂ ತತಃ ಕೃತ್ವಾ ಶ್ರವಣರ್ಕ್ಷೇ ಸ ಕರ್ಮವಿತ್ ।
ಬ್ರಹ್ಮತೇಜೋಽಭಿವೃದ್ಧ್ಯರ್ಥಂ ಪಂಚಮೇಽಬ್ದೇ ವ್ರತಂ ದದೌ ॥ ೨೩ ॥

ಉಪಾಕರ್ಮ ತತಃ ಕೃತ್ವಾ ವೇದಮಧ್ಯಾಪಯತ್ಸುಧೀಃ ।
ವೇದಾನ್ ಸ ವಿಧಿನಾಧ್ಯೈಷ್ಟ ಸಾಂಗೋಪಾಂಗಪದಕ್ರಮಾನ್ ॥ ೨೪ ॥

ವಿದ್ಯಾಜಾತಂ ಸಮಾಪ್ತಂ ಚ ಸಾಕ್ಷಿಮಾತ್ರಾದ್ಗುರೋರ್ಮುಖಾತ್ ।
ವಿನಯಾದಿಗುಣಾನಾವಿಷ್ಕುರ್ವನ್ ಜಗ್ರಾಹ ಶಕ್ತಿಮಾನ್ ॥ ೨೫ ॥

---

೨೨-೨೩. ನಾಲ್ಕನೆಯ ತಿಂಗಳಲ್ಲಿ ಮನೆಯಿಂದ ಹೊರಕ್ಕೆ ಕರೆದುಕೊಂಡು ಹೋಗುವ ನಿಷ್ಕ್ರಾಮವೆಂಬ ಕರ್ಮವನ್ನು ಮಾಡಿದನು. ಆರನೆಯ ತಿಂಗಳಲ್ಲಿ ಅನ್ನ ಪ್ರಾಶನವೆಂಬ ಅನ್ನತಿನ್ನಿಸುವಿಕೆಯನ್ನು ಮಾಡಿದನು ಎರಡೂವರೆ ವರ್ಷವಾದ ನಂತರ ಚೌಲವೆಂಬ ಕರ್ಮವನ್ನು ಮಾಡಿದನು. ಅನಂತರ ಶ್ರವಣನಕ್ಷತ್ರದಲ್ಲಿ ಕಿವಿಯನ್ನು ಚುಚ್ಚುವುದು ಸರ್ವೋತ್ಕೃಷ್ಟವಾದುದರಿಂದ ಆ ನಕ್ಷತ್ರದಲ್ಲಿ ಕಿವಿಯನ್ನು ಚುಚ್ಚುವ ಕರ್ಮವನ್ನು ಮಾಡಿದನು. ಐದನೆಯ ವರ್ಷದಲ್ಲಿ ಉಪನಯನವನ್ನು ಮಾಡಿದರೆ ಬ್ರಹ್ಮ ತೇಜಸ್ಸು ವೃದ್ಧಿಗೊಳ್ಳುತ್ತದೆಯಾದುದರಿಂದ ಆಗ ಉಪನಯನ ವನ್ನು ಮಾಡಿದನು.

೨೪. ಆನಂತರ ಉಪಾಕರ್ಮವನ್ನು ಮಾಡಿ ವೇದವನ್ನು ಹೇಳಿಕೊಟ್ಟನು. ಅನಂತರ ಬುದ್ಧಿವಂತನಾದ ಆ ಹುಡುಗನು ನಾಲ್ಕು ವೇದಗಳನ್ನೂ ಅವುಗಳ ಅಂಗಗಳನ್ನೂ ಅಧ್ಯಯನಮಾಡಿದನು.

೨೫. ಇವನು ಎಲ್ಲಾ ವಿದ್ಯೆಗಳನ್ನೂ ಚೆನ್ನಾಗಿ ಕಲಿತುಕೊಂಡನು. ಇವೆಲ್ಲವನ್ನೂ ಗುರುಮುಖದಿಂದ ಕಲಿತರೂ ಕೂಡ ಆ ಗುರುವು ನೆಪಮಾತ್ರಕ್ಕೆ ಇದ್ದನು. ತನ್ನ ವಿನಯವೇ ಮುಂತಾದ ಗುಣಗಳನ್ನು ಆಗಲೇ ತೋರ್ಪಡಿಸುತ್ತ ತನ್ನ ಶಕ್ತಿಯನ್ನು ತೋರಿಸುತ್ತ ಆ ವಿದ್ಯೆಯನ್ನು ಕಲಿತನು.

ಭಿಕ್ಷಾಶನರತೋ ನಿತ್ಯಂ ಪಿತ್ರೋಃ ಶುಶ್ರೂಷಣೇ ರತಃ |
ಸಂಪ್ರಾಪ್ತೇ ಷೋಡಶೇಬ್ದೇ ತು ಮಾರ್ಕಂಡೇಯಸ್ಯ ಧೀಮತಃ ॥ ೨೬ ॥

ಮೃಕಂಡುಃ ಶೋಕದೀನಾತ್ಮಾ ವಿಲಲಾಪಾಕುಲೇಂದ್ರಿಯಃ |
ಮಾರ್ಕಂಡೇಯೋಽಪಿ ತಂ ದೃಷ್ಟ್ವಾ ವಿಲಪಂತಂ ಸುದುಃಖಿತಂ ॥ ೨೭ ॥

ಉವಾಚ ಪಿತರಂ ಕಿಂ ತೇ ಕಾರಣಂ ಶೋಕಮೋಹಯೋಃ ।
ಮಾರ್ಕಂಡೇಯಸ್ಯ ವಾಕ್ಯಂ ತಚ್ಛ್ರುತ್ವಾ ಸುಮಧುರಾಕ್ಷರಂ ||
ಉವಾಚ ಕಾರಣಂ ತಸ್ಮೈ ಶೋಕಸ್ಯಾಪಿ ಸಹೇತುಕಂ ॥ ೨೮ ॥

॥ ಮೃಕಂಡುರುವಾಚ ॥

ತವ ಹೇತೋರಹಂ ವತ್ಸ ಶೋಚಾಮಿ ಶೃಣು ಮೇ ವಚಃ |
ಆಯುಃ ಷೋಡಶವರ್ಷಾಣಿ ತವ ದತ್ತಂ ಪಿನಾಕಿನಾ ||
ಸ ಕಾಲೋಽಯಮಿಹ ಪ್ರಾಪ್ತಃ ತಸ್ಮಾಚ್ಛೋಚಾಮಿ ನಂದನ || ೨೯ ||

---

೨೬-೨೮. ಈತನು ಭಿಕ್ಷಾನ್ನವನ್ನು ಮಾಡಿಕೊಂಡು ಗುರುಶುಶ್ರೂಷೆ ಮಾಡುತ್ತಿರಲು ಹದಿನಾರನೆಯ ವರ್ಷವು ಬರುತ್ತ ಬಂದಿತು. ಆಗ ತಂದೆಯಾದ ಮೃಕಂಡುವು ದುಃಖಗೊಂಡವನಾಗಿ ಬುದ್ಧಿಯೇ ಸ್ವಾಧೀನವಿಲ್ಲದೆ ಅಳುವುದಕ್ಕೆ ಮೊದಲು ಮಾಡಿದನು. ಆಗ ಈ ಮಗನಾದ ಮಾರ್ಕಂಡೇಯನು ಬಹುವಾಗಿ ದುಃಖಗೊಂಡು ಅಳುತ್ತಿರುವ ತಂದೆಯನ್ನು ಕುರಿತು ಎಲೈ ತಂದೆಯೆ! ನಿನ್ನ ದುಃಖಕ್ಕೂ ಬುದ್ಧಿಶೂನ್ಯತೆಗೂ ಕಾರಣವೇನು? ಎಂದು ಕೇಳಿದನು. ತಂದೆಯು ಮಗನ ಈ ಮಾತನ್ನು ಕೇಳಿ ಅವನ ದುಃಖಕ್ಕೆ ಕಾರಣವನ್ನು ಮೊದಲಿನಿಂದಲೂ ಹೇಳಿದನು.

೨೯. ಮೃಕಂಡುವು ಹೇಳಿದನು-ಎಲೈ ವತ್ಸನೆ! ನಿನ್ನ ಕಾರಣದಿಂದಲೇ ನಾನು ದುಃಖ ಪಡುತ್ತಿದ್ದೇನೆ. ನಾನು ಹೇಳುವುದನ್ನು ಕೇಳು. ನಿನಗೆ ಹದಿನಾರು ವರ್ಷ ಆಯುಸ್ಸನ್ನು ಪಿನಾಕಿಯಾದ ಈಶ್ವರನು ಕೊಟ್ಟಿರುವನು. ಆ ಹದಿನಾರನೆಯ ವರ್ಷವು ಈಗ ಬಂದಿದೆ. ಆದ್ದರಿಂದ ಈಗ ದುಃಖಿಸುತ್ತೇನೆ.

॥ ವಸಿಷ್ಠ ಉವಾಚ ॥

ಪಿತ್ರೇತಿ ಕಥಿತಂ ಶ್ರುತ್ವಾ ಮಾರ್ಕಂಡೇಯೋಽಬ್ರವೀದಿತಿ ।
ಮನ್ನಿಮಿತ್ತಃ ಪಿತಶ್ಶೋಕಂ ಕದಾಚಿದಪಿ ಮಾ ಕೃಥಾಃ ॥ ೩೦ ॥

ಯತಿಷ್ಯಾಮಿ ತಥಾ ತಾತ ಯಥಾ ಯಾಸ್ಯಾಮ್ಯಮರ್ತ್ಯತಾಂ ।
ಸಮಾರಾಧ್ಯ ಮಹಾದೇವಂ ವಾಂಛಿತಾರ್ಥಪ್ರದಂ ಶಿವಂ ॥ ೩೧ ॥

ಮೃತ್ಯುಂಜಯಂ ವಿರೂಪಾಕ್ಷಂ ಸರ್ವಜ್ಞಂ ಸರ್ವದಂ ಸತಾಂ ।
ಕಾಲಕಾಲಂ ಮಹಾಕಾಲಂ ಕಾಲಕೂಟವಿಷಾಶಿನಂ ॥ ೩೨ ॥

ಇತಿ ಶ್ರುತ್ವಾ ವಚಸ್ತಸ್ಯ ಪಿತರಾವತಿಹರ್ಷಿತೌ ।
ಸರ್ವಂ ಶೋಕಂ ಪರಿತ್ಯಜ್ಯ ಪ್ರಹೃಷ್ಟಾವೂಚತುಸ್ಸುತಂ ॥ ೩೩ ॥

॥ ಪಿತರಾವೂಚತುಃ ॥

ಆವಯೋಶ್ಶೋಕನಾಶಾಯ ಮಹೋಪಾಯಸ್ಸಮೀರಿತಃ ।
ಮೃತ್ಯುಂಜಯಸ್ಯ ದೇವಸ್ಯ ಸಮಾರಾಧನಲಕ್ಷಣಃ ॥ ೩೪ ॥

---

೩೦. ವಸಿಷ್ಠನು ಹೇಳಿದನು-ಮಾರ್ಕಂಡೇಯನು ತಂದೆಯು ಹೇಳಿದುದನ್ನು ಕೇಳಿ ಎಲೈ ತಂದೆಯೆ! ನನಗೋಸ್ಕರವಾಗಿ ನೀನು ಎಂದಿಗೂ ದುಃಖಪಡಬೇಡವೆಂದನು.

೩೧. ಇಷ್ಟಾರ್ಥಗಳನ್ನು ಕೇಳಿದಂತೆ ಕೊಡುವ ಆ ಮಹಾದೇವನನ್ನು ಭಜಿಸಿ ನಾನು ಸಾಯದವನಾಗಿ ಹೇಗಾಗಬೇಕೋ ಹಾಗೆ ಪ್ರಯತ್ನ ಪಡುತ್ತೇನೆ.

೩೨. ಮೃತ್ಯುವನ್ನು ಜಯಿಸತಕ್ಕವನೂ, ವಿರೂಪಾಕ್ಷನೂ, ಸರ್ವಜ್ಞನೂ, ಸತ್ಪುರುಷರಿಗೆ ಕೇಳಿದ್ದನ್ನೆಲ್ಲಾ ಕೊಡುವವನೂ, ಕಾಲನಿಗೆ ಕಾಲನೂ, ಮಹಾಕಾಲಸ್ವರೂಪನೂ, ಕಾಲಕೂಟವನ್ನು ಕುಡಿದವನೂ ಆದ ಆ ಸ್ವಾಮಿಯನ್ನು ಭಜಿಸಿ ಸಾಯದಿರುವಂತೆ ಮಾಡಿಕೊಳ್ಳುತ್ತೇನೆ.

೩೩. ಮಗನ ಈ ಮಾತನ್ನು ಕೇಳಿ ತಾಯಿ ತಂದೆಗಳು ಸಂತೋಷಗೊಂಡವರಾಗಿ ದುಃಖವೆಲ್ಲವನ್ನೂ ಬಿಟ್ಟು ಮಗನನ್ನು ಕುರಿತು ಇಂತೆಂದರು.

೩೪. ತಾಯಿತಂದೆಗಳು ಹೇಳಿದರು-ಎಲೈ ಪುತ್ರನೇ! ಮೃತ್ಯುಂಜಯನಾದ ಆ ಮಹೇಶ್ವರನನ್ನು ಪೂಜಿಸುವ ರೀತಿಯಾದ ಈ ಉಪಾಯವನ್ನು ನಮ್ಮಗಳ ದುಃಖನಾಶಕ್ಕೋಸ್ಕರವಾಗಿ ನೀನು ಹೇಳಿದೆ.

ತದ್ಗಚ್ಛ ಶರಣಂ ತಾತ ನಾತಃ ಪರತರಂ ಹಿತಂ ।
ಮನೋರಥಪಥಾತೀತಕಾರಿಣಂ ಕಾಲಹಾರಿಣಂ ॥ ೩೫ ॥

ಕಿಂ ನ ಶ್ರುತಂ ತ್ವಯಾ ತಾತ ಶ್ವೇತಕೇತುಂ ಯಥಾಪುರಾ ।
ಪಾಶಿತಂ ಕಾಲಪಾಶೇನ ರರಕ್ಷ ತ್ರಿಪುರಾಂತಕಃ ॥ ೩೬ ॥

ಶಿಲಾದತನಯಂ ಮೃತ್ಯುಗ್ರಸ್ತಮಷ್ಟಾಬ್ದಮರ್ಭಕಂ ।
ಶಿವೋ ನಿಜಪದಂ ಚಕ್ರೇ ನಂದಿನಂ ವಿಶ್ವನಂದಿನಂ ॥ ೩೭ ॥

ಕ್ಷೀರೋದಮಥನೋದ್ಭೂತಂ ಪ್ರಲಯಾನಿಲ ಸನ್ನಿಭಂ ।
ಪೀತ್ವಾ ಹಾಲಾಹಲಂ ಘೋರಮರಕ್ಷದ್ಭುವನತ್ರಯಂ ॥ ೩೮ ॥

ಜಲಂಧರಂ ಮಹಾದರ್ಪಂ ಹೃತ ತ್ರೈಲೋಕ್ಯಸಂಪದಂ ।
ಚರಣಾಂಗುಷ್ಠರೇಖೋತ್ಥಚಕ್ರೇಣಾಭಿಜಘಾನ ಯಃ ॥ ೩೯ ॥

---

೩೫. ಎಲೈ ಮಗನೆ ! ಇದಕ್ಕಿಂತಲೂ ಹಿತವಾದುದು ಬೇರೊಂದಿಲ್ಲ. ನಮ್ಮಗಳ ಇಷ್ಟಾರ್ಥಕ್ಕೆ ಮೀರಿದುದನ್ನು ಕೊಡುವ ಯಮನನ್ನು ಕೂಡ ನಾಶ ಮಾಡುವ ಆ ಸ್ವಾಮಿಯಾದ ಮಹೇಶ್ವರನನ್ನು ಶರಣು ಹೊಂದು.

೩೬. ಎಲೈ ಮಗನೆ ! ನೀನು ಕೇಳಲಿಲ್ಲವೆ ! ಯಮನು ಕಾಲಪಾಶದಿಂದ ಕಟ್ಟಿ ಹಾಕಿದ್ದ ಶ್ವೇತಕೇತುವನ್ನು ಆ ಮಹೇಶ್ವರನು ಕಾಪಾಡಿದನೆಂಬುದನ್ನು ನೀನು ತಿಳಿಯೆಯಾ !

೩೭. ಮೃತ್ಯುವಿನ ಬಾಯಿಗೆ ತುತ್ತಾಗಿದ್ದ ಎಂಟು ವರ್ಷ ವಯಸ್ಸುಳ್ಳ ಶಿಲಾದನ ಮಗನಾದ ಪ್ರಪಂಚಕ್ಕೇ ಸಂತೋಷವನ್ನುಂಟುಮಾಡುವ ನಂದಿಗೆ ಮರೆ ಹೊಕ್ಕದ್ದರಿಂದ ಶಿವನು ತನ್ನ ಸ್ಥಾನವನ್ನೇ ಕೊಟ್ಟನೆಂಬುದನ್ನು ತಿಳಿಯೆಯಾ!

೩೮. ಕ್ಷೀರ ಸಮುದ್ರವನ್ನು ಕಡೆದಾಗ ಹುಟ್ಟಿದ ಪ್ರಳಯ ಕಾಲದ ಅಗ್ನಿಗೆ ಸಮವಾದ ಘೋರವಾದ ಹಾಲಾಹಲ ವಿಷವನ್ನು ಕುಡಿದು ಮೂರು ಲೋಕವನ್ನೇ ಕಾಪಾಡಿದನಲ್ಲ! ಆ ಸ್ವಾಮಿಯನ್ನು ತಿಳಿಯೆಯ !

೩೯. ಮಹಾ ದರ್ಪಶಾಲಿಯಾದ ಮೂರು ಲೋಕದ ಸಂಪತ್ತನ್ನೂ ಅಪಹರಿಸಿದ್ದ ಜಲಂಧರನನ್ನು ಪಾದದ ಅಂಗುಷ್ಠದಿಂದ ಮಾಡಿದ ಚಕ್ರದಿಂದ ಸಂಹರಿಸಿದ ಆ ಸ್ವಾಮಿಯುನ್ನು ಶರಣು ಹೊಂದು.

ಯೋಸಾವೇಕೇಷುಪಾತೋತ್ಥ ಜ್ವಲನ್ನೈಸ್ತ್ರಿಪುರಂ ಪುರಾ ।
ವಿಧಾಯ ಪತ್ರಿಣಂ ವಿಷ್ಣುಂ ಜ್ವಲಯಾಮಾಸ ಧೂರ್ಜಟಿಃ ॥ ೪೦ ॥

ಅಂಧಕಂಯ ಸ್ತ್ರಿಶೂಲಾಗ್ರೇ ಪ್ರೋತಂ ವರ್ಷಾಯುತಂ ಪುರಾ ।
ತ್ರೈಲೋಕ್ಯೈಶ್ವರ್ಯ ಸಮ್ಮೂಢಂ ಶೋಷಯಾಮಾಸ ಭಾನುನಾ ॥ ೪೧ ॥

ಕಾಮಂ ದೃಷ್ಟಿನಿಪಾತೇನ ತ್ರೈಲೋಕ್ಯವಿಜಯೋರ್ಜಿತಂ ।
ನಿನಾಯಾನಂಗಪದವೀಂ ವಿಕ್ಷ್ಯಮಾಣೇಷ್ವಜಾದಿಷು ॥ ೪೨ ॥

ತಂ ಬ್ರಹ್ಮಾದ್ಯೇಕಕರ್ತಾರಂ ಮೇಘವಾಹನಮಚ್ಯುತಂ ।
ಪ್ರಯಾಹಿ ವಿಶ್ವಶರಣಂ ವಿಶ್ವರಕ್ಷಾಮಣಿಂ ಶಿವಂ ॥ ೪೩ ॥

---

೪೦. ಯಾವ ಸ್ವಾಮಿಯಾದ ಶಿವನು ವಿಷ್ಣುವನ್ನು ಬಾಣವನ್ನಾಗಿ ಮಾಡಿಕೊಂಡು ಆ ಒಂದೇ ಬಾಣದ ಹೊಡತದಿಂದ ತ್ರಿಪುರವನ್ನು ಸುಟ್ಟುಬಿಟ್ಟನೋ ಅಂತಹ ಸ್ವಾಮಿಯನ್ನು ನೀನು ಶರಣು ಹೊಂದು.

೪೧. ಯಾವ ಸ್ವಾಮಿಯು ಮೂರು ಲೋಕದ ಐಶ್ವರ್ಯದಿಂದ ಮೋಹಿತನಾದ ಅಂಧಕನನ್ನು ತ್ರಿಶೂಲದ ತುದಿಯಲ್ಲಿ ಚುಚ್ಚಿ ಹತ್ತು ಸಾವಿರ ವರ್ಷಗಳ ವರೆಗೂ ಸೂರ್ಯನ ಬಿಸಿಲಿಂದ ಶೋಷಿಸುವಂತೆ ಮಾಡಿದನೋ ಅಂತಹ ಸ್ವಾಮಿಯನ್ನು ಶರಣು ಹೊಂದು.

೪೨. ಮೂರು ಲೋಕವನ್ನು ಜಯಿಸಿ ವಿಜಯದಿಂದ ಹಿಗ್ಗುತ್ತಿದ್ದ ಮನ್ಮಥನನ್ನು ಬ್ರಹ್ಮಾದಿಗಳು ನೋಡುತ್ತಿದ್ದಂತೆಯೇ ಸುಟ್ಟು ಹಾಕಿದನೋ ಅಂತಹ ಸ್ವಾಮಿಯನ್ನು ಶರಣು ಹೊಂದು.

೪೩. ಬ್ರಹ್ಮ ಮೊದಲಾದವರಿಗೆಲ್ಲಾ ಸೃಷ್ಟಿ ಕರ್ತನಾದ ಮೇಘವಾಹನನಾದ, ನಾಶರಹಿತನಾದ, ಪ್ರಪಂಚವನ್ನೇ ಕಾಪಾಡುವ ಚಿಂತಾಮಣಿಯಾದ, ಪ್ರಪಂಚವೇ ಶರಣು ಹೊಂದುವ ಆ ಶಿವನನ್ನು ಶರಣು ಹೊಂದು.

|| ವಸಿಷ್ಠ ಉವಾಚ ||

ಪಿತ್ರೋರನುಜ್ಞಾಂ ಸಂಪ್ರಾಪ್ಯ ದಕ್ಷಿಣಾರ್ಣವರೋಧಸಿ |
ಲಿಂಗಂ ಸಂಸ್ಥಾಪ್ಯ ವಿಧಿವತ್ ಮಾರ್ಕಂಡೇಯೋ ನಿಜಾಹ್ವಯಂ || ೪೪ ||

ಕೃತ್ವಾ ತ್ರಿಷವಣಸ್ನಾನಂ ತ್ರಿಕಾಲಂ ಶಿವಮರ್ಚತಿ |
ಸ್ತೋತ್ರಂ ತ್ರಿಕಾಲಪೂಜಾಂತೇ ಪಠಿತ್ವಾ ನೃತ್ಯತಿ ಪ್ರಿಯಾತ್ || ೪೫ ||

ತೇನ ಸ್ತೋತ್ರೇಣ ಸಂತುಷ್ಟೋ ದಿನೇನೈಕೇನ ಶಂಕರಃ |
ಪೂಜಿತಶ್ಚ ಮಹಾಭಕ್ತ್ಯಾ ಮಾರ್ಕಂಡೇಯೇನ ಶಂಕರಃ || ೪೬ ||

ಶಿವಪೂಜಾಪ್ರಸಕ್ತಂ ಚ ತದ್ದಿನೇ ಸ್ತೋತು ಮುದ್ಯತಂ |
ಅಜಗಾಮ ತಮುದ್ದಿಶ್ಯ ಕಾಲೋ ಮೃತ್ಯುಸಹಾಯವಾನ್ || ೪೭ ||

ವೃತ್ತರಕ್ತಾಂತನಯನಃ ಸರ್ಪವೃಶ್ಚಿಕ ರೋಮವಾನ್ |
ದಂಷ್ಟ್ರಾ ಕರಾಳವದನಶ್ಚೂರ್ಣಿತಾಂಜನಸನ್ನಿಭಃ || ೪೮ ||

---

೪೪-೪೫. ವಸಿಷ್ಠನು ಹೇಳಿದನು—ಅನಂತರ ಆ ಮಾರ್ಕಂಡೇಯನು ತಂದೆಯ ಅಪ್ಪಣೆಯನ್ನು ಪಡೆದು ದಕ್ಷಿಣ ಸಮುದ್ರದ ದಡದಲ್ಲಿ ಮಾರ್ಕಂಡೇಯ ನೆಂಬ ಹೆಸರಿನಿಂದ ಒಂದು ಲಿಂಗವನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠೆಮಾಡಿ ಪ್ರತಿ ದಿನವೂ ಮೂರು ಹೊತ್ತು ಸ್ನಾನಮಾಡಿ ಆ ಮೂರು ಹೊತ್ತಿನಲ್ಲಿಯೂ ಶಿವನನ್ನು ಪೂಜಿಸುತ್ತ ಪೂಜಾಕಾಲದ ಕಡೆಯಲ್ಲಿ ಶಿವಸ್ತೋತ್ರವನ್ನು ಹೇಳುತ್ತ ಸಂತೋಷ ದಿಂದ ಕುಣಿಯುತ್ತಿದ್ದನು.

೪೬. ಮಾರ್ಕಂಡೇಯನು ಹೀಗೆ ಭಕ್ತಿಯಿಂದ ಪೂಜಿಸಿ ಸ್ತುತಿಸಲು ಆ ಶಂಕರನು ಒಂದೇ ದಿನಕ್ಕೆ ಸಂತೋಷಗೊಂಡನು.

೪೭-೪೮. ಆ ಮಾರ್ಕಂಡೇಯನು ಒಂದು ದಿನ ಈ ರೀತಿಯಾಗಿ ಶಿವ ಲಿಂಗವನ್ನು ಪೂಜಿಸಿ ಸ್ತೋತ್ರ ಮಾಡುತ್ತಿರಲು ಅತನನ್ನು ಎಳೆದುಕೊಂಡು ಹೋಗಲು ಕೆಂಪಗೆ ಅಗಲವಾದ ಕಣ್ಣುಗಳುಳ್ಳ, ಹಾವು ಚೇಳುಗಳೇ ಕೂದಲು ಆಗಿರುವ, ಕೋರೆ ದಾಡೆಗಳುಳ್ಳ ಕತ್ತರಿಸಿದ ಅಂಜನ ಪರ್ವತದಂತೆ ಕಪ್ಪಗಿರುವ ಕಾಲನು ಮೃತ್ಯುವನ್ನು ಸಹಾಯಕ್ಕೆ ಕರೆದುಕೊಂಡು ಬಂದನು.

ಸಮಾಗಮ್ಯ ಚ ತಸ್ಯಾಸೌ ಕಾಲಃ ಪಾಶಮುಪಾಸೃಜತ್ ।
ಕಂಠಾರ್ಪಿತಮಹಾಪಾಶೋ ಮಾರ್ಕಂಡೇಯಸ್ತಮಬ್ರವೀತ್ ॥ ೪೯ ॥

॥ ಮಾರ್ಕಂಡೇಯ ಉವಾಚ ॥

ಕಾಲತಾವತ್ಪ್ರತೀಕ್ಷಸ್ವ ಕಾಲಂ ಮಮ ಮಹಾಮತೇ ।
ನಿರ್ವರ್ತಯಾಮ್ಯಹಂ ಯಾವನ್ಮಹಾಸ್ತೋತ್ರಂ ಜಗತ್ಪತೇಃ ॥ ೫೦ ॥

ಶಿವಸ್ತೋತ್ರಮನಿರ್ವರ್ತ್ಯ ನ ಕ್ವಚಿಚ್ಚ ವ್ರಜಾಮ್ಯಹಂ ।
ನ ಸ್ವಪಾಮಿ ನ ಭೋಕ್ಷ್ಯಾಮೀತ್ಯೇತನ್ಮೇ ವ್ರತಮಾಹಿತಂ ॥ ೫೧ ॥

ನ ಜೀವಿತಂ ಕಲತ್ರಂ ವಾ ನ ರಾಜ್ಯಂ ನ ತಥಾ ಸುಖಂ ।
ಪ್ರಿಯಂ ಮಮ ಯಥಾತೀವ ಲೋಕೇಽಸ್ಮಿನ್ ಶಿವಸಂಸ್ತವಃ ॥ ೫೨ ॥

---

೪೯. ಕಾಲನು ಬಂದು ತನ್ನ ಕಾಲಪಾಶವನ್ನು ಆ ಮಾರ್ಕಂಡೇಯನ ಮೇಲೆ ಎಸೆದನು. ಕತ್ತಿಗೆ ಕಾಲಪಾಶವು ಬೀಳಲು ಮಾರ್ಕಂಡೇಯನು ಆ ಕಾಲವನ್ನು ಕುರಿತು ಇಂತೆಂದನು.

೫೦. ಮಾರ್ಕಂಡೇಯನು ಹೇಳಿದನು-ಎಲೈ ಮಹಾ ತಿಳಿವಳಿಕೆಯುಳ್ಳ ಕಾಲನೇ ! ಸ್ವಲ್ಪ ಹೊತ್ತು ಕಾಯುತ್ತ ಸುಮ್ಮನಿರು. ಈ ಜಗತ್ಪತಿಯಾದ ಶಿವನ ಮಹಾ ಸ್ತೋತ್ರವನ್ನು ಹೇಳಿ ಮುಗಿಸುತ್ತೇನೆ. ಆ ಮೇಲೆ ಕರೆದುಕೊಂಡು ಹೋಗುತ್ತೀಯಂತೆ.

೫೧. ಶಿವಸ್ತೋತ್ರವನ್ನು ಹೇಳಿ ಮುಗಿಸದೇನೇ ನಾನು ಎಲ್ಲಿಯೂ ಹೋಗುವುದಿಲ್ಲ. ಮಲಗುವುದಿಲ್ಲ, ಊಟಮಾಡುವುದಿಲ್ಲ. ಇದು ನಾನು ಮಾಡಿಕೊಂಡಿರುವ ವ್ರತವು.

೫೨. ನನಗೆ ಈ ಶಿವಸ್ತೋತ್ರವು ಹೇಗೆ ಪ್ರಿಯವಾಗಿದೆಯೋ ಹಾಗೆ ಈ ಲೋಕದಲ್ಲಿ ಜೀವಿತವಾಗಲಿ, ಹೆಂಡತಿಯಾಗಲಿ, ರಾಜ್ಯವಾಗಲಿ, ಸುಖವಾಗಲಿ, ಅಷ್ಟು ಪ್ರಿಯವಾಗಿಲ್ಲ.

ತಥಾ ಚ ನಾನೃತಂ ವಾಕ್ಯಮುಹಮೇತದಿಹೋಕ್ತವಾನ್ ।
ಸತ್ಯೇನಾನೇನ ಸತತಂ ಪ್ರಸೀದ ತು ಮಹೇಶ್ವರಃ ॥ ೫೩ ॥

॥ ವಸಿಷ್ಠ ಉವಾಚ ॥

ತಮುಬ್ರವೀತ್ತತಃ ಕಾಲೋ ಮಾರ್ಕಂಡೇಯಂ ಹಸನ್ಮುಹುಃ ॥ ೫೪ ॥

॥ ಕಾಲ ಉವಾಚ ॥

ನ ಶ್ರುತಂ ತತ್ತ್ವಯಾ ಮನ್ಯೇ ವೃದ್ಧಾನಾಂ ಪೂರ್ವಕಲ್ಪಿತಂ ।
ಪೂರ್ವೇ ವಯಸಿ ಯೋ ಧರ್ಮಂ ನ ಕರೋತಿ ವಿಮೂಢಧೀಃ ॥ ೫೫ ॥

ಸ ಪಶ್ಚಾತ್ತಪ್ಯತೇ ವೃದ್ಧಃ ಸಾರ್ಥಾದ್ಭ್ರಷ್ಟ ಇವಾಧ್ವಗಃ ।
ಮಾಸಾಷ್ಟಕೇನ ತತ್ಕುರ್ಯಾದ್ಯೇನ ವರ್ಷಾಃ ಸುಖಂ ವಸೇತ್ ॥ ೫೬ ॥

ದಿವಸೇ ಚೈವ ತತ್ಕುರ್ಯಾದ್ಯೇನ ರಾತ್ರಿಂ ಸುಖಂ ವಸೇತ್ ।
ಪೂರ್ವೇ ವಯಸಿ ತತ್ಕುರ್ಯಾದ್ಯೇನ ವೃದ್ಧಃ ಸುಖಂ ವಸೇತ್ ॥ ೫೭ ॥

---

೫೩. ಈ ವಿಷಯದಲ್ಲಿ ನಾನು ಸುಳ್ಳನ್ನು ಹೇಳುವುದೇ ಇಲ್ಲ. ಈ ಸತ್ಯದಿಂದಲೇ ಮಹೇಶ್ವರನು ನನಗೆ ಯಾವಾಗಲೂ ಪ್ರಸನ್ನನಾಗಲಿ.

೫೪. ವಸಿಷ್ಠನು ಹೇಳಿದನು-ಅನಂತರ ಕಾಲನು ನಗುತ್ತ ಮಾರ್ಕಂಡೇಯನನ್ನು ಕುರಿತು ಇಂತೆಂದನು.

೫೫-೫೭. ಕಾಲನು ಹೇಳಿದನು-ಪೂರ್ವವಯಸ್ಸಿನಲ್ಲಿಯೂ ಯಾವನು ಮೂಢನಾಗಿ ಧರ್ಮವನ್ನು ಮಾಡುವುದಿಲ್ಲವೋ ಅವನು ಗುಂಪಿನಿಂದ ತಪ್ಪಿಸಿಕೊಂಡು ಹೋದ ವರ್ತಕನು ದುಃಖಪಡುವಂತೆ ದುಃಖಪಡುತ್ತಾನೆ. ಎಂದು ಮುದುಕರು ಹೇಳುತ್ತಿರುವುದನ್ನು ನೀನು ಕೇಳಿಲ್ಲವೇ ! ಎಂಟು ತಿಂಗಳಕಾಲ ಧರ್ಮವನ್ನು ಮಾಡಿದರೆ ಅನೇಕ ವರ್ಷಗಳು ಸುಖವಾಗಿರಬಹುದು. ಹಗಲು ಧರ್ಮವನ್ನು ಮಾಡಿದರೆ ರಾತ್ರಿಯೆಲ್ಲವೂ ಸುಖವಾಗಿರಬಹುದು. ಪೂರ್ವವಯಸ್ಸಿನಲ್ಲಿ ಧರ್ಮವನ್ನು ಮಾಡಿದರೆ ಮುದುಕನಾದಾಗ ಸುಖವಾಗಿರಬಹುದು.

ಯಾವಜ್ಜೀವಂ ತು ತತ್ಕುರ್ಯಾದ್ಯೇನ ಪ್ರೇತ್ಯ ಸುಖಂ ವಸೇತ್ ।
ಶ್ವಃ ಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಂ ॥ ೫೮ ॥

ನ ಚ ಪ್ರತೀಕ್ಷತೇ ಕಾಲಃ ಕೃತಮಸ್ಯ ನ ವಾಕೃತಂ ।
ಇದಂ ಕೃತಮಿದಂ ಕಾರ್ಯಮಿದಮಸ್ಯತ್ಕೃತಾಕೃತಂ ॥ ೫೯ ॥

ಏವಮೀಹಾಸಮಾಯುಕ್ತಂ ಕೃತಾಂತಃ ಕುರುತೇ ವಶೇ ।
ನಾಪ್ರಾಪ್ತಕಾಲೋ ಮ್ರಿಯತೇ ವಿದ್ಧಶ್ಶರಶತೈರಪಿ ॥ ೬೦ ॥

ಕುಶಾಗ್ರೇಣಾಪಿ ಸಂಸ್ಪೃಷ್ಟಃ ಪ್ರಾಪ್ತಕಾಲೋ ನ ಜೀವತಿ ।
ಚಕ್ರವರ್ತಿಸಹಸ್ರಾಣಿ ಪುರಂದರಶತಾನಿ ಚ ॥
ಮಯಾ ನೀತಾನಿ ಕರ್ತವ್ಯೋ ನಾತ್ರ ಮನ್ಯುಸ್ತ್ವಯಾನಘ ॥ ೬೧ ॥

॥ ವಸಿಷ್ಠ ಉವಾಚ ॥

ಶ್ರುತ್ವೈವಂ ವಚನಂ ತಸ್ಯ ಕಾಲಸ್ಯಾಮೋಘವರ್ತಿನಃ ।
ಮಾರ್ಕಂಡೇಯ ಉವಾಚೇದಂ ಶಿವಸ್ತೋತ್ರಪರಾಯಣಃ ॥ ೬೨ ॥

---

೫೮-೬೧. ಸತ್ತಮೇಲೆ ಸುಖವಾಗಿರುವ ಕೆಲಸವನ್ನು ಯಾವಾಗಲೂ ಮಾಡಬೇಕು ಮಧ್ಯಾಹ್ನಮಾಡಬೇಕಾದುದನ್ನು ಬೆಳಗ್ಗೆಯೇ ಮಾಡಬೇಕು. ನಾಳೆ ಮಾಡಬೇಕಾದುದನ್ನು ಈದಿನವೇ ಮಾಡಬೇಕು. ಮಾಡಿದುದನ್ನೂ ಮಾಡದಿರುವುದನ್ನೂ ಯಮನು ನೋಡುವುದೇ ಇಲ್ಲ. ಇದನ್ನು ಮಾಡಿದ್ದೇನೆ. ಇದನ್ನು ಮಾಡಬೇಕು. ಇದನ್ನು ಬೇರೆ ಬಗೆಯಲ್ಲಿ ಮಾಡಿಬಿಟ್ಟೆನು. ಎನ್ನುವ ಆಸೆಯಿಂದ ಕೂಡಿರುವ ಮನುಷ್ಯನನ್ನು ಯಮನು ಬಿಡದೆ ತನ್ನ ಅಧೀನಕ್ಕೆ ತೆಗೆದುಕೊಳ್ಳುತ್ತಾನೆ. ಆಯಸ್ಸು ತುಂಬಿದಲ್ಲದೆ ಸಾವಿರಾರು ಬಾಣಗಳಿಂದ ಹೊಡೆದರೂ ಕೂಡ ಅವನು ಸಾಯುವುದಿಲ್ಲ. ಆಯುಸ್ಸು ತುಂಬಿದ್ದರೆ ದರ್ಭೆಯ ಮೊನೆಯು ಚುಚ್ಚಿದರೇನೆ ಬದುಕುವುದಿಲ್ಲ. ಸಾವಿರಾರು ಜನ ಚಕ್ರವರ್ತಿಗಳನ್ನೂ ನೂರಾರು ಜನ ಇಂದ್ರರನ್ನೂ ನಾನು ಸ್ವಾಧೀನಮಾಡಿ ಕರೆದುಕೊಂಡು ಹೋಗಿದ್ದೇನೆ. ನನ್ನ ಕೆಲಸವೇ ಅದು. ಈ ವಿಷಯದಲ್ಲಿ ನೀನು ಕೋಪಿಸಿಕೊಳ್ಳಬೇಡ.

೬೨. ವಸಿಷ್ಠನು ಹೇಳಿದನು-ಕೆಲಸವು ವ್ಯರ್ಥವಾಗದಂತೆ ಮಾಡಿಕೊಳ್ಳುವ ಕಾಲನ ಈ ಮಾತನ್ನು ಕೇಳಿ ಶಿವಸ್ತೋತ್ರದಲ್ಲಿ ಆಸಕ್ತನಾದ ಮಾರ್ಕಂಡೇಯನು ಇಂತೆಂದನು.

॥ ಮಾರ್ಕಂಡೇಯ ಉವಾಚ ॥

ಯೇತ್ರ ವಿಘ್ನಂ ಪ್ರಕುರ್ವಂತಿ ಶಿವಸ್ತೋತ್ರರತಾತ್ಮನಾಂ ।
ತೇಚಿರೇಣ ವಿನಶ್ಯಂತಿ ತ್ವಾಮತೋ ವಾರಯಾಮ್ಯಹಂ ॥ ೬೩ ॥

ಯಥೈವ ರಾಜಭೃತ್ಯಾನಾಂ ರಾಜಾ ಶಾಸ್ತೈವ ನೇತರಃ ।
ತಥೈವ ಶಿವಭಕ್ತಾನಾಂ ಶಾಸ್ತಾಸೌ ಪರಮೇಶ್ವರಃ ॥ ೬೪ ॥

ಭಿಂದಂತಿ ಶೈಲಾನುದಧೀನ್ ಪಿಬಂತಿ
ವ್ಯತ್ಯಾಸಯಂತಿ ಕ್ಷಿತಿಮಂತರಿಕ್ಷಂ ।
ತೃಣೀಕೃತಬ್ರಹ್ಮಪುರಂದರಾಣಾಂ
ಕಿಂ ದುಷ್ಕೃತಂ ಶಂಕರಕಿಂಕರಾಣಾಂ ॥ ೬೫ ॥

ನ ಮೃತ್ಯುರ್ನ ತಥಾ ಧಾತಾ ನ ಯಮೋ ಯಮದೂತಕಾಃ ।
ನ ಚಾನ್ಯೇ ಶಿವಭಕ್ತಾನಾಂ ಭವಂತಿ ಪ್ರಭವಿಷ್ಣವಃ ॥ ೬೬ ॥

---

೬೩. ಮಾರ್ಕಂಡೇಯನು ಹೇಳಿದನು-ಶಿವನ ಸ್ತೋತ್ರವನ್ನು ಮಾಡುತ್ತಿರುವವರಿಗೆ ಯಾರು ವಿಘ್ನವನ್ನು ಮಾಡುತ್ತಾರೆಯೋ ಅವರು ಜಾಗ್ರತೆಯಾಗಿಯೇ ಎಂದರೆ ಒಡನೆಯೇ ನಾಶವಾಗುತ್ತಾರೆ. ಅದರಿಂದಲೇ ನಿನ್ನನ್ನು ನಾನು ತಡೆಯುತ್ತಿರುವುದು.

೬೪. ರಾಜನ ಆಳುಗಳನ್ನು ರಾಜನೇ ಹೇಗೆ ಶಿಕ್ಷಿಸುವನೋ ಮತ್ತೊಬ್ಬರಿಗೆ ಸಾಧ್ಯವಿಲ್ಲವೋ ಹಾಗೆ ಶಿವಭಕ್ತರನ್ನು ಶಿಕ್ಷಿಸಲು ಶಿವನು ಸಮರ್ಥನೇ ಹೊರತು ಮತ್ತಾರಿಂದಲೂ ಸಹ ಆಗುವುದಿಲ್ಲ.

೬೫. ಶಂಕರನ ಕಿಂಕರರು ಬೆಟ್ಟನ್ನು ಸೀಳಬಲ್ಲರು. ಸಮುದ್ರವನ್ನು ಕುಡಿಯ ಬಲ್ಲರು. ಆಕಾಶಭೂಮಿಗಳನ್ನೇ ತಲೆಕೆಳಗು ಮಾಡಬಲ್ಲರು. ಬ್ರಹ್ಮ ವಿಷ್ಣು ಇಂದ್ರರನ್ನು ಹುಲ್ಲಿಗಿಂತಲೂ ಕೀಳಾಗಿ ಕಾಣುವರು. ಆ ಶಂಕರನ ಕಿಂಕರರಿಗೆ ಯಾವುದು ತಾನೆ ಅಸಾಧ್ಯವಾಗಿರುವುದು ?

೬೬. ಶಿವಭಕ್ತರನ್ನು ಶಿಕ್ಷಿಸಲು ಯಮನಾಗಲಿ ಬ್ರಹ್ಮನಾಗಲಿ ಮೃತ್ಯುವಾಗಲಿ ಯಮದೂತರಾಗಲಿ ಯಾರಾದರೂ ಕೂಡ ಸಮರ್ಥರಾಗಲಾರರು.

ಕಿಂ ನ ಶ್ರುತಂ ತ್ವಯಾಕಾಲ ವಾಕ್ಯಮೇತನ್ಮನೀಷಿಣಾಂ ।
ನೃಣಾಮೀಶ್ವರ ಭಕ್ತಾನಾಂ ನ ಭವಂತ್ಯಾಪದಃ ಕ್ವಚಿತ್ ॥
ಬ್ರಹ್ಮಾದಯೋಽಪಿ ತಾನ್ ಕ್ರುದ್ಧಾ ನ ಶಕ್ತಾ ಹಂತುಮೀಶ್ವರಾಃ ॥ ೬೭ ॥

॥ ವಸಿಷ್ಠ ಉವಾಚ ॥

ಸ ಏವಂ ತರ್ಜಿತಸ್ತೇನ ಭಗವಾನ್ ವಿವೃತೇಕ್ಷಣಃ ।
ಕಾಲೋಽ ಭೃಶಂ ರುಷೇತ್ಯಾಹ ಗ್ರಸನ್ನಿವ ಜಗತ್ತ್ರಯಂ ॥ ೬೮ ॥

॥ ಕಾಲ ಉವಾಚ ॥

ಯಾವತ್ಯ ಏವ ಗಂಗಾಯಾಂ ಸಿಕತಾ ವಿಪ್ರ ದುರ್ಮತೇ ।
ತಾವಂತ ಏವ ಬ್ರಹ್ಮಾಣೋ ಮಯಾ ಕಾಲೇನ ಸಂಹೃತಾಃ ॥ ೬೯ ॥

ಕಿಂ ವಾತ್ರ ಬಹುನೋಕ್ತೇನ ಪಶ್ಯಮೇ ವಿಕ್ರಮಂ ಬಲಂ ।
ಸ ಪಾತು ತ್ವಾಂ ಮಹಾದೇವೋ ಯಸ್ಯ ದಾಸೋಽಸಿ ಸಾಂಪ್ರತಂ ॥ ೭೦ ॥

---

೬೭. ಎಲೈ ಕಾಲನೆ ! ಈಶ್ವರನಲ್ಲಿ ಭಕ್ತರಾದ ಮನುಷ್ಯರಿಗೆ ಯಾವಾಗಲೂ ಆಪತ್ತೆಂಬುದೇ ಬರುವುದಿಲ್ಲ. ಬ್ರಹ್ಮಾದಿಗಳೂ ಕೂಡ ಕೋಪಗೊಂಡರೂ ಅವರನ್ನು ಕೊಲ್ಲಲಾರರು. ಎಂದು ತಿಳಿದವರು ಹೇಳುವುದನ್ನು ನೀನು ಕೇಳಿಲ್ಲವೇ ?

೬೮ ವಸಿಷ್ಠನು ಹೇಳಿದನು-ಮಾರ್ಕಂಡೇಯನು ಆ ಕಾಲನನ್ನು ಈ ರೀತಿಯಾಗಿ ಗದರಿಸಲು ಆ ಭಗವಂತನಾದ ಕಾಲನು ಕಣ್ಣನ್ನು ಕೋಪದಿಂದ ಕೆಂಪುಮಾಡಿಕೊಂಡು ಬಿಡುತ್ತಾ ಕೋಪದಿಂದ ಮೂರುಲೋಕವನ್ನೂ ನುಂಗುವವನಂತೆ ಇಂತೆಂದನು.

೬೯–೭೦. ಕಾಲನು ಹೇಳಿದನು-ಎಲೈ ದುಷ್ಟಬುದ್ಧಿಯುಳ್ಳ ವಿಪ್ರನೇ ! ಗಂಗೆಯಲ್ಲಿ ಎಷ್ಟು ಮರುಳುಗಳಿವೆಯೋ ಅಷ್ಟುಜನ ಬ್ರಹ್ಮರನ್ನು ಕಾಲನಾದ ನಾನು ನಾಶಮಾಡಿದ್ದೇನೆ. ಬಹು ವಿಧವಾಗಿ ಹೇಳಿದುದರಿಂದ ಉಪಯೋಗ ವೇನು? ನನ್ನ ಪರಾಕ್ರಮವನ್ನು ನೋಡು. ಈಗ ನೀನು ಯಾರಿಗೆ ದಾಸನಾಗಿರುವೆಯೋ ಆ ಮಹಾದೇವನು ನಿನ್ನನ್ನು ಕಾಪಾಡಲಿ.

॥ ವಸಿಷ್ಠ ಉವಾಚ ॥

ತೇನೈವಂ ಗರ್ಜತಾ ರಾಜನ್ ಕಾಲೇನಾಸೌ ಮಹಾಮುನಿಃ ।
ಗ್ರಸ್ತುಂ ಹಠಾತ್ಸಮಾರಬ್ಧೋ ರಾಹುಣೈವಂ ಯಥಾ ಶಶೀ ॥ ೭೧ ॥

ಲಿಂಗಾದಥ ಸಮುತ್ತಸ್ಥೌ ಮೂರ್ತಿಮಾನ್ ಪರಮೇಶ್ವರಃ ।
ಅನಿರ್ದೇಶ್ಯವಯೋ ರೂಪಶ್ಚಂದ್ರಾರ್ಧಕೃತಶೇಖರಃ ॥ ೭೨ ॥

ಗರ್ಜನ್ಮೇಘ ಇವೋದಗ್ರಂ ಹುಂ ಕೃತೇನ ಸ ತತ್ ಕ್ಷಣಾತ್ ।
ಉದ್ಧೃತ್ಯ ಪಾದಕಮಲಂ ಪ್ರಜಹಾರ ಭುಜಾಂತರೇ ॥ ೭೩ ॥

ಪಾದಪ್ರಹಾರ ಚಕಿತೋ ದೂರೇ ಮೃತ್ಯುಃ ಪಪಾತ ಹ ।
ದೂರೇ ಪತಿತಮಾಲೋಕ್ಯ ಕೃತಾಂತಂ ಭೀಷಣಾಕೃತಿಂ ॥
ಮಾರ್ಕಂಡೇಯೋಥ ತುಷ್ಟಾವ ತೇನ ಸ್ತೋತ್ರೇಣ ಶಂಕರಂ ॥ ೭೪ ॥

---

೭೧. ವಸಿಷ್ಠನು ಹೇಳಿದನು-ಎಲೈ ರಾಜನೇ! ಹೀಗೆ ಗರ್ಜಿಸುತ್ತ ಆ ಕಾಲನು ಈ ಮುನಿಯನ್ನು ರಾಹುವು ಚಂದ್ರನನ್ನು ಹಿಡಿದುಕೊಳ್ಳುವಂತೆ ಹಿಡಿದುಕೊಳ್ಳಲು ಉದ್ಯುಕ್ತನಾದನು.

೭೨-೭೩. ಒಡನೆಯೇ ಲಿಂಗದಿಂದ ಪರಮೇಶ್ವರನು ಆಕಾರವನ್ನು ಧರಿಸಿಯೇ ಎದ್ದನು. ಅವನ ವಯಸ್ಸಿಷ್ಟೆಂದು ಹೇಳಲಾಗುವಂತಿರಲಿಲ್ಲ. ರೂಪವು ಬಹುಚೆನ್ನಾಗಿದ್ದಿತು. ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿದ್ದನು. ಕಾಲಮೇಘವು ಗರ್ಜಿಸುವಂತೆ ಒಡನೆಯೇ ಹುಂಕಾರಮಾಡುತ್ತ ಕಾಣಿಸಿಕೊಂಡು ಕಾಲನ್ನು ಎತ್ತಿಕೊಂಡು ಆ ಕಾಲನ ಎದೆಯಮೇಲೆ ಒದ್ದನು.

೭೪. ಕಾಲಿನ ಒತ್ತದ ಏಟಿನಿಂದ ಆಶ್ಚರ್ಯಗೊಂಡು ಮೃತ್ಯುವು ದೂರದಲ್ಲಿ ಬಿದ್ದನು. ಈ ಮಾರ್ಕಂಡೇಯನು ಮೃತ್ಯುವು ಭಯಂಕರವಾದ ಆಕಾರವನ್ನು ಹೊಂದಿ ದೂರದಲ್ಲಿ ಬಿದ್ದಿರುವುದನ್ನು ನೋಡಿ ಸ್ತೋತ್ರದಿಂದ ಆ ಶಂಕರನನ್ನು ಸ್ತೋತ್ರಮಾಡಿದನು.

|| ಮಾರ್ಕಂಡೇಯ ಉವಾಚ ||

ರತ್ನಸಾನು ಶರಾಸನಂ ರಜತಾದ್ರಿ ಶೃಂಗ ನಿಕೇತನಂ ।
ಶಿಂಜಿನೀಕೃತ ಪನ್ನಗೇಶ್ವರಮಚ್ಯುತಾನಲಸಾಯಕಂ ||
ಕ್ಷಿಪ್ರದಗ್ಧ ಪುರತ್ರಯಂ ತ್ರಿದಶಾಲಯೈರಭಿವಂದಿತಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ || ೭೫ ||

ಪಂಚಪಾದಪ ಪುಷ್ಪಗಂಧಿ ಪದಾಂಬುಜದ್ವಯಶೋಭಿತಂ ।
ಭಾಲಲೋಚನಜಾತಪಾವಕ ದಗ್ಧಮನ್ಮಥವಿಗ್ರಹಂ ॥
ಭಸ್ಮದಿಗ್ಧಕಳೇಬರಂ ಭವನಾಶಿನಂ ಭವಮವ್ಯಯಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ || ೭೬ ||

---

೭೫. ಮಾರ್ಕಂಡೇಯನು ಹೇಳಿದನು-ಮೇರುಪರ್ವತವೇ ಧನುಸ್ಸಾಗಿ ಉಳ್ಳ ಹಿಮವತ್ಪರ್ವತದ ಶಿಖರದಲ್ಲಿ ಮನೆಮಾಡಿಕೊಂಡಿರುವ ಆದಿಶೇಷನೇ ಧನುಸ್ಸಿನ ನಾರಿಯಾಗಿ ಉಳ್ಳ ವಿಷ್ಣುವೇ ಕ್ರೂರವಾದ ಬಾಣವಾಗಿರುವ ಒಂದು ಕ್ಷಣಕಾಲದಲ್ಲಿಯೇ ತ್ರಿಪುರವನ್ನು ಸುಟ್ಟ ಸ್ವರ್ಗದವರೆಲ್ಲರಿಂದಲೂ ನಮಸ್ಕರಿಸಲ್ಪಟ್ಟ ಚಂದ್ರನನ್ನೇ ತಲೆಯಲ್ಲಿ ಹೊಂದಿರುವ ಆ ಮಹೇಶ್ವರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನೇನು ಮಾಡುವನು ?

೭೬. ಮಂದಾರ ಪಾರಿಜಾತ ಸಂತಾನ ಕಲ್ಪವೃಕ್ಷ ಹರಿಚಂದನಗಳೆಂಬ ಐದುಬಗೆಯ ಕಲ್ಪವೃಕ್ಷಗಳ ಹೂಗಳಿಂದ ವಾಸನೆಮಾಡಲ್ಪಟ್ಟ ಪಾದಗಳುಳ್ಳ ಮೂರನೆಯ ಕಣ್ಣಿನಿಂದ ಹುಟ್ಟಿದ ಬೆಂಕಿಯಿಂದ ಮನ್ಮಥನನ್ನು ಸುಟ್ಟು ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿರುವ ಜನನ ಮರಣವನ್ನು ನಾಶಮಾಡುವ ಯಾವಾಗಲೂ ಇರುವ ನಾಶರಹಿತನಾದ ಚಂದ್ರಶೇಖರನಾದ ಪರಮೇಶ್ವರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನು ಏನುಮಾಡಬಲ್ಲನು ?

ಮತ್ತವಾರಣ ಮುಖ್ಯ ಚರ್ಮಕೃತೋತ್ತರೀಯ ಮನೋಹರಂ ।
ಪಂಕಜಾಸನ ಪದ್ಮಲೋಚನ ಪೂಜಿತಾಂಘ್ರಿ ಸರೋರುಹಂ ॥
ದೇವಸಿದ್ಧಿ ತರಂಗಿಣೀ ಕರಸಿಕ್ತ ಶೀತ ಜಟಾಧರಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ ॥ ೭೭ ॥

ಕುಡಲೀಕೃತ ಕುಂಡಲೀಶ್ವರಕುಂಡಲಂ ವೃಷವಾಹನಂ ।
ನಾರದಾದಿ ಮುನೀಶ್ವರಸ್ತುತ ವೈಭವಂ ಭುವನೇಶ್ವರಂ ॥
ಅಂಧಕಾಂತಕಮಾಶ್ರಿತಾಮರ ಪಾದಪಂ ಶಮನಾಂತಕಂ ॥
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ ॥ ೭೮ ॥

---

೭೭. ಆನೆಯ ಚರ್ಮವನ್ನು ಮೈಮೇಲೆ ಹೊದ್ದುಕೊಂಡು ಇರುವುದರಿಂದ ಮನೋಹರನಾದ ಬ್ರಹ್ಮವಿಷ್ಣುಗಳಿಂದ ಪೂಜಿತವಾದ ಪಾದಪದ್ಮಗಳುಳ್ಳ ದೇವ ಗಂಗೆಯ ಅಲೆಗಳಿಂದ ತೇವವಾಗಿರುವ ಅದರಿಂದ ತಣ್ಣಗಿರುವ ಜಟೆಗಳುಳ್ಳ ಚಂದ್ರಶೇಖರನಾದ ಪರಮೇಶ್ವರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನು ಏನುಮಾಡಬಲ್ಲನು ?

೭೮. ಹಾವನ್ನು ಚಕ್ರಾಕಾರವಾಗಿ ಮಾಡಿಕೊಂಡು ಕಿವಿಯ ಆಭರಣವನ್ನಾಗಿ ಹಾಕಿಕೊಂಡಿರುವ ಬಸವನೇ ವಾಹನವಾಗಿರುವ ನಾರದನೇ ಮುಂತಾದ ದೇವರ್ಷಿಗಳಿಂದ ಹೊಗಳಿಸಿಕೊಳ್ಳುವ ಮಹಿಮೆಯುಳ್ಳ ಮೂರುಲೋಕಕ್ಕೂ ಒಡೆಯನಾದ ಅಂಧಕಾಸುರನನ್ನು ಕೊಂದ ಆಶ್ರಯ ಹೊಂದಿದವರಿಗೆ ಬೇಕಾದುವುಗಳನ್ನು ಕೊಡುವ ಯಮನಿಗೂ ಯಮನಾದ ಚಂದ್ರಶೇಖರನಾದ ಪರಮೇಶ್ವರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನು ಏನುಮಾಡುವನು ?

ಯಕ್ಷರಾಜಸಖಂ ಭಗಾಕ್ಷಿಹರಂ ಭುಜಂಗ ವಿಭೂಷಣಂ ।
ಶೈಲರಾಜಸುತಾಪರಿಷ್ಕೃತ ಚಾರುವಾಮಕಳೇಬರಂ ॥
ಕ್ಷ್ವೇಡನೀಲಗಲಂ ಪರಶ್ವಥಧಾರಿಣಂ ಮೃಗಧಾರಿಣಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ ॥ ೭೯ ॥

ಭೇಷಜಂ ಭವರೋಗಿಣಾಮಖಿಲಾಪದಾಮಪಹಾರಿಣಂ ।
ದಕ್ಷಯಜ್ಞವಿನಾಶಿನಂ ತ್ರಿಗುಣಾತ್ಮಕಂ ತ್ರಿಲೋಚನಂ ॥
ಭುಕ್ತಿಮುಕ್ತಿ ಫಲಪ್ರದಂ ನಿಖಿಲಾಘ ಸಂಘ ನಿಬರ್ಹಣಂ ।
ಚಂದ್ರಶೇಖರಮಾಶ್ರಯೇ ಮಮ ಕಿಂ ಕರಿಷ್ಯತಿ ವೈ ಯಮಃ ॥ ೮೦ ॥

ಭಕ್ತವತ್ಸಲಮರ್ಚತಾಂ ನಿಧಿಮಕ್ಷಯಂ ಹರಿದಂಬರಂ ।
ಸರ್ವಭೂತಪತಿಂ ಪರಾತ್ಪರಮಪ್ರಮೇಯಮನೂಪಮಂ ।
ಭೂಮಿವಾರಿ ನಭೋಹುತಾಶನಸೋಮಪಾಲಿತಸ್ವಾಕೃತಿಂ ।
ಚಂದ್ರಶೇಖರಮಾಶ್ರಯೇ ಮಮ ಕಿಂಕರಿಷ್ಯತಿ ವೈ ಯಮಃ ॥ ೮೧ ॥

---

೭೯. ಕುಬೇರನಿಗೆ ಸ್ನೇಹಿತನಾದ ಹೆಂಗಸಾಗಿ ಮೂತ್ರಕೋಶದಲ್ಲಿ ಹಲ್ಲನ್ನಿಟ್ಟುಕೊಂಡು ಬಂದಿದ್ದ ರಾಕ್ಷಸನನ್ನು ಕೊಂದ, ಸರ್ಪಗಳೇ ಒಡವೆಯಾದ ಪಾರ್ವತಿಯನ್ನೇ ಅರ್ಧ ಭಾಗದಲ್ಲಿಟ್ಟುಕೊಂಡಿರುವ ದೇಹವುಳ್ಳ ಹಾಲಾಹಲ ವಿಷದಿಂದ ಕಪ್ಪಗಿರುವ ಕತ್ತುಳ್ಳ ಕೊಡಲಿಯನ್ನು ಹಿಡಿದಿರುವ, ಜಿಂಕೆಯನ್ನು ಕೈಯಲ್ಲಿ ಉಳ್ಳ ಚಂದ್ರಶೇಖರನಾದ ಶಿವನನ್ನು ಶರಣುಹೊಂದುತ್ತೇನೆ. ಯಮನು ನನ್ನನ್ನು ಯೇನುಮಾಡುವನು ?

೮೦. ಹುಟ್ಟು ಸಾವುಗಳೆಂಬ ರೋಗಕ್ಕೆ ವೈದ್ಯನಾದ, ಎಲ್ಲಾ ಕಷ್ಟಗಳನ್ನೂ ನಿವಾರಣೆ ಮಾಡುವ, ದಕ್ಷನ ಯಜ್ಞವನ್ನು ನಾಶ ಮಾಡಿದ, ಸತ್ವರಜಸ್ತಮೋ ರೂಪನಾದ, ಮೂರು ಕಣ್ಣುಗಳುಳ್ಳ ಜೀವನವನ್ನೂ ಮೋಕ್ಷವನ್ನೂ ಕೊಡುವ ಪಾಪಗಳೆನ್ನೆಲ್ಲಾ ನಾಶಮಾಡುವ ಚಂದ್ರಶೇಖರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನು ಏನು ಮಾಡುವನು.

೮೧. ಭಕ್ತರಲ್ಲಿ ಪ್ರೀತಿಯುಳ್ಳ, ತನ್ನನ್ನು ಪೂಜಿಸುವವರಿಗೆ ಅಕ್ಷಯ ನಿಧಿಯಾದ, ದಿಗಂಬರನಾದ, ಎಲ್ಲಾ ಭೂತಗಳಿಗೂ ಒಡೆಯನಾದ, ಪುರಾಣ ಪುರುಷನಾದ, ಅಳಯಲಾಗದ ಉಪಮಾನವಿಲ್ಲದ, ಭೂಮಿ, ನೀರು, ಆಕಾಶ, ಅಗ್ನಿ, ಚಂದ್ರ ಇವರಿಂದ ಕೂಡಿಕೊಂಡಿರುವ ದೇಹವುಳ್ಳ ಚಂದ್ರಶೇಖರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನು ಏನು ಮಾಡುವನು ?

ವಿಶ್ವಸೃಷ್ಟಿವಿಧಾಯಿನಂ ಪುನರೇವಪಾಲನತತ್ಪರಂ ।
ಸಂಹರನ್ತಮಥ ಪ್ರಪಂಚಮಶೇಷಲೋಕನಿವಾಸಿನಂ ।
ಕ್ರೀಡಯನ್ತಮಹರ್ನಿಶಂ ಗಣನಾಥಯೂಥಸಮಾವೃತಂ ।
ಚಂದ್ರಶೇಖರಮಾಶ್ರಯೇ ಮಮ ಕಿಂಕರಿಷ್ಯತಿ ವೈ ಯಮಃ ॥ ೮೨ ॥

ರುದ್ರಂ ಪಶುಪತಿಂ ಸ್ಥಾಣುಂ ನೀಲಕಂಠಮುಮಾಪತಿಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೩ ॥

ಕಾಲಕಂಠಂ ಕಲಾಮೂರ್ತಿಂ ಕಾಲಾಗ್ನಿಂ ಕಾಲನಾಶನಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೪ ॥

ನೀಲಕಂಠಂ ವಿರೂಪಾಕ್ಷಂ ನಿರ್ಮಲಂ ನಿರುಪದ್ರವಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೫ ॥

---

೮೨. ಪ್ರಪಂಚಕ್ಕೆ ಸೃಷ್ಟಿಕರ್ತನಾದ, ಕಾಪಾಡುವ ಮತ್ತು ಸಂಹಾರ ಮಾಡುವ ಎಲ್ಲಾ ಪ್ರಾಣಿಗಳಲ್ಲಿಯೂ ವಾಸವಾಗಿರುವ, ಆ ಪ್ರಾಣಿಗಳೆಲ್ಲವನ್ನೂ, ಹಗಲು ರಾತ್ರಿಯೂ ಆಟವಾಡಿಸುವ ಗಣಗಳ ಅಧಿಪತಿಗಳ ಗುಂಪಿನಿಂದಲೇ ಕೂಡಿರುವ ಚಂದ್ರಶೇಖರನನ್ನು ಶರಣು ಹೊಂದುತ್ತೇನೆ. ಯಮನು ನನ್ನನ್ನು ಏನು ಮಾಡಬಲ್ಲನು ?

೮೩. ರೌದ್ರಾಕಾರವುಳ್ಳ, ಧರ್ಮಕ್ಕೆ ಒಡೆಯನಾದ, ಸ್ಥಿರನಾದ, ನೀಲವಾಗಿರುವ ಕತ್ತುಳ್ಳ, ಪಾರ್ವತಿಗೆ ಗಂಡನಾದ ಆ ಪರಮೇಶ್ವರನನ್ನು ನಮಸ್ಕರಿಸುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲನು ?

೮೪-೮೬. ಕಾಲಕಂಠನಾದ, ಕಲಾ ಮೂರ್ತಿಯಾದ, ಕಾಲಾಗ್ನಿಯನ್ನುಳ್ಳ, ಯಮನಿಗೆ ನಾಶಕನಾದ, ಪರಮೇಶ್ವರನನ್ನು ಶರಣು ಹೊಂದುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲನು ? ನೀಲಕಂಠನಾದ, ವಿರೂಪಾಕ್ಷನಾದ, ನಿರ್ಮಲನಾದ, ತೊಂದರೆಗಳಿಲ್ಲದಿರುವ ಪರಮೇಶ್ವರನನ್ನು ನಮಸ್ಕರಿಸುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲನು ? ಅರ್ಧನಾರೀಶ್ವರ ರೂಪನಾದ, ಎಡದ ಕಡೆಯಲ್ಲಿ

ವಾಮದೇವಂ ಮಹಾದೇವಂ ಲೋಕನಾಥಂ ಜಗದ್ಗುರುಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೬ ॥

ದೇವದೇವಂ ಜಗನ್ನಾಥಂ ದೇವೇಶಮ್ವೃಷಭಧ್ವಜಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೭ ॥

ಅನಂತಮವ್ಯಯಂ ಶಾನ್ತಮಕ್ಷಮಾಲಾಧರಂ ಹರಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೮ ॥

ಆನಂದಂ ಪರಮಂ ನಿತ್ಯಂ ಕೈವಲ್ಯಪದಕಾರಣಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೮೯ ॥

ಸ್ವರ್ಗಾಪವರ್ಗದಾತಾರಂ ಸೃಷ್ಟಿಸ್ಥಿತ್ಯಂತಕಾರಿಣಂ ।
ನಮಾಮಿ ಶಿರಸಾ ದೇವಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ ೯೦ ॥

---

ಗಂಡಸಿನ ಆಕಾರವುಳ್ಳ, ಮಹಾದೇವನಾದ, ಲೋಕಕ್ಕೆ ನಾಥನಾದ, ಜಗತ್ತಿಗೆ ಗುರುವಾದ ಪರಮೇಶ್ವರನನ್ನು ಶರಣು ಹೊಂದುತ್ತೇನೆ. ನನ್ನನ್ನು ಮೃತ್ಯುವು ಏನನ್ನು ಮಾಡಬಲ್ಲನು ?

೮೭-೯೦. ದೇವದೇವನಾದ, ಜಗತ್ತಿಗೆ ನಾಥನಾದ, ದೇವತೆಗಳಿಗೆ ಈಶನಾದ, ವೃಷಭವೇ ಧ್ವಜವಾಗಿರುವ, ಪರಮೇಶ್ವರನನ್ನು ನಮಸ್ಕರಿಸುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲನು ? ಕೊನೆಯೇ ಇಲ್ಲದಿರುವ ನಾಶವಿಲ್ಲದ ಶಕ್ತನಾದ, ಅಕ್ಷಮಾಲೆಯನ್ನು ಧರಿಸಿರುವ, ಹರನಾದ ಪರಮೇಶ್ವರನನ್ನು ನಮಸ್ಕರಿಸುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲದು ? ಆನಂದ ಸ್ವರೂಪನಾದ ಉತ್ಕೃಷ್ಟನಾದ, ನಿತ್ಯನಾದ, ಮೋಕ್ಷವನ್ನು ಕೊಡಬಲ್ಲ ಪರಮೇಶ್ವರನನ್ನು ನಮಸ್ಕರಿಸುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲನು ? ಸ್ವರ್ಗ ಮೋಕ್ಷಗಳನ್ನು ಕೊಡುವ ಸೃಷ್ಟಿಯನ್ನೂ ಸ್ಥಿತಿಯನ್ನೂ ನಾಶವನ್ನೂ ಮಾಡುವ ಹರನನ್ನು ನಮಸ್ಕರಿಸುತ್ತೇನೆ. ಮೃತ್ಯುವು ನನ್ನನ್ನು ಏನು ಮಾಡಬಲ್ಲನು ?

॥ ವಸಿಷ್ಠ ಉವಾಚ ॥

ಮಾರ್ಕಂಡೇಯಕೃತಂ ಸ್ತೋತ್ರಂ ಯಃ ಪಠೇಚ್ಛಿವಸನ್ನಿಧೌ ।
ತಸ್ಯ ಮೃತ್ಯುಭಯಂ ನಾಸ್ತಿ ಸತ್ಯಂ ಸತ್ಯಂ ವದಾಮ್ಯಹಂ ॥ ೯೧ ॥

ಇತಿ ಸ್ತುತೋ ಮಹಾದೇವೋ ಮಾರ್ಕಂಡೇಯೇನ ಧೀಮತಾ ।
ಆಯುಃ ಪ್ರಾದಾದಪರ್ಯನ್ತಮನೇಕಪ್ರಲಯಾವಧಿ ॥ ೯೨ ॥

ಮಾರ್ಕಂಡೇಯೋ ಮಹಾತೇಜಾಃ ದೇವದೇವಪ್ರಸಾದತಃ ।
ಅಮೃತತ್ವಮನುಪ್ರಾಪ್ಯ ದದರ್ಶ ಪ್ರಲಯಾನ್ ಬಹೂನ್ ॥ ೯೩ ॥

॥ ಇತಿಮೃತ್ಯುಂಜಯ ಸ್ತೋತ್ರಂ ॥

ಪುನಃ ಸ್ವಮಾಶ್ರಮಂ ಪ್ರಾಪ್ಯ ಮಾರ್ಕಂಡೇಯೋ ಮಹಾ ಮುನಿಃ ।
ಮಾತರಂ ಪಿತರಂ ನತ್ವಾ ಸ ತಾಭ್ಯಾಮಭಿನಂದಿತಃ ॥ ೯೪ ॥

---

೯೧. ವಸಿಷ್ಠನು ಹೇಳಿದನು—ಈ ಮಾರ್ಕಂಡೇಯನು ಹೇಳಿರುವ ಶಿವ ಸ್ತೋತ್ರವನ್ನು ಯಾವನು ಶಿವನ ಸನ್ನಿಧಿಯಲ್ಲಿ ಹೇಳುತ್ತಾನೆಯೋ ಅವನಿಗೆ ಯಮನ ಭಯವೆಂಬುದು ಇಲ್ಲವೇ ಇಲ್ಲವು. ಸತ್ಯವು. ಸತ್ಯವು. ನಾನು ಖಂಡಿತವಾಗಿಯೂ ಹೇಳುತ್ತೇನೆ.

೯೨. ಬುದ್ಧಿವಂತನೂ ಸರ್ವಜ್ಞನೂ ಆದ ಮಾರ್ಕಂಡೇಯನು ಶಿವನನ್ನು ಹೀಗೆ ಸ್ತೋತ್ರ ಮಾಡಲು ಆ ಶಿವನು ಸಂತೋಷಪಟ್ಟು ಅನೇಕ ಪ್ರಲಯ ಕಾಲಗಳವರಿಗೆ ಬದುಕುವಂತೆ ಕೊನೆಗಾಣದ ಆಯುಸ್ಸನ್ನು ಕೊಟ್ಟನು.

೯೩. ಹೀಗೆ ಮಹಾ ತೇಜಸ್ವಿಯಾದ ಮಾರ್ಕಂಡೇಯನು ಆ ದೇವ ದೇವನಾದ ಶಿವನ ಪ್ರಸಾದದಿಂದ ಮರಣವಿಲ್ಲದಿರುವಿಕೆಯನ್ನು ಹೊಂದಿ ಅನೇಕ ವಾದ ಪ್ರಲಯಗಳನ್ನು ನೋಡಿದನು.

ಇಂತು ಮೃತ್ಯುಂಜಯನ ಸ್ತೋತ್ರವು

೯೪. ಮಾರ್ಕಂಡೇಯನು ಮತ್ತೆ ಹಿಂತಿರುಗಿ ತನ್ನ ಆಶ್ರಮಕ್ಕೆ ಹೋಗಿ ತಾಯಿ ತಂದೆಗಳಿಗೆ ನಮಸ್ಕರಿಸಿ ವಿಷಯಗಳೆಲ್ಲವನ್ನೂ ತಿಳಿಸಿದನು. ಅವರು ಬಹು ಸಂತೋಷಪಟ್ಟು ಶ್ಲಾಘಿಸಿದರು.

ತೀರ್ಥಯಾತ್ರಾಪರೋ ನಿತ್ಯಂ ಚಚಾರ ಪೃಥಿವೀತಲೇ ।
ಯಮೋಽಪಿ ಶಂಕರಂ ಸ್ತುತ್ವಾ ಯಥಾದೇಶಂ ಜಗಾಮ ಹ ॥ ೯೫ ॥

ಮೃಗಶೃಂಗಸ್ಯ ವಿಪ್ರಸ್ಯ ಮಾಘಸ್ನಾನಪರಸ್ಯ ಚ ।
ಇತ್ಥಂ ಭಾಗ್ಯವತೀ ಜಾತಾ ಸಂತತಿರ್ಮಾಘಗೌರವಾತ್ ॥ ೯೬ ॥

ಅನೇಕಮಾಘಾ ವಿಹಿತಾ ಮಹಾತ್ಮನಾ
ಮೃಕಂಡು ಪುತ್ರೇಣ ಮೃಡಾರ್ಪಿತಾತ್ಮನಾ ।
ಅನೇಕಲೋಕಪ್ರಲಯಾಃ ಸಮೀಕ್ಷಿತಾಃ
ಸಮಸ್ತ ಲೋಕೇಷು ಸದಾ ವಿಹಾರಿಣಾ ॥ ೯೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಮಾರ್ಕಂಡೇಯ ಜನ್ಮಾದ್ಯ ಕಥನಂ ನಾಮ ಷಟ್‌ತ್ರಿಂಚದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೯೫. ಈ ಮಾರ್ಕಂಡೇಯನು ತೀರ್ಥ ಯಾತ್ರೆಗಳಲ್ಲಿ ಆಸಕ್ತನಾಗಿ ಪ್ರಪಂಚವನ್ನೆಲ್ಲಾ ಸುತ್ತಲು ಮೊದಲಿಟ್ಟನು. ಯಮನೂ ಕೂಡ ಶಂಕರನನ್ನು ಸ್ತುತಿಸಿ ತನ್ನ ಸ್ಥಾನಕ್ಕೆ ಹೊರಟು ಹೋದನು.

೯೬. ಮಾಘಮಾಸದ ಸ್ನಾನದಲ್ಲಿ ಆಸಕ್ತನಾಗಿದ್ದ ಆ ಮೃಗಶೃಂಗನ ವಂಶವು ಮಾಘಸ್ನಾನದ ಮಹಿಮೆಯಿಂದ ಈ ರೀತಿಯಾಗಿ ಭಾಗ್ಯವನ್ನು ಹೊಂದಿದುದಾಯಿತು.

೯೭. ಈ ಮಾರ್ಕಂಡೇಯನು ಶಿವನನ್ನೇ ಧ್ಯಾನಿಸುತ್ತ ಅನೇಕ ಮಾಘಗಳ ಸ್ನಾನಗಳನ್ನು ಮಾಡಿದನು. ಅನೇಕ ಲೋಕಗಳಲ್ಲಿ ಯಾವಾಗಲೂ ಸಂಚರಿಸುತ್ತ ಅನೇಕವಾದ ಪ್ರಲಯಗಳನ್ನು ನೋಡಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಮಾರ್ಕಂಡೇಯನ ಜನ್ಮವೇ ಮುಂತಾದ ಕಥನ ಎಂಬ ಇನ್ನೂರ ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ದಿಲೀಪ ಉವಾಚ ॥

ಇಕ್ಷ್ವಾಕುವಂಶಗುರವೇ ನಮಸ್ತುಭ್ಯಂ ಮಹಾತ್ಮನೇ ।
ಕಾನಿ ಮುಖ್ಯಾನಿ ತೀರ್ಥಾನಿ ಮಾಘಸ್ನಾನರತಾತ್ಮನಾಂ ॥ ೧ ॥

ವಿಸ್ತರಾತ್ತಾನಿ ಮೇ ಬ್ರೂಹಿ ಶ್ರೋತುಮಿಚ್ಛಾಮಿ ವೈ ಮುನೇ । ॥ ೨ ॥

॥ ವಸಿಷ್ಠ ಉವಾಚ ॥

ಸಂಪ್ರಾಪ್ತೇ ಮಾಘಮಾಸೇ ತು ಯತ್ರ ಕ್ವಾಪಿ ಬಹಿರ್ಜಲಂ ।
ತತ್ಸರ್ವ ಮೃಷಯಃ ಪ್ರಾಹುಃ ಗಂಗಾಜಲಸಮಂ ನೃಪ ॥ ೩ ॥

---

## ಇನ್ನೂರ ಮೂವತ್ತೇಳನೆಯ ಅಧ್ಯಾಯವು



೧-೨. ದಿಲೀಪನು ಹೇಳಿದನು-ಇಕ್ಷ್ವಾಕುವಂಶಕ್ಕೆ ಗುರುವಾದ ಮಹಾತ್ಮನಾದ ನಿನಗೆ ನಮಸ್ಕಾರವು. ಎಲೈ ವಸಿಷ್ಠನೇ ! ಮಾಘಸ್ನಾನಮಾಡ ತಕ್ಕವರಿಗೆ ಯಾವು ಯಾವುವು ಉತ್ತಮವಾದ ತೀರ್ಥಗಳು ಅವೆಲ್ಲವನ್ನೂ ವಿಸ್ತಾರವಾಗಿ ಹೇಳು. ಕೇಳಬೇಕೆಂಬ ಇಚ್ಛೆಯಿದೆ.

೩. ವಸಿಷ್ಠನು ಹೇಳಿದನು-ಮಾಘಮಾಸ ಬಂದಾಗ ನೀರು ಹೊರುಗಡೆ ಯಲ್ಲಿ ಎಲ್ಲಿ ಎಲ್ಲಿ ಇವೆಯೋ ಅವೆಲ್ಲವೂ ಕೂಡ ಗಂಗಾಜಲಕ್ಕೆ ಸಮನಾದುವು ಎಂದು ಋಷಿಗಳು ಹೇಳುತ್ತಾರೆ.

ತಥಾ ವಿವಕ್ಷ್ಯೇ ಮುಖ್ಯಾನಿ ಮಾಘಸ್ನಾನೇ ವಿಶೇಷತಃ ।
ಪ್ರಥಮಂ ತೀರ್ಥರಾಜಸ್ತು ಪ್ರಯಾಗಾಖ್ಯಂ ಸುವಿಶ್ರುತಂ ॥ ೪ ॥

ಕಾಮಿಕಂ ಸರ್ವತೀರ್ಥಾನಾಂ ಧರ್ಮಕಾಮಾರ್ಥಮೋಕ್ಷದಂ ।
ನೈಮಿಷಂ ಚ ಕುರುಕ್ಷೇತ್ರಂ ಗಂಗಾದ್ವಾರಮವಂತಿಕಾ ॥ ೫ ॥

ಸರಯೂರ್ಯಮುನಾ ಚೈವ ದ್ವಾರಕಾಮುಷ್ಯಮರಾವತೀ ।
ಸರಸ್ವತೀ ಸಿಂಧುಸಂಗೋ ಗಂಗಾ ಸಾಗರಸಂಗಮಃ ॥ ೬ ॥

ಕಾಂಚೀ ತ್ರ್ಯಯ್ಯಂಬಕಂ ಚೈವ ಸಪ್ತಗೋದಾವರೀ ತಟಂ ।
ಕಾಲಂಜರಃ ಪ್ರಭಾಸಶ್ಚ ತಥಾ ಬದರಿಕಾಶ್ರಮಃ ॥ ೭ ॥

ಮಹಾಲಯಸ್ತಥೋಂಕಾರಕ್ಷೇತ್ರಂ ವೈ ಪುರುಷೋತ್ತಮಂ ।
ಗೋಕರ್ಣೋ ಭೃಗುಕರ್ಣಶ್ಚ ಭೃಗುತುಂಗಶ್ಚ ಪುಷ್ಕರಂ ॥ ೮ ॥

ತುಂಗಭದ್ರಾ ಚ ಕಾವೇರೀ ಕೃಷ್ಣಾ ವೇಣೀ ಚ ನರ್ಮದಾ ।
ಸುವರ್ಣಮುಖರೀ ಪುಣ್ಯಾ ತಥಾ ವೇಗವತೀ ನದೀ ॥ ೯ ॥

---

೪-೬. ಆದರೂ ಕೂಡ ಮಾಘಸ್ನಾನಕ್ಕೆ ಮುಖ್ಯವಾದ ಕೆಲವು ತೀರ್ಥಗಳನ್ನು ಹೇಳುತ್ತೇನೆ. ಮೊದಲನೆಯದು ತೀರ್ಥರಾಜನೆಂದು ಪ್ರಸಿದ್ಧವಾದ ಪ್ರಯಾಗವು. ಅದು ಸರ್ವತೀರ್ಥಗಳಿಗೂ ಇಷ್ಟಾರ್ಥಗಳನ್ನು ಕೊಡುತ್ತದೆ. ಧರ್ಮಕಾಮ ಅರ್ಥಗಳನ್ನು ಮೋಕ್ಷವನ್ನು ಕೊಡುತ್ತದೆ. ನೈಮಿಷ ಕುರುಕ್ಷೇತ್ರ ಗಂಗಾದ್ವಾರವು ಅವಂತಿಕೆ ಸರಯೂ ಯಮುನೆ ದ್ವಾರಕೆ ಅಮರಾವತಿ ಸರಸ್ವತಿ ಸಿಂಧುಗಳ ಸಂಗಮವು ಗಂಗಾಸಾಗರ ಸಂಗಮವು. ಇವು ಪುಣ್ಯಪ್ರದಗಳು.

೭-೧೦. ಶಿವಕಾಂಚಿ, ಸಪ್ತಗೋದಾವರಿ; ಕಾಲಂಜರ, ಪ್ರಭಾಸ, ಬದರಿಕಾಶ್ರಮ ಮಹಾಲಯಕ್ಷೇತ್ರ ಓಂಕಾರಕ್ಷೇತ್ರ ಪುರುಷೋತ್ತಮ ಗೋಕರ್ಣ ಭೃಗುಕರ್ಣ ಭೃಗುತುಂಗ ಪುಷ್ಕರ ತುಂಗಭದ್ರೆ ಕಾವೇರಿ ಕೃಷ್ಣ ತ್ರಿವೇಣಿ ನರ್ಮದೆ ಸುವರ್ಣಮುಖೀ ವೇಗವತಿ ಇವೆಲ್ಲವೂ ಕೂಡ ಮಾಘಸ್ನಾನದಲ್ಲಿ

ಮುಖ್ಯಾನ್ಯೇತಾನಿ ಸರ್ವಾಣಿ ಮಾಘಮಾಸೇ ನಿಮಜ್ಜತಾಂ ।
ಗಯಾತೀರ್ಥಂ ಚ ಯತ್ಪ್ರೋಕ್ತಂ ಪಿತೄಣಾಂ ತೃಪ್ತಿದಂ ಹಿತಂ ॥ ೧೦ ॥

ತೀರ್ಥಾನಿ ತಾನಿ ಭೌಮಾನಿ ಮಯಾ ಪ್ರೋಕ್ತಾನಿ ತೇನಘ ।
ಮಾನಸಾನ್ಯಪಿ ತೀರ್ಥಾನಿ ವಕ್ಷ್ಯಾಮಿ ಶೃಣು ಪಾರ್ಥಿವ ॥ ೧೧ ॥

ಯೇಷು ಸಮ್ಯಕ್ ನರಸ್ಸ್ನಾತ್ವಾ ಪ್ರಯಾತಿ ಪರಮಾಂ ಗತಿಂ ।
ಸತ್ಯಂ ತೀರ್ಥಂ ಕ್ಷಮಾ ತೀರ್ಥಂ ತೀರ್ಥಮಿಂದ್ರಿಯನಿಗ್ರಹಃ ॥ ೧೨ ॥

ಸರ್ವಭೂತದಯಾತೀರ್ಥಂ ತೀರ್ಥಮಾರ್ಜವಮೇವ ಚ ।
ದಾನಂ ತೀರ್ಥಂ ದಮಸ್ತೀರ್ಥಂ ಸಂತೋಷಸ್ತೀರ್ಥಮೇವ ಚ ॥ ೧೩ ॥

ಬ್ರಹ್ಮಚರ್ಯಂ ಪರಂ ತೀರ್ಥಂ ನಿಯಮಸ್ತೀರ್ಥಮುಚ್ಯತೇ ।
ಮಂತ್ರಾಣಾಂ ತು ಜಪಸ್ತೀರ್ಥಂ ತೀರ್ಥಂ ತು ಪ್ರಿಯವಾದಿತಾ ॥ ೧೪ ॥

ಜ್ಞಾನಂ ತೀರ್ಥಂ ಧೃತಿಸ್ತೀರ್ಥಮಹಿಂಸಾತೀರ್ಥಮೇವ ಚ ।
ಆತ್ಮತೀರ್ಥಂ ಧ್ಯಾನತೀರ್ಥಂ ಪುನಸ್ತೀರ್ಥಂ ಶಿವಸ್ಮೃತಿಃ ॥ ೧೫ ॥

ತೀರ್ಥಾನಾಮುತ್ತಮಂ ತೀರ್ಥಂ ವಿಶುದ್ಧಿರ್ಮನಸಃ ಪುನಃ ।
ನ ಜಲಾಪ್ಲುತದೇಹಸ್ಯ ಸ್ನಾನಮಿತ್ಯಭಿಧೀಯತೇ ॥ ೧೬ ॥

---

ಸ್ನಾನಮಾಡತಕ್ಕವರಿಗೆ ಮುಖ್ಯವಾದುವು. ಗಯಾತೀರ್ಥವೆಂದು ಹೇಳಿದೆನಲ್ಲ. ಅದು ಪಿತೃಗಳಿಗೆ ಮುಕ್ತಿಯನ್ನು ಕೊಡತಕ್ಕದ್ದಾಗಿರುತ್ತದೆ. ಮತ್ತು ಹಿತವಾಗಿಯೂ ಇರುತ್ತದೆ.

೧೧. ಈ ತೀರ್ಥಗಳೆಲ್ಲವೂ ಭೂಮಿಯಲ್ಲಿರತಕ್ಕವುಗಳು ಇವನ್ನು ನಿನಗೆ ಹೇಳಿದ್ದೇನೆ. ಮಾನಸವಾದ ತೀರ್ಥಗಳನ್ನು ಹೇಳುತ್ತೇನೆ ಕೇಳು.

೧೨-೧೪. ಅವುಗಳಲ್ಲಿ ಮನುಷ್ಯರು ಸ್ನಾನಮಾಡಿದರೆ ಉತ್ತಮಗತಿಯನ್ನು ಹೊಂದುತ್ತಾರೆ. ಸತ್ಯ ಕ್ಷಮೆ ಇಂದ್ರಿಯನಿಗ್ರಹ ಸರ್ವಭತದಯೆ ಋಜುತೆ ದಾನ ದಮ ಸಂತೋಷ ಬ್ರಹ್ಮಚರ್ಯ ನಿಯಮ ಮಂತ್ರ ಜಪ ಪ್ರಿಯವಾದಿತ್ವ ಇವೆಲ್ಲವೂ ತೀರ್ಥಗಳೇ. ಇವುಗಳಲ್ಲಿ ಸ್ನಾನಮಾಡಬೇಕು. ಎಂದರೆ ಇವನ್ನು ಆಚರಿಸಬೇಕು.

೧೫-೧೬. ಜ್ಞಾನ ಧೃತಿ ಅಹಿಂಸೆ ಆತ್ಮ ಧ್ಯಾನ ಶಿವಸ್ಮೃತಿ ಮನಶ್ಶುದ್ಧಿ ಇವೆಲ್ಲವೂ ತೀರ್ಥಗಳೇ. ನೀರಿನಿಂದ ಸ್ನಾನಮಾಡದವನು ಇವನ್ನು ಆಚರಿಸಿದರೆ ಅದೇ ಅವರಿಗೆ ಸ್ನಾನವು.

ಸಸ್ನಾತೋ ಯೋ ದಮಸ್ನಾತಃ ಶುಚಿಸ್ನಿಗ್ಧಮನಾ ಯತಃ ।
ಯೋ ಲುಬ್ಧಃ ಪಿಶುನಃ ಕ್ರೂರೋ ದಾಂಭಿಕೋ ವಿಷಯಾತ್ಮಕಃ ॥ ೧೭ ॥

ಸರ್ವತೀರ್ಥೇಷ್ವಪಿ ಸ್ನಾತಃ ಪಾಪೋ ಮಲಿನ ಏವ ಸಃ ।
ನ ಶರೀರಮಲತ್ಯಾಗಾನ್ನರೋ ಭವತಿ ನಿರ್ಮಲಃ ॥ ೧೮ ॥

ಮಾನಸೇತು ಮಲೇ ತ್ಯಕ್ತೇ ಭವತ್ಯತ್ಯಂತ ನಿರ್ಮಲಃ ।
ಜಾಯಂತೇ ಚ ಮ್ರಿಯಂತೇ ಚ ಜಲೇಷ್ವೇವ ಜಲೌಕಸಃ ॥ ೧೯ ॥

ನ ಚ ಗಚ್ಛಂತಿ ತೇ ಸ್ವರ್ಗಮವಿಶುದ್ಧಮನೋಮಲಾಃ ।
ವಿಷಯೇಷ್ವತಿಸಂರಾಗೋ ಮಾನಸೋ ಮಲ ಉಚ್ಯತೇ ॥ ೨೦ ॥

ತೇಷ್ವೇವ ಹಿ ವಿರಾಗೋಽಸ್ಯ ನೈರ್ಮಲ್ಯಂ ಸಮುದಾಹೃತಂ ।
ದಾನಮಿಜ್ಯಾತಪಶ್ಶೌಚಂ ತೀರ್ಥಸೇವ ಶ್ರುತಂ ತಥಾ ॥ ೨೧ ॥

---

೧೭-೨೦. ದಮವಂದರೆ ಇಂದ್ರಿಯನಿಗ್ರಹವು ಹಾಗೆ ಇಂದ್ರಿಯನಿಗ್ರಹ ಮಾಡಿದವನು ಶುಚಿಯಾಗಿಯೂ ದಮವಂತನಾಗಿಯೂ ದಯಾವಂತನಾಗಿಯೂ ಇರುವುದರಿಂದ ಅವನೇ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದವನೆಂದು ಹೇಳಬೇಕು. ಲೋಭಿಯೂ ಚಾಡಿಕೋರನೂ ಕ್ರೂರನೂ ದಾಂಭಿಕನೂ ವಿಷಯಾಸಕ್ತನೂ ಆದವನು ಎಲ್ಲಾ ನೀರಿನ ತೀರ್ಥಗಳಲ್ಲಿ ಸ್ನಾನಮಾಡಿದರೂ ಅವನು ಪಾಪಿಯೇ ಆಗಿರುವನು. ಮಲಿನನೂ ಆಗಿರುವನು. ಶರೀರದಲ್ಲಿರುವ ಕೊಳೆಯನ್ನು ಹೋಗಲಾಡಿಸಿಕೊಂಡ ಮಾತ್ರಕ್ಕೇ ಮನುಷ್ಯನು ನಿರ್ಮಲನಾಗುವುದಿಲ್ಲ. ಮನಸ್ಸಿನ ಮಲಗಳೆಂದೆನಿಸಿಕೊಳ್ಳುವ ಲೋಭದಂಭಾದಿಗಳನ್ನು ಬಿಟ್ಟುಬಿಟ್ಟರೆ ಆಗ ಅವನು ನಿರ್ಮಲನು. ಮನಸ್ಸು ನಿರ್ಮಲವಾಗಿಲ್ಲದಿದ್ದರೆ ತೀರ್ಥಗಳಲ್ಲಿ ಸ್ನಾನ ಮಾಡುವುದರಿಂದಲೇ ಅವನು ಸ್ವರ್ಗವನ್ನು ಹೊಂದುವುದಿಲ್ಲ. ನೀರಿನಲ್ಲಿರುವ ಜಲಜಂತುಗಳು ನೀರಿನಲ್ಲಿಯೇ ಇದ್ದು ಸಾಯುತ್ತವೆ. ಅವು ಸ್ವರ್ಗವನ್ನು ಹೊಂದುವುದಿಲ್ಲ. ಏತಕ್ಕೆಂದರೆ ಅವಕ್ಕೆ ಮನಸ್ಸು ನಿರ್ಮಲವಾಗಿರದೆ ಮಲದಿಂದ ಕೂಡಿರುವುದು. ವಿಷಯಗಳಲ್ಲಿರುವ ಅತ್ಯಂತ ಆಸಕ್ತಿಯೇ ಮನಸ್ಸಿನ ಮಲವೆಂದೆನ್ನಿಸಿಕೊಳ್ಳುತ್ತದೆ.

೨೧-೨೪. ವಿಷಯಗಳಲ್ಲಿ ತಿರಸ್ಕಾರ ರೂಪವಾದ ವೈರಾಗ್ಯವು ಬಂದರೆ ಅದೇ ನೈರ್ಮಲ್ಯವೆಂಬದಾಗಿ ಹೇಳಲ್ಪಟ್ಟದೆ. ದಾನ, ಯಾಗ, ತಪಸ್ಸು, ಶುಚಿತ್ವ

ಸರ್ವಾಣ್ಯೇತಾನಿ ತೀರ್ಥಾನಿ ಯದಿ ಭಾವೋ ಹಿ ನಿರ್ಮಲಃ ।
ನಿಗೃಹೀತೇಂದ್ರಿಯಗ್ರಾಮೋ ಯತ್ರ ಯತ್ರ ವಸೇನ್ನರಃ ॥ ೨೨ ॥

ತತ್ರ ತಸ್ಯ ಕುರುಕ್ಷೇತ್ರಂ ನೈಮಿಷಂ ಪುಷ್ಕರಾಣಿ ಚ ।
ಜ್ಞಾನಪೂತೇ ಧ್ಯಾನಜಲೇ ರಾಗದ್ವೇಷಮಲಾಪಹೇ ॥ ೨೩ ॥

ಯಃ ಸ್ನಾತಿ ಮಾನಸೇ ತೀರ್ಥೇ ಸ ಯಾತಿ ಪರಮಾಂ ಗತಿಂ ।
ಏತತ್ತೇ ಕಥಿತಂ ರಾಜನ್ ಮಾನಸಂ ತೀರ್ಥಲಕ್ಷಣಂ ॥ ೨೪ ॥

ಭೌಮಾನಾಮಪಿ ತೀರ್ಥಾನಾಂ ಪುಣ್ಯತ್ವೇ ಕಾರಣಂ ಶೃಣು ।
ಯಥಾ ಶರೀರಸ್ಯೋದ್ದೇಶಾಃ ಕೇಚಿನ್ಮೇಧ್ಯತಮಾಃ ಶ್ರುತಾಃ ॥ ೨೫ ॥

ತಥಾ ಪೃಥಿವ್ಯಾಮುದ್ದೇಶಾಃ ಕೇಚಿತ್ಪುಣ್ಯತಮಾಃ ಸ್ಮೃತಾ ।
ಪ್ರಭಾವಾದದ್ಭುತಾದ್ಭೂಮೇಃ ಸಲಿಲಸ್ಯ ಚ ತೇಜಸಾ ॥ ೨೬ ॥

---

ಇವುಗಳನ್ನು ತೀರ್ಥಗಳೆಂದು ಹೇಳುತ್ತಾರೆ. ಮೇಲೆ ಹೇಳಿದ ಭೂಮಿಯ ತೀರ್ಥಗಳೂ ಮಾನಸ ತೀರ್ಥಗಳೂ ತೀರ್ಥಗಳಾಗಿ ಫಲವನ್ನು ಕೊಡಬೇಕಾದರೆ ಮನಸ್ಸು ನಿರ್ಮಲವಾಗಿರಬೇಕು. ಇಂದ್ರಿಯಗಳನ್ನು ನಿಗ್ರಹಿಸಿರುವ ಮನುಷ್ಯನು ಎಲ್ಲೆಲ್ಲಿ ವಾಸಮಾಡುತ್ತಾನೆಯೋ ಅಲ್ಲಲ್ಲಿಯೇ ಅವನಿಗೆ ಕುರುಕ್ಷೇತ್ರವೂ ನೈಮಿಷವೂ, ಪುಷ್ಕರಗಳೂ ಇರುತ್ತವೆ. ಜ್ಞಾನದಿಂದ ಪರಿಶುದ್ಧವಾದ ರಾಗ ದ್ವೇಷಗಳೆಂಬ ಮಲವನ್ನು ನಾಶಮಾಡುವ ಧ್ಯಾನವೆಂಬ ನೀರುಳ್ಳ ಮಾನಸವೆಂಬ ತೀರ್ಥದಲ್ಲಿ ಯಾವನು ಸ್ನಾನ ಮಾಡುತ್ತಾನೆಯೋ ಅವನು ಉತ್ತಮವಾದ ಗತಿಯನ್ನು ಹೊಂದುತ್ತಾನೆ. ಎಲೈ ದೊರೆಯೆ ! ಈ ರೀತಿಯಾಗಿ ನಿನಗೆ ಮಾನಸ ತೀರ್ಥದ ಲಕ್ಷಣವನ್ನು ಹೇಳಿದ್ದೇನೆ.

೨೫-೨೬. ಭೂಮಿಯಲ್ಲಿರುವ ತೀರ್ಥಗಳು ಪುಣ್ಯವುಳ್ಳವುಗಳಾಗುವುದರಲ್ಲ ಕಾರಣವನ್ನು ಕೇಳು. ಶರೀರದಲ್ಲಿರುವ ಅವಯವಗಳಲ್ಲಿ ಕೆಲವನ್ನು ನಾವು ಹೇಗೆ ಪವಿತ್ರಗಳೆಂದು ಹೇಳುತ್ತೇವೆಯೋ ಹಾಗೆಯೇ ಭೂಮಿಯಲ್ಲಿರುವ ಕೆಲವು ಭಾಗಗಳನ್ನು ಪುಣ್ಯವಾದುವುಗಳೆಂದು ಹೇಳುತ್ತಾರೆ. ಭೂಮಿಯ ಪ್ರಭಾವ ದಿಂದಲೂ, ನೀರಿನ ತೇಜಸ್ಸಿನಿಂದಲೂ ಮುನಿಗಳು ಆ ತೀರ್ಥಗಳನ್ನು ಆಶ್ರಯಿಸಿ

ಪರಿಗ್ರಹಾನ್ಮುನೀನಾಂ ಚ ತೀರ್ಥಾನಾಂ ಪುಣ್ಯತಾ ಸ್ಮೃತಾ ।
ತಸ್ಮಾತ್ತೀರ್ಥೇಷು ಸರ್ವೇಷು ಮಾನಸೇಷು ಚ ನಿತ್ಯಶಃ ॥ ೨೭ ॥

ಉಭಯೋಶ್ವಪಿ ಯಃ ಸ್ನಾತಿ ಸ ಯಾತಿ ಪರಮಾಂ ಗತಿಂ ।
ಅನುಪೋಷ್ಯ ತ್ರಿರಾತ್ರಾಣಿ ತ್ರಿರ್ಥಾನ್ಯನಭಿಗಮ್ಯ ಚ ॥ ೨೮ ॥

ಅದತ್ವಾ ಕಾಂಚನಂ ಗಾಂ ಚ ದರಿದ್ರೋ ನಾಮ ಜಾಯತೇ ।
ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ ॥ ೨೯ ॥

ನ ತತ್ಫಲಮವಾಪ್ನೋತಿ ತೀರ್ಥಾಭಿಗಮೇನ ಯತ್ ।
ಯಸ್ಯ ಹಸ್ತೌ ಚ ಪಾದೌ ಚ ಮನ ಶ್ಚೈವ ಸುಸಂಯುತಂ ॥ ೩೦ ॥

ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ।
ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ॥ ೩೧ ॥

---

ತಮ್ಮ ಪ್ರಭಾವವನ್ನು ಅದಕ್ಕೆ ಉಂಟುಮಾಡಿರುವುದರಿಂದಲೂ ತೀರ್ಥಗಳು ಪುಣ್ಯವಾದುವು ಎನ್ನಿಸಿಕೊಂಡಿರುತ್ತದೆ. ಆದ್ದರಿಂದ ಭೂಮಿಯಲ್ಲಿನ ನೀರಿನ ರೂಪವಾದ ತೀರ್ಥದಲ್ಲಿಯೂ ಶಮದಮಾದಿ ರೂಪವಾದ ಮಾನಸ ತೀರ್ಥದಲ್ಲಿಯೂ ಎರಡರಲ್ಲಿಯೂ ಯಾವನು ಸ್ನಾನ ಮಾಡುತ್ತಾನೆಯೋ ಅವನೇ ಉತ್ತಮವಾದ ಗತಿಯನ್ನು ಹೊಂದುತ್ತಾನೆ. ಮೂರು ರಾತ್ರಿಗಳೂ ಉಪವಾಸಮಾಡದೆ ತೀರ್ಥಗಳಿಗೆ ಹೋಗಿ ಸ್ನಾನ ಮಾಡದೆ ಚಿನ್ನವನ್ನೂ ಗೋವನ್ನೂ ದಾನಮಾಡದೆ ಇದ್ದವನು ದರಿದ್ರನಾಗಿ ಹುಟ್ಟುತ್ತಾನೆ. ಬಹುವಾಗಿ ದಕ್ಷಿಣೆಯನ್ನು ಕೊಟ್ಟು ಅಗ್ನಿಷ್ಟೋಮಾದಿ ಅನೇಕ ಯಜ್ಞಗಳನ್ನು ಮಾಡಿದರೂ ಕೂಡ ಚಿತ್ತಶುದ್ಧಿಯಿಂದ ತೀರ್ಥಗಳಲ್ಲಿ ಸ್ನಾನ ಮಾಡಿದರೆ ಹೊಂದುವ ಫಲವನ್ನು ಹೊಂದುವುದಿಲ್ಲ. ಯಾವನು ಕೈಕಾಲು ಮನಸ್ಸುಗಳನ್ನು ಶುದ್ಧವಾಗಿಟ್ಟುಕೊಂಡು ವಿದ್ಯೆಯನ್ನು ಕಲಿತು ತಪಸ್ಸನ್ನು ಮಾಡಿ ಕೀರ್ತಿಯನ್ನು ಪಡೆದಿರುತ್ತಾನೆಯೋ ಅವನು ತೀರ್ಥದ ಫಲವನ್ನು ಹೊಂದುತ್ತಾನೆ. ದಾನವನ್ನು ತೆಗೆದುಕೊಳ್ಳದೆ ಯಾವುದು ಸಿಕ್ಕಿದರೆ ಅದರಿಂದಲೇ ಸಂತೋಷವನ್ನು ಹೊಂದಿ ಅಹಂಕಾರವನ್ನು ಬಿಟ್ಟಿರತಕ್ಕವನು

ಅಹಂಕಾರವಿಮುಕ್ತಶ್ಚ ಸ ತೀರ್ಥಫಲಮಶ್ನುತೇ ।
ತೀರ್ಥಾನ್ಯನುಸರನ್ ಧೀರಃ ಶ್ರದ್ಧದಾನಸ್ಸಮಾಹಿತಃ ॥ ೩೨ ॥

ಕೃತಘ್ನೋಽಪಿ ವಿಶುದ್ಧ್ಯೇತ ಕಿಂ ಪುನಶ್ಶುದ್ಧ ಕರ್ಮಕೃತ್ ।
ತಿರ್ಯಗ್ಯೋನಿಂ ನೈವಗಚ್ಛೇತ್ ಕುದೇಶೇ ಚ ನ ಜಾಯತೇ ॥ ೩೩ ॥

ನ ದುಃಖೀ ಸ್ಯಾತ್ಸ್ವರ್ಗಭಾಕ್ಚ ಮೋಕ್ಷೋಪಾಯಂ ಚ ವಿಂದತಿ ।
ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕೋಽಚ್ಛಿನ್ನಸಂಶಯಃ ॥ ೩೪ ॥

ಹೇತುನಿಷ್ಠಶ್ಚ ಪಂಚೈತೇ ನ ತೀರ್ಥ ಫಲಭಾಗಿನಃ ।
ತೀರ್ಥಾನಿ ಚ ಯಥೋಕ್ತಾನಿ ವಿಧಿನಾ ಸಂಚರಂತಿ ಯೇ ॥ ೩೫ ॥

ಸರ್ವದ್ವಂದ್ವ ಸಹಾ ಧೀರಾಸ್ತೇ ನರಾಃ ಸ್ವರ್ಗಗಾಮಿನಃ ।
ತೀರ್ಥಯಾತ್ರಾಂ ಚಿಕೀರ್ಷುಃ ಪ್ರಾಕ್ ವಿಧಾಯೋಪೋಷಣಂ ಗೃಹೇ ॥ ೩೬ ॥

ಗಣೇಶಂ ಚ ಪಿತ್ರ್ನ್ ವಿಪ್ರಾನ್ ಸಾಧೂನ್ ಶಕ್ತ್ಯಾಭಿಪೂಜ್ಯ ಚ ।
ಕೃತಪಾರಣಕೋ ಹೃಷ್ಟೋ ಗಚ್ಛೇನ್ನ ಯಮಯುಕ್ ಪುನಃ ॥ ೩೭ ॥

---

ತೀರ್ಥದ ಫಲವನ್ನು ಹೊಂದುತ್ತಾನೆ. ಇಂದ್ರಿಯ ನಿಗ್ರಹವನ್ನು ಮಾಡಿಕೊಂಡು ಶ್ರದ್ಧೆಯಿಂದ ತೀರ್ಥಗಳಲ್ಲಿ ಸ್ನಾನಮಾಡುತ್ತಿದ್ದರೆ ಅವನು ಕೃತಘ್ನನಾಗಿದ್ದರೂ ಎಂದರೆ ಮಾಡಿದ ಉಪಕಾರವನ್ನು ಮರೆತುಬಿಡುವನಾದರೂ ಕೂಡ ಶುದ್ಧನಾಗುತ್ತಾನೆ ಹೀಗಿರುವಲ್ಲಿ ಶುದ್ಧನಾಗಿರುವವನ ವಿಷಯವನ್ನು ಹೇಳತಕ್ಕದ್ದೇನಿರುವುದು. ಅವನು ಕೀಳುಜಾತಿಯಲ್ಲಿ ಹುಟ್ಟುವುದಿಲ್ಲ. ಕೀಳುದೇಶದಲ್ಲಿ ಹುಟ್ಟುವುದಿಲ್ಲ ದುಃಖವನ್ನು ಹೊಂದುವುದಿಲ್ಲ. ಸ್ವರ್ಗವನ್ನು ಹೊಂದುತ್ತಾನೆ ಮೋಕ್ಷಕ್ಕೆ ಹೋಗಲು ಉಪಾಯವನ್ನು ತಿಳಿಯುತ್ತಾನೆ. ಶ್ರದ್ಧೆಯಿಲ್ಲದಿರುವವನೂ ಪಾಪಿಯೂ ನಾಸ್ತಿಕನೂ ಸಂಶಯವುಳ್ಳವನೂ ಎಲ್ಲದಕ್ಕೂ ಕಾರಣವನ್ನು ಹುಡುಕುವವನೂ ಈ ಐದುಜನರು ತೀರ್ಥದ ಫಲವನ್ನು ಹೊಂದುವುದಿಲ್ಲ. ಶೀತೋಷ್ಣ ಸುಖದುಃಖ ಮುಂತಾದ ದ್ವಂದ್ವಗಳನ್ನು ಸಹಿಸಿಕೊಂಡು ಮೇಲೆ ಹೇಳಿದ ತೀರ್ಥಯಾತ್ರೆಯನ್ನು ಶಾಸ್ತ್ರದ ರೀತಿಯಿಂದ ಮಾಡುತ್ತಿದ್ದರೆ ಅವನು ಸ್ವರ್ಗವನ್ನು ಹೊಂದುತ್ತಾನೆ. ತೀರ್ಥಯಾತ್ರೆಯನ್ನು ಮಾಡುವವನು ಮೊದಲು ಮನೆಯಲ್ಲಿ ಉಪವಾಸವಿದ್ದು ಗಣೇಶನನ್ನೂ ಪಿತೃಗಳನ್ನೂ ಬ್ರಾಹ್ಮಣರನ್ನೂ ಸಾಧುಗಳನ್ನೂ ಶಕ್ತಿಗನುಗುಣವಾಗಿ ಪೂಜಿಸಿ ಪಾರಣೆಯನ್ನು ಮಾಡಿಕೊಂಡು ನಿಯಮದಿಂದ ತೀರ್ಥಯಾತ್ರೆಗೆ ಹೊರಡಬೇಕು.

ಆಗತ್ಯಾಭ್ಯರ್ಚ್ಯ ಚ ಪಿತ್ರ್ನ್ ಯಥೋಕ್ತಫಲಭಾಗ್ಭವೇತ್ |
ನ ಪರೀಕ್ಷ್ಯಾ ದ್ವಿಜಾಸ್ತೀರ್ಥೇಷ್ವಾಸ್ನಾರ್ಥೀ ಭೋಜ್ಯ ಏವ ಚ ॥ ೩೮ ॥

ಸಕ್ತುಭಿಃ ಪಿಂಡದಾನಂ ಚ ಸಂಯಾವೈಃ ಪಾಯಸೇನ ತು |
ಕರ್ತವ್ಯಮೃಷಿಭಿರ್ದೃಷ್ಟಂ ಪಿಣ್ಯಾಕೇನ ಗುಡೇನ ಚ ॥ ೩೯ ॥

ಶ್ರಾದ್ಧಂ ತತ್ರ ತು ಕರ್ತವ್ಯಮರ್ಘ್ಯಾವಾಹನವರ್ಜಿತಂ |
ಕಾಲೇವಾಪ್ಯಯಥಾಕಾಲೇ ತೀರ್ಥೇ ಶ್ರಾದ್ಧಂ ಚ ತರ್ಪಣಂ ॥ ೪೦ ॥

ಅವಿಲಂಬೇನ ಕರ್ತವ್ಯಂ ನೈವ ವಿಘ್ನಂ ಸಮಾಚರೇತ್ |
ತೀರ್ಥಂ ಪ್ರಾಪ್ಯ ಪ್ರಸಂಗೇನ ಸ್ನಾನಂ ತೀರ್ಥೇ ಸಮಾಚರೇತ್ ॥ ೪೧ ॥

ಸ್ನಾನಜಂ ಫಲಮಾಪ್ನೋತಿ ತೀರ್ಥಯಾತ್ರಾಶ್ರಿತಂ ನ ತು |
ನೃಣಾಂ ಪಾಪಕೃತಾಂ ತೀರ್ಥೇ ಪಾಪಸ್ಯ ಶಮನಂ ಭವೇತ್ ॥ ೪೨ ॥

---

೩೮. ಅಲ್ಲಿಂದ ತೀರ್ಥಕ್ಕೆ ಬಂದು ನಿಯಮದಿಂದ ಪಿತೃಗಳನ್ನು ಪೂಜಿಸಿದರೆ ಸರಿಯಾದ ಫಲವನ್ನು ಹೊಂದುತ್ತಾನೆ. ತೀರ್ಥಗಳಲ್ಲಿರುವ ಬ್ರಾಹ್ಮಣರನ್ನು ಯೋಗ್ಯರು ಅಯೋಗ್ಯರು ಎಂಬದಾಗಿ ಪರೀಕ್ಷಿಸಬಾರದು. ಅನ್ನಕೋಸ್ಕರ ಬಂದವರಿಗೆ ಊಟಮಾಡಿಸಬೇಕು.

೩೯-೪೨. ಹಿಟ್ಟನಿಂದ ಪಿತೃಗಳಿಗೆ ಪಿಂಡವನ್ನು ಹಾಕಬೇಕು. ಯವದಿಂದ ಪಾಯಸವನ್ನು ಮಾಡಬೇಕು. ಎಳ್ಳಿಗೆ ಬೆಲ್ಲವನ್ನು ಹಾಕಿ ಚಿಗುಳಿಯನ್ನು ಮಾಡಿ ಅದರಿಂದ ಶ್ರಾದ್ಧವನ್ನು ಮಾಡಬೇಕು. ಈ ಶ್ರಾದ್ಧದಲ್ಲಿ ಅರ್ಘ್ಯ ಆವಾಹನೆಗಳಿಲ್ಲವು. ಶಾಸ್ತ್ರದಲ್ಲಿ ಹೇಳಿರುವಂತಹ ಕಾಲಗಳಲ್ಲಿ ಅಥವಾ ಅಕಾಲದಲ್ಲಿಯೇ ಆಗಲಿ ತೀರ್ಥಕ್ಕೆ ಹೋದವನು ಆ ತೀರ್ಥದಲ್ಲಿ ಸ್ನಾನಮಾಡಿ ಶ್ರಾದ್ಧವನ್ನೂ ತರ್ಪಣವನ್ನೂ ಒಡನೆಯೇ ಮಾಡಬೇಕು. ಸ್ವಲ್ಪವೂ ತಡಮಾಡಬಾರದು. ವಿಘ್ನನವನ್ನು ಮಾಡಬಾರದು. ಯಾವುದೋ ಕಾರಣದಿಂದ ತೀರ್ಥಕ್ಕೆ ಹೋಗಿದ್ದಾಗ ಆ ತೀರ್ಥದಲ್ಲಿ ಸ್ನಾನಮಾಡಿದರೆ ಸ್ನಾನದ ಫಲವು ಬರುತ್ತದೆ. ತೀರ್ಥದ ಯಾತ್ರೆಯ ಫಲವು ಬರುವುದಿಲ್ಲ. ಪಾಪಿಗಳಾದವರು ತೀರ್ಥದಲ್ಲಿ ಸ್ನಾನಮಾಡಿದರೆ ಪಾಪಗಳು ಹೋಗುತ್ತವೆ.

**ಯಥೋಕ್ತ ಫಲದಂತೀರ್ಥಂ ಭವೇಚ್ಛುದ್ಧಾತ್ಮನಾಂ ನೃಣಾಂ ।**
**ಷೋಡಶಾಂಶಂ ಸ ಲಭತೇ ಯಃ ಪರಾರ್ಥಂ ಚ ಗಚ್ಛತಿ ॥ ೪೩ ॥**

**ಕುಶಪ್ರತಿಕೃತಿಂ ಕೃತ್ವಾ ತೀರ್ಥವಾರಿಣಿ ಮಜ್ಜಯೇತ್ ।**
**ಮಜ್ಜಯೇಚ್ಚ ಯಮುದ್ಧಿಶ್ಯ ಸೋಷ್ಟಭಾಗಂ ಲಭೇತ ವೈ ॥ ೪೪ ॥**

**ತೀರ್ಥೋಪವಾಸಃ ಕರ್ತವ್ಯಃ ಶಿರಸೋ ಮುಂಡನಂ ತಥಾ ।**
**ಶಿರೋಗತಾನಿ ಪಾಪಾನಿ ಯಾಂತಿ ಮುಂಡನತೋ ಯತಃ ॥ ೪೫ ॥**

**ಯದಹ್ನಿ ತೀರ್ಥಪ್ರಾಪ್ತಿಸ್ಸ್ಯಾತ್ತತೋಹ್ನಃ ಪೂರ್ವವಾಸರೇ ।**
**ಉಪವಾಸಸ್ತು ಕರ್ತವ್ಯಃ ಪರೇಹ್ನಿ ಶ್ರಾದ್ಧದೋ ಭವೇತ್ ॥ ೪೬ ॥**

---

೪೩. ಶುದ್ಧವಾಗಿರುವ ಮನುಷ್ಯರು ತೀರ್ಥಯಾತ್ರೆಯನ್ನು ಮಾಡಿದರೆ ಶಾಸ್ತ್ರದಲ್ಲಿ ಹೇಳಿರುವಂತೆ ಫಲವನ್ನು ಕೊಡುತ್ತದೆ. ಮತ್ತೊಬ್ಬರಿಗೋಸ್ಕರ ತೀರ್ಥಯಾತ್ರೆಗೆ ಹೋದರೆ ಆ ತೀರ್ಥಯಾತ್ರೆಗೆ ಹೋದವನು ಆ ತೀರ್ಥಯಾತ್ರೆಯ ಪುಣ್ಯದಲ್ಲಿ ಹದಿನಾರನೆಯ ಒಂದಂಶ ಪುಣ್ಯವನ್ನು ಹೊಂದುತ್ತಾನೆ.

೪೪. ಹಾಗೆ ಪರರಿಗೋಸ್ಕರ ತೀರ್ಥಯಾತ್ರೆಗೆ ಹೋದವನು ದರ್ಭೆಯಲ್ಲಿ ಕಳುಹಿಸಿರುವವನ ಆಕಾರವನ್ನು ಮಾಡಿ ಆ ತೀರ್ಥದ ನೀರಿನಲ್ಲಿ ಸ್ನಾನಮಾಡಿಸ ಬೇಕು. ಕಳುಹಿಸಿರುವವನನ್ನು ಉದ್ದೇಶಿಸಿ ತಾನು ಸ್ನಾನಮಾಡಿದರೆ ಆಗ ಸ್ನಾನಮಾಡಿದವನಿಗೆ ಎಂಟುಭಾಗ ಪುಣ್ಯವು ಬರುತ್ತದೆ.

೪೫. ತೀರ್ಥದಲ್ಲಿ ಉಪವಾಸವಿರಬೇಕು. ಕ್ಷೌರವನ್ನು ಮಾಡಿಸಿಕೊಳ್ಳ ಬೇಕು ಹಾಗೆ ಕ್ಷೌರಮಾಡಿಸಿಕೊಂಡರೆ ತಲೆಯನ್ನು ಆಶ್ರಯಿಸಿರುವ ಪಾಪಗಳು ಹೋಗುತ್ತವೆ

೪೬. ಯಾವತ್ತಿನ ದಿನ ತೀರ್ಥಕ್ಕೆ ಹೋಗಬೇಕೆಂದಿರುವನೋ ಅದರ ಹಿಂದಿನ ದಿವಸ ಉಪವಾಸವಿರಬೇಕು. ಮಾರನೆಯ ದಿನ ಶ್ರಾದ್ಧವನ್ನು ಮಾಡಬೇಕು.

ತೀರ್ಥಪ್ರಸಂಗಾತ್ತತ್ತೀರ್ಥಮುಪ್ಯುಕ್ತಂ ತ್ವತ್ಪುರತೋಮಯಾ ।
ಸ್ವರ್ಗಸಾಧನಮೇವೈತನ್ಮೋಕ್ಷೋಪಾಯಶ್ಚ ವೈ ಭವೇತ್ ॥ ೪೭ ॥

ಏವಂ ನಿಯಮಮಾಸ್ಥಾಯ ಮಾಘಮಾಸೇ ವ್ರತೀಭವೇತ್ ।
ಈದೃಶೀಂ ತೀರ್ಥಯಾತ್ರಾಂ ತು ಮಾಘಮಾಸೇ ಸಮಾಚರೇತ್ ॥ ೪೮ ॥

ಮಾಘಸ್ನಾಯೀ ತು ಸರ್ವತ್ರ ಯತ್ಕಿಂಚಿದ್ದಾನಮಾಚರೇತ್ ।
ಬದರೀಫಲಂ ಚ ಕದಲೀಫಲಮಾಮಲಕೀಫಲಂ ॥ ೪೯ ॥

ಘೃತಪ್ರಸ್ಥಂ ತಿಲಪ್ರಸ್ಥಂ ತಾಂಬೂಲಂ ತಂಡುಲಾಢಕಂ ।
ಕೂಶ್ಮಾಂಡಂ ಕೃಸರಂ ಚೈವ ನವೈತಾನಿ ದಿನೇ ದಿನೇ ॥ ೫೦ ॥

ಬ್ರಾಹ್ಮಣೇಭ್ಯಃ ಪ್ರದೇಯಾನಿ ಮಾಘಸ್ನಾನಪರೈರ್ನರೈಃ ।
ಯೇನ ಕೇನ ಪ್ರಕಾರೇಣ ಅಮೋಘಂ ಮಾಘಮಾಚರೇತ್ ॥ ೫೧ ॥

---

೪೭. ಎಲೈ ದೊರೆಯೇ ! ತೀರ್ಥದ ಪ್ರಸಂಗದಿಂದ ತೀರ್ಥದ ವಿಷಯವನ್ನು ಹೇಳಿದೆನು. ಇದೆಲ್ಲವೂ ಸ್ವರ್ಗಕ್ಕೆ ಸಾಧನವೂ ಮೋಕ್ಷಕ್ಕೆ ಕಾರಣವೂ ಆಗುತ್ತವೆ.

೪೮. ಈ ರೀತಿಯಾದ ನಿಯಮಗಳನ್ನು ಅನುಸರಿಸಿ ಮಾಘಮಾಸದಲ್ಲಿ ವ್ರತವನ್ನು ಮಾಡಬೇಕು. ಆ ರೀತಿಯಾದ ತೀರ್ಥಯಾತ್ರೆಗಳನ್ನು ಮಾಘಮಾಸದಲ್ಲಿ ಆಚರಿಸಬೇಕು.

೪೯-೫೧. ಮಾಘಸ್ನಾನ ಮಾಡುವವನು ಎಲ್ಲಿಡೆಯಲ್ಲಿಯೂ ಯಾವುದಾದರೂ ದಾನವನ್ನು ಮಾಡಬೇಕು. ಎಗಚಿ ಬಾಳೆಹಣ್ಣುಗಳು ನೆಲ್ಲಿಕಾಯಿ ತುಪ್ಪದಪಾತ್ರೆ ಎಳ್ಳಿನಪಾತ್ರೆ ತಾಂಬೂಲ ಅಕ್ಕಿ ಬೇಳೆ ಕುಂಬಳ ಕೃಸರವೆಂಬ ಸಂಯುಕ್ತಪದಾರ್ಥ ಈ ಒಂಬತ್ತು ಪದಾರ್ಥಗಳನ್ನು ಪ್ರತಿದಿನವೂ ಮಾಘಸ್ನಾನಮಾಡುವವನು ದಾನಮಾಡಬೇಕು. ಕೊನೆಗೆ ಯಾವ ರೀತಿಯಾದರೂ ಸರಿಯೇ. ಮಾಘಮಾಸವನ್ನು ವ್ಯರ್ಥವನ್ನಾಗಿ ಮಾಡಬಾರದು.

**ಕಿಂಚಿದಭ್ಯುದಿತೇ ಸೂರ್ಯೇ ಮಾಘಸ್ನಾನಂ ಸಮಾಚರೇತ್ ।**
**ಯಥಾಶಕ್ತಿ ಚ ನಿಯಮಾನ್ ಮಾಘಸ್ನಾಯೀ ಸಮಾಚರೇತ್ ॥ ೫೨ ॥**

**ಪಕ್ವಾನ್ನೈರ್ಭೋಜಯೇದ್ವಿಪ್ರಾನ್ ಯತೀಂದ್ರಾಂಶ್ಚ ವಿಶೇಷತಃ ।**
**ಲಡ್ಡುಕೈಃ ಫೇಣಿಕಾಭಿಶ್ಚ ವಟಕೇಂಡಿರಿಕಾರಿಭಿಃ । ॥ ೫೩ ॥**

**ಘೃತಪಕ್ವೈಸ್ಸಮರಿಚೈಃ ಶುದ್ಧಕರ್ಪೂರವಾಸಿತೈಃ ।**
**ಗರ್ಭೇ ಶರ್ಕರಯಾಪೂರ್ಣೈಃ ನೇತ್ರಾನಂದ್ಯೈಸ್ಸುಗಂಧಿಭಿಃ ॥ ೫೪ ॥**

**ಶುಷ್ಕೇಂಧನಾನಾಂ ಭಾರಾಂಶ್ಚ ದದ್ಯಾಚ್ಛೀತಾಪನುತ್ತಯೇ ।**
**ಕಂಚುಕಂ ತೂಲಗರ್ಭಂ ಚ ತೂಲಿಕಾಂ ಚೋಪವೀತಿಕಾಂ ॥ ೫೫ ॥**

**ಮಾಂಜಿಷ್ಠಂ ರಕ್ತವಾಸಾಂಸಿ ತಥಾ ತೂಲವತೀಂ ಪಟೀಂ ।**
**ಜಾತೀಫಲಲವಂಗೈಶ್ಚ ತಾಂಬೂಲಾನಿ ಬಹೂನ್ಯಪಿ ॥ ೫೬ ॥**

---

೫೨. ಸೂರ್ಯನು ಸ್ವಲ್ಪ ಹುಟ್ಟಿರುವಾಗ ಎಂದರೆ ಅರ್ಧೋದಯ ಕಾಲದಲ್ಲಿ ಸ್ನಾನವನ್ನು ಮಾಡಬೇಕು. ಆಗ ಶಕ್ತಿಗನುಗುಣವಾಗಿ ನಿಯಮಗಳನ್ನು ಮಾಘಸ್ನಾನ ಮಾಡುವವನು ಆಚರಿಸಬೇಕು.

೫೩-೫೪. ಒಳ್ಳೆಯ ಅನ್ನಾದಿಗಳಿಂದ ಬ್ರಾಹ್ಮಣರನ್ನು ಊಟಮಾಡಿಸಬೇಕು. ಯತಿಗಳಿಗೆ ಭೋಜನಮಾಡಿಸಿದರೆ ಬಹುವಾದ ಪುಣ್ಯವುಂಟು. ಲಾಡು ಫೇಣಿ ಒಡೆ ಗಾರಿಗೆ ಇವುಗಳನ್ನು ತುಪ್ಪದಲ್ಲಿ ಬೇಯಿಸಿ ಮೆಣಸನ್ನು ಹಾಕಿ ಕರ್ಪೂರದ ವಾಸನೆಯನ್ನು ಕೊಟ್ಟು ಅವುಗಳನ್ನು ಬಡಿಸಿ ತೃಪ್ತಿಪಡಿಸಬೇಕು. ಅಲ್ಲದೆ ಖರ್ಜಿಕಾಯಿಗಳನ್ನು ಮಾಡಿ ಅದರೊಳಗೆ ಸಕ್ಕರೆಯನ್ನು ತುಂಬಿ ನೋಡಲು ಚೆನ್ನಾಗಿರುವಂತೆ ಮಾಡಿ ಅದನ್ನು ಬಡಿಸಿ ತೃಪ್ತಿಪಡಿಸಬೇಕು.

೫೫-೫೬. ಮತ್ತು ಮೇಲೆ ಹೇಳಿದ ಪದಾರ್ಥಗಳನ್ನು ದೇವರಿಗೆ ನಿವೇದನ ಮಾಡಬೇಕು. ಒಣಗಿದ ಸೌದೆಯ ಹೊರೆಗಳನ್ನು ಚಳಿಯು ಹೋಗುವುದಕ್ಕೋಸ್ಕರ ದಾನಮಾಡಬೇಕು. ಒಳಕ್ಕೆ ಹತ್ತಿಯನ್ನು ಹಾಕಿ ಹೊಲೆದಿರುವ ಅಂಗಿಯನ್ನೂ ಹತ್ತಿಯ ಯಜ್ಞೋಪವೀತವನ್ನೂ ಮಂಜಿಷ್ಠೆಯ ಬಣ್ಣಹಾಕಿ ಕೆಂಪಗೆ ಮಾಡಿರುವ ಬಟ್ಟೆಗಳನ್ನೂ ಸಾಧಾರಣವಾದ ಹತ್ತಿಯ ಬಟ್ಟೆಗಳನ್ನೂ ದೇವರಿಗೆ ಅರ್ಪಿಸಬೇಕು. ಅಲ್ಲದೆ ಬ್ರಾಹ್ಮಣರಿಗೆ ದಾನ ಮಾಡಬೇಕು. ಜಾಜಿ ಲವಂಗದಿಂದ ಕೂಡಿದ ತಾಂಬೂಲವನ್ನು ಮಾಧವನಿಗೆ ಅರ್ಪಿಸಬೇಕು.

ಕಂಬಲಾನಿ ವಿಚಿತ್ರಾಣಿ ನಿರ್ವಾತಾನಿ ಗೃಹಾಣ್ಯಪಿ ।
ಮೃದುಲಾಃ ಪಾದರಕ್ಷಾಶ್ಚ ಸುಗಂಧ್ಯುದ್ವರ್ತನಾನಿ ಚ ॥ ೫೭ ॥

ಘೃತಕಂಬಲಪೂಜಾಭಿರ್ಮಾಘಸ್ನಾನಪುರಸ್ಸರಂ ।
ಕೃಷ್ಣಾಗರು ಪ್ರಭೃತಿಭಿಃ ಗೃಹಾಗಾರ ಪ್ರಧೂಪಿತೈಃ ॥ ೫೮ ॥

ಸ್ಥೂಲವತಿ ಪ್ರದೀಪೈಶ್ಚ ನೈವೇದ್ಯೈರ್ವಿವಿಧೈಸ್ತಥಾ ।
ಪೂಜಯೇನ್ಮಾಧವಂ ದೇವಂ ಮಾಘಸ್ನಾನಫಲಾಪ್ತಯೇ ॥ ೫೯ ॥

ದೋಷಾಃ ಪ್ರಶಮಮಾಯಾಂತಿ ಮಾಘಮಾಸನಿಮಜ್ಜನಾತ್ ।
ಅಹೋ ಪುಂಸಾಂ ಮಹಾಮೋಹಸಹೋ ಪುಂಸಾಂ ಪ್ರಮಾದತಾ ॥ ೬೦ ॥

ಮಾಘಮಾಸಮನಾದೃತ್ಯ ಯದನ್ಯತ್ರ ಕೃತಶ್ರಮಾಃ ।
ಇದಮೇವ ಹಿ ಮಂಗಲ್ಯಮಿದಮೇವ ಧನಾರ್ಜನಂ ॥ ೬೧ ॥

---

ಬ್ರಾಹ್ಮಣರಿಗೂ ಕೊಡಬೇಕು. ನಾನಾಬಗೆಯಾದ ಕಂಬಳಿಗಳನ್ನೂ ಗಾಳಿಯು ಹೆಚ್ಚಾಗಿ ತೊಂದರೆ ಕೊಡದ ಮನೆಗಳನ್ನೂ ಮೆತ್ತಗಿರುವ ಕೆರಗಳನ್ನೂ ವಾಸನೆಯಾಗಿರುವ ಮೈಗೆ ತೊಡೆದುಕೊಳ್ಳುವ ಗಂಧ ಮುಂತಾದುವನ್ನೂ ದೇವರಿಗೆ ಅರ್ಪಿಸಬೇಕು. ಬ್ರಾಹ್ಮಣರಿಗೂ ದಾನ ಮಾಡಬೇಕು.

೫೮-೫೯. ತುಪ್ಪದ ಪದಾರ್ಥಗಳಿಂದಲೂ ಕಂಬಳಿ ಮುಂತಾದ ಧರಿಸುವ ಪದಾರ್ಥಗಳಿಂದಲೂ ಕರಿಯ ಅಗುರು ಮುಂತಾದ ಧೂಪಗಳಿಂದ ಮನೆಯನ್ನು ಸುವಾಸನೆ ಮಾಡಿ ದೊಡ್ಡ ದೊಡ್ಡ ದೀಪಗಳನ್ನು ಹಚ್ಚಿ ನಾನಾ ಬಗೆಯಾದ ನೈವೇದ್ಯಗಳನ್ನು ಮಾಡಿ ಮಾಘ ಸ್ನಾನ ಮಾಡುತ್ತ ಮಾಧವನನ್ನು ಪೂಜಿಸಬೇಕು ಹೀಗೆ ಮಾಡಿದರೆ ಮಾಘಸ್ನಾನದ ಫಲವು ಬರುತ್ತದೆ.

೬೦-೬೧. ಮಾಘಮಾಸದಲ್ಲಿ ಸ್ನಾನಮಾಡುವುದರಿಂದ ದೋಷಗಳೆಲ್ಲವೂ ಹೋಗುತ್ತವೆ. ಮನುಷ್ಯರಿಗೆ ಇರುವ ಮಹಾ ಮೋಹವೂ ಅದರ ಪ್ರಮಾದವೂ ಅಸದೃಶವಾದುವು. ಆಶ್ಚರ್ಯವಾಗಿದೆ. ಎಲ್ಲಾ ಪಾಪಗಳನ್ನೂ ನಾಶಮಾಡುವ ಮಾಘಮಾಸವನ್ನು ಬಿಟ್ಟು ಬೇರೆಯ ವಿಷಯದಲ್ಲಿ ಶ್ರಮಪಡುವರಲ್ಲ! ಈ ಮಾಘಮಾಸದ ಸ್ನಾನವೇ ಮಂಗಳವಾದುದು. ಇದೇನೇ ಧನವನ್ನು ಕೊಡತಕ್ಕದ್ದು.

ಜೀವಿತಸ್ಯ ಫಲಂ ಚೈತದ್ಯನ್ಮಾಘೇ ಮಾಸಿ ಮಜ್ಜನಂ ।
ನ ಮಾಘಾತ್ಪರಮೋ ಧರ್ಮೋ ನಾರ್ಥೋ ಮಾಘಾತ್ಪರಸ್ತಥಾ ॥ ೬೨ ॥

ಮಾಘಾದನ್ಯೋ ನ ಕಾಮೋಽಸ್ತಿ ಮೋಕ್ಷೋ ಮಾಘಂ ವಿನಾ ನ ಹಿ ।
ಇದಮೇವ ಪರಾ ಹಾನಿರುಪಸರ್ಗೋಽಯಮೇವ ಹಿ ॥ ೬೩ ॥

ಅಭಾಗ್ಯಂ ಪರಮಂ ಚೈತನ್ಮಾಘಸ್ನಾನಂ ನ ಯಚ್ಚರೇತ್ ।
ಮಾಘಸ್ನಾನಂ ಮನುಷ್ಯಾಣಾಂ ಕಿಂ ಕಿಂ ನ ಕುರುತೇ ಬತ ।
ಪುತ್ರಮಿತ್ರಕಲತ್ರಾದಿ ರಾಜ್ಯ ಸ್ವರ್ಗಾಪವರ್ಗದಂ ॥ ೬೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಕಾಶೀ ಮಾಘಸ್ನಾನ ವಿಧಾನಂ ನಾಮ ಸಪ್ತತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೬೨-೬೪. ಮಾಘಮಾಸದಲ್ಲಿ ಸ್ನಾನಮಾಡುವುದೇ ಜೀವಿಸುವುದಕ್ಕೆ ಒಂದು ಫಲವು. ಮಾಘಮಾಸದ ಧರ್ಮಕ್ಕಿಂತಲೂ ಮತ್ತೊಂದು ಧರ್ಮವಿಲ್ಲ. ಮಾಘಕ್ಕಿಂತಲೂ ಬೇರೆಯಾದ ಧನವಿಲ್ಲ. ಮಾಘಕ್ಕಿಂತಲೂ ಬೇರೆಯಾದ ಕಾಮವಿಲ್ಲ. ಮಾಘಕ್ಕಿಂತಲೂ ಬೇರೆಯಾದ ಮೋಕ್ಷವಿಲ್ಲ. ಮಾಘಸ್ನಾನವನ್ನು ಮಾಡದಿದ್ದರೆ ಇದೇನೇ ಬಹುವಾದ ಹಾನಿಯು. ಇದೇನೇ ಬಹುವಾದ ತೊಂದರೆಯು. ಇದೇನೇ ಬಹುವಾದ ದೌರ್ಭಾಗ್ಯವು. ಮಾಘಸ್ನಾನವು ಮನುಷ್ಯರಿಗೆ ಏನೇನನ್ನು ಮಾಡುವುದಿಲ್ಲ! ಎಲ್ಲವನ್ನೂ ಕೊಡುತ್ತದೆ. ಪುತ್ರ ಮಿತ್ರ ಕಳತ್ರ ರಾಜ್ಯ ಸ್ವರ್ಗ ಮೋಕ್ಷ ಇವೇ ಮುಂತಾದುವನ್ನು ಕೊಡುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಕಾಶೀ ಮಾಘಸ್ನಾನ ವಿಧಾನ ಎಂಬ ಇನ್ನೂರ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾತ್ರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

ಪುರಾ ಕಶ್ಚಿದ್ದ್ವಿಜೋ ವಿದ್ವಾನ್ ಸುವ್ರತೋ ನಾಮ ಪಾಪಕೃತ್ ।
ಸ ಪಶ್ಚಾಚ್ಚರಮೇ ಭಾಗೇ ಪಶ್ಚಾತ್ತಾಪಸಮಾಕುಲಃ ॥ ೧ ॥

ನರ್ಮದಾಯಾಂ ಮಹಾನದ್ಯಾಂ ದಶಾಹಸ್ನಾನಮಾತ್ರತಃ ।
ಸಪ್ತಮನ್ವಂತರಂ ಸ್ವರ್ಗಮಧ್ಯುವಾಸ ಮಹದ್ಧಿರ್ವಾ ॥ ೨ ॥

ಪುನರ್ಭೂಮೌ ದ್ವಿಜೋ ಜಜ್ಞೇ ಪ್ರಯಾಗಂ ಪ್ರಾಪ್ಯ ಪುಣ್ಯಕೃತ್ ।
ಮಾಘಸ್ನಾನಂ ಚಕಾರೈಕಂ ಯಥಾವನ್ನಿಯಮಸ್ಥಿತಃ ॥ ೩ ॥

---

### ಇನ್ನೂರ ಮೂವತ್ತೆಂಟನೆಯ ಅಧ್ಯಾಯವು



೧-೨. ವಸಿಷ್ಠನು ಹೇಳಿದನು-ಪೂರ್ವದಲ್ಲಿ ಸುವ್ರತನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಬಹಳ ಪಾಪಿಯು. ಅವನು ಮುದುಕನಾದಮೇಲೆ ಬಹು ದುಃಖಪಡುತ್ತಾ ನರ್ಮದೆಯಲ್ಲಿ ಹತ್ತುದಿನಗಳು ಸ್ನಾನಮಾಡಿದನು. ಆ ಸ್ನಾನದ ಪ್ರಭಾವದಿಂದಲೇ ಅವನು ಏಳು ಮನ್ವಂತರಗಳವರೆಗೂ ಸ್ವರ್ಗದಲ್ಲಿ ಬಹುವಾದ ಅಟ್ಟಹಾಸದಿಂದಿದ್ದನು.

೩. ಮತ್ತೆ ಭೂಮಿಯಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಪುಣ್ಯವಿಶೇಷದಿಂದ ಪ್ರಯಾಗವನ್ನು ಹೊಂದಿದನು. ಅಲ್ಲಿ ಒಂದು ಮಾಘಸ್ನಾನವನ್ನು ನಿಯಮದಿಂದಲೂ ಶಾಸ್ತ್ರದಲ್ಲಿ ಹೇಳಿರುವಂತೆಯೂ ಮಾಡಿದನು.

ತೇನ ಬ್ರಹ್ಮ ಸಭಾಂ ಪ್ರಾಪ್ಯ ತತ್ರ ಕಲ್ಪಂ ವ್ಯವಸ್ಥಿತಃ ।
ಭೂಮ್ಯಾಂ ಪುನರ್ದ್ವಿಜೋ ಭೂತ್ವಾ ನಿಜಾನುಷ್ಠಾನತತ್ಪರಃ ॥ ೪ ॥

॥ ದಿಲೀಪ ಉವಾಚ ॥

ವಿಶೇಷಾತ್ಸುವ್ರತೋ ನಾಮ್ನಾ ವಿದ್ವಾನಪಿ ವಿಚಕ್ಷಣಃ ।
ಪಶ್ಚಾತ್ತಾಪಃ ಕಥಂ ತಸ್ಯ ಪಾಪಕರ್ಮರತಃ ಕಥಂ ।
ವಸಿಷ್ಠ ವದ ವಿಸ್ತಾರ ಶ್ರೋತುಂ ಕೌತುಹಲಂ ಹಿ ಮೇ ॥ ೫ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಸುವ್ರತಸ್ಯ ವಿಚೇಷ್ಟಿತಂ ।
ಶೃಣ್ವತಾಂ ಚೈವ ಮರ್ತ್ಯಾನಾಂ ಸದ್ಯಃ ಪಾಪಹರಂ ಶುಭಂ ॥ ೬ ॥

ಅಗ್ರಹಾರೋ ಮಹಾನಾಸೀದಕಲಂಕ ಇತಿ ಶ್ರುತಃ ।
ನರ್ಮದಾಯಾ ಸ್ತಟೇ ರಮ್ಯೇ ವೇದವಿದ್ಭಿರಧಿಷ್ಠಿತಃ ॥ ೭ ॥

---

೪. ಅದರ ಪುಣ್ಯದಿಂದ ಅವನು ಬ್ರಹ್ಮಸಭೆಗೆ ಹೋಗಿ ಅಲ್ಲಿ ಕಲ್ಪದವರೆಗೂ ಇದ್ದನು. ಮತ್ತೆ ಭೂಮಿಯಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಬ್ರಾಹ್ಮಣನ ಅನುಷ್ಠಾನಗಳನ್ನು ಮಾಡಿಕೊಂಡಿದ್ದು ಕಾಶಿಗೆ ಹೋಗಿ ವಿಶ್ವನಾಥಸ್ವಾಮಿಯ ಸನ್ನಿಧಿಯಲ್ಲಿ ಮರಣವನ್ನು ಹೊಂದಿದನು.

೫. ದಿಲೀಪನು ಹೇಳಿದನು-ಎಲೈ ವಸಿಷ್ಠನೇ ! ಸುವ್ರತನು ಹೆಸರಿನಿಂದಲೂ, ಯೋಗ್ಯನಾಗಿದ್ದಾನೆ. ತಿಳಿವಳಿಕೆಯುಳ್ಳ ವಿದ್ವಾಂಸನು. ವಿವೇಕವುಳ್ಳವನು, ಅವನಿಗೆ ಪಶ್ಚಾತ್ತಾಪವುಂಟಾಗಲು ಕಾರಣವೇನು ? ಪಾಪಕೆಲಸದಲ್ಲಿ ಆಸಕ್ತನಾದುದು ತಾನೇ ಹೇಗೆ ? ಇದನ್ನು ವಿಸ್ತಾರವಾಗಿ ಹೇಳು. ಕೇಳಬೇಕೆಂಬ ಆಸೆಯಿದೆ.

೬. ವಸಿಷ್ಠನು ಹೇಳಿದನು-ಎಲೈ ದೊರೆಯೇ ! ಸುವ್ರತನ ಕಥೆಯನ್ನು ಕೇಳಿದವರ ಪಾಪವು ನಾಶವಾಗಿ ಮಂಗಳವುಂಟಾಗುತ್ತದೆ.

೭-೮. ನರ್ಮದಾ ನದಿಯ ದಡದಲ್ಲಿ ಅಕಲಂಕವೆಂಬ ಹೆಸರುಳ್ಳ ಒಂದು ಅಗ್ರಹಾರವಿದ್ದಿತು. ಅದು ರಮ್ಯವಾಗಿದ್ದಿತು. ಅನೇಕ ಜನ ವೇದಬಲ್ಲವರು ಅಲ್ಲಿದ್ದರು. ಹುಲ್ಲು, ನೀರು, ಸೌದೆ, ಎಲೆ, ಸಮಿತ್ತು, ಹೂವು, ದರ್ಭೆ

ಕೃಣಕಾಷ್ಠೈಃ ಫಲೈಃ ಪರ್ಣೈಃ ಸಮಿತ್ಪುಷ್ಪಫಲೋದಕೈಃ ।
ಸಂಪೂರ್ಣಂ ಸರ್ವಸಸ್ಯೈಶ್ಚ ನಾನಾಧಾನ್ಯೈರ್ವಿಶೇಷತಃ ॥ ೮ ॥

ತಟಾಗಾರಾಮಸಂಪೂರ್ಣೈಃ ಸುಪುಷ್ಪೈರ್ಗೋಧನೈರಪಿ ।
ಆಹಿತಾಗ್ನಿಭಿರಸ್ಯಾಢ್ಯಃ ಪಂಚಯಜ್ಞಪರೈರ್ದ್ವಿಜೈಃ ॥ ೯ ॥

ಧಾರ್ಮಿಕೈಸ್ತ್ವಮಲೈರ್ವಿಪ್ರೈಃರ್ಧನಧಾನ್ಯೈಸಮಾಕುಲಃ ।
ವೇದಘೋಷೇಣ ಮಹತಾ ದಿಶೋ ಮುಖರಯತ್ಯಲಂ ॥ ೧೦ ॥

ತಸ್ಮಿನ್ನಭೂದ್ದ್ವಿಜವರಃ ಸುವ್ರತೋ ನಾಮ ಪಾರ್ಥಿವ ।
ಅಧ್ಯೈಷ್ಟ ವೇದಾನಖಿಲಾನ್ ವೇದ ವೇದಾರ್ಥನೇವ ಚ ॥ ೧೧ ॥

ಧರ್ಮಶಾಸ್ತ್ರಾರ್ಥಸಂಪನ್ನಃ ಪುರಾಣೇಷು ವಿಚಕ್ಷಣಃ ।
ಅಂಗಾನ್ಯಭ್ಯಸ್ಯ ತರ್ಕಾಂಶ್ಚ ಜ್ಯೋತಿಶ್ಶಾಸ್ತ್ರಂ ತಥೈವ ಚ ॥ ೧೨ ॥

---

ಇವೆಲ್ಲವೂ ಸಮೃದ್ಧಿಯಾಗಿ ಸಿಕ್ಕುತ್ತಿದ್ದಿತು. ಎಲ್ಲಾ ಸಸ್ಯಗಳೂ ಸಂಪೂರ್ಣವಾಗಿ ದ್ದುವು. ಬಗೆಬಗೆಯಾದ ಧಾನ್ಯಗಳು ಅಲ್ಲಿ ತುಂಬಿದ್ದುವು.

೯-೧೦. ಕೆರೆಕಟ್ಟೆಗಳೂ, ತೋಟಗಳೂ ಎಲ್ಲಾ ಕಡೆಯಲ್ಲಿಯೂ ಇದ್ದುವು. ಬಹುವಾದ ಗೋವುಗಳೂ ಇದ್ದುವು. ಅಗ್ನಿಹೋತ್ರವನ್ನು ಇಟ್ಟುಕೊಂಡಿದ್ದವರು ಅಲ್ಲಿ ಬಹು ಮಂದಿ ಇದ್ದರು. ಪಂಚಪಾಕಯಜ್ಞಗಳನ್ನು ಮಾಡಿಕೊಂಡು ಬಹು ಮಂದಿಯು ಅಲ್ಲಿದ್ದರು. ಅನೇಕ ಮಂದಿ ಧರ್ಮಿಷ್ಟರುಗಳಿಂದ ಆ ಊರು ತುಂಬಿದ್ದಿತು. ಧನಧಾನ್ಯಗಳು ಅಲ್ಲಿ ಬೇಕಾದಂತೆ ತುಂಬಿದ್ದಿತು. ಆ ಊರಿನಲ್ಲಿ ನಡೆಯುತ್ತಿದ್ದ ವೇದಘೋಷವು ದಿಕ್ಕೆಲ್ಲವನ್ನೂ ತುಂಬಿದ್ದಿತು.

೧೧-೧೨. ಅಂತಹ ಅಗ್ರಹಾರದಲ್ಲಿ ಸುವ್ರತನೆಂಬ ಒಬ್ಬ ಬ್ರಾಹ್ಮಣ ಶ್ರೇಷ್ಠನಿದ್ದನು. ಅವನು ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದ್ದನು. ವೇದಾರ್ಥವನ್ನು ಚೆನ್ನಾಗಿ ಬಲ್ಲನು. ಧರ್ಮಶಾಸ್ತ್ರದ ಅರ್ಥವನ್ನು ಚೆನ್ನಾಗಿ ತಿಳಿದಿರುವನು. ಪುರಾಣಗಳಲ್ಲಿ ಪಂಡಿತನು. ವೇದಾಂಗಗಳನ್ನು ಓದಿದ್ದನು. ತರ್ಕವನ್ನು ಅಭ್ಯಾಸ ಮಾಡಿದ್ದನು. ಜ್ಯೋತಿಶ್ಶಾಸ್ತ್ರವನ್ನು ತಿಳಿದಿದ್ದನು.

ಗಜಾಶ್ವಶಾಸ್ತ್ರಮಾಲೋಕ್ಯ ಚತುಷ್ಷಷ್ಟಿಕಲಾಸ್ತಥಾ ।
ಮಂತ್ರಶಾಸ್ತ್ರಂ ತಥಾ ಸಾಂಖ್ಯಂ ಯೋಗಶಾಸ್ತ್ರಂ ತಥೈವ ಚ　　॥ ೧೩ ॥

ನಾನಾದೇಶಲಿಪಿಶ್ಚೈವ ನಾನಾಭಾಷಾಸ್ತಥೈವ ಚ ।
ಧನಾರ್ಜನಾರ್ಥಮೇತಾನಿ ತೇನಾಧೀತಾನಿ ಸರ್ವಶಃ　　॥ ೧೪ ॥

ತತ್ತದ್ಗುರುಭ್ಯೋ ನ ಪ್ರಾದಾದ್ದಕ್ಷಿಣಾಂ ಲೋಭಮೋಹಿತಃ ।
ಅರ್ಜಯಾಮಾಸ ಕತಿಚಿದ್ಧನಾನ್ಯೇತೈರುಪಾಯವಿತ್　　॥ ೧೫ ॥

ಅನ್ಯಾಯತೋಽಪಿ ಲುಬ್ಧಾತ್ಮಾ ಕರೋತಿ ಸ್ಮ ಧನಾರ್ಜನಂ ।
ಅಪಣ್ಯವಿಕ್ರಯಂ ಚಕ್ರೇ ತಥಾಚಾರಾಣ್ಯವಿಕ್ರಯಂ　　॥ ೧೬ ॥

ಚಂಡಾಲಾದ್ಯೈರಪಿ ತಥಾ ಪ್ರತಿಗ್ರಹಪರೋಽಭವಂ ।
ಕನ್ಯಕಾವಿಕ್ರಯಂ ಚಕ್ರೇ ತಥಾ ಗೋಗಣವಿಕ್ರಯಂ　　॥ ೧೭ ॥

---

೧೩. ಗಜಶಾಸ್ತ್ರ, ಅಶ್ವಶಾಸ್ತ್ರಗಳನ್ನೂ ಬಲ್ಲವನಾಗಿದ್ದನು. ಅರವತ್ತು ನಾಲ್ಕು ಕಲೆಗಳನ್ನೂ ಅಭ್ಯಾಸ ಮಾಡಿದ್ದನು. ಮಂತ್ರಶಾಸ್ತ್ರ, ಸಾಂಖ್ಯ, ಯೋಗ ಶಾಸ್ತ್ರಗಳನ್ನೂ ಇತರ ಕಲೆಗಳನ್ನೂ ಅಭ್ಯಾಸ ಮಾಡಿದ್ದನು.

೧೪. ಅನೇಕ ದೇಶಭಾಷೆಗಳನ್ನೂ ಅವುಗಳ ಅಕ್ಷರಗಳನ್ನೂ ಬಲ್ಲವನಾಗಿದ್ದನು. ಇವೆಲ್ಲವನ್ನೂ ಹಣವನ್ನು ಸಂಪಾದಿಸಲು ತಿಳಿದುಕೊಂಡಿದ್ದನು.

೧೫. ಲೋಭಕ್ಕೆ ಬಳಗಾಗಿ ಈ ವಿದ್ಯೆಗಳನ್ನು ಹೇಳಿಕೊಟ್ಟ ಗುರುಗಳೊಬ್ಬರಿಗೂ ಗುರುದಕ್ಷಿಣೆಯನ್ನು ಕೊಡಲೇ ಇಲ್ಲ. ಈ ಶಾಸ್ತ್ರಗಳೆಲ್ಲವನ್ನೂ ಓದಿದ್ದುದರಿಂದ ಉಪಾಯಗಳನ್ನು ತಿಳಿದು ಬಹುವಾದ ಹಣವನ್ನು ಸಂಪಾದಿಸಿದ್ದನು.

೧೬-೧೭. ಆ ಲೋಭಿಯು ಅನ್ಯಾಯದಿಂದ ಹಣವನ್ನು ಸಂಪಾದಿಸಿದನು. ಮಾರಬಾರದುದನ್ನೆಲ್ಲಾ ಮಾರಿದನು ಆಚಾರಗಳನ್ನು ಯಾರಿಗೂ ಹೇಳಿಕೊಡಲೇ ಇಲ್ಲ. ಚಂಡಾಲರಿಂದಲೂ ಕೂಡ ದಾನವನ್ನು ತೆಗೆದುಕೊಳ್ಳುತ್ತಿದ್ದನು. ಕನ್ನಿಕೆಯರನ್ನು ಮಾರಿದನು. ಗೋವುಗಳನ್ನು ಮಾರಿದನು.

ತಿಲಾನಾಂ ವಿಕ್ರಯಂ ಚಕ್ರೇ ತಂಡುಲಾನಾಂ ಚ ವಿಕ್ರಯಂ ।
ರಸಾನಾಂ ವಿಕ್ರಯಂ ಚಕ್ರೇ ತೈಲವಿಕ್ರಯಮೇವ ಚ ॥ ೧೮ ॥

ಪರಾರ್ಥೇ ತೀರ್ಥಗಮನಂ ಪರಾರ್ಥೇ ದೇವತಾರ್ಚನಂ ।
ಭೃತಕಾಧ್ಯಾಪನಂ ಚಕ್ರೇ ಭೋಜನಂ ಪರವೇಶ್ಮನಿ ॥ ೧೯ ॥

ಲವಣಕ್ಷೀರಪಾನೀಯದಧಿಪಕ್ವಾನ್ನವಿಕ್ರಯಂ ।
ಇತ್ಯಾದಿಭಿರ್ಬಹೂಪಾಯೈರ್ಧನಂ ಸಂಪಾದ್ಯ ಯತ್ನತಃ ॥ ೨೦ ॥

ನಿತ್ಯನೈಮಿತ್ತಿಕಂ ತ್ಯಕ್ತ್ವಾ ನ ಭುಂಕ್ತೇ ನ ದದಾತಿ ಚ ।
ಸ್ವಧನಂ ಗಣಯಾಮಾಸ ಕಿಯತ್ ಸ್ಯಾದಿತಿ ಕರ್ಹಿಚಿತ್ ॥ ೨೧ ॥

ಸಹಸ್ರಶತನಿಷ್ಕಂ ತು ತೇನಾರ್ಜಿತಮಭೂದ್ಧನಂ ।
ಏವಂ ಧನಾರ್ಜನಪರೋ ಜರಯಾ ಜರ್ಜರೀಕೃತಃ ॥ ೨೨ ॥

---

೧೮-೨೦. ಎಳ್ಳನ್ನು ಮಾರಿದನು. ಅಕ್ಕಿಯನ್ನು ಮಾರಿದನು. ಮತ್ತೊಬ್ಬರಿಗೋಸ್ಕರ ತೀರ್ಥಯಾತ್ರೆಯನ್ನು ಮಾಡುತ್ತಿದ್ದನು. ರಸಗಳನ್ನು ಮಾರುತ್ತಿದ್ದನು. ಎಣ್ಣೆಯನ್ನು ಮಾರುತ್ತಿದ್ದನು. ಪರರಿಗೋಸ್ಕರ ದೇವರ ಪೂಜೆಯನ್ನು ಮಾಡುತ್ತಿದ್ದನು. ಹಣವನ್ನು ತೆಗೆದುಕೊಂಡು ವೇದವನ್ನು ಹೇಳಿ ಕೊಡುತ್ತಿದ್ದನು. ಯಾವಾಗಲೂ ಪರರಮನೆಯಲ್ಲಿ ಪರಾನ್ನವನ್ನೇ ಊಟ ಮಾಡುತ್ತಿದ್ದನು. ಉಪ್ಪು, ಹಾಲು, ಪಾನೀಯಗಳು, ಮೊಸರು, ಬೇಯಿಸಿದ ಅನ್ನ ಇವನ್ನು ಮಾರುತ್ತಿದ್ದನು. ಇವೇ ಮುಂತಾದ ಅನೇಕ ಉಪಾಯಗಳಿಂದ ಬಹುವಾದ ಹಣವನ್ನು ಸಂಪಾದಿಸಿದನು.

೨೧-೨೨. ನಿತ್ಯವಾದ ಸಂಧ್ಯಾವಂದನಾದಿಗಳು, ನೈಮಿತ್ತಿಕವಾದ ಶ್ರಾದ್ಧ ತರ್ಪಣಾದಿಗಳು, ಹಬ್ಬಗಳು, ಇವನ್ನು ಬಿಟ್ಟುಬಿಟ್ಟನು. ಆ ತನ್ನ ಹಣವನ್ನು ತಾನು ಅನುಭವಿಸಲೂ ಇಲ್ಲ. ಮತ್ತೊಬ್ಬರಿಗೆ ದಾನ ಮಾಡಲೂ ಇಲ್ಲ. ದಿನವೂ ತನ್ನ ಹಣವೆಷ್ಟಾಯಿತೆಂದು ಎಣಿಸುವನು. ಹಾಗೆ ಎಣಿಸುತ್ತಿರಲು ಕೊನೆಗೆ ಸಾವಿರ ನಿಷ್ಕಗಳಾಗಿದ್ದುವು. ಹೀಗೆ ಸಂಪಾದಿಸುತ್ತಿರಲು ಅಷ್ಟರಲ್ಲಿಯೇ ಅವನಿಗೂ ಮುಪ್ಪು ಬಂದಿತು.

ಅಸ್ಯೇಂದ್ರಿಯಾಣಿ ಸರ್ವಾಣಿ ಮಂದೀಭೂತಾನಿ ಕಾಲತಃ ।
ಅಶಕ್ತಃ ಪುನರುತ್ಥಾನಗಮನಾಗಮನೇಷು ಚ　　|| ೨೩ ||

ಪುನರರ್ಥಾರ್ಜನಾಭಾವಾತ್ ಸದಾರೋತೀವ ದುಃಖಿತಃ ।
ಏವಮಾತುರಚಿತ್ತಸ್ಯ ವಿವೇಕಃ ಕಶ್ಚಿದುದ್ಬಭೌ　　|| ೨೪ ||

|| ಸುವ್ರತೋವಾಚ ||

ಅಸತ್ಪ್ರತಿಗ್ರಹೈಶ್ಚೈತದಪಣ್ಯಾನಾಂ ಚ ವಿಕ್ರಯಾತ್ ।
ಮಯಾತಪೋವಿಕ್ರಯಾದ್ಯೈರೇವಂ ಧನಮುಪಾರ್ಜಿತಂ　　|| ೨೫ ||

ಅದ್ಯಾಪಿ ಶಾನ್ತಿರ್ನೋತ್ಪನ್ನಾ ಮಮ ತೃಷ್ಣಾತಿದುಸ್ಸಹಾ ।
ಮೇರುತುಲ್ಯಸುವರ್ಣಾನಿ ಹ್ಯಸಂಖ್ಯಾತಾನಿ ವಾಂಛತಿ　　|| ೨೬ ||

ಅಹೋ ಮನೋ ಮಹಾಕಷ್ಟಂ ಸಮಸ್ತಕ್ಲೇಶಕಾರಣಂ ।
ಸರ್ವಾನ್ಕಾಮಾನವಾಪ್ಯಾಪಿ ಪುನರನ್ಯಾಂಶ್ಚ ಕಾಂಕ್ಷತಿ　　|| ೨೭ ||

---

೨೩-೨೪. ಇವನ ದೇಹವು ಸಡಿಲವಾಯಿತು. ಇಂದ್ರಿಯಗಳಲ್ಲಿ ಪಾಟವವು ಕಡಿಮೆಯಾಯಿತು. ಸಂಚಾರ ಮಾಡುವುದಕ್ಕಾಗಲಿ, ಎದ್ದು ಕೂರುವುದಕ್ಕಾಗಲಿ ಅಶಕ್ತನಾದನು. ಆಗ ಹಣವನ್ನು ಸಂಪಾದಿಸಲು ಆಗದಿದ್ದುದರಿಂದ ಅವನೂ, ಅವನ ಹೆಂಡತಿಯೂ ಬಹು ದುಃಖಗೊಂಡರು. ಈ ರೀತಿಯಾಗಿ ಯೋಚನಾಪರನಾದ ಅವನಿಗೆ ಒಂದು ವಿವೇಕವು ಹುಟ್ಟಿತು.

೨೫. ಸುವ್ರತನು ಹೇಳಿದನು–ದಾನ ತೆಗೆದುಕೊಳ್ಳಬಾರದುದನ್ನು ತೆಗೆದುಕೊಂಡೆನು. ಅಯೋಗ್ಯರಿಂದಲೂ ದಾನ ತೆಗೆದುಕೊಂಡೆನು. ಮಾರಬಾರದುದನ್ನು ಮಾರಿದೆನು. ತಪಸ್ಸನ್ನು ಮಾರಿದೆನು. ಇಂತಹ ಕೆಟ್ಟ ಕೆಲಸಗಳನ್ನು ಮಾಡಿ ಹಣವನ್ನು ನಾನು ಸಂಪಾದಿಸಿದೆನು.

೨೬-೨೭. ನನಗೆ ಈಗಲೂ ಕೂಡ ಶಾನ್ತಿಯೇ ಹುಟ್ಟಲಿಲ್ಲ. ಆಸೆಯು ಬಹು ಹೆಚ್ಚಾಗಿದೆ. ನನ್ನ ಮನಸ್ಸು ಮೇರುವಿನಷ್ಟು ದಪ್ಪವಾಗಿರುವ ಚಿನ್ನವನ್ನು ಅಪೇಕ್ಷಿಸುತ್ತದೆ. ಇದು ಬಹು ಕಷ್ಟವಾಗಿದೆ ಏನುಮಾಡಲಿ ? ಆಶೆಯೇ ಕಷ್ಟಕ್ಕೆಲ್ಲಾ ಕಾರಣವಾಗಿದೆ. ಬೇಕಾದುವುಗಳೆಲ್ಲವನ್ನೂ ಹೊಂದಿದ್ದರೂ ಮತ್ತೂ ಬೇಕು ಎನ್ನುತ್ತಾ ಇರುತ್ತದೆ.

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।
ಚಕ್ಷುಃ ಶ್ರೋತ್ರೇ ಚ ಜೀರ್ಯೇತೇ ತೃಷ್ಣೈಕಾ ತರುಣಾಯತೇ ॥ ೨೮ ॥

ಮಮೇಂದ್ರಿಯಾಣಿ ಸರ್ವಾಣಿ ಮಂದಭಾವಂ ವ್ರಜಂತಿ ಹಿ ।
ಬಲಂ ಹೃತಂ ಚ ಜರಸಾ ತೃಷ್ಣಾ ತರುಣತಾಂ ಗತಾ ॥ ೨೯ ॥

ಕಷ್ಟಾಶಾ ವರ್ತತೇ ಯಸ್ಯ ಸ ವಿದ್ವಾನಪ್ಯಪಂಡಿತಃ ।
ಸ ಚಾಶಾಂತಃ ಪ್ರಮನ್ಯುಸ್ಸ್ಯಾತ್ ಧೀಮಾನಪ್ಯತಿಮೂಢಧೀಃ ॥ ೩೦ ॥

ಆಶಾ ಭಂಗಕರೀ ಪುಂಸಾಮಾಶಾ ಜ್ಞೇಯಾಗ್ನಿಸನ್ನಿಭಾ ।
ತಸ್ಮಾದಾಶಾಂ ತ್ಯಜೇತ್ಪ್ರಾಜ್ಞೋ ಯ ಇಚ್ಛೇಚ್ಛಾಶ್ವತಂ ಪದಂ ॥ ೩೧ ॥

---

೨೮. ಮುದುಕನಾಗುತ್ತಿರುವವನಿಗೆ ಮೈಯ್ಯೆಲ್ಲವೂ ಗಳಿತವಾಗುತ್ತಿರುವಾಗ ತಲೆ ಕೂದಲುಗಳು ಮುದಿಯಾಗುತ್ತವೆ. ಹಲ್ಲು ಅಲ್ಲಾಡುತ್ತದೆ. ಕಿವಿ, ಕಣ್ಣುಗಳ ಪಾಟವವು ಕಡಿಮೆಯಾಗುತ್ತದೆ. ಆಸೆಯೊಂದು ಮಾತ್ರ ಯೌವನವನ್ನು ಹೊಂದಿರುತ್ತದೆ.

೨೯. ನನ್ನ ಇಂದ್ರಿಯಗಳೆಲ್ಲವೂ, ತಮ್ಮ ತಮ್ಮ ಕೆಲಸಗಳಲ್ಲಿ ಪಾಟವನ್ನು ಬಿಡುತ್ತ ಬಂದಿವೆ. ಮುಪ್ಪಿನಿಂದ ಶರೀರದಲ್ಲಿ ಬಲವೇ ಕಡಿಮೆಯಾಯಿತು. ಆಸೆ ಮಾತ್ರ ಯೌವನವನ್ನು ಹೊಂದುತ್ತಿದೆ.

೩೦. ಯಾವನಿಗೆ ಈ ಆಶೆಯಿರುತ್ತದೆಯೋ ಅವನು ವಿದ್ವಾಂಸನಾದರೂ ದಡ್ಡನೇ. ಶಾಂತಿಯೇ ಇಲ್ಲದೆ ಕೋಪಿಯಾಗುತ್ತಾನೆ. ಬುದ್ಧಿವಂತನಾದರೂ ದಡ್ಡನೆನಿಸಿಕೊಳ್ಳುತ್ತಾನೆ.

೩೧. ಆಶೆಯೇ ಮನುಷ್ಯನಿಗೆ ಎಲ್ಲದಕ್ಕೂ ಭಂಗವನ್ನುಂಟು ಮಾಡುತ್ತದೆ. ಆಶೆಯು ಅಗ್ನಿಗೆ ಸಮವಾದುದು. ಆದ್ದರಿಂದ ಯಾವನು ಶಾಶ್ವತವಾದ ಮೋಕ್ಷವನ್ನು ಅಪೇಕ್ಷಿಸುತ್ತಾನೆಯೋ ಅವನು ಆಸೆಯನ್ನು ಬಿಟ್ಟುಬಿಡಬೇಕು.

ಬಲಂ ತೇಜೋ ಯಶಶ್ಚೈವ ವಿದ್ಯಾಂ ಮಾನಮಪಿ ಶ್ರುತಂ ।
ತಥೈವ ಸತ್ಕುಲೇ ಜನ್ಮ ಹ್ಯಾಶಾ ಹಂತ್ಯತಿವೇಗತಃ ॥ ೩೨ ॥

ನೃಣಾಮಾಶಾಭಿಭೂತಾನಾಮಾಶ್ಚರ್ಯಮಿದಮುಚ್ಯತೇ ।
ಕಿಂಚಿದ್ದತ್ವಾಪಿ ಚಾಂಡಾಲಃ ಸ್ವಾತ್ಮನ್ಯಧಿಕತಾಂ ಗತಃ ॥ ೩೩ ॥

ಆಶಾಭಿಭೂತಾ ಯೇ ಮರ್ತ್ಯಾ ಮಹಾಮೋಹಾಸಮುದ್ಧತಾಃ ।
ಅವಮಾನಾದಿಕಂ ದುಃಖಂ ನ ಜಾನಂತ್ಯಲ್ಪಮಪ್ಯಹೋ ॥ ೩೪ ॥

ಮಯಾಪ್ಯೇವಂ ಬಹುಕ್ಲೇಶೈರೇತದ್ಧನಮುಪಾರ್ಜಿತಂ ।
ಶರೀರಮಪಿ ಜೀರ್ಣಂ ಚ ಜರಸಾಪಹೃತಂ ಬಲಂ ॥ ೩೫ ॥

ಇತಃ ಪರಂ ಯತಿಷ್ಯಾಮಿ ಪರಲೋಕಾರ್ಥಮಾದರಾತ್ ॥ ೩೬ ॥

---

೩೨. ಆಸೆಯೆಂಬುದು ಬಲವನ್ನೂ, ಯಶಸ್ಸನ್ನೂ ನಾಶಮಾಡುತ್ತದೆ. ವಿದ್ಯೆಯನ್ನೂ ಜ್ಞಾನವನ್ನೂ ಶೋಭಿಸದಂತೆ ಮಾಡುತ್ತದೆ. ಸತ್ಕುಲದಲ್ಲಿ ಹುಟ್ಟಿದ್ದರೂ ಅದನ್ನು ಪ್ರಕಾಶಿಸದಂತೆ ಮಾಡುತ್ತದೆ. ಆಸೆಯು ಬಹು ಬೇಗನೆ ಮನುಷ್ಯನನ್ನು ಕೊಲ್ಲುತ್ತದೆ.

೩೩. ಆಶೆಯಿಂದ ಕೂಡಿದವರಲ್ಲಿ ಇವುಗಳು ದೊಡ್ಡ ಆಶ್ಚರ್ಯವಾಗಿರುತ್ತವೆ ಮತ್ತು ಆಸೆಯುಳ್ಳವರಿಗೆ ಚಂಡಾಲನು ಸ್ವಲ್ಪವನ್ನು ಕೊಟ್ಟು ತಾನು ಅವರಿಗಿಂತಲೂ ಹೆಚ್ಚಿನವನಾಗುತ್ತಾನೆ.

೩೪. ಆಶೆಯಿಂದ ಕೂಡಿದ ಜನರು ಮಹಾಮೋಹದಿಂದ ಕೂಡಿದವರಾಗಿ ಗರ್ವವನ್ನು ಹೊಂದಿ ಅವಮಾನವೇ ಮುಂತಾದುವನ್ನು ಹೊಂದಿದರೂ ಅವನ್ನು ಲಕ್ಷಿಸುವುದೇ ಇಲ್ಲ. ಇದು ಬಹು ಆಶ್ಚರ್ಯವು.

೩೫–೩೬. ನಾನು ಬಹು ಕಷ್ಟಪಟ್ಟು ಈ ಹಣವನ್ನು ಸಂಪಾದಿಸಿದ್ದೇನೆ. ನನ್ನ ಶರೀರವು ಗಳಿತವಾಯಿತು. ಮುಪ್ಪಿನಿಂದ ಬಲವೂ ಕುಗ್ಗಿತು. ಇನ್ನು ಮೇಲಾದರೂ ಪರಲೋಕದಲ್ಲಿ ಸೌಖ್ಯವನ್ನು ಹೊಂದಲು ಪ್ರೀತಿಪೂರ್ವಕವಾಗಿ ಪ್ರಯತ್ನಿಸುತ್ತೇನೆ.

॥ ವಸಿಷ್ಠ ಉವಾಚ ॥

ಏವಂ ನಿಶ್ಚಿತ್ಯ ವಿಪ್ರೇಸ್ಮಿನ್ ಧರ್ಮಮಾರ್ಗೋನ್ಮುಖೇ ಸತಿ ।
ತಸ್ಯಾಮೇವ ರಜನ್ಯಾಂ ತು ಚೋರಾಃ ಕೇಚನ ತದ್ಗೃಹೇ ॥ ೩೭ ॥

ಯಥಾಪೂರ್ವಂ ಗೃಹಸ್ಯೈವ ವಸ್ತ್ರಂ ರತ್ನಾದಿಕಂ ವಸು ।
ಕಾಂಸ್ಯಾದಿಕಂ ಚ ತತ್ಸರ್ವಮುಪಾಹರಣತತ್ಪರಾಃ ॥ ೩೮ ॥

ನಿರ್ಬಂಧಯಿತ್ವಾ ಬಹುಧಾ ಮಧ್ಯರಾತ್ರೇ ದ್ವಿಜಂ ತು ತೇ ।
ಅಪಹೃತ್ಯ ಧನಂ ಸರ್ವಮಗಚ್ಛನ್ನಾತತಾಯಿನಃ ।
ಚೋರೈರಪಹೃತದ್ರವ್ಯೋ ವಿಲಲಾಪಾರಿದಾರುಣಂ ॥ ೩೯ ॥

॥ ಸುವ್ರತ ಉವಾಚ ॥

ನ ಧರ್ಮಾರ್ಥಂ ನ ಕಾಮಾರ್ಥಂ ನ ಮೋಕ್ಷಾರ್ಥಂ ಧನಾರ್ಜನಂ ।
ನ ಭುಕ್ತಂ ನ ಮಯಾ ದತ್ತಂ ಕಿಮರ್ಥಂ ಧನಮಾರ್ಜಿತಂ ॥ ೪೦ ॥

---

೩೭-೩೯. ವಸಿಷ್ಠನು ಹೇಳಿದನು—ಆ ಬ್ರಾಹ್ಮಣನು ಈ ರೀತಿಯಾಗಿ ಯೋಚಿಸುತ್ತ ಧರ್ಮಮಾರ್ಗದಲ್ಲಿ ಕಾಲಿಡಲು ಯೋಚಿಸುತ್ತಾ ಇದ್ದಂತೆಯೇ ಅದೇ ದಿನ ರಾತ್ರಿಯಲ್ಲಿ ಅವನ ಮನೆಗೆ ಕಳ್ಳರು ನುಗ್ಗಿದರು. ಅವನನ್ನು ಕೊಲ್ಲಲು ಪ್ರಯತ್ನಿಸಿ ನಿರ್ಬಂಧಪಡಿಸುತ್ತ ಅವನ ಮನೆಯಲ್ಲಿದ್ದ ಬಟ್ಟೆ, ಬರೆ, ಒಡವೆ, ಕಂಚು, ಹಿತ್ತಾಳೆಯ ಪಾತ್ರೆಗಳು ಎಲ್ಲವನ್ನೂ ತೆಗೆದುಕೊಂಡು ಹೋದರು. ಮಧ್ಯರಾತ್ರಿಯಲ್ಲಿ ಈ ರೀತಿಯಾಗಿ ಎಲ್ಲವೂ ನಡೆಯಲು ಅವನು ಪದಾರ್ಥಗಳು ಕಳವು ಆದುದನ್ನು ನೋಡಿ ಬಹುವಾಗಿ ದುಃಖಪಟ್ಟನು.

೪೦. ಸುವ್ರತನು ಹೇಳಿದನು-ನಾನು ಸಂಪಾದಿಸಿದ ಹಣವು ಧರ್ಮಕ್ಕಾಗಲೀ, ಕಾಮಕ್ಕಾಗಲೀ, ಮೋಕ್ಷಕ್ಕಾಗಲೀ, ವ್ಯಯವಾಗಲಿಲ್ಲ. ನಾನೂ ತಿನ್ನಲಿಲ್ಲ. ದಾನ ಮಾಡಲೂ ಇಲ್ಲ. ಈ ಹಣವನ್ನು ಏತಕ್ಕೋಸ್ಕರ ಸಂಪಾದಿಸಿದೆನು ?

**ವಂಚಯಿತ್ವಾ ತಥಾತ್ಮಾನಂ ಹಾ ಹಾ ಕಿಂನು ಮಯಾ ಕೃತಂ ।**
**ಪ್ರತಿಗೃಹೀತಂ ಸರ್ವತ್ರ ವಿಕ್ರೀತಂ ಮದ್ಯಮೇವ ಹಿ ॥ ೪೧ ॥**

**ಏಕಾ ಗೌರ್ನ ಪ್ರತಿಗ್ರಾಹ್ಯಾ ದ್ವಿತೀಯಾ ನ ಕದಾಚನ ।**
**ಸಾ ಚೇದ್ವಿಕ್ರಯಮಾಪನ್ನಾ ದಹತ್ಯಾಸಪ್ತಮಂ ಕುಲಂ ॥ ೪೨ ॥**

**ಇತಿ ಜಾನನ್ನಹಂ ಲೋಭಾದೇವಂ ಪಾಪಮಕಾರಿಷಂ ।**
**ಕ್ಲೇಶೇನ ಮಹತಾ ಗತ್ವಾ ದೇಶಾದ್ದೇಶಾನ್ತರಂ ಬಹು ॥ ೪೩ ॥**

**ಕ್ಷಣಾದಪಹೃತಂ ಸರ್ವಂ ಹಾ ಹಾ ಕಿನ್ನು ಮಯಾ ಕೃತಂ ।**
**ಧನಾರ್ಜನಾವೇಶವಶಾದೇಕಸ್ಮಿನ್ನಪಿ ವಾಸರೇ ॥ ೪೪ ॥**

**ಸಮಾಹಿತಧಿಯಾ ಸಮ್ಯಕ್ ಸಂಧ್ಯಾ ನೋಪಾಸಿತಾ ಮಯಾ ।**
**ಅಗರ್ಭೋ ವಾ ಸಗರ್ಭೋ ವಾ ಪ್ರಾಣಾಯಾಮೋಽಪಿ ನೋ ಕೃತಃ ॥ ೪೫ ॥**

---

೪೧. ಆತ್ಮವನ್ನು ವಂಚಿಸಿ ಸಂಪಾದಿಸಿದೆನಲ್ಲ ! ಅಯ್ಯೋ ಎಂತಹ ಕೆಲಸವನ್ನು ಮಾಡಿದೆನು ? ಯೋಗ್ಯರು, ಅಯೋಗ್ಯರುಗಳನ್ನು ನೋಡದೆ ಎಲ್ಲರಲ್ಲಿಯೂ ದಾನವನ್ನು ತೆಗೆದುಕೊಂಡೆನಲ್ಲಾ ! ಹೆಂಡವನ್ನು ಕೂಡ ಮಾರಿದೆನಲ್ಲಾ !

೪೨. ಒಂದು ಹಸುವನ್ನೇ ದಾನ ತೆಗೆದುಕೊಳ್ಳಬಾರದು. ಆದರೂ ಚಿಂತೆಯಿಲ್ಲ. ಎರಡನೆಯದನ್ನಂತೂ ತೆಗೆದುಕೊಳ್ಳಲೇ ಬಾರದು. ಅದನ್ನು ಮಾರಿದರಂತೂ ಏಳು ತಲೆಗಳನ್ನು ನಾಶಮಾಡುತ್ತದೆ.

೪೩. ಈ ರೀತಿಯಾಗಿ ನಾನು ತಿಳಿದಿದ್ದರೂ ಆಸೆಯಿಂದ ಪಾಪಕೆಲಸವನ್ನು ಮಾಡಿದೆನು. ಬಹು ಕಷ್ಟಪಟ್ಟು ದೂರದೇಶಗಳಿಗೆಲ್ಲವೂ ಹೋಗಿ ಬಹು ಶ್ರಮದಿಂದ ಈ ಹಣವೆಲ್ಲವನ್ನೂ ಸಂಪಾದಿಸಿದ್ದೆನು.

೪೪-೪೫ ಆ ಹಣವೆಲ್ಲವೂ ಒಂದು ಕ್ಷಣಕಾಲದಲ್ಲಿ ಕದಿಯಲ್ಪಟ್ಟಿತು. ನಾನು ಎಂತಹ ಪಾಪಕೆಲಸವನ್ನು ಮಾಡಿದೆನು ! ಈ ಹಣವನ್ನು ಸಂಪಾದಿಸುವ ಭರದಲ್ಲಿದ್ದುಕೊಂಡು ಒಂದು ದಿನವೂ ಕೂಡ ಸರಿಯಾದ ಮನಸ್ಸಿನಿಂದ ಸಂಧ್ಯಾವಂದನೆಯನ್ನು ಮಾಡಲಿಲ್ಲ. ಅಗರ್ಭವಾದುದಾಗಲೀ, ಸಗರ್ಭವಾದುದಾಗಲೀ ಪ್ರಾಣಾಯಾಮವನ್ನು ಮಾಡಲೇ ಇಲ್ಲ.

ತ್ರಿಃ ಪೀತ್ವಾ ದ್ವಿರುಪಸ್ಪೃಶ್ಯ ಸಮ್ಯಗಾಚಮನಂ ಕೃತಂ ।
ವಾಚಿಕೋಪಾಂಶುಮನನೈರತ್ವ ತಚ್ಛಿಸಯಾದ್ ತತ್ ತ || ೪೬ ||

ತಪವಿತ್ರೇಣ ಹಸ್ತೇನ ನ ಕೃತಸ್ತ್ರಿಪಾಜಪಃ ।
ನಾರಾಧಿತೋ ಮಹಾದೇವಃ ಪಶುಪಾಶವಿಮೋಚಕಃ || ೪೭ ||

ಅಮಂತ್ರಂ ವಾ ಸಮಂತ್ರಂ ವಾ ಲಿಂಗಸ್ಯೋಪರಿ ನಿಕ್ಷಿಪೇತ್ ।
ಪತ್ರಂ ವಾ ಪುಷ್ಪಮೇಕಂ ವಾ ಕುಲಕೋಟೀಸ್ಸಮುದ್ಧರೇತ್ || ೪೮ ||

ನ ಮಯಾ ತೋಷಿತೋ ವಿಷ್ಣುಃ ಸರ್ವಪಾಪಪ್ರಣಾಶಕಃ ।
ಸರ್ವಕಾಮಪ್ರದೋ ನೈವ ವಿಘ್ನರಾಜೋ ಮಯಾರ್ಚಿತಃ || ೪೯ ||

---

೪೬-೪೭. ಮೂರು ಬಾರಿ ನೀರನ್ನು ಕುಡಿದು ಎರಡು ಸಾರಿ ಮುಟ್ಟಿಕೊಂಡು ಆಚಮನವನ್ನು ಒಂದು ಸಾರಿಯೂ ಮಾಡಲೇ ಇಲ್ಲ. (ವಾಚಿಕ ಗಟ್ಟಿಯಾಗಿ ಹೇಳುವುದು. ಉಪಾಂಶು ತನ್ನ ಕಿವಿಗೆ ಕೇಳುವಂತೆ ಮೆಲ್ಲಗೆ ಹೇಳಿಕೊಳ್ಳುವುದು) ಈ ರೀತಿಯಾದ ಭೇದಗಳಿಂದ ನಾವಕಾಶವಾಗಿ ಕೈಗೆ ಪವಿತ್ರವನ್ನಿಟ್ಟುಕೊಂಡು ಒಂದು ದಿನವೂ ತ್ರಿಪದಿಯಾದ ಗಾಯಿತ್ರಿಜಪವನ್ನು ಮಾಡಲೇ ಇಲ್ಲ. ಪ್ರಾಣಿಗಳ ಬಂಧನವನ್ನು ನಾಶಮಾಡುವ ಮಹಾದೇವನನ್ನು ಒಂದು ಸಾರಿಯಾದರೂ ಪೂಜಿಸಲೇ ಇಲ್ಲವಲ್ಲಾ !

೪೮ ಮಂತ್ರವನ್ನು ಹೇಳಿಯಾಗಲೀ, ಹೇಳದೆಯಾಗಲೀ, ಲಿಂಗದ ಮೇಲೆ ಒಂದು ಪತ್ರೆಯನ್ನಾಗಲೀ, ಒಂದು ಹೂವನ್ನಾಗಲೀ ಇಟ್ಟರೆ ಅವನ ಕೋಟಿ ಕುಲಗಳು ಉದ್ಧಾರವಾಗುತ್ತವೆ. ಅಂತಹ ಲಿಂಗವನ್ನು ಒಂದು ದಿವಸವೂ ಪೂಜಿಸಲಿಲ್ಲ. ಒಂದು ಹೂವನ್ನಾಗಲೀ ಪತ್ರೆಯನ್ನಾಗಲೀ ಇಡಲಿಲ್ಲ.

೪೯. ಎಲ್ಲಾ ಪಾಪಗಳನ್ನೂ ನಾಶಮಾಡುವಂತಹ ವಿಷ್ಣುವನ್ನು ನಾನು ಸ್ವಲ್ಪವೂ ಸಂತೋಷಪಡಿಸಲಿಲ್ಲ. ಕೇಳಿದ ಇಷ್ಟಗಳನ್ನು ಕೊಡುವ ವಿಘ್ನರಾಜನನ್ನು ಒಂದು ಸಾರಿಯಾದರೂ ಪೂಜಿಸಲೇ ಇಲ್ಲ.

ಸರ್ವರೋಗಹರೋ ದೇವೋ ಭಗವಾನ್ ಭಾಸ್ವರೋ ಮಯಾ |
ನಮಸ್ಕೃತೋರ್ಚಿತೋ ನೈವ ಸುಪುಷ್ಪಾರ್ಘ್ಯಪುರಸ್ಸರಂ || ೫೦ ||

ಮಹಾಮಂಗಳದಾ ನೃಣಾಂ ಮಹಾದೇವೀ ಮಹೇಶ್ವರೀ |
ಮಯಾ ನಾರಾಧಿತಾ ಕ್ವಾಪಿ ಮಹಾದೇವೀ ಮೃಡಪ್ರಿಯಾ || ೫೧ ||

ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ |
ಬ್ರಾಹ್ಮಣಃ ಪೂಜಯೇತ್ಪಂಚ ಪಂಚಯಜ್ಞಪರಾಯಣಃ || ೫೨ ||

ಪಂಚಸೂನಾಘಶಮನಾಃ ಪಂಚಯಜ್ಞಾ ನ ನಿರ್ಮಿತಾಃ |
ಪ್ರಾಪಕಃ ಸ್ವರ್ಗಲೋಕಸ್ಯ ನಾತಿಥಿಃ ಸತ್ಕೃತೋ ಮಯಾ || ೫೩ ||

---

೫೦. ಎಲ್ಲಾ ರೋಗಗಳನ್ನೂ ನಾಶಮಾಡುವ ಪೂಜ್ಯನಾದ ಸೂರ್ಯನನ್ನು ನಾನು ನಮಸ್ಕರಿಸಲೇ ಇಲ್ಲ. ಅರ್ಘ್ಯವನ್ನು ಕೊಟ್ಟು ಒಳ್ಳೆಯ ಹೂಗಳಿಂದ ನಾನು ಪೂಜಿಸಲೂ ಇಲ್ಲ.

೫೧. ಮನುಷ್ಯರಿಗೆ ಬಹುವಾಗಿ ಮಂಗಳವನ್ನು ಕೊಡುವ ಮಹಾದೇವಿಯಾದ ಮಹೇಶ್ವರಿಯೂ ಆದ ಮೃಡಾಣಿಯನ್ನು ಎಂದೂ ಪೂಜಿಸಿದವನೇ ಅಲ್ಲ.

೫೨. ಆದಿತ್ಯ, ಅಂಬಿಕೆ, ವಿಷ್ಣು, ಗಣನಾಥ, ಮಹೇಶ್ವರ, ಈ ಐದು ದೇವರನ್ನು ಬ್ರಾಹ್ಮಣನಾದವನು ಪೂಜಿಸಬೇಕು. ಪಂಚ ಮಹಾಯಜ್ಞಗಳನ್ನು ಮಾಡಬೇಕು.

೫೩. ಬೇಯಿಸುವುದು, ಹಿಂಡುವುದು, ಅರೆಯುವುದು, ಕತ್ತರಿಸುವುದು, ಗಾಡಿ, ಗಾಣ, ಮುಂತಾದುವಕ್ಕೆ ಕಟ್ಟುವುದು. ಇವು ಐದು ಜೀವಗಳಿಗೆ ತೊಂದರೆ ಕೊಡತಕ್ಕವು. ಇವನ್ನು ನಾಶಮಾಡಿಕೊಳ್ಳಲು ಪಂಚಯಜ್ಞಗಳು ಇವೆ. ಅವನ್ನು ನಾನು ಮಾಡಲಿಲ್ಲ. ಸ್ವರ್ಗಲೋಕವನ್ನು ಹೊಂದಿಸುವ ಅತಿಥಿಯನ್ನು ಸತ್ಕಾರ ಮಾಡಿ ಅರ್ಘ್ಯಮುಂತಾದುವನ್ನು ಕೊಡಲಿಲ್ಲ.

ಸತ್ಕೃತ್ಯ ಭಿಕ್ಷವೇ ಭಿಕ್ಷಾ ನ ದತ್ತಾ ಸಸ್ಯಶಾಲಿನೀ ।
ಹಂತಕಾರಶ್ಚ ನೋ ದತ್ತೋ ವಿಧಿವದ್ಬ್ರಹ್ಮಚಾರಿಣೇ ॥ ೫೪ ॥

ಯತಿಶ್ಚ ಬ್ರಹ್ಮಚಾರೀ ಚ ಪಕ್ವಾನ್ನಸ್ವಾಮಿನಾವುಭೌ ।
ತಯೋರನ್ನಮದತ್ವೈವಭುಕ್ತ್ವಾ ಚಾಂದ್ರಾಯಣಂ ಚರೇತ್ ॥ ೫೫ ॥

ನ ಸೂಕ್ಷ್ಮಾಣಿ ವಿಚಿತ್ರಾಣಿ ಸುಸೂಕ್ಷ್ಮಾಣ್ಯಂಬರಾಣಿ ಚ ।
ಸಮರ್ಪಿತಾನಿ ವಿಪ್ರೇಭ್ಯೋ ದಿವ್ಯಾಂಬರ ಸಮೃದ್ಧಯೇ ॥ ೫೬ ॥

ನ ತಿಲಾಶ್ಚ ಘೃತೇನಾಕ್ತಾಃ ಸುಸಮಿದ್ಧೇ ಹುತಾಶನೇ ।
ಹುತಾ ವೈ ಮಂತ್ರಪೂತಾಸ್ತು ಸರ್ವಪಾಪಾಪನುತ್ತಯೇ ॥ ೫೭ ॥

---

೫೪. ಯತಿಯನ್ನು ಸತ್ಕರಿಸಿ ಅವನಿಗೆ ಭಿಕ್ಷೆರೂಪವಾದ ಅನ್ನವನ್ನು ಹಾಕಲಿಲ್ಲ. ಭಿಕ್ಷಕ್ಕೆ ಬಂದವನಿಗೆ ಭಿಕ್ಷವನ್ನು ಹಾಕಲಿಲ್ಲ. ಸಸ್ಯಗಳಿಂದ ಕೂಡಿದ ಭೂಮಿಯನ್ನು ದಾನಮಾಡಲಿಲ್ಲ. ಬ್ರಹ್ಮಚಾರಿಯಾದವನು ಬಂದಾಗ ಅವನಿಗೆ ಹೊಟ್ಟೆತುಂಬ ಅನ್ನವನ್ನು ಹಾಕಲಿಲ್ಲ. (ಹಂತಕಾರ ಹದಿನಾರು ಕಬಳ ಅನ್ನ.)

೫೫. ಯತಿಯೂ, ಬ್ರಹ್ಮಚಾರಿಗಳೂ, ನಾವು ಮಾಡಿದ ಅಡಿಗೆಗೆ ಬಾಧ್ಯರಾದವರು ಸ್ವಾಮಿಗಳಾಗಿಯೂ ಇರುತ್ತಾರೆ. ಅವರಿಬ್ಬರಿಗೂ ಅನ್ನವನ್ನು ಹಾಕದೆ ಊಟಮಾಡಿದರೆ ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಮಾಡಿ ಕೊಳ್ಳಬೇಕು.

೫೬. ಸೂಕ್ಷ್ಮವಾಗಿಯೂ ವಿಚಿತ್ರವಾಗಿಯೂ ಇರುವಂತಹ ವಿಚಿತ್ರ ವಾಗಿಲ್ಲದೆ ಸೂಕ್ಷ್ಮವಾಗಿರುವ ಬಟ್ಟೆಗಳನ್ನು ನಾನು ಬ್ರಾಹ್ಮಣರಿಗೆ ದಾನ ಮಾಡಲಿಲ್ಲ. ಅವನ್ನು ಕೊಟ್ಟರೆ ಪರದಲ್ಲಿಯೂ, ಮತ್ತೊಂದು ಜನ್ಮದಲ್ಲಿಯೂ ಒಳ್ಳೆಯ ಬಟ್ಟೆಗಳು ಸಿಕ್ಕುತ್ತವೆ.

೫೭. ಎಲ್ಲಾ ಪಾಪಗಳನ್ನೂ ನಾಶ ಮಾಡುವಂತಹ, ತುಪ್ಪದಲ್ಲಿ ನೆನೆಸಿದ ಎಳ್ಳನ್ನು ಉರಿಯುತ್ತಿರುವ ಬೆಂಕಿಯಲ್ಲಿ ಮಂತ್ರವನ್ನು ಹೇಳಿ ಹೋಮಮಾಡಲಿಲ್ಲ.

ಶ್ರೀಸೂಕ್ತಂ ಪಾವಮಾನ್ಯಶ್ಚ ಬ್ರಾಹ್ಮಣಂ ಮಂಡಲಾನಿ ಚ ।
ಜಪ್ತಂ ಪುರುಷಸೂಕ್ತಂ ನ ಪಾವನಂ ಶತರುದ್ರಿಯಂ || ೫೮ ||

ಅಶ್ವತ್ಥಸೇವಾ ನ ಕೃತಾ ತ್ಯಕ್ತಾ ಹ್ಯರ್ಕ ತ್ರಯೋದಶೀ ।
ಸದ್ಯಃ ಪಾಪಹರಾ ಸಾಪಿ ನ ರಾತ್ರೌ ನ ಭೃಗೋರ್ದಿನೇ || ೫೯ ||

ಸ್ನಿಗ್ಧಸ್ಸುಶೀತಲಚ್ಛಾಯೋ ವೃಕ್ಷೋ ನಾರೋಪಿತೋ ಮಯಾ ।
ಶಯನೀಯಂ ಚ ನೋತ್ಸೃಷ್ಟಂ ಮೃದುಲಾ ಚ ಪ್ರತೂಲಿಕಾ || ೬೦ ||

ದೀಪದರ್ಪಣಸಂಯುಕ್ತಂ ಸರ್ವಭೋಗಸಮೃದ್ಧಿದಂ ।
ಅಜಾಶ್ವಮಹಿಷೀದಾಸೀಃ ಶ್ವೇತಕೃಷ್ಣಾಜಿನಂ ತಿಲಾನ್ || ೬೧ ||

ಕರಂಭಾಂಸ್ತೋಯಕುಂಭಾಂಶ್ಚ ಆಸನಂ ಮೃದುಪಾದುಕೇ ।
ಪಾದಾಭ್ಯಂಗಂ ದೀಪದಾನಂ ಪ್ರಪಾದಾನಂ ವಿಶೇಷತಃ || ೬೨ ||

---

೫೮. ಶ್ರೀಸೂಕ್ತ, ಪಾವಮಾನಿಗಳು (ಪವಮಾನಸೂಕ್ತ) ಮಂಡಲ ಬ್ರಾಹ್ಮಣ, ಪುರುಷಸೂಕ್ತ, ಶತರುದ್ರಿಯ, ಇವೊಂದನ್ನೂ ಜಪಮಾಡಲೇ ಇಲ್ಲ.

೫೯. ಅಶ್ವತ್ಥವೃಕ್ಷದ ಸೇವೆಯನ್ನು ಮಾಡಲೇ ಇಲ್ಲ. ಅರ್ಕ ತ್ರಯೋದಶಿಯ ವ್ರತವನ್ನು ಮಾಡಲೇ ಇಲ್ಲ. ಆ ಅರ್ಕತ್ರಯೋದಶಿಯನ್ನು ರಾತ್ರಿಯವೇಳೆಯಲ್ಲಿಯಾಗಲಿ, ಶುಕ್ರವಾರದಲ್ಲಿಯಾಗಲಿ ಮಾಡಿದರೆ ಪಾಪಹರವು.

೬೦. ಮನೋಹರವಾಗಿಯೂ, ತಂಪಾಗಿಯೂ ಇರುವ ಮರವನ್ನು ನಾನು ಬೆಳೆಸಲಿಲ್ಲ, ಮೃದುವಾಗಿಯೂ, ಸುಖವಾಗಿಯೂ ಇರುವ ಹತ್ತಿಯ ಹಾಸಿಗೆಯನ್ನು ನಾನು ದಾನಮಾಡಲಿಲ್ಲ.

೬೧-೬೨. ಆ ಹಾಸಿಗೆಯನ್ನು ಅದರ ಜೊತೆಯಲ್ಲಿ ದೀಪ, ಕನ್ನಡಿ, ಮೊದಲಾದ ಭೋಗಕ್ಕೆ ಬೇಕಾದ ಪದಾರ್ಥಗಳೊಂದನ್ನೂ ಕೊಡಲಿಲ್ಲ. ಆಡು, ಕುದುರೆ, ಎಮ್ಮೆ, ದಾಸಿಯರು, ಬಿಳಿಯ ಚುಕ್ಕೆಯುಳ್ಳ ಜಿಂಕೆಯ ಚರ್ಮ, ಎಳ್ಳು, ಮೊಸರು, ಹಿಟ್ಟು, ನೀರನ್ನು ತುಂಬಿದ ಚೊಂಬು (ಉದಕುಂಬ) ಆಸನ, ಮೃದುವಾದ ಕೆರಗಳು, ಕಾಲಿಗೆ ಎಣ್ಣೆ ಹಾಕಿ ತೊಡದು ನೀರು ಹಾಕುವುದು, ದೀಪದಾನ, ಅವರಟ್ಟಿಗೆ ಇಡಿಸುವುದು, ಬೀಸಣಿಗೆಯ ದಾನ, ಛತ್ರಿಯ ದಾನ,

ವ್ಯಜನಂ ಛತ್ರ ತಾಂಬೂಲಂ ತಥಾಸ್ಯಸ್ಮುಖವಾಸಕೃತ್ ।
ನಿತ್ಯಶ್ರಾದ್ಧಂ ಭೂತಬಲಿಂ ತಥಾತಿಥಿಸಮರ್ಚನಂ ॥ ೬೩ ॥

ಏತಾನಿ ವಿಶತಿಂ ದತ್ವಾ ಪ್ರಶಸ್ಯಾನಿ ಯಮಾಲಯೇ ।
ನ ಯಮಂ ಯಮದೂತಾಂಶ್ಚ ನ ಯಾಮಿಾರಪಿ ಯಾತನಾಃ ॥ ೬೪ ॥

ಪಶ್ಯಂತಿ ತೇ ಪುಣ್ಯಭಾಜೋ ನೈತಚ್ಚಾಪಿ ಕೃತಂ ಮಯಾ ।
ಕೃಚ್ಛ್ರಚಾಂದ್ರಾಯಣಾದೀನಿ ತಥಾನಕ್ತವ್ರತಾನಿ ಚ ॥ ೬೫ ॥

ಶರೀರಶುದ್ಧಿಕಾರೀಣಿ ನ ಕೃತಾನಿ ಕ್ವಚಿನ್ಮಯಾ ।
ಗೋಭ್ಯೋ ಗ್ರಾಸಶ್ಚ ನೋ ದತ್ತೋ ಗೋಕಂಡೂತಿರ್ನ ವೈ ಕೃತಾ ॥೬೬॥

ನೋದ್ಧೃತಾ ಪಂಕಮಗ್ನಾ ಗೌಃ ಗೋಲೋಕ ಸುಖದಾಯಿನೀ ।
ನಾರ್ಥಿನಃ ಪ್ರಾರ್ಥಿತೈರರ್ಥೈಃ ಕೃತಾರ್ಥಾ ಹಿ ಮಯಾ ಕೃತಾಃ ॥ ೬೭ ॥

---

ತಾಂಬೂಲದಾನ, ಬಾಯಿಗೆ ಹಾಕಿಕೊಳ್ಳುವ ವಾಸನೆಯಾದ ಪದಾರ್ಥಗಳು, ನಿತ್ಯಶ್ರಾದ್ಧ, ಭೂತಬಲಿ, ಅತಿಥಿಪೂಜೆ, ಈ ಇಪ್ಪತ್ತು ದಾನಗಳು ಮನೆ ಮನೆಯಲ್ಲಿ ಸೌಖ್ಯವನ್ನು ಕೊಡತಕ್ಕವುಗಳು. ಅವುಗಳೊಂದನ್ನೂ ನಾನು ಮಾಡಲೇ ಇಲ್ಲ. ಈ ಇಪ್ಪತ್ತು ದಾನಗಳನ್ನು ಮಾಡಿದವರು ಯಮನನ್ನಾಗಲಿ, ಯಮದೂತರನ್ನಾಗಲಿ ನೋಡುವುದಿಲ್ಲ. ಯಮ ಯಾತನೆಯನ್ನು ಅನುಭವಿಸುವುದಿಲ್ಲ. ಈ ದಾನವನ್ನು ಮಾಡಿದವರೇ ಪುಣ್ಯಶಾಲಿಗಳು. ಇದೊಂದನ್ನೂ ನಾನು ಮಾಡಲೇ ಇಲ್ಲ. ಕೃಚ್ಛ್ರ, ಚಾಂದ್ರಾಯಣ, ನಕ್ತವ್ರತ, ಇವುಗಳು ದೇಹದ ಶುದ್ಧಿಯನ್ನುಂಟುಮಾಡುತ್ತವೆ. ಇಂತಹ ವ್ರತಗಳೊಂದನ್ನೂ ಯಾವಾಗಲೂ ಮಾಡಲೇ ಇಲ್ಲ. ಗೋವುಗಳಿಗೆ ಗ್ರಾಸವನ್ನು ಹಾಕಲಿಲ್ಲ. ಗೋವುಗಳನ್ನು ತುರಿಸಿ ಅವುಗಳ ಕಡಿತವನ್ನು ಹಾಳುಮಾಡಲಿಲ್ಲ. ಕೆಸರಿನಲ್ಲಿ ಹೂತುಕೊಂಡಿದ್ದ ಗೋವನ್ನು ಮೇಲಕ್ಕೆತ್ತಲಿಲ್ಲ. ಅದು ಗೋಲೋಕದಲ್ಲಿ ಸುಖವನ್ನು ಕೊಡುತ್ತಿದ್ದಿತು. ಹಣವನ್ನು ಯಾಚಿಸಿದ ಯಾಚಕರನ್ನು ಹಣವನ್ನು ಕೊಟ್ಟು ತೃಪ್ತಿಪಡಿಸಲಿಲ್ಲ.

**ತುಲಸೀ ರೋಪಿತಾ ನೈವ ವಿಷ್ಣೋರರ್ಚನಹೇತವೇ ।**
**ಸಾಲಗ್ರಾಮಶಿಲಾತೀರ್ಥಂ ನ ಪೀತಂ ಶಿರಸಾ ಧೃತಂ ॥ ೧೮ ॥**

**ಏಕಾಪ್ಯೇಕಾದಶೀ ಪುಣ್ಯಾ ತಿಥಿರ್ನ ಸಮುಪೋಷಿತಾ ।**
**ನೋಪೋಷಿತಾ ಶಿವರಾತ್ರಿಃ ಶಿವಸಾಲೋಕ್ಯದಾಯಿನೀ ॥ ೧೯ ॥**

**ನ ವೇದಾ ನ ಚ ಶಾಸ್ತ್ರಾಣಿ ನಾರ್ಥೋ ದಾರಾ ನ ನೋ ಸುತಾಃ ।**
**ನ ಕ್ಷೇತ್ರಂ ನ ಚ ಹರ್ಮ್ಯಾದಿ ಮಾಂ ಯಾನ್ತಮನುಯಾಸ್ಯತಿ ॥ ೨೦ ॥**

**ಅಶಕ್ತೈಶ್ಚೇಪ್ಸಿತಂ ಕಿಂಚಿತ್ ಕಿಂ ಕರಿಷ್ಯಾಮ್ಯತಃ ಪರಂ ।**
**ಆಸನ್ನಾಹರಹರ್ಜಾತಾ ಕೃತಾಂತನಗರೀ ತು ಸಾ ॥ ೨೧ ॥**

**ಕಿಂ ಕರೋಮಿ ಕ್ವ ಗಚ್ಛಾಮಿ ಹಾ ಕಷ್ಟಂ ಸಮುಪಸ್ಥಿತಂ ।**
**ಪರಲೋಕಸ್ಯ ಪಾಥೇಯಂ ಮಮ ಕಿಂಚಿನ್ನ ವಿದ್ಯತೇ ॥ ೨೨ ॥**

---

೧೮. ವಿಷ್ಣುವಿನ ಪೂಜೆಗೋಸ್ಕರ ತುಲಸಿಯನ್ನು ನೆಟ್ಟು ಎಬ್ಬಿಸಲಿಲ್ಲ. ಸಾಲಗ್ರಾಮದ ಶಿಲೆಯ ತೀರ್ಥವನ್ನು ಕುಡಿಯಲಿಲ್ಲ. ತಲೆಯಮೇಲೆ ಹಾಕಿಕೊಳ್ಳಲೂ ಇಲ್ಲ.

೧೯. ಪುಣ್ಯಕರವಾದ ಒಂದು ಏಕಾದಶಿಯಲ್ಲಿಯಾದರೂ ಉಪವಾಸ ಮಾಡಲಿಲ್ಲ. ಶಿವನ ಸಾಲೋಕ್ಯವನ್ನು ಕೊಡುವ ಶಿವರಾತ್ರಿಯಲ್ಲಿ ಉಪವಾಸವನ್ನು ಮಾಡಲೇ ಇಲ್ಲ.

೨೦ ವೇದಗಳಾಗಲೀ, ಶಾಸ್ತ್ರಗಳಾಗಲೀ, ಹಣವಾಗಲೀ, ಮಕ್ಕಳಾಗಲೀ, ಭೂಮಿಯಾಗಲೀ, ಮಹಡಿಮನೆಯಾಗಲಿ, ಸತ್ತಮೇಲೆ ನನ್ನ ಜೊತೆಯಲ್ಲಿ ಬರುವುದಿಲ್ಲ.

೨೧. ನಾನು ಯಾವ ಕೆಲಸವನ್ನು ಮಾಡುವುದಕ್ಕೂ ಶಕ್ತನಾಗಿಯೇ ಇಲ್ಲ. ಇನ್ನೇನು ಮಾಡಲಿ ? ಯಮನ ಪಟ್ಟಣವು ದಿನ ದಿನಕ್ಕೂ ಹತ್ತಿರ ವಾಗುತ್ತ ಬರುತ್ತಿದೆ.

೨೨. ಏನುಮಾಡಲಿ ? ಎಲ್ಲಿಹೋಗಲಿ ? ಅಯ್ಯೋ ! ಕಷ್ಟವು ಬಂದಿತಲ್ಲ ! ಪರಲೋಕಕ್ಕೆ ಬುತ್ತಿಯ ರೂಪವಾದ ಧರ್ಮವು ನನ್ನಲ್ಲಿ ಸ್ವಲ್ಪವೂ ಇಲ್ಲವೇ ಇಲ್ಲವಲ್ಲಾ !

ಇತ್ಯಂತಸ್ತಾಪಯುಕ್ತಾತ್ಮಾ ಶುಷ್ಕಕಂಠೋಷ್ಠತಾಲುಕಃ ।
ಪಶ್ಚಾತ್ತಾಪಾಭಿಭೂತಸ್ಯ ಪ್ರಾಣಾಃ ಕಂಠಾವಲಂಬಿನಃ ॥ ೭೩ ॥

ಇತಿ ವ್ಯಾಕುಲಚಿತ್ತೋಽಸೌ ಮನಸ್ಯೇವಮಚಿಂತಯತ್ ।
ಅಹೋ ಜ್ಞಾತ ಮಹೋ ಜ್ಞಾತ ಮಹೋ ಜ್ಞಾತ ಮಿದಂ ಮಯಾ॥೭೪॥

ಶ್ಲೋಕಾರ್ಧೇನ ಪುರಾ ಪ್ರೋಕ್ತಂ ಪರಲೋಕಮಹಾಹಿತಂ ।
ವೇದವ್ಯಾಸೇನ ಮುನಿನಾತತ್ಕರಿಷ್ಯಾಮಿ ಸಾಂಪ್ರತಂ ॥ ೭೫ ॥

ಅನ್ಯಥಾ ಮಮ ವೃದ್ಧಸ್ಯ ನಾನ್ಯಚ್ಛ್ರೇತ್ರವಿದ್ಯತೇ ।
ಧನಾರ್ಜನಾರ್ಥಂ ಕಾಶ್ಮೀರಂ ಗಚ್ಛತಾ ದೇಶಮುತ್ತಮಂ ॥ ೭೬ ॥

ದೃಷ್ಟ್ವಾ ಭಾಗೀರಥೀತೀರೇ ಬ್ರಾಹ್ಮಣಾ ವೇದಪಾರಗಾಃ ।
ಮಾಘಸ್ನಾನಮುಷಃಕಾಲೇ ಕೃತ್ವಾ ತಸ್ಥುರನೇಕಶಃ ।
ತತ್ರ ಪೌರಾಣಿಕೇನೋಕ್ತಃ ಶ್ಲೋಕಾರ್ಧೋಽಹ್ಯಧುನೋದಿತಃ ॥ ೭೭ ॥

---

೭೩. ಈ ರೀತಿಯಾಗಿ ಮನಃಪೂರ್ತಿಯಾಗಿ ದುಃಖಿಸುತ್ತಿರಲು ಬಾಯಿ, ಗಂಟಲು, ತುಟಿ, ನಾಳಿಗೆ ಇವೆಲ್ಲವೂ ಒಣಗಿದುವು. ಹೀಗೆ ದುಃಖಗೊಳ್ಳಲು ಪ್ರಾಣಗಳು ಹೋಗಲು ಗಂಟಲಿಗೆ ಬಂದಿಸುವುದು.

೭೪. ಹೀಗೆ ದುಃಖಪಡುತ್ತ ಮನಸ್ಸಿನಲ್ಲಿ ಒಂದುವಿಷಯವು ಬರಲು ಇಂತೆಂದು ಯೋಚಿಸಿದನು. ಓಹೋ! ಗೊತ್ತಾಯಿತು ಓಹೋ ಇದು ಗೊತ್ತಾಯಿತು ಎಂದನು.

೭೫-೭೭. ವೇದವ್ಯಾಸ ಮುನಿಯು ಪೂರ್ವದಲ್ಲಿ ಒಂದು ಅರ್ಧ ಶ್ಲೋಕದಿಂದಲೇ ಪರಲೋಕ ಹಿತವಾದ ವಿಷಯವನ್ನು ಹೇಳಿರುವನು. ಅದನ್ನು ನಾನು ಈಗ ಮಾಡುತ್ತೇನೆ. ಹಾಗೆ ಮಾಡದಿದ್ದರೆ ಮುದುಕನಾದ ನನಗೆ ಬೇರೆ ರೀತಿಯಾದ ಶ್ರೇಯಸ್ಸಾಧಕವೇ ಇಲ್ಲ. ಹಣವನ್ನು ಸಂಪಾದನೆ ಮಾಡುವುದ ಕೋಸ್ಕರ ಕಾಶ್ಮಿರದೇಶಕ್ಕೆ ಹೋಗುತ್ತಿದ್ದಾಗ ಭಾಗೀರಥೀನದಿಯ ತೀರದಲ್ಲಿ ವೇದಪಾರಗರಾದ ಬ್ರಾಹ್ಮಣರು ಬೆಳಗಿನ ಹೊತ್ತಿನಲ್ಲಿ ಮಾಘಸ್ನಾನವನ್ನು ಮಾಡುತ್ತ ಬಹು ಜನರಿದ್ದರು. ಅಲ್ಲಿ ಪುರಾಣವನ್ನು ಹೇಳುತ್ತಿದ್ದವನು ಒಂದು ಶ್ಲೋಕದ ಅರ್ಧವನ್ನು ಹೀಗೆಂದು ಹೇಳಿದನು.

ಮಾಘೇ ನಿಮಗ್ನಾಸ್ಸಲಿಲೇ ಸುಶೀತೇ
ವಿಮುಕ್ತಪಾಪಾಸ್ತ್ರಿದಿವಂ ಪ್ರಯಾಂತಿ ।
ಇತಿಶ್ರುತಂ ತತ್ರ ಪುರಾಣಮಧ್ಯೇ
ಪ್ರಮಾಣಮೇ ತತ್ಕರಣೀಯಮೇವ ॥ ೭೮ ॥

॥ ವಸಿಷ್ಠ ಉವಾಚ ॥

ಇತಿ ನಿಶ್ಚಿತ್ಯಮನಸಾ ದೃಢಚಿತ್ತಸ್ಸ ಸುವ್ರತಃ ।
ನರ್ಮದಾಯಾಂ ನವದಿನಂ ಮಾಘಸ್ನಾನಂ ಚಕಾರ ಹ ॥ ೭೯ ॥

ಕರ್ತುಂ ತದಶಕ್ಯಶಕ್ತೋಥ ದಶಮೇಹನಿ ನರ್ಮದಾಂ ।
ಕಷ್ಟಂ ಚಿತ್ಸಸುಖಂ ಪ್ರಾಪ್ಯ ಸ್ನಾನಂ ಕೃತ್ವಾ ವಿಧಾನತಃ ॥ ೮೦ ॥

ತೀರಮಾಸಾದ್ಯ ಶೀತಾರ್ತೋ ಗೋವಿಂದೇತಿ ವದನ್ಮೃತಃ ।
ತದಾನೀಮಾಗತಂ ತಸ್ಯ ವಿಮಾನಂ ಮೇರುಸನ್ನಿಭಂ ॥ ೮೧ ॥

---

೭೮. ಮಾಘಮಾಸದಲ್ಲಿ ಶೀತವಾದ ನೀರಿನಲ್ಲಿ ಸ್ನಾನಮಾಡಿದವರು ಪಾಪಗಳನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾರೆ. ಈ ರೀತಿಯಾಗಿ ಪುರಾಣ ಮಧ್ಯದಲ್ಲಿ ಕೇಳಿದೆನು. ಅದನ್ನೇ ನಾನು ಪ್ರಮಾಣವನ್ನಾಗಿ ಇಟ್ಟು ಕೊಳ್ಳಬೇಕು.

೭೯. ವಸಿಷ್ಠನು ಹೇಳಿದನು–ಈ ರೀತಿಯಾಗಿ ಮನಸ್ಸಿನಲ್ಲಿ ನಿಶ್ಚಯಿಸಿ ಕೊಂಡು ದೃಢವಾದ ಮನಸ್ಸುಳ್ಳವನಾಗಿ ವ್ರತವನ್ನು ಧರಿಸಿ ನರ್ಮದಾನದಿಯಲ್ಲಿ ಒಂಬತ್ತು ದಿನಗಳವರೆಗೆ ಮಾಘಸ್ನಾನ ಮಾಡಿದನು.

೮೦-೮೧. ಆಗ ಸ್ನಾನಮಾಡಲು ಅಶಕ್ತನಾಗಿ ಆ ಹತ್ತನೆಯ ದಿನ ನರ್ಮದೆಯಲ್ಲಿ ಬಹು ಕಷ್ಟದಿಂದ ಸ್ನಾನವನ್ನು ಮಾಡಿ ಮೇಲಕ್ಕೆ ಬಂದು ಶೀತದಿಂದಲೇ ತೊಂದರೆಪಡುತ್ತಾ ಗೋವಿಂದ ಎಂದೆನ್ನುತ್ತಲೇ ಸತ್ತುಹೋದನು. ಒಡನೆಯೇ ಅವನಿಗೆ ಮೇರುವಂತಿರುವ ವಿಮಾನವು ಬಂದಿತು.

ತದಾ ಯಯೌ ಸ್ವರ್ಗಲೋಕಂ ಸುವ್ರತೋ ಮಾಘವೈಭವಾತ್ |
ತತ್ರ ಮನ್ವಂತರಂ ಸ್ಥಿತ್ವಾ ಪುನರ್ಭೂಮೌ ದ್ವಿಜೋಽಭವತ್ || ೮೨ ||

ಪ್ರಯಾಗೇ ಮಾಘಮಾಸಾದ್ಯ ಬ್ರಹ್ಮಲೋಕಮುಪೇಯಿವಾನ್ |
ಕಲ್ಪಾಂತೇ ಪುನರಾಗತ್ಯ ದ್ವಿಜೋ ಭೂತ್ವಾ ಮಹಾಕುಲೇ || ೮೩ ||

ಸ ಪುನರ್ಮಾಘಮಾಹಾತ್ಮ್ಯಾತ್ಕಾಶ್ಯಾಮೀಶೋಪದೇಶತಃ |
ಮೃತೋ ಮುಕ್ತೋ ಜಗಾಮಾಶು ಶಿವಸಾಯುಜ್ಯಮುತ್ತಮಂ || ೮೪ ||

ಇಹ ದಶದಿನಮಾದ್ಯಂ ನರ್ಮದಾಯಾಂ ನಿಮಜ್ಯ
ತ್ರಿದಶಪತಿಸಮೀಪೇ ತತ್ರ ಮನ್ವಂತರಸ್ಥಃ |
ಪುನರಪಿ ಭುವಿ ಜಾತೋ ಮಾಘಮೇಕಂ ಪ್ರಯಾಗೇ
ದ್ರುಹಿಣಪದಮನ್ವೈಷೀತ್ತತ್ರ ಕಲ್ಪಂ ಸ್ಥಿತೋಽಭೂತ್ || ೮೫ ||

---

೮೨. ಈ ಮಾಘಸ್ನಾನದ ವೈಭವದಿಂದ ಆ ಸುವ್ರತನು ಆಗಲೇ ಸ್ವರ್ಗಲೋಕಕ್ಕೆ ಹೋದನು. ಅಲ್ಲಿ ಒಂದು ಮನ್ವಂತರದ ಕಾಲವಿದ್ದು ಮತ್ತೆ ಭೂಮಿಯಲ್ಲಿ ಬ್ರಾಹ್ಮಣನಾಗಿ ಹುಟ್ಟಿದನು.

೮೩-೮೪. ಅನಂತರ ಪ್ರಯಾಗದಲ್ಲಿ ಮಾಘಸ್ನಾನಮಾಡಿ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿ ಕಲ್ಪಕಾಲದವರೆಗೂ ಇದ್ದು ಮತ್ತೆ ಬ್ರಾಹ್ಮಣನಾಗಿ ಒಳ್ಳೆಯ ವಂಶದಲ್ಲಿ ಹುಟ್ಟಿ ಮತ್ತೆ ಮಾಘಸ್ನಾನವನ್ನು ಕಾಶಿಯಲ್ಲಿ ಮಾಡಿ ಶಿವನು ಕರ್ಣಮಂತ್ರವನ್ನು ಹೇಳಿದುದರಿಂದ ಸತ್ತಮೇಲೆ ಉತ್ತಮವಾದ ಶಿವಸಾಯುಜ್ಯವನ್ನು ಹೊಂದಿದನು.

೮೫. ಮೊದಲು ಹತ್ತುದಿನಗಳು ನರ್ಮದೆಯಲ್ಲಿ ಸ್ನಾನಮಾಡಿ ಸ್ವರ್ಗದಲ್ಲಿ ಒಂದು ಕಲ್ಪದವರೆಗೂ ಇದ್ದು ಮತ್ತೆ ಹುಟ್ಟಿ ಪ್ರಯಾಗದಲ್ಲಿ ಒಂದು ಮಾಘಮಾಸ ಕಾಲವೂ ಪೂರ್ತಿಯಾಗಿ ಸ್ನಾನಮಾಡಿ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಒಂದು ಕಲ್ಪಕಾಲದವರೆಗೂ ಇದ್ದನು.

ಕಮಲಭವನಪೂಜ್ಯಸ್ತತ್ರ ಕಲ್ಪಾವಸಾನೇ
ಪುನರಪಿ ಭುವಿ ಜಾತಃ ಶಿಷ್ಟವಂಶೇಭಿಜಾತಃ ।
ವ್ರತನಿಯಮಸಮೇತೋ ಮಾಘಮಾಸೇ ಯಥಾವತ್
ಮೃತಿಲಭತ ಕಾಶ್ಯಾಂ ಸುವ್ರತೋ ಭೂಸುರೇಂದ್ರಃ ॥ ೮೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘಮಾಹಾತ್ಮ್ಯೇ ಸುವ್ರತೋಪಾಖ್ಯಾನಂ ನಾಮ ಅಷ್ಟಾತ್ರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೮೬. ಆ ಬ್ರಹ್ಮಲೋಕದಲ್ಲಿ ಸುಖವನ್ನು ಅನುಭವಿಸಿ ಕಲ್ಪವಾದ ಮೇಲೆ ಮತ್ತೆ ಭೂಮಿಯಲ್ಲಿ ಹುಟ್ಟಿ ಒಳ್ಳೆಯ ವ್ರತದಿಂದಿದ್ದು ಕಾಶಿಯಲ್ಲಿ ಮಾಘಮಾಸದ ಸ್ನಾನವನ್ನು ಮಾಡಿ ಮೃತಿಯನ್ನು ಹೊಂದಿ ಶಿವಸಾಯುಜ್ಯವನ್ನು ಹೊಂದಿದನು. ಈ ರೀತಿಯಾಗಿ ಸುವ್ರತನೆಂಬ ಬ್ರಾಹ್ಮಣನ ಕಥೆಯು ಇರುವುದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘಮಹಿಮೆಯಲ್ಲಿ ಸುವ್ರತೋಪಾಖ್ಯಾನ ಎಂಬ ಇನ್ನೂರ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕೋನಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ||



**|| ವಸಿಷ್ಠ ಉವಾಚ ||**

**ಶೃಣು ರಾಜನ್ ಪುನರ್ಮಾಘವೈಭವಂ ಕಥಯಾಮಿ ತೇ ।**
**ಸರ್ವೇಷಾಮೇವ ಮಾಸಾನಾಂ ಮಾಘಮಾಸಃ ಪರಃ ಸ್ಮೃತಃ || ೧ ||**

**ಮಾಘಮಾಸಸ್ಯ ಮಾಹಾತ್ಮ್ಯಂ ಕಸ್ಯ ಮಾಸಸ್ಯ ವಿದ್ಯತೇ ।**
**ಸಂಪ್ರಾಪ್ತೇ ಮಾಘಮಾಸೇ ತು ತಪಸ್ವಿಜನವಲ್ಲಭೇ || ೨ ||**

**ತಸ್ಮಿನ್ ಕ್ರೋಶಂತಿ ಪಾಪಾನಿ ಸಮುದ್ಗಚ್ಛತಿ ಭಾಸ್ಕರೇ ।**
**ಪುನಂತಿ ಸರ್ವಪಾಪಾನಿ ವಿವಿಧಾನಿ ನ ಸಂಶಯಃ || ೩ ||**

---

### ಇನ್ನೂರ ಮೂವತ್ತೊಂಭತ್ತನೆಯ ಅಧ್ಯಾಯವು



೧. ಎಲೈ ರಾಜನೇ ! ಮಾಘಮಹಿಮೆಯನ್ನು ಮತ್ತೆಯೂ ಹೇಳುತ್ತೇನೆ ಕೇಳು ಎಲ್ಲಾ ಮಾಸಗಳಿಗಿಂತಲೂ ಮಾಘಮಾಸವು ಬಹು ಉತ್ತಮವು.

೨-೩. ಮಾಘಮಾಸದ ಮಹಿಮೆಯು ಯಾವ ಮಾಸಕ್ಕೆ ತಾನೇ ಇರುವುದು! ತಪಸ್ವಿ ಜನಗಳಿಗೆ ಪ್ರೀತಿ ಪಾತ್ರವಾದ ಮಾಘಮಾಸವು ಬಂದೊಡನೆಯೇ ಸೂರ್ಯೋದಯಕಾಲದಲ್ಲಿ ಪಾಪಗಳೆಲ್ಲವೂ ತಾವು ಹೋಗಬೇಕಾಗುವುದಲ್ಲಾ ಎಂದು ಅಳುತ್ತವೆ. ಆಗ ಆ ಸೂರ್ಯೋದಯಕಾಲವು ಎಲ್ಲಾ ಪಾಪಗಳನ್ನು ಹಾಳುಮಾಡಿ ಪ್ರಾಣಿಯನ್ನು ಪವಿತ್ರವನ್ನಾಗಿ ಮಾಡುತ್ತದೆ. ಸಂಶಯವಿಲ್ಲ.

ಬ್ರಹ್ಮಹತ್ಯಾದಿ ಪಾಪಾನಿ ಮಾಘಮಾಸೇ ಪುನಂತಿ ಹಿ ।
ದುರ್ಲಭೋ ಮಾಘಮಾಸಸ್ತು ಬಹುಪುಣ್ಯಪ್ರದಃ ಸದಾ ॥ ೪ ॥

ದೇವೈಸ್ತೇಜಃ ಪರಿಕ್ಷಿಪ್ತಂ ಮಾಘಮಾಸಜಲೇ ಸದಾ ।
ಅತಃ ಪವಿತ್ರಂ ಹಿ ಜಲಮಶೇಷಾಘೌಘನಾಶನಂ ॥ ೫ ॥

ನೇದೃಶೀ ಚಾಪರಾ ಪುಂಭಿಃ ಗತಿಃ ಪ್ರಾಪ್ತಾ ಸುಖಾವಹಾ ।
ಯಾದೃಶೀ ಮಾಘಮಾಸೇ ಚ ಪ್ರಾಪ್ಯತೇ ನಿಯಮಸ್ಥಿತೈಃ ॥ ೬ ॥

ತಸ್ಮಿನ್ನಿರ್ಝರತೋಯೇಷು ಪ್ರಶಸ್ತಂ ಸ್ನಾನಮುಚ್ಯತೇ ।
ವಾಪೀತಟಾಕೇಷು ಪುನಃ ಮಧ್ಯಮಂ ತು ಪ್ರಚಕ್ಷತೇ । ॥ ೭ ॥

ಗೃಹೇ ಸ್ನಾನಂ ಚ ಮಾಘೇ ತು ಶ್ರೇಯೋಽರ್ಥೀ ನ ಸಮಾಚರೇತ್ ।
ಮಾಘಸ್ನಾನಂ ಸುಶೀತೇನ ಶಸ್ತಂ ಕಲುಷನಾಶನಂ ॥ ೮ ॥

---

೪. ಈ ಮಾಘಮಾಸದಲ್ಲಿ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ಹೋಗುತ್ತವೆ. ಬಹು ಪುಣ್ಯಗಳನ್ನು ಕೊಡುವ ಮಾಘಮಾಸವು ಸಿಕ್ಕುವುದು ಬಹು ಕಷ್ಟವು.

೫. ಮಾಘಮಾಸವು ಬಂದಾಗ ದೇವತೆಗಳು ನೀರಿನಲ್ಲಿ ತಮ್ಮ ತೇಜಸ್ಸುಗಳನ್ನು ಬಿಡುತ್ತಾರೆ. ಆದ್ದರಿಂದ ಆಗ ನೀರು ಪವಿತ್ರವಾಗಿರುತ್ತದೆ. ಮತ್ತು ಎಲ್ಲಾ ಪಾಪಗಳನ್ನೂ ನಾಶ ಮಾಡುತ್ತದೆ.

೬. ಮಾಘಮಾಸದಲ್ಲಿ ನಿಯಮದಿಂದಿರುವವರು ಯಾವ ಗತಿಯನ್ನು ಹೊಂದುವರೋ ಅಂತಹ ಗತಿಯನ್ನು ಬೇರೆ ಯಾವ ಕಾಲದಲ್ಲಿಯೂ ಹೊಂದಲಾಗುವುದಿಲ್ಲ.

೭-೮. ಈ ಮಾಘಮಾಸದಲ್ಲಿ ಪ್ರವಾಹದ ನೀರಿನಲ್ಲಿ ಸ್ನಾನವು ಉತ್ತಮವಾದುದು. ಬಾವಿ, ಕೆರೆ, ಕೊಳಗಳಲ್ಲಿ ಸ್ನಾನಮಾಡುವುದು ಮಧ್ಯಮವು. ಶ್ರೇಯಸ್ಸನ್ನು ಅಪೇಕ್ಷಿಸುವವನು ಮನೆಯಲ್ಲಿ ಮಾಘಮಾಸದ ಸ್ನಾನವನ್ನು ಮಾಡಬಾರದು. ಮಾಘಸ್ನಾನವು ತಣ್ಣೀರಿನಲ್ಲಿ ಬಹು ಉತ್ತಮವು. ಮತ್ತು ಪಾಪನಾಶಕವು.

ನ ಸೌಖ್ಯಾಲ್ಲಭ್ಯತೇ ಪುಣ್ಯಂ ಕ್ಲೇಶಾತ್ಪುಣ್ಯಮವಾಪ್ಯತೇ ।
ನ ವಹ್ನಿಂ ಸೇವಯೇತ್ ಸ್ನಾತಃ ಶ್ರೇಯೋರ್ಥೀ ನಿಯಮಾದಿಕೃತ್ ॥ ೯ ॥

ಸ್ನಾತೋ ನ ಸೇವಯೇದ್ವಹ್ನಿಂ ಶೀತಾರ್ತಸ್ತು ಕಥಂಚನ ।
ಸರಿತಾಮಪ್ಯಭಾವೇ ತು ನವಕುಂಭಸ್ಥಿತಂ ಜಲಂ ॥ ೧೦ ॥

ವಾಯುನಾ ತಾಡಿತಂ ರಾತ್ರೌ ಗಂಗಾಸ್ನಾನಸಮಂ ಹಿ ತತ್ ।
ತನ್ನಾಸ್ತಿ ಪಾತಕಂ ಲೋಕೇ ಯನ್ನ ಸ್ನಾನಾದ್ವಿಶೋಧಯೇತ್ ॥ ೧೧ ॥

ಅಗ್ನಿಪ್ರವೇಶಾದಧಿಕಂ ಮಾಘಸ್ನಾನಂ ವಿದುರ್ಬುಧಾಃ ।
ವ್ರತಾನಾಂ ಕ್ಲೇಶಮಾತ್ರಂ ತು ಸ್ನಾತಾನಾಮಕ್ಷಯಂ ಫಲಂ ॥ ೧೨ ॥

ಏತಸ್ಮಾತ್ಕಾರಣಾದೇವ ಮಾಘಸ್ನಾನಂ ವಿಶಿಷ್ಯತೇ ।
ಅಹನ್ಯಹನಿ ದಾತವ್ಯಾಃ ತಿಲಾಶ್ಶರ್ಕರಯಾ ಸಹ ॥ ೧೩ ॥

---

೯. ಸುಖದಿಂದ ಪುಣ್ಯ ಬರುವುದಿಲ್ಲ. ಕಷ್ಟಪಟ್ಟರೇನೇ ಪುಣ್ಯಬರುವುದು. ಮಾಘಸ್ನಾನವನ್ನು ನಿಯಮದಿಂದ ಆಚರಿಸುತ್ತಿರುವವರು ಸ್ನಾನವಾದ ಮೇಲೆ ಬೆಂಕಿಯನ್ನು ಕಾಸಿಕೊಳ್ಳಬಾರದು.

೧೦-೧೧. ಮಾಘಸ್ನಾನಮಾಡಿ ಶೀತದಿಂದ ನಡುಗುತ್ತಿರುವಾಗ ಬೆಚ್ಚಗಾಗಲೆಂದು ಬೆಂಕಿಯನ್ನು ಕಾಸಿಕೊಳ್ಳಬಾರದು. ತಾನಿರುವ ಜಾಗದಲ್ಲಿ ನದಿಗಳಿಲ್ಲದಿದ್ದರೆ ಹೊಸದಾದ ಗಡಿಗೆಯಲ್ಲಿ ಸಾಯಂಕಾಲದಲ್ಲಿ ನೀರನ್ನು ತುಂಬಿ ಗಾಳಿಯಾಡುವ ಸ್ಥಳದಲ್ಲಿ ಇಟ್ಟಿರಬೇಕು. ಅದು ರಾತ್ರಿಯೆಲ್ಲವೂ ಗಾಳಿಯಿಂದ ಸೋಕಿದಮೇಲೆ ಉಷಃಕಾಲದಲ್ಲಿ ಸ್ನಾನಮಾಡಬೇಕು. ಅದು ಗಂಗಾಸ್ನಾನಕ್ಕೆ ಸಮವೆಂದು ಹೇಳಲ್ಪಟ್ಟಿದೆ. ಸ್ನಾನದಿಂದ ನಾಶವಾಗದಿರುವ ಪಾಪವು ಲೋಕದಲ್ಲಿ ಮತ್ತೊಂದಿಲ್ಲ.

೧೨-೧೪. ಅಗ್ನಿಪ್ರವೇಶಮಾಡಿ ಪ್ರಾಣಬಿಡುವುದಕ್ಕಿಂತಲೂ ಈ ಮಾಘಸ್ನಾನವು ಉತ್ತಮವಾದುದೆಂದು ತಿಳಿದವರು ಹೇಳುತ್ತಾರೆ. ವ್ರತಗಳನ್ನು ಮಾಡಿದರೆ ದೇಹಕ್ಕೆ ಶ್ರಮವಾಗುವುದೊಂದೇ ಫಲವು. ಮಾಘಸ್ನಾನಮಾಡಿದವರಿಗಾದರೋ ಅಕ್ಷಯಫಲವುಂಟು. ಈ ಕಾರಣದಿಂದಲೇ ಮಾಘಸ್ನಾನವು ಉತ್ತಮವಾದುದೆಂದು ಪ್ರಸಿದ್ಧವಾಗಿದೆ. ಈ ಮಾಘಮಾಸದಲ್ಲಿ ಪ್ರತಿದಿವಸವೂ

**ಮಾಘಾವಸಾನೇ ಸುಮನಾಃ ಷಡ್ರಸೇನ ದ್ವಿಜೋತ್ತಮಾನ್ ।**
**ಭೋಜಯೇದ್ವಿಧಿವದ್ಭಕ್ತ್ಯಾ ವ್ರತಸ್ಯ ಪರಿಪೂರ್ತಯೇ ॥ ೧೪ ॥**

**ಸೂರ್ಯೋ ಮೇ ದೀಯತಾಂ ದೇವೋ ಮುಕ್ತಿಂ ದದ್ಯಾನ್ನಿರಂಜನಾಂ ।**
**ದಂಪತ್ಯೋರ್ವಾಸಸೀ ಶುಕ್ಲೇ ಸಪ್ತಧಾನ್ಯಂ ತಥೈವ ಚ ॥ ೧೫ ॥**

**ತ್ರಿಂಶಚ್ಚ ಮೋದಕಾಃ ದೇಯಾಃ ಕೃತಾಸ್ತಿಲಮಯಾಶ್ಶುಭಾಃ ।**
**ಭಾಗ ಏಕಶ್ಶರ್ಕರಾಯಾಸ್ತಿಲಭಾಗಾಸ್ತ್ರಯಸ್ತಥಾ ॥ ೧೬ ॥**

**ನಾರಿಕೇಲಂ ತಥೈಲಾಶ್ಚ ಪ್ರಕ್ಷಿಪೇತ್ತತ್ರ ಜೀರಕಂ ।**
**ಮರೀಚೈರ್ಮಿಲಿತಾನ್ ಕೃತ್ವಾ ಬ್ರಾಹ್ಮಣೇಭ್ಯೋ ನಿವೇದಯೇತ್ ॥ ೧೭ ॥**

**ಅಭ್ಯಂಗಂ ವರ್ಜಯಿತ್ವಾ ತು ಮಾಘಂ ನಯತಿ ಯೋ ನರಃ ।**
**ತಸ್ಯೈಷ ವಿಧಿರುದ್ದಿಷ್ಟಃ ಸರ್ವಪಾಪಕ್ಷಯಾವಹಃ ॥ ೧೮ ॥**

---

ಎಳ್ಳನ್ನೂ ಸಕ್ಕರೆಯನ್ನೂ ದಾನಮಾಡಬೇಕು. ಮಾಘಮಾಸವು ಮುಗಿದಮೇಲೆ ವ್ರತವು ಸಾಂಗವಾಗಿ ನೆರವೇರಲು ಭಕ್ತಿಯಿಂದ ಬ್ರಾಹ್ಮಣರಿಗೆ ಷಡ್ರಸದಿಂದಲೂ ಕೂಡಿದ ಭೋಜನವನ್ನು ಮಾಡಿಸಬೇಕು.

೧೫-೧೭. ಸ್ವಾಮಿಯಾದ ಸೂರ್ಯನು ತೃಪ್ತನಾಗಿ ನನಗೆ ಉತ್ತಮವಾದ ಮುಕ್ತಿಯನ್ನು ಕೊಡಲಿ ಎಂದು ಕೇಳಿಕೊಳ್ಳಬೇಕು. ದಂಪತಿಗಳಿಗೆ ಭೋಜನ ವನ್ನು ಮಾಡಿಸಿ ಬಿಳಿಯ ಬಟ್ಟೆಗಳನ್ನು ದಾನಮಾಡಬೇಕು. ಅಂತೆಯೇ ಏಳು ಬಗೆಯಾದ ಧಾನ್ಯಗಳನ್ನು ಕೊಡಬೇಕು. (ರಾಹು ಕೇತುಗಳ ಧಾನ್ಯಗಳನ್ನು ಕೊಡ ಬಾರದು) ಮತ್ತು ಮೂವತ್ತು ಕಡಬುಗಳನ್ನೂ ಕೊಡಬೇಕು. ಅವನ್ನು ಎಳ್ಳನ್ನು ಹಾಕಿ ಮಾಡಿರಬೇಕು. ಆ ಕಡುಬಿನಲ್ಲಿ ಒಂದು ಭಾಗ ಸಕ್ಕರೆ, ಮೂರು ಭಾಗ ಏಲಕ್ಕಿ, ಎಳ್ಳೂ ಸೇರಿರಬೇಕು ಅದರೊಳಕ್ಕೆ ಕೊಬ್ಬರಿ ಅಥವಾ ತೆಂಗಿನಕಾಯಿನ ತುರಿ, ಜೀರಿಗೆ ಮೆಣಸು ಇವೆಲ್ಲವನ್ನೂ ಹಾಕಿರಬೇಕು. ಇಂತಹವನ್ನು ಬ್ರಾಹ್ಮಣ ರಿಗೆ ಕೊಡಬೇಕು.

೧೮. ಮಾಘಮಾಸದಲ್ಲಿ ಅಭ್ಯಂಜನವನ್ನು ಮಾಡಿಕೊಳ್ಳದೆ ಯಾವನು ಮಾಘಸ್ನಾನವನ್ನು ಮಾಡುತ್ತಾನೆಯೋ ಅವನು ಈ ರೀತಿಯಾಗಿ ನಿಯಮ ಗಳನ್ನು ಪಾಲಿಸಬೇಕು. ಅವನ ಪಾಪಗಳು ಹೋಗುತ್ತವೆ.

ಬ್ರಾಹ್ಮಣಾನ್ ಪ್ರಾರ್ಥಯೇದ್ಭಕ್ತ್ಯಾ ಸ್ಮರನ್ ದೇವಂ ಸನಾತನಂ ।
ಸರ್ವಪಾಪಪ್ರಶಮನಂ ಶ್ರದ್ಧಧಾನಃ ಸಮಾಹಿತಃ ॥ ೧೯ ॥

ಸವಿತ್ರೇ ಪ್ರಸವಿತ್ರೇತಿ ಮಾಘಸ್ನಾಯಿೂ ವರಂ ಯುತಃ ।
ಭಿತ್ವಾ ಬಿಂಬಂ ರವೇರ್ಯಾತಿ ತದ್ವಿಷ್ಣೋಃ ಪರಮಂ ಪದಂ ॥ ೨೦ ॥

ಸವಿತ್ರೇ ಪ್ರಸವಿತ್ರೇ ಚ ಪರಧಾಮ್ನೇ ನಮೋಽಸ್ತು ತೇ ।
ತ್ವತ್ತೇಜಸಾ ಪರಿಭ್ರಷ್ಟಂ ಪಾಪಂ ಯಾತು ಸಹಸ್ರಧಾ ॥ ೨೧ ॥

ಏವಂ ವಿಧೋ ಮಾಘಮಾಸಃ ತಪಸ್ವಿಜನವಲ್ಲಭಃ ।
ಭೀಮಸೇನಃ ಪುರಾ ಧೌಮ್ಯಮಪೃಚ್ಛತ್ಸ್ವಪುರೋಹಿತಂ ॥ ೨೨ ॥

---

೧೯. ಆ ಸನಾತನನಾದ ಎಲ್ಲಾ ಪಾಪಗಳನ್ನೂ ನಾಶಮಾಡುವ ಸ್ವಾಮಿಯನ್ನು ಸ್ಮರಿಸುತ್ತ ಶ್ರದ್ಧೆಯಿಂದ ಜಿತೇಂದ್ರಿಯನಾಗಿ ಬ್ರಾಹ್ಮಣರನ್ನು ಭಕ್ತಿಯಿಂದ ಪ್ರಾರ್ಥಿಸಿಕೊಳ್ಳಬೇಕು.

೨೦. ಸವಿತೃವು ತೃಪ್ತನಾಗಲಿ. ಪ್ರಸವಿತೃವು ತೃಪ್ತನಾಗಲಿ, ಎಂದು ಪ್ರಾರ್ಥಿಸಿಕೊಂಡರೆ ಅವರು ಸೂರ್ಯಬಿಂಬವನ್ನು ಭೇದಿಸಿಕೊಂಡು ಆ ವಿಷ್ಣುವಿನ ಪರಮಪದವನ್ನು ಹೊಂದುತ್ತಾರೆ.

೨೧. ಸವಿತೃವಿಗೆ ನಮಸ್ಕಾರವು. ಪ್ರಸವಿತೃವಿಗೆ ನಮಸ್ಕಾರವು. ಪರಂಧಾಮನಿಗೆ ನಮಸ್ಕಾರವು. ಎಲೈ ಸೂರ್ಯನೇ ! ನಿನ್ನ ತೇಜಸ್ಸಿನಿಂದ ಈ ಪಾಪವು ಸುಡಲ್ಪಟ್ಟು ಸಾವಿರಚೂರಾಗಿ ಹೋಗಲಿ. ಎಂದು ಪ್ರಾರ್ಥಿಸಬೇಕು.

೨೨. ಮಾಘಮಾಸವು ಈ ರೀತಿಯಾಗಿದ್ದುಕೊಂಡು ತಪಸ್ವಿಜನಗಳಿಗೆ ಪ್ರೀತಿಪಾತ್ರವಾಗಿದೆ. ಪೂರ್ವದಲ್ಲಿ ಭೀಮಸೇನನು ತನ್ನ ಪುರೋಹಿತನಾದ ಧೌಮ್ಯ ಋಷಿಯನ್ನು ಕುರಿತು ಇಂತೆಂದನು.

॥ ಭೀಮ ಉವಾಚ ॥

ಕುರ್ವಂತಿ ಮನುಜಾಸ್ಸರ್ವೇ ಉಪವಾಸಂ ಹರೇರ್ದಿನೇ ।
ಹಸಂತಿ ಮಾಂ ಸವಯಸೋ ಭುಂಕ್ತೇಽಸೌ ಹರಿವಾಸರೇ ॥ ೨೩ ॥

ಇತಿ ನಿಂದಂತಿ ಮಾಮಾರ್ಯ ಬಹುಭಕ್ಷೀ ವೃಕೋದರಃ ।
ದುಶ್ಶಾಸನಾದ್ಯಾಃ ಕುರವಸ್ತೇ ಹಸಂತಿ ವಿಶೇಷತಃ ॥ ೨೪ ॥

ಏಕಾದಶ್ಯಾಂ ವಿಶೇಷೇಣ ಜಾಠರೋಗ್ನಿರ್ವಿಜೃಂಭತೇ ।
ಉಪವಾಸಸಹೋ ನಾಹಂ ನಿತರಾಂ ಕ್ಷುದ್ಬಲೀಯಸೀ ॥ ೨೫ ॥

ಜಿಹ್ವಾಂ ನಿಯಮ್ಯ ಯತ್ನೇನ ಪ್ರಾಣಾನ್ ಧೃತ್ವಾ ಸಮಾಹಿತಃ ।
ಫಲಮೂಲಾನಿ ಸಂಪ್ರಾಶ್ಯ ಕರೋಮಿ ಸಮುಪೋಷಣಂ ॥ ೨೬ ॥

---

೨೩. ಎಲೈ ಗುರುವಾದ ಧೌಮ್ಯನೇ! ಹರಿದಿನದಲ್ಲಿ ಮನುಷ್ಯರೆಲ್ಲರೂ ಉಪಾಸವನ್ನು ಮಾಡುತ್ತಾರೆ. ಆದರೆ ನನ್ನ ಜೊತೆಯವರು ಈ ಭೀಮನು ಹರಿವಾಸರದದಿನದಲ್ಲಿ ಊಟಮಾಡುತ್ತಾನೆ. ಎಂದು ಹಾಸ್ಯ ಮಾಡುತ್ತಾರೆ.

೨೪. ಎಲೈ ಪೂಜ್ಯನಾದ ಗುರುವೇ ! ವೃಕೋದರನು ಹೊಟ್ಟೆಬಾಕನು. ಬಹುವಾಗಿ ತಿನ್ನುತ್ತಾನೆ. ಎಂಬುದಾಗಿ ಎಲ್ಲರೂ ನಿಂದಿಸುತ್ತಾರೆ. ಅದರಲ್ಲಿಯೂ ದುಶ್ಶಾಸನನೇ ಮುಂತಾದ ಕೌರವರು ಬಹುವಾಗಿ ಹಾಸ್ಯಮಾಡಿಕೊಂಡು ನಗುತ್ತಾರೆ.

೨೫. ಏಕಾದಶಿಯ ದಿವಸವೇ ನನ್ನ ಜಠರಾಗ್ನಿಯು ಬಹುವಾಗಿ ಹೆಚ್ಚುತ್ತದೆ. ನಾನು ಉಪವಾಸವನ್ನು ಸಹಿಸಲಾರೆನು. ನನಗೆ ಹಸಿವು ಹೆಚ್ಚು. ತಡೆಯಲಾಗುವುದಿಲ್ಲ.

೨೬. ಏಕದಶಿಯ ದಿವಸ ನಾನು ನಾಲಿಗೆಯನ್ನು ಬಲಾತ್ಕಾರದಿಂದ ಕಚ್ಚಿಕೊಂಡು ಉಸಿರನ್ನು ಬಿಗಿಯಾಗಿ ಕಷ್ಟದಿಂದ ತಡೆದುಕೊಂಡು ಹಣ್ಣು ಗೆಡ್ಡೆಗೆಣಸುಗಳನ್ನು ತಿಂದು ಉಪವಾಸವನ್ನು ಮಾಡುತ್ತೇನೆ.

ಏಕಾಮೇಕಾದಶೀಂ ಕೃತ್ವಾ ಸರ್ವೈಕಾದಶಿಪುಣ್ಯಭಾಕ್ ।
ಯಥಾ ಸ್ಯಾಮುಹಮಾಚಾರ್ಯ ಶಾಸ್ತ್ರತಸ್ತದ್ವಿಚಾರ್ಯತಾಂ ।
ಏಕಾದಶೀವ್ರತಂ ಕರ್ತುಂ ಬ್ರೂಹಿ ಧೌಮ್ಯ ಮುನೀಶ್ವರ ॥ ೨೭ ॥

॥ ಧೌಮ್ಯ ಉವಾಚ ॥

ಸಾಧು ಭೀಮ ಮಹಾಬಾಹೋ ಸತ್ಪ್ರಸಂಗಸ್ತ್ವಯಾ ಕೃತಃ ।
ತತ್ತೇಹಂ ಸಂಪ್ರವಕ್ಷ್ಯಾಮಿ ಕೌಂತೇಯ ಕುರುಪುಂಗವ ॥ ೨೮ ॥

ಮಾಘಸ್ಯ ಶುಕ್ಲಪಕ್ಷೇ ಯಾ ಭವತ್ಯೇಕಾದಶೀ ಶುಭಾ ।
ಪುಷ್ಯರ್ಕ್ಷೇಣ ಚ ಸಂಯುಕ್ತಾ ಪುಣ್ಯವೃದ್ಧಿಕರೀ ನೃಣಾಂ ॥ ೨೯ ॥

ವಿನಾಪಿ ಪುಷ್ಯಸಂಯೋಗಾದುಪೋಷ್ಯಾ ವಿಷ್ಣುತುಷ್ಟಿದಾ ।
ಏನಾಮೇಕಾದಶೀಮೇಕಾಮುಪೋಷ್ಯ ವಿಧಿವನ್ನರಃ ॥ ೩೦ ॥

---

೨೭. ಎಲೈ ಆಚಾರ್ಯನೇ ! ನಾನು ಒಂದೇ ಏಕಾದಶಿಯನ್ನು ಆಚರಿಸಿ ಎಲ್ಲಾ ಏಕಾದಶಿಗಳ ಪುಣ್ಯವನ್ನೂ ಹೊಂದುವಂತೆ ಶಾಸ್ತ್ರರೀತಿಯಿಂದ ವಿಚಾರ ಮಾಡಿ ಹೇಳು. ಅಂತಹದೊಂದು ಏಕಾದಶಿಯನ್ನು ಹೇಳಿದರೆ ನಾನು ಆಚರಿಸುತ್ತೇನೆ.

೨೮. ಧೌಮ್ಯನು ಹೇಳಿದನು—ಎಲೈ ಕುರುಶ್ರೇಷ್ಠನಾದ ಕುಂತೀಪುತ್ರನೇ ! ನೀನು ಒಳ್ಳೆಯ ವಿಷಯವನ್ನೇ ಕೇಳಿದೆ. ಅದನ್ನು ನಾನು ನಿನಗೆ ಹೇಳುತ್ತೇನೆ.

೨೯. ಎಲೈ ಭೀಮನೇ ! ಮಾಘಮಾಸದಲ್ಲಿ ಶುಕ್ಲ ಪಕ್ಷದಲ್ಲಿ ಬರುವ ಏಕಾದಶಿಯು ಪುಣ್ಯವನ್ನು ಕೊಡುತ್ತದೆ ಶುಭವಾದುದು. ಅದು ಪುಷ್ಯ ನಕ್ಷತ್ರದಿಂದ ಕೂಡಿದ್ದರೆ ಪುಣ್ಯವನ್ನು ಬಹುವಾಗಿ ಹೆಚ್ಚಿಸುತ್ತದೆ.

೩೦-೩೧. ಆ ಮಾಘಶುದ್ಧ ಏಕಾದಶಿಗೆ ಪುಷ್ಯ ನಕ್ಷತ್ರದ ಸಂಬಂಧವಿಲ್ಲದಿದ್ದರೂ ಅದರಲ್ಲಿ ಉಪವಾಸಮಾಡಬೇಕು. ಅದು ವಿಷ್ಣುವಿಗೆ ಪ್ರೀತಿಯನ್ನುಂಟುಮಾಡುತ್ತದೆ. ಇದೊಂದು ಏಕಾದಶಿಯನ್ನು ವಿಧಿವತ್ತಾಗಿ ಮನುಷ್ಯನು

ಏಕಾಬ್ದೈಕಾದಶೀ ಪುಣ್ಯಾ ಫಲಭಾಕ್ಸ್ಯಾನ್ನ ಸಂಶಯಃ ।
ಏಷಾ ಪುಣ್ಯಾ ಮಹಾಭಾಗ ನರಾಣಾಂ ಪುಣ್ಯಕರ್ಮಣಾಂ ॥ ೩೧ ॥

ವಿನಿಹಂತಿ ಮಹಾಪಾಪಂ ಕುನೃಪೋ ವಿಷಯಂ ಯಥಾ ।
ಹಿಮಂ ಯಥೋಷ್ಣಸಂಯೋಗಾಧ್ಧನರ್ಥಶ್ಚಾರ್ಥಸಂಚಯಂ ॥ ೩೨ ॥

ಯಥಾ ಚ ಕೀರ್ತನಾದ್ದಾನಂ ತಪೋ ವೈ ವಿಸ್ಮಯಾದ್ಯಥಾ ।
ಅಶಿಕ್ಷಯಾ ಯಥಾ ಪುತ್ರೋ ಗಾವೋ ದೂರಗತಾ ಯಥಾ ॥ ೩೩ ॥

ಕ್ರೋಧೇನೈವ ಯಥಾ ಶ್ರಾದ್ಧಂ ಯಥಾ ವಿತ್ತಮವರ್ಧನಾತ್ ।
ತಥೈವ ಹಂತಿ ಪಾಪಾನಿ ಇಯಮೇಕಾದಶೀ ತಿಥಿಃ ॥ ೩೪ ॥

---

ಉಪವಾಸ ಮಾಡಿದರೆ ಒಂದು ವರ್ಷದ ಏಕಾದಶಿಗಳನ್ನೆಲ್ಲಾ ಆಚರಿಸಿದ ಪುಣ್ಯವನ್ನು ಹೊಂದುತ್ತಾನೆ. ಎಲೈ ಭೀಮನೇ ! ಈ ಏಕಾದಶಿಯು ಮಹಾಪುಣ್ಯಪ್ರದವಾದುದು. ಪುಣ್ಯ ಮಾಡತಕ್ಕವರಿಗೆ ಬಹು ಪುಣ್ಯವನ್ನು ಕೊಡುತ್ತದೆ.

೩೨. ಕೆಟ್ಟವನಾದ ದೊರೆಯು ತನ್ನ ರಾಜ್ಯವನ್ನು ಹಾಳುಮಾಡುವಂತೆ ಈ ಏಕಾದಶಿಯು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಉಷ್ಣದ ಸಂಬಂಧವು ಶೀತವನ್ನೂ ಅನರ್ಥವು ಅರ್ಥವನ್ನೂ ನಾಶಮಾಡುವಂತೆ ಈ ಏಕಾದಶಿಯು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ.

೩೩. ದಾನಮಾಡಿ ಹೇಳಿಕೊಂಡರೆ ಅದರ ಫಲವು ನಾಶವಾಗುವಂತೆಯೂ, ವಿಸ್ಮಯದಿಂದ ತಪಸ್ಸು ನಾಶವಾಗುವಂತೆಯೂ, ಶಿಕ್ಷಿಸದಿದ್ದರೆ ಮಗನು ನಾಶವಾಗುವಂತೆಯೂ, ದೂರ ಹೋದರೆ ಗೋವುಗಳು ನಾಶವಾಗುವಂತೆಯೂ ಪಾಪಗಳು ಈ ಏಕಾದಶಿಯ ಆಚರಣೆಯಿಂದ ನಾಶಹೊಂದುತ್ತದೆ.

೩೪. ಕ್ರೋಧವು ಶ್ರಾದ್ಧವನ್ನು ನಾಶಮಾಡವಂತೆಯೂ, ಹಣವು ಹೆಚ್ಚಿಸದಿದ್ದರೆ ನಾಶವಾಗುವಂತೆಯೂ, ಈ ಏಕಾದಶಿಯ ತಿಥಿಯು ಪಾಪಗಳನ್ನು ನಾಶಮಾಡುತ್ತದೆ.

ಪಂಚಪಾತಕಿನಾಂ ಪಾಪಂ ನಿಹನ್ಯಾಚ್ಚ ತ್ರಿಪುಷ್ಕರಂ ।
ನ ಚಾಪಿ ನೈಮಿಷಂ ಕ್ಷೇತ್ರಂ ಕ್ಷೇತ್ರಂ ಕೌರವಸಂಜ್ಞಿತಂ || ೩೫ ||

ಪ್ರಯಾಗೋ ನ ಗಯಾ ಗಂಗಾ ನ ರೇವಾ ನ ಸರಸ್ವತೀ ।
ಕಾವೇರೀ ಯಮುನಾ ಚೈವ ದೇವಿಕಾ ನ ಕಥಂಚನ || ೩೬ ||

ನಾಪರಸ್ತೀರ್ಥಸಂಘಾತೋ ಹರೇರ್ದಿನಸಮಃ ಕ್ವಚಿತ್ ।
ನ ದಾನಂ ನ ಜಪೋ ಹೋಮೋ ನ ಚಾನ್ಯತ್ಸುಕೃತಂ ಕ್ವಚಿತ್ || ೩೭ ||

ನಾಲಂ ಪಾತಕನಾಶಾಯ ಮುಕ್ತ್ವೈಕಂ ಹರಿವಾಸರಂ ।
ಸಕೃಚ್ಚೋಪೋಷಣಾದ್ಯಸ್ಯ ನಶ್ಯಂತೇ ಪಾಪರಾಶಯಃ || ೩೮ ||

ಏಕತಃ ಪೃಥಿವೀದಾನಮೇಕತೋ ಹರಿವಾಸರಃ ।
ತುಲಯಾ ಪೃಥಿವೀದಾನಾದಧಿಕೋ ಹರಿವಾಸರಃ || ೩೯ ||

---

೩೫. ಬ್ರಹ್ಮಹತ್ಯೆಯೇ ಮುಂತಾದ ಪಂಚ ಮಹಾಪಾಪಗಳನ್ನು ಮಾಡಿದವರು ತ್ರಿಪುಷ್ಕರ, ನೈಮಿಷ, ಕುರುಕ್ಷೇತ್ರಗಳಲ್ಲಿ ಸ್ನಾನಮಾಡಿದರೆ ಅವೊಂದೂ ಅವರ ಪಾಪಗಳನ್ನು ಹೋಗಲಾಡಿಸಲಾರವು. ಈ ಹರಿಯದಿನವಾದ ಏಕಾದಶಿಯಾದರೋ ಅವೆಲ್ಲವನ್ನೂ ಹಾಳುಮಾಡುತ್ತದೆ.

೩೬. ಪ್ರಯಾಗವಾಗಲಿ, ಗಂಗೆಯಾಗಲಿ, ರೇವೆಯಾಗಲಿ, ಸರಸ್ವತಿಯಾಗಲಿ, ಕಾವೇರಿಯಾಗಲಿ, ಯಮುನೆಯಾಗಲಿ, ದೇವಿಕೆಯಾಗಲಿ, ಇವೆಲ್ಲವೂ ಸೇರಿಯೇ ಆಗಲಿ ಆದರೂ ಈ ಹರಿಯದಿನದ ಸಮವಾಗಿ ಆಗಲಾರವು.

೩೭-೩೮. ದಾನ, ಜಪ, ಹೋಮ, ಬೇರೆಯಾದ ಪುಣ್ಯಕೆಲಸಗಳು ಯಾವುವೂ ಕೂಡ ಈ ಹರಿವಾಸರ ಒಂದನ್ನು ಬಿಟ್ಟು ಪಾಪಗಳನ್ನು ನಾಶಮಾಡಲಾರವು. ಇದರಲ್ಲಿ ಒಂದಾವರ್ತಿ ಉಪವಾಸಮಾಡಿದರೇನೇ ಪಾಪಗಳ ರಾಶಿಗಳೇ ಹೋಗುತ್ತವೆ.

೩೯. ಬ್ರಹ್ಮನು ಒಂದು ತಕ್ಕಡಿಯನ್ನು ಹಿಡಿದು ಒಂದು ಕಡೆಯಲ್ಲಿ ಭೂಮಿಯನ್ನೆಲ್ಲಾ ದಾನಮಾಡಿದ ಧರ್ಮವನ್ನೂ ಮತ್ತೊಂದು ಕಡೆಯಲ್ಲಿ ಹರಿವಾಸರದ ಧರ್ಮವನ್ನೂ ಹಾಕಿ ತೂಗಲು, ಹರಿವಾಸರದ ಕಡೆಯು ಭಾರವಾಯಿತು.

ದಶಮ್ಯಾಮೇಕಭುಕ್ತೇನ ಬ್ರಹ್ಮಚರ್ಯೇಣ ವೈ ನಿಶಿ ।
ಪ್ರೀತೋ ವೈ ಭಗವಾನ್ ಬ್ರಹ್ಮಾ ಸರ್ವಲೋಕಪಿತಾಮಹಃ ॥ ೪೦ ॥

ಅನಶ್ನಾತೀ ದಶಮ್ಯಾಂ ಸ್ಯಾದ್ಬ್ರಹ್ಮಚಾರೀ ಭವೇನ್ನಿಶಿ ।
ಏಕಾದಶ್ಯಾಮುಷಃಕಾಲೇ ಸ್ನಾತ್ವಾ ನಿರ್ವರ್ತ್ಯ ನೈತ್ಯಕಂ ॥ ೪೧ ॥

ಔಪಾಸನಾಹುತಿಂ ಹುತ್ವಾ ಬ್ರಹ್ಮಯಜ್ಞಂ ಸಮಾಪ್ಯ ಚ ।
ಉಪವಾಸಂ ಚ ಸಂಕಲ್ಪ್ಯ ಪಶ್ಚಾನ್ಮಂತ್ರಮಿಮಂ ಜಪೇತ್ ॥ ೪೨ ॥

ಅದ್ಯ ಸ್ಥಿತ್ವಾ ನಿರಾಹಾರಃ ಶ್ವೋಭೂತೇ ಪರಮೇಶ್ವರ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥ ೪೩ ॥

ಪ್ರಮಾದಾದಥವಾಲಸ್ಯಾದ್ಧರೇ ಕೇಶವ ಮಾಧವ ।
ವ್ರತಸ್ಯಾಸ್ಯ ಚ ವೈ ವಿಘ್ನೋ ನ ಭವೇತ್ತ್ವತ್ಪ್ರಸಾದತಃ ॥ ೪೪ ॥

---

೪೦. ಈ ಹರಿವಾಸರವನ್ನು ಮಾಡುವಾಗ ದಶಮಿಯ ದಿವಸ ಒಪ್ಪತ್ತು ಊಟಮಾಡುವುದರಿಂದಲೂ, ರಾತ್ರಿಯಲ್ಲಿ ಬ್ರಹ್ಮಚರ್ಯದಿಂದ ಇರುವುದರಿಂದಲೂ ಎಲ್ಲಾ ಲೋಕಗಳಿಗೂ ಪಿತಾಮಹನಾದ ಬ್ರಹ್ಮನು ಪ್ರೀತನಾಗುವನು.

೪೧–೪೨. ದಶಮಿಯ ದಿನ ಮಧ್ಯಾಹ್ನದಲ್ಲಿ ಊಟಮಾಡಿ, ರಾತ್ರಿಯಲ್ಲಿ ಊಟಮಾಡದೆ ಉಪವಾಸವಿರಬೇಕು. ಆದಿನ ರಾತ್ರಿಯಲ್ಲಿಯೂ ಬ್ರಹ್ಮಚರ್ಯದಿಂದ ಇರಬೇಕು. ಮಾರನೆಯ ದಿವಸ (ಏಕಾದಶಿಯ ದಿವಸ) ಉಷಃಕಾಲಕ್ಕೆ ಎದ್ದು ಸ್ನಾನಮಾಡಿ ನಿತ್ಯಕರ್ಮಗಳೆಲ್ಲವನ್ನೂ ಮುಗಿಸಿಕೊಂಡು ಔಪಾಸನವನ್ನು ಮಾಡಿ ಬ್ರಹ್ಮಯಜ್ಞವನ್ನು ಮಾಡಿ ಉಪವಾಸ ಮಾಡುತ್ತೇನೆಂದು ಸಂಕಲ್ಪಮಾಡಿಕೊಂಡು ಅನಂತರ ಈ ಮಂತ್ರವನ್ನು ಹೇಳಬೇಕು.

೪೩. ಎಲೈ ಪುಂಡರೀಕಾಕ್ಷನೇ ! ಈ ದಿನ ಆಹಾರವನ್ನು ತೆಗೆದುಕೊಳ್ಳದೆ ಉಪವಾಸವಿದ್ದು ನಾಳೆಯದಿನ ಪಾರಣೆಯನ್ನು ಮಾಡುತ್ತೇನೆ. ಎಲೈ ಅಚ್ಯುತನೇ! ನನ್ನನ್ನು ಕಾಪಾಡು.

೪೪. ನಾವು ನಿರೀಕ್ಷಿಸದಂತಹ ತೊಂದರೆಗಳಿಂದಲಾಗಲಿ, ಸೋಮಾರಿತನದಿಂದಾಗಲೀ ಈ ವ್ರತಕ್ಕೆ ವಿಘ್ನವು ನಿನ್ನ ಅನುಗ್ರಹದಿಂದ ಬಾರದಹಾಗೆ ಮಾಡು.

ಇತಿ ಸಂಕಲ್ಪ್ಯ ವಿಧಿವನ್ನಿಯಮೇನ ಸಮನ್ವಿತಃ ।
ತಸ್ಮಿನ್ ವರಾಹಪುರುಷಂ ಕೃತ್ವಾ ದೇವಂ ತು ಹಾಟಕಂ ॥ ೪೫ ॥

ಉಪಲಿಪ್ತೇ ಶುಚೌ ದೇಶೇ ಧಾನ್ಯಪೀಠೇ ನಿಧಾಯ ಚ ।
ಪೂರ್ಣಕುಂಭಮಲಂಕೃತ್ಯ ಶ್ವೇತೇನೈವ ತು ವಾಸಸಾ ॥ ೪೬ ॥

ತಸ್ಯೋಪರಿ ಶುಭಂ ವಸ್ತ್ರಂ ಚತುರಶ್ರಂ ನ್ಯಸೇದ್ವ್ರತೀ ।
ತದ್ವಸ್ತ್ರಪೀಠೇ ತದ್ಬಿಂಬಂ ನಿಧಾಯ ಪುನರರ್ಚಯೇತ್ ॥ ೪೭ ॥

ನಾನಾವಿಧಾನಿ ರತ್ನಾನಿ ಪೂರ್ಣಕುಂಭೋದರೇ ಕ್ಷಿಪೇತ್ ।
ವರಾಹಾಯ ನಮಃ ಪಾದೌ ಕ್ರೋಡಾಯೇತಿ ತತಃ ಕಟಿಂ ॥ ೪೮ ॥

ನಾಭಿಂ ಹಿರಣ್ಯಗರ್ಭಾಯ ಕುಕ್ಷಿಂ ಶ್ರೀವತ್ಸಧಾರಿಣೇ ।
ಬಾಹೂ ಸಹಸ್ರಶಿರಸೇ ಗ್ರೀವಾಂ ಸರ್ವೇಶ್ವರಾಯ ಚ ॥ ೪೯ ॥

---

೪೫–೪೭. ಈ ರೀತಿಯಾಗಿ ಸಂಕಲ್ಪಮಾಡಿಕೊಂಡು ನಿಯಮದಿಂದಿರಬೇಕು. ಆ ಏಕಾದಶಿಯಲ್ಲಿ ವರಾಹಸ್ವಾಮಿಯ ವಿಗ್ರಹವನ್ನಿಟ್ಟು ಅದರಮೇಲೆ ಒಂದು ಕಲಶವನ್ನು ಇಡಬೇಕು. ಒಂದು ತಂಬಿಗೆ ಅಥವಾ ಬಿಂದಿಗೆಗೆ ಬಿಳಿಯ ಬಟ್ಟೆಗಳನ್ನು ಹೊದ್ದಿಸಿ ಅಲಂಕರಿಸಬೇಕು. ಆ ಕಲಶದಮೇಲೆ ನಾಲ್ಕು ಮೂಲೆಯುಳ್ಳ ಚಚ್ಚೌಕವಾಗಿರುವ ಒಂದು ಒಳ್ಳೆಯ ಬಟ್ಟೆಯನ್ನು ಇಡಬೇಕು. ಆ ಬಟ್ಟೆಯಮೇಲೆ ಈ ವರಾಹಮೂರ್ತಿಯನ್ನು ಇಡಬೇಕು. ಅದನ್ನು ಪೂಜೆ ಮಾಡಬೇಕು.

೪೮-೫೦. ಅನೇಕ ಬಗೆಯಾದ ರತ್ನಗಳನ್ನು ಆ ಕುಂಭದೊಳಕ್ಕೆ ಹಾಕಬೇಕು. "ವರಾಹಾಯ ನಮಃ" ಎಂದು ಪಾದಗಳನ್ನೂ, "ಕ್ರೋಡಾಯ ನಮಃ" ಎಂದು ಸೊಂಟವನ್ನೂ "ಹಿರಣ್ಯಗರ್ಭಾಯ ನಮಃ" ಎಂದು ತೋಳುಗಳನ್ನೂ, "ಸರ್ವೇಶ್ವರಾಯ ನಮಃ" ಎಂದು ಕತ್ತನ್ನೂ, "ಸರ್ವಾತ್ಮನೇ ನಮಃ" ಎಂದು ಮುಖವನ್ನೂ, "ಸುಪ್ರಭಾಯ ನಮಃ" ಎಂದು ಹಣೆಯನ್ನೂ, "ಚಕ್ರಧರಾಯ ನಮಃ" ಎಂದು ಕೇಶಗಳನ್ನೂ ಪೂಜಿಸಬೇಕು. ಈ ರೀತಿಯಾಗಿ ಅಚ್ಯುತನನ್ನು ಪೂಜಿಸಬೇಕು.

ಮುಖಂ ಸರ್ವಾತ್ಮನೇ ಪೂಜ್ಯಂ ಲಲಾಟಂ ಸುಪ್ರಭಾಯ ಚ ।
ಕೇಶಾಂಶ್ಚ ಕ್ರಧರಾಯೇತಿ ಪೂಜಯೇದ್ದೇವಮಚ್ಯುತಂ ॥ ೫೦ ॥

ವಿಧಿನಾ ಪೂಜಯಿತ್ವಾ ತು ಕೃತ್ವಾ ಜಾಗರಣಂ ತಥಾ ।
ಶ್ರುತ್ವಾ ಪುರಾಣಂ ದೇವಸ್ಯ ಮಾಹಾತ್ಮ್ಯಪ್ರತಿಪಾದನಂ ॥ ೫೧ ॥

ಪ್ರಾತರ್ನಿರ್ವರ್ತ್ಯ ಕೃತ್ಯಾನಿ ತಥೈವ ಪುನರರ್ಚಯೇತ್ ।
ಸಮ್ಯಗಾರಾಧ್ಯ ದೇವೇಶಂ ಯಥಾವಿಭವವಿಸ್ತರಂ ॥ ೫೨ ॥

ಪ್ರಣಮ್ಯ ಬಹುಶೋ ಭಕ್ತ್ಯಾ ಪ್ರಾರ್ಥಯಿತ್ವಾ ಮನೋರಥಂ ।
ಕುಂಭಂ ಬಿಂಬಂ ತಥಾ ವಸ್ತ್ರಂ ಧಾನ್ಯಪಾತ್ರಾಣಿ ಕೃತ್ಸ್ನಶಃ ॥ ೫೩ ॥

ಆಚಾರ್ಯಾಯ ವ್ರತೀ ದದ್ಯಾದ್ಯಥಾಶಕ್ತಿ ಚ ದಕ್ಷಿಣಾಂ ।
ಪಶ್ಚಾತ್ತು ಪಾರಣಂ ಕುರ್ಯಾನ್ನಾತಿತೃಪ್ತಸ್ಸುಹೃದ್ವೃತಃ ॥ ೫೪ ॥

---

೫೧–೫೨. ಈ ರೀತಿಯಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ಪೂಜೆಮಾಡಬೇಕು. ಅನಂತರ ಜಾಗರಣೆ ಮಾಡಬೇಕು. ಆಗ ಆ ಸ್ವಾಮಿಯ ಮಹಿಮೆಗಳನ್ನು ಹೇಳತಕ್ಕ ಪುರಾಣಗಳನ್ನು ಕೇಳಬೇಕು. ಅನಂತರ ಬೆಳಗ್ಗೆ ಪ್ರಾತಃಕಾಲದ ಕೆಲಸಗಳನ್ನೆಲ್ಲಾ ಮಾಡಿಕೊಳ್ಳಬೇಕು. ಮತ್ತೆ ಸ್ವಾಮಿಯನ್ನು ಪೂಜಿಸಬೇಕು. ಹೀಗೆ ತನ್ನ ಹಣಕ್ಕೂ, ಯೋಗ್ಯತೆಗೂ ತಕ್ಕ ರೀತಿಯಲ್ಲಿ ಆ ಸ್ವಾಮಿಯನ್ನು ಪೂಜಿಸಬೇಕು.

೫೩–೫೪ ಭಕ್ತಿಯಿಂದ ಆ ಸ್ವಾಮಿಗೆ ಅನೇಕಬಾರಿ ನಮಸ್ಕರಿಸಬೇಕು. ಮತ್ತು ತನ್ನ ಮನೋರಥಗಳೆಲ್ಲವನ್ನೂ ಕೊಡುವಂತೆ ಪ್ರಾರ್ಥಿಸಿಕೊಳ್ಳಬೇಕು. ಕಲಶ ಪ್ರತಿಮೆ ವಸ್ತ್ರ ಧಾನ್ಯಪಾತ್ರೆ ಎಲ್ಲವನ್ನೂ ಮತ್ತು ಶಕ್ತಿಗನುಗುಣವಾಗಿ ದಕ್ಷಿಣೆಯನ್ನೂ ಆಚಾರ್ಯನಿಗೆ ಕೊಡಬೇಕು. ಅನಂತರ ಇಷ್ಟಮಿತ್ರ ಬಂಧುಗಳೊಡನೆ ಕೂಡಿಕೊಂಡು ಪಾರಣೆಯನ್ನು ಮಾಡಬೇಕು ತಾನು ಹೆಚ್ಚು ತೃಪ್ತಿಯಾಗುವಂತೆ ಊಟಮಾಡಬಾರದು. ಮಿಕ್ಕವರಿಗೆ ತೃಪ್ತಿಯಾಗುವಂತೆ ಊಟ ಮಾಡಿಸಬೇಕು.

ಏವಂ ವರಾಹಮಾರಾಧ್ಯ ನ ಭೂಯಸ್ತನುಮಾರ್ಗ ಭವೇತ್ ।
ಬಹುಜನ್ಮಾರ್ಜಿತಂ ಪಾಪಂ ಜ್ಞಾನಾಜ್ಞಾನಸಮುದ್ಭವಂ ॥ ೫೫ ॥

ಭಸ್ಮೀ ಭವತ್ಯಶೇಷೇಣ ತಮಃ ಸೂರ್ಯೋದಯೇ ಯಥಾ ।
ಏತತ್ಕುರುಷ್ವ ಕೌಂತೇಯ ಸರ್ವೈಕಾದಶಿಪುಣ್ಯದಂ ॥ ೫೬ ॥

॥ ವಸಿಷ್ಠ ಉವಾಚ ॥

ಇತಿ ಧೌಮ್ಯವಚಶ್ಶ್ರುತ್ವಾ ಭೀಮಸೇನಃ ಪ್ರಸನ್ನಧೀಃ ।
ಕರಿಷ್ಯ ಇತಿ ತನ್ಮತ್ವಾ ಸಂಪ್ರಾಪ್ತೇ ಹರಿವಾಸರೇ ॥ ೫೭ ॥

ಅದ್ಯ ಸ್ಥಿತ್ವಾ ನಿರಾಹಾರಃ ಶ್ವೋಭೂತೇ ಪರಮೇಶ್ವರ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ವ್ರತಂ ಮೇ ಸಫಲಂ ಕುರು ॥ ೫೮ ॥

ಇತಿ ಸಂಕಲ್ಪ್ಯ ವಿಧಿವನ್ನಿಯಮಸ್ನಾನತತ್ಪರಃ ।
ದಿನೋದಿತಮನುಷ್ಠಾನಂ ಸರ್ವಂ ನಿರ್ವರ್ತ್ಯ ಸಂಯತಃ ॥ ೫೯ ॥

---

೫೫–೫೬. ಈರೀತಿಯಾಗಿ ವರಾಹಸ್ವಾಮಿಯನ್ನು ಪೂಜಿಸಿದರೆ ಮತ್ತೆ ಜನ್ಮವನ್ನು ಹೊಂದುವುದೇ ಇಲ್ಲ. ಜ್ಞಾನದಿಂದಾಗಲಿ, ಅಜ್ಞಾನದಿಂದಾಗಲೀ, ಮಾಡಿದ ಬಹು ಜನ್ಮಗಳ ಪಾಪವು ಸೂರ್ಯೋದಯವಾದರೆ ಕತ್ತಲೆಯು ನಾಶವಾಗುವಂತೆ ನಾಶವಾಗುತ್ತದೆ. ಎಲೈ ಕುಂತೀಪುತ್ರನಾದ ಭೀಮಸೇನನೇ! ಈ ಏಕಾದಶಿಯನ್ನು ಮಾಡು. ಇದು ಎಲ್ಲಾ ಏಕಾದಶಿಗಳ ಪುಣ್ಯವನ್ನೂ ಕೊಡುತ್ತದೆ

೫೭–೫೮. ವಸಿಷ್ಠನು ಹೇಳಿದನು–ಧೌಮ್ಯನು ಹೀಗೆ ಹೇಳಿದುದನ್ನು ಕೇಳಿ ಭೀಮಸೇನನು ಸಂತೋಷಪಟ್ಟು ನಾಳೆ ಬರುವ ಹರಿವಾಸರದಲ್ಲಿ ಎಲ್ಲವನ್ನೂ ಮಾಡುತ್ತೇನೆ. ಎಂಬುದಾಗಿ ಸಂಕಲ್ಪಿಸಿಕೊಂಡನು. ಅನಂತರ ಏಕಾದಶಿಯು ಬರಲು ಬೆಳಿಗ್ಗೆ ಎದ್ದು ನಿತ್ಯಕರ್ಮಗಳನ್ನು ಮಾಡಿಕೊಂಡು ಎಲೈ, ಸರ್ವವ್ಯಾಪಕನಾದ ಪುಂಡರೀಕಾಕ್ಷನೇ! ಈದಿವಸ ಆಹಾರವನ್ನು ತೆಗೆದುಕೊಳ್ಳದೆ ಉಪವಾಸವಿದ್ದು ನಾಳೆಯದಿನ ಊಟ ಮಾಡುತ್ತೇನೆ. ನನ್ನ ಈ ವ್ರತವನ್ನು ಸಫಲಮಾಡು.

೫೯. ಹೀಗೆ ಸಂಕಲ್ಪಿಸಿ ನಿಯಮದಿಂದಿದ್ದು ಸ್ನಾನಮಾಡಿ ವ್ರತದಲ್ಲಿ ಮನಸ್ಸನ್ನು ಇಟ್ಟುಕೊಂಡು ಹಗಲಿನ ಅನುಷ್ಠಾನಗಳನ್ನೆಲ್ಲಾ ಮಾಡಿದನು.

ಸ ಹಾಸ್ತಿನಪುರೋದ್ಯಾನಂ ಗತ್ವಾ ಫಲಸಮೃದ್ಧಿಮತ್ ।
ಸಹಸ್ರಂ ನಾರಿಕೇಳಾನಾಮಯುತಂ ಕದಲೀಫಲಂ ॥ ೬೦ ॥

ಪನಸಾನಾಂ ಶತಂ ಚೈವ ಪುಂಡ್ರೇಕ್ಷುತ್ರಿಶತಂ ತಥಾ ।
ಭಕ್ಷಯಿತ್ವಾ ಪ್ರಯತ್ನೇನ ಉಪವಾಸಂ ಚಕಾರ ಹ ॥ ೬೧ ॥

ರಾತ್ರೌ ಜಾಗರಣಂ ಕೃತ್ವಾ ತಥಾರಾಧ್ಯ ಜನಾರ್ದನಂ ।
ಸಂಪೂಜ್ಯ ವಿಧಿವನ್ನತ್ವಾ ಪ್ರಾರ್ಥಯಿತ್ವಾ ಮನೋರಥಂ ॥ ೬೨ ॥

ಪುನಃ ಪ್ರಭಾತೇ ಸಂಪೂಜ್ಯ ಕೃತ್ವಾ ದಾನಂ ಯಥಾಬಲಂ ।
ಚಕಾರ ಪಾರಣಂ ಭೀಮೋ ಭಹುಭಕ್ಷ್ಯೈರ್ಘೃತಾಪ್ಲುತಾಂ ॥ ೬೩ ॥

ತದಾಪ್ರಭೃತಿ ಸಾ ಪುಣ್ಯಾ ಭೀಮೈಕಾದಶ್ಯಭೂದ್ಭುವಿ ।
ಮಾಸಾನಾಂ ಪರಮೋ ಮಾಘಸ್ತಸ್ಮಾನ್ಮಾಘಸಮೋ ನ ಹಿ ॥ ೬೪ ॥

---

೬೦-೬೧. ಹಸ್ತಿನಾಪುರದಲ್ಲಿರುವ ಉತ್ತಮೋತ್ತಮವಾದ ಉದ್ಯಾನವನಕ್ಕೆ ಹೋಗಿ ಸಾವಿರ ಎಳನೀರನ್ನು ಕುಡಿದು ತೆಂಗಿನಕಾಯನ್ನು ತಿಂದನು. ಹತ್ತು ಸಾವಿರ ಬಾಳೆಯಹಣ್ಣನ್ನು ತಿಂದನು. ನೂರು ಹಲಸಿನಹಣ್ಣನ್ನು ತಿಂದನು. ಮುನ್ನೂರು ಪಟ್ಟಾಪಟ್ಟಿಕಬ್ಬುಗಳನ್ನು ತಿಂದನು. ಈರೀತಿಯಾಗಿ ತಿಂದೂ ಪ್ರಯತ್ನಪಟ್ಟು ಉಪವಾಸವಿದ್ದನು.

೬೨-೬೩. ರಾತ್ರಿಯಲ್ಲಿ ಆ ಸ್ವಾಮಿಯಾದ ಜನಾರ್ದನನನ್ನು ಪೂಜಿಸಿ ಜಾಗರಣ ಮಾಡಿದನು. ಮತ್ತು ಆ ಸ್ವಾಮಿಯನ್ನು ಪೂಜಿಸಿ ನಮಸ್ಕರಿಸಿ ಇಷ್ಟವನ್ನು ಕೊಡೆಂದು ಕೇಳಿಕೊಂಡನು. ಬೆಳಗ್ಗೆ ಏಳುತ್ತಲೂ ನಿತ್ಯಕರ್ಮಗಳನ್ನು ಮಾಡಿಕೊಂಡು ಮತ್ತೆ ಜನಾರ್ದನನನ್ನು ಪೂಜಿಸಿ ಅನುಕೂಲಕ್ಕೆ ಸರಿಯಾಗಿ ದಾನವನ್ನು ಮಾಡಿ ಜನಾರ್ದನನಿಗೆ ಅನೇಕವಾಗಿ ತುಪ್ಪದಿಂದ ಬೇಯಿಸಿದ ಭಕ್ಷ್ಯಗಳನ್ನು ನಿವೇದಿಸಿ ತಾನೂ ಊಟಮಾಡಿ ಪಾರಣೆಯನ್ನು ನೆರವೇರಿಸಿದನು.

೬೪. ಅದು ಮೊದಲುಗೊಂಡು ಆ ಏಕಾದಶಿಯು ಭೀಮೈಕಾದಶಿಯೆಂದು ಹೆಸರನ್ನು ಹೊಂದಿ ಪುಣ್ಯವನ್ನು ಕೊಡತಕ್ಕದ್ದಾಯಿತು. ಮಾಸಗಳಲ್ಲೆಲ್ಲಾ ಮಾಘಮಾಸವು ಉತ್ತಮವಾದುದು. ಮಾಘಕ್ಕೆ ಸಮವಾದ ಮಾಸವು ಮತ್ತೊಂದಿಲ್ಲ.

ಸರ್ವ ಏವ ಶುಭಃ ಕಾಲಃ ಸರ್ವೋ ದೇಶಸ್ತಥಾ ಶುಭಃ ।
ಸರ್ವೋ ಜನೋ ದಾನಪಾತ್ರಂ ಮಕರಸ್ಥೇ ದಿವಾಕರೇ ॥ ೭೫ ॥

ಯಥಾಶ್ವಮೇಧೋ ಯಜ್ಞಾನಾಂ ನಗಾನಾಂ ಹಿಮವಾನ್ ಯಥಾ ।
ವ್ರತಾನಾಂ ತು ಯಥಾ ಸತ್ಯಂ ದಾನಾನಾಮಭಯಂ ಯಥಾ ॥ ೭೬ ॥

ಪ್ರಾಣಾಯಾಮಶ್ಚ ತಪಸಾಂ ಮಂತ್ರಾಣಾಂ ಪ್ರಣವೋ ಯಥಾ ।
ಧರ್ಮಾಣಾಮಪ್ಯಹಿಂಸಾ ಚ ಕಾಮ್ಯಾನಾಂ ಶ್ರೀರ್ಯಥಾ ವರಾ ॥ ೭೭ ॥

ಯಥಾತ್ಮವಿದ್ಯಾ ವಿದ್ಯಾನಾಂ ಸ್ತ್ರೀಣಾಂ ಗೌರೀ ಯಥೋತ್ತಮಾ ।
ಸರ್ವೇಷಾಂ ಶಿವಭಕ್ತಾನಾಂ ಯಥಾ ನಾರಾಯಣೋ ವರಃ ॥ ೭೮ ॥

ಸರ್ವೇಷಾಮೇವ ಪಾತ್ರಾಣಾಮಾಹಿತಾಗ್ನಿರ್ಯಥಾ ವರಃ ।
ತಥಾ ಸರ್ವೇಷು ಪುಣ್ಯೇಷು ಮಾಘಮಾಸೋ ವಿಶಿಷ್ಯತೇ ॥ ೭೯ ॥

---

೭೫. ಸೂರ್ಯನು ಮಕರರಾಶಿಗೆ ಬಂದಾಗ ಅವನು ಅಲ್ಲಿರುವವರೆಗೂ ಎಲ್ಲಾ ಕಾಲವೂ ಶುಭವಾದುದೆ. ಎಲ್ಲಾ ದೇಶವೂ (ಸ್ಥಳವೂ) ಶುಭವಾದುವು. ಎಲ್ಲಾ ಜನಗಳೂ ದಾನ ತೆಗೆದುಕೊಳ್ಳಲು ಯೋಗ್ಯರೇ.

೭೬–೭೭. ಯಜ್ಞಗಳಲ್ಲಿ ಅಶ್ವಮೇಧಯಾಗವು ಶ್ರೇಷ್ಠವಾಗಿರುವಂತೆಯೂ ವ್ರತಗಳಲ್ಲಿ ಸತ್ಯನಾರಾಯಣ ವ್ರತವು ಶ್ರೇಷ್ಠವಾಗಿರುವಂತೆಯೂ ದಾನಗಳಲ್ಲಿ ಅಭಯದಾನವು ಶ್ರೇಷ್ಠವಾಗಿರುವಂತೆಯೂ ತಪಸ್ಸಿನಲ್ಲಿ ಪ್ರಾಣಾಯಾಮವು ಶ್ರೇಷ್ಠವಾಗಿರುವಂತೆಯೂ ಧರ್ಮಗಳೊಳಗೆ ಅಹಿಂಸೆಯಂತೆಯೂ ಅಪೇಕ್ಷಿಸತಕ್ಕ ಪದಾರ್ಥಗಳಲ್ಲಿ ಲಕ್ಷ್ಮಿಯು ಉತ್ತಮವಾಗಿರುವಂತೆಯೂ ಎಲ್ಲಾ ಪುಣ್ಯಕಾಲಗಳಲ್ಲಿಯೂ ಈ ಮಾಘಮಾಸವು ಉತ್ತಮವಾದುದು.

೭೮-೭೯. ವಿದ್ಯೆಗಳೊಳಗೆ ಆತ್ಮವಿದ್ಯೆ (ವೇದಾಂತ) ಯಂತೆಯೂ ಶಿವಭಕ್ತರಲ್ಲೆಲ್ಲಾ ನಾರಾಯಣನಂತೆಯೂ ದಾನಪಾತ್ರರೊಳಗೆಲ್ಲಾ ಔಪಾಸನಾಗ್ನಿಯನ್ನಿಟ್ಟುಕೊಂಡಿರುವವನಂತೆಯೂ ಎಲ್ಲಾ ಪುಣ್ಯಕಾಲಗಳಲ್ಲಿಯೂ ಈ ಮಾಘಮಾಸವು ಬಹು ಶ್ರೇಷ್ಠವಾದುದು.

ಗರುಡಾಲೋಕಮಾತ್ರೇಣ ಫಣಿನೋ ನಿರ್ವಿಷಾ ಯಥಾ ।
ನಿಷ್ಪ್ರಭಾಣಿ ತಥೈನಾಂಸಿ ಮಕರಸ್ಥೇ ದಿವಾಕರೇ ॥ ೨೦ ॥

ವ್ಯಸನೈರಭಿಭೂತಸ್ಯ ಧನಹೀನಸ್ಯ ಪಾಪಿನಃ ।
ಮಾಘಮಾಸೋ ಗತಿಸ್ತಸ್ಯ ಕೇವಲಂ ನಾನ್ಯದಸ್ತಿ ವೈ ॥ ೨೧ ॥

ಚಂದ್ರಹೀನಾ ಯಥಾ ರಾತ್ರಿಃ ಪುಷ್ಪಹೀನಾ ಯಥಾ ದ್ರುಮಾಃ ।
ತಥೈವ ತೇ ಮನುಷ್ಯಾಶ್ಚ ಮಾಘಸ್ನಾನಪರಾಙ್ಮುಖಾಃ ॥ ೨೨ ॥

ಅನಯಾಃ ಸಂಪದೋ ಯದ್ವನ್ಮಖಾ ಯದ್ವದದಕ್ಷಿಣಾಃ ।
ತಥೈವ ತೇ ಮನುಶ್ಯಾಶ್ಚ ಮಾಘಸ್ನಾನಪರಾಙ್ಮುಖಾಃ ॥ ೨೩ ॥

ಜೀವನ್ನಪಿ ಮೃತೋ ನೂನಂ ಸಮರ್ಥೋಽಪಿ ಸ ವೈ ಜಡಃ ।
ಸ ಜಾತ್ಯಂಧಶ್ಚ ಖಂಜಶ್ಚ ಯೋ ಮಾಘೇ ನ ನಿಮಜ್ಜತಿ ॥ ೨೪ ॥

---

೨೦. ಗರುಡನನ್ನು ನೋಡಿದ ಕೂಡಲೇ ಸರ್ಪಗಳು ವಿಷವನ್ನು ಕಳೆದುಕೊಂಡು ಕಾಂತಿಗುಂದುವಂತೆ ಸೂರ್ಯನು ಮಕರರಾಶಿಗೆ ಬಂದಕೂಡಲೇ ಪಾಪಗಳೆಲ್ಲವೂ ಕಳೆಗುಂದುತ್ತವೆ.

೨೧. ವ್ಯಸನಗಳಿಂದ ತೊಂದರೆಪಡುತ್ತಿರುವ ಬಡವನೂ ಪಾಪಿಯೂ ಆದವನಿಗೆ ಮಾಘಮಾಸವೊಂದು ಗತಿಯೇ ಹೊರತು ಮತ್ತೊಂದು ಗತಿಯಾವುದೂ ಇಲ್ಲವೇ ಇಲ್ಲವು.

೨೨. ಮಾಘಸ್ನಾನವನ್ನು ಮಾಡದವರು ಚಂದ್ರನಿಲ್ಲದ ರಾತ್ರಿಯಂತೆಯೂ ಹೂವಿಲ್ಲದ ಮರದಂತೆಯೂ ಕಾಂತಿಹೀನರಾಗಿ ಶೋಭಿಸುವುದಿಲ್ಲ.

೨೩. ಮಾಘಸ್ನಾನ ಮಾಡದಿರುವ ಮನುಷ್ಯರು ನೀತಿಯಿಂದ ಕೂಡಿರದ ಸಂಪತ್ತಿನಂತೆಯೂ ದಕ್ಷಿಣೆಯನ್ನು ಕೊಡದೆ ಮಾಡಿದ ಯಾಗದಂತೆಯೂ ವ್ಯರ್ಥವಾಗಿ ಹುಟ್ಟಿದವರಾಗುತ್ತಾರೆ.

೨೪. ಮಾಘಮಾಸದಲ್ಲಿ ಸ್ನಾನಮಾಡದವನು ಬದುಕಿದ್ದರೂ ಸತ್ತವನಂತೆಯೇ. ಕೆಲಸಮಾಡಲು ಸಮರ್ಥನಾಗಿದ್ದರೂ ಕೈಲಾಗದವನೇ. ಕಣ್ಣು ಕಂಡರೂ ಹುಟ್ಟು ಕುರುಡನೇ. ಕಾಲಿದ್ದರೂ ಕುಂಟನೇ.

ಬ್ರಹ್ಮಚರ್ಯರತೋ ಯಸ್ತು ಮಾಘಮಾಸೇ ನಿಮಜ್ಜತಿ ।
ವಿಧೂತಪಾಪೋ ಭವತಿ ವಾಜಪೇಯಂ ಚ ವಿಂದತಿ ॥ ೭೫ ॥

ಅಶುಭೈಃ ಕರ್ಮಭಿಗ್ರ್ರಸ್ತಾನ್ ಮಜ್ಜಮಾನಾನ್ಮಹಾರ್ಣವೇ ।
ಪತತೋ ನಿರಯೋ ಮರ್ತ್ಯಾನ್ ಮಾಘಮಾಸಸ್ಸಮುದ್ಧರೇತ್ ॥ ೭೬ ॥

ಬ್ರಹ್ಮಲೋಕಸ್ತು ಸರ್ವೇಷಾಂ ಲೋಕಾನಾಮುತ್ತಮೋ ಯಥಾ ।
ತಥಾ ಸರ್ವೇಷು ಮಾಸೇಷು ಮಾಘಮಾಸೋ ಮಹೋದಯಃ ॥ ೭೭ ॥

ಮಕರಂ ಸಮುಪೇಯುಷಿ ಭಾಸ್ವತಿ ಯೋ
ವಿಮಲೇ ಪರಿಶೀತಲಬಾಹ್ಯಜಲೇ ।
ಶಿವ ಕೃಷ್ಣ ಹರೇತಿ ನಿಮಜ್ಜನಕೃತ್
ತ್ರಿದಶೀಮುಖಪತ್ರಲತಾಂ ಲಿಖತಿ ॥ ೭೮ ॥

---

೭೫. ಬ್ರಹ್ಮಚರ್ಯದಿಂದಿದ್ದು ಯಾವನು ಮಾಘಮಾಸದಲ್ಲಿ ಸ್ನಾನ ಮಾಡುವನೋ ಅವನು ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನಲ್ಲದೆ ವಾಜಪೇಯ ಯಾಗದ ಫಲವನ್ನೂ ಸಹ ಹೊಂದುತ್ತಾನೆ.

೭೬. ಕೆಟ್ಟಕೆಲಸಗಳಿಂದ ಕೂಡಿಕೊಂಡಿರುವ ಅಜ್ಞಾನವೆಂಬ ಸಮುದ್ರದಲ್ಲಿ ಬಿದ್ದಿರುವ ನರಕದಲ್ಲಿ ಕೊಳೆಯುವವರನ್ನು ಉದ್ಧಾರಮಾಡಲು ಮಾಘಮಾಸದಂತಹ ಕಾಲವು ಮತ್ತೊಂದಿಲ್ಲ.

೭೭. ಎಲ್ಲಾ ಲೋಕಗಳಲ್ಲಿಯೂ ಬ್ರಹ್ಮಲೋಕವು ಹೇಗೆ ಉತ್ತಮವಾಗಿರುವುದೋ ಹಾಗೆ ಎಲ್ಲಾ ಮಾಸಗಳಲ್ಲಿಯೂ ಮಾಘಮಾಸವು ಬಹು ಉತ್ತಮವಾದುದು.

೭೮. ಸೂರ್ಯನು ಮಕರರಾಶಿಗೆ ಬಂದಾಗ ಹೊರಗಡೆಯಲ್ಲಿ ಉತ್ತಮವಾದ ನೀರಿನಲ್ಲಿ ಯಾವನು ಶಿವ, ಕೃಷ್ಣ, ಹರಿ ಎಂದು ಹೇಳುತ್ತಾ ಸ್ನಾನ ಮಾಡುತ್ತಾನೆಯೋ ಅವನು ಸ್ವರ್ಗಕ್ಕೆ ಹೋಗಿ ದೇವತಾಸ್ತ್ರೀಯರ ಮುಖದಲ್ಲಿ ತಿಲಕವನ್ನಿಡುತ್ತಾನೆ. ಎಂದರೆ ಅವರೊಡನೆ ಭೋಗಿಸುತ್ತಾನೆ.

ಮಾಘಮಾಸಸ್ಯ ಮಾಹಾತ್ಮ್ಯಂ ಮಯಾ ವಕ್ತುಂ ನ ಶಕ್ಯತೇ |
ಯತ್ರ ಸಾ ಜಾಗರವತೀ ಶಿವರಾತ್ರಿಃ ಶಿವಪ್ರಿಯಾ || ೭೯ ||

ಕೇನ ವಾ ವರ್ಣ್ಯತೇ ಮಾಘಃ ಶಿವಾಖ್ಯಾ ಸಾ ಚತುರ್ದಶೀ |
ಯತ್ರಾವತಾರಂ ಕುರುತೇ ಕೈಲಾಸಪದದಾಯಿನೀ || ೮೦ ||

ಮಾಘಾತ್ಯಯೇ ರುದ್ರಚತುರ್ದಶೀತಿ
ಕಾಚಿತ್ತಿಥಿಃ ದುಷ್ಕರಕಲ್ಮಷಘ್ನೀ |
ವ್ಯಾಜೇನ ಕೇನಾಪಿ ಕೃತೋಪವಾಸಂ
ನಿನಾಯ ಕೈಲಾಸಪದಂ ಪುಲಿಂದಂ || ೮೧ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಭೀಮೈಕಾದಶ್ಯುಪಾಖ್ಯಾನಂ ನಾಮ ಏಕೋನಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೯. ಶಿವನಿಗೆ ಪ್ರೀತಿಪಾತ್ರವಾದ ಶಿವರಾತ್ರಿಯೂ ಕೂಡ ಯಾವ ಮಾಘಮಾಸದಲ್ಲಿಯೇ ಬರುತ್ತದೆಯೋ ಅಂತಹ ಮಾಘಮಾಸದ ಮಹಿಮೆಯನ್ನು ಹೇಳಲು ನನ್ನಿಂದ ಆಗುವುದಿಲ್ಲ.

೮೦. ಕೈಲಾಸ ಪದವಿಯನ್ನು ಕೊಡುವ ಶಿವಚತುರ್ದಶಿಯು ಯಾವ ಮಾಘದಲ್ಲಿ ಅವತರಿಸಿದೆಯೋ ಅಂತಹ ಮಾಘದ ಮಹಿಮೆಯನ್ನು ಹೇಳಲು ಸಾಧ್ಯವಾಗುವುದಿಲ್ಲ.

೮೧. ಮಾಘವು ಕಳೆಯುವ ಕೊನೆಯಲ್ಲಿ ರುದ್ರಚತುರ್ದಶಿ ಎಂಬ ತಿಥಿಯು ಬಂದು ಬಿಡುತ್ತದೆ. ಅದು ಪಾಪಗಳನ್ನು ನಾಶಮಾಡುತ್ತದೆ. ಅದರಲ್ಲಿ ಯಾವುದಾದರೂ ನೆವದಿಂದ ಉಪವಾಸವಿದ್ದರೂ ಅವನು ಕೈಲಾಸಕ್ಕೆ ಹೋಗುವನು. ಅಂತೆಯೇ ಒಬ್ಬ ಪುಲಿಂದನು ಕೈಲಾಸಕ್ಕೆ ಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಭೀಮೈಕಾದಶಿ ಉಪಾಖ್ಯಾನ ಎಂಬ ಇನ್ನೂರ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ದಿಲೀಪ ಉವಾಚ ॥

ಕೇನ ವ್ಯಾಜೇನ ವೈ ವ್ಯಾಧೋ ನಿರಾಹಾರೋಽಭವನ್ಮುನೇ ।
ಕೈಲಾಸಂ ಸ ಕಥಂ ಪ್ರಾಪ ಶಿವರಾತ್ರ್ಯಾಶ್ಚ ವೈಭವಂ ।
ಶ್ರೋತುಮಿಚ್ಛಾಮ್ಯಶೇಷೇಣ ವದ ವಿಸ್ತರತೋ ಮುನೇ ॥ ೧ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಶಿವರಾತ್ರಿವ್ರತಂ ತವ ।
ವ್ರತಾನಾಮುತ್ತಮಂ ಸಾಕ್ಷಾಚ್ಛಿವಲೋಕೈಕಸಾಧನಂ ॥ ೨ ॥

---

## ಇನ್ನೂರ ನಲವತ್ತನೆಯ ಅಧ್ಯಾಯವು



೧. ದಿಲೀಪನು ಹೇಳಿದನು-ಎಲೈ ವಸಿಷ್ಠಋಷಿಯೆ ! ಯಾವ ನೆವವನ್ನು ಮಾಡಿಕೊಂಡು ಆ ವ್ಯಾಧನು ಆಹಾರವನ್ನು ಬಿಟ್ಟಿದ್ದನು ? ಕೈಲಾಸವನ್ನು ಹೇಗೆ ಹೊಂದಿದನು ? ಅಂತಹ ಶಿವರಾತ್ರಿಯ ವೈಭವವನ್ನು ಕೇಳಲು ಇಚ್ಛಿಸುತ್ತೇನೆ. ವಿಸ್ತಾರವಾಗಿ ಹೇಳು.

೨. ವಸಿಷ್ಠನು ಹೇಳಿದನು-ಎಲೈ ದೊರೆಯೆ ! ಶಿವರಾತ್ರಿವ್ರತವನ್ನು ನಿನಗೆ ಹೇಳುತ್ತೇನೆ. ಕೇಳು ಈ ವ್ರತವು ವ್ರತಗಳಲ್ಲೆಲ್ಲಾ ಉತ್ತಮವಾದುದು. ಶಿವಲೋಕಕ್ಕೆ ನೇರವಾಗಿ ಹೋಗಲು ಕಾರಣವಾದುದು.

ಮಾಘಫಾಲ್ಗುನಯೋರ್ಮಧ್ಯೇ ಕೃಷ್ಣಪಕ್ಷೇ ಚತುರ್ದಶೀ ।
ಶಿವರಾತ್ರೀತಿ ವಿಜ್ಞೇಯಾ ಸರ್ವಪಾಪಾಪಹಾರಿಣೀ ॥ ೩ ॥

ಕೃತೋಪವಾಸಾ ಯೇ ತಸ್ಯಾಂ ಶಿವಮರ್ಚಂತಿ ಜಾಗ್ರತಃ ।
ಬಿಲ್ವಪತ್ರೈಶ್ಚತುರ್ಯಾಮಂ ತೇ ಯಾಂತಿ ಶಿವತುಲ್ಯತಾಂ ॥ ೪ ॥

ನ ತಪೋಭಿರ್ನ ದಾನೈಶ್ಚ ನ ವಾ ಜಪ್ಯಸವಾಧಿಭಿಃ ।
ಪ್ರಾಪ್ಯತೇ ತತ್ಫಲಂ ರಾಜನ್ನೋಪವಾಸಮುಖಾದಿಭಿಃ ॥ ೫ ॥

ಗುಹ್ಯಾದ್ಗುಹ್ಯತರಂ ಲೋಕೇ ವ್ರತಮೇತಚ್ಛಿವಪ್ರಿಯಂ ।
ತ್ವಯಾಪಿ ಖಲು ಸರ್ವತ್ರ ನ ಪ್ರಕಾಶ್ಯಮಿದಂ ವ್ರತಂ ॥ ೬ ॥

ಭೂಧರಾಣಾಂ ಯಥಾ ವಿಪ್ರಃ ತೇಜಸಾಂ ಭಾಸ್ಕರೋ ಯಥಾ ।
ದ್ವಿಪದಾಂ ಚ ಯಥಾ ವಿಪ್ರಃ ಕಪಿಲೇವ ಚತುಷ್ಪದಾಂ ॥ ೭ ॥

---

೩. ಮಾಘಫಾಲ್ಗುಣಗಳ ಮಧ್ಯದಲ್ಲಿ ಮಾಘಕೃಷ್ಣಪಕ್ಷದಲ್ಲಿ ಬರುವ ಚತುರ್ದಶಿಗೆ ಶಿವರಾತ್ರಿಯೆಂದು ಹೆಸರು. ಅದು ಎಲ್ಲಾ ಪಾಪಗಳನ್ನೂ ಹಾಳು ಮಾಡುತ್ತದೆ.

೪. ಆ ಶಿವರಾತ್ರಿಯಲ್ಲಿ ಉಪವಾಸವಿದ್ದು ಯಾರು ಬಿಲ್ವಪತ್ರೆಯಿಂದ ಶಿವನನ್ನು ಪೂಜಿಸುತ್ತಾರೆಯೋ ಅವರು ಶಿವನ ಸಮಾನತೆಯನ್ನು ಹೊಂದುತ್ತಾರೆ.

೫. ಆ ಶಿವರಾತ್ರಿಯಲ್ಲಿ ಯಾವ ಫಲವನ್ನು ಹೊಂದುವನೋ ಆ ಫಲವನ್ನು ಮನುಷ್ಯನು ತಪಸ್ಸಿನಿಂದಾಗಲಿ ದಾನದಿಂದಾಗಲಿ ಜಪದಿಂದಾಗಲಿ ಉಪವಾಸದಿಂದಾಗಲಿ ಯಜ್ಞಗಳಿಂದಾಗಲಿ ಒಂದರಿಂದಲೂ ಹೊಂದುವುದೇ ಇಲ್ಲ. ಕೊನೆಗೆ ಇವೆಲ್ಲವನ್ನೂ ಮಾಡಿದರೂ ಹೊಂದಲಾರನು.

೬. ಈ ವ್ರತವು ಲೋಕದಲ್ಲಿ ಬಹು ರಹಸ್ಯವಾದುದು. ನೀನು ಎಲ್ಲರಿಗೂ ಇದನ್ನು ಹೇಳಬೇಡ. ಶಿವನಿಗೆ ಬಹು ಪ್ರಿಯವಾದುದು.

೭-೧೦. ಬೆಟ್ಟಗಳಲ್ಲಿ ಮೇರು ಪರ್ವತವು ಹೇಗೆ ಶ್ರೇಷ್ಠವೋ ತೇಜಸ್ಸುಗಳೊಳಗೆ ಸೂರ್ಯತೇಜಸ್ಸು ಹೇಗೆ ಶ್ರೇಷ್ಠವೋ ಎರಡು ಕಾಲಿರುವ ಪ್ರಾಣಿಗಳಲ್ಲಿ ಬ್ರಾಹ್ಮಣನು ಹೇಗೆ ಶ್ರೇಷ್ಠನೋ ನಾಲ್ಕುಕಾಲುಳ್ಳ ಪ್ರಾಣಿಗಳಲ್ಲಿ ಕಪಿಲೆಹಸುವು

ಜಪ್ಯಾನಾಮಿವ ಗಾಯಿತ್ರೀ ರಸಾನಾಮಮೃತಂ ಯಥಾ ।
ಪುರುಷಾಣಾಂ ಯಥಾ ವಿಷ್ಣುಃ ಸ್ತ್ರೀಣಾಂ ಯದ್ವದರುಂಧತೀ ॥ ೮ ॥

ಶಿವರಾತ್ರಿವ್ರತಂ ರಾಜನ್ ವ್ರತಾನಾಮುತ್ತಮಂ ತಥಾ ।
ಶಿವರಾತ್ರಿರ್ಮಹಾವಹ್ನಿರ್ಭವಾನೀಶಸಮನ್ವಿತಾ ॥ ೯ ॥

ದಹತ್ಯವಾರಿತೋ ಯೋಗಾಚ್ಛುಷ್ಕಾರ್ದ್ರಂ ಕಲ್ಮಷೇಂಧನಂ ।
ಏತತ್ತೇ ಕಥಿತಂ ರಾಜನ್ ಶಿವರಾತ್ರಿವ್ರತಂ ಮಹತ್ ।
ಏವಮೇವ ಪುರಾ ದೇವ್ಯೈ ಮಹಾದೇವೇನ ಭಾಷಿತಂ ॥ ೧೦ ॥

॥ ದಿಲೀಪ ಉವಾಚ ॥

ಕದಾ ದೇವ್ಯಾ ಮಹಾದೇವಃ ಕಥಂ ಪೃಷ್ಟಸ್ತು ತದ್ವದ ॥ ೧೧ ॥

॥ ವಸಿಷ್ಠ ಉವಾಚ ॥

ಕೈಲಾಸಶಿಖರಾಸೀನಂ ಪ್ರಸನ್ನಮುಖಪಂಕಜಂ ।
ತ್ರಿಲೋಚನಂ ಚತುರ್ಬಾಹುಂ ಸರ್ವಾಭರಣಭೂಷಿತಂ ॥ ೧೨ ॥

---

ಹೇಗೆ ಶ್ರೇಷ್ಠವಾದುದೋ ಜಪಗಳೊಳಗೆ ಗಾಯತ್ರಿಯು ಹೇಗೆ ಶ್ರೇಷ್ಠವೋ ರಸಗಳೊಳಗೆ ಅಮೃತರಸವು ಹೇಗೆ ಶ್ರೇಷ್ಠವಾದುದೋ ಪುರುಷರೊಳಗೆ ಹೇಗೆ ವಿಷ್ಣುವು ಶ್ರೇಷ್ಠನೋ ಹೆಂಗಸರೊಳಗೆ ಅರುಂಧತಿಯು ಹೇಗೆ ಶ್ರೇಷ್ಠಳೋ ಅಂತೆಯೇ ವ್ರತಗಳೊಳಗೆ ಶಿವರಾತ್ರಿಯು ಶ್ರೇಷ್ಠವಾದುದು. ಈಶ್ವರ ಪಾರ್ವತಿಯರ ಸಂಬಂಧದಿಂದ ಹುಟ್ಟಿದ ಶಿವರಾತ್ರಿಯೆಂಬ ಬೆಂಕಿಯು ಒಣಗಿದ ಮತ್ತು ಹಸಿಯಾದ ಪಾಪವೆಂಬ ಸೌದೆಯನ್ನು ಸುಡುತ್ತದೆ. ಎಲೈ ದೊರೆಯೆ ! ಈ ಶಿವರಾತ್ರಿವ್ರತವನ್ನು ನಿನಗೆ ಹೇಳಿದ್ದೇನೆ. ಇದು ಬಹು ದೊಡ್ಡವ್ರತವು. ಇದೇ ರೀತಿಯಲ್ಲಿಯೇ ಮಹಾದೇವನು ಪೂರ್ವದಲ್ಲಿ ಪಾರ್ವತೀದೇವಿಗೆ ಹೇಳಿದನು

೧೧. ದಿಲೀಪನು ಹೇಳಿದನು–ಎಲೈ ಮುನಿಯೆ! ಪಾರ್ವತಿಯು ಮಹಾದೇವನನ್ನು ಏನೆಂದು ಕೇಳಿದಳು ? ಆ ಮಹಾದೇವನು ಏನೆಂದು ಹೇಳಿದನು ? ಅದೆಲ್ಲವನ್ನೂ ಹೇಳು.

೧೨-೧೮. ವಸಿಷ್ಠನು ಹೇಳಿದನು–ಮೂರು ಕಣ್ಣುಗಳುಳ್ಳ ನಾಲ್ಕು ತೋಳುಗಳುಳ್ಳ ಎಲ್ಲಾ ಆಭರಣಗಳನ್ನೂ ತೊಟ್ಟುಕೊಂಡಿರುವ ಬಲದಲ್ಲಿ

ಉಮಾಧಿಷ್ಠಿತವಾಮಾಂಗಂ ನಾಗಯಜ್ಞೋಪವೀತಿನಂ ।
ವರದಾಭಯಹಸ್ತಂ ಚ ನಮಜ್ಜನವರಪ್ರದಂ ॥ ೧೩ ॥

ವ್ಯಾಘ್ರಚರ್ಮಪರೀಧಾನಂ ಚಂದ್ರಾರ್ಧಕೃತಶೇಖರಂ ।
ಗಂಗಾಪ್ಲುತಜಟಾಜೂಟಂ ಭಸ್ಮಗೌರಂ ವರಾನನಂ ॥ ೧೪ ॥

ಧಾರಯಂತಂ ಮಹಾಮಾಲಾಂ ಜ್ಯೋತಿಶ್ಚಂದ್ರಾರ್ಕನಿರ್ಮಲಾಂ ।
ಜಗದುತ್ಪತ್ತಿಸಂಹಾರಸ್ಥಿತ್ಯನುಗ್ರಹಕಾರಿಣಂ ॥ ೧೫ ॥

ಮಹೇಷ್ವಾಸಮುದಾರಾಂಗಂ ಕಂಬುಗ್ರೀವಂ ಸುಲೋಚನಂ ।
ಸರ್ವಾಭರಣಸಂಯುಕ್ತಂ ಶುಕ್ಲಯಜ್ಞೋಪವೀತಿನಂ ॥ ೧೬ ॥

ದೃಷ್ಟ್ವಾ ಪ್ರಣಮ್ಯ ದೇವೇಶೀ ಪ್ರಹರ್ಷಮತುಲಂ ಗತಾ ।
ತ್ವರಮಾಣಾಥ ಸಂಗಮ್ಯ ದೇವೇಶಂ ವರವರ್ಣಿನೀ ॥ ೧೭ ॥

---

ಉಮೆಯನ್ನುಳ್ಳ ನಾಗಯಜ್ಞೋಪವೀತವನ್ನು ಹಾಕಿಕೊಂಡಿರುವ ಅಭಯಹಸ್ತ ವರಹಸ್ತಗಳನ್ನು ಹೊಂದಿರುವ ನಮಸ್ಕರಿಸುವವರಿಗೆ ವರವನ್ನು ಕೊಡುತ್ತಿರುವ ವ್ಯಾಘ್ರಚರ್ಮವನ್ನು ಹೊದ್ದುಕೊಂಡಿರುವ ಅರ್ಧಚಂದ್ರನನ್ನು ತಲೆಯಲ್ಲಿ ಉಳ್ಳ ಗಂಗೆಯಿಂದ ನೆನೆದಿರುವ ಜಟೆಗಳುಳ್ಳ ಭಸ್ಮವನ್ನು ಬಳಿದುಕೊಂಡು ಬೆಳ್ಳಗಿರುವ ಮನೋಹರವಾದ ಮುಖವುಳ್ಳ ಚಂದ್ರಸೂರ್ಯರಿಂದ ಕೂಡಿದ ನಿರ್ಮಲವಾದ ನಕ್ಷತ್ರಮಾಲೆಯನ್ನು ಧರಿಸಿರುವ ಜಗತ್ತಿನ ಉತ್ಪತ್ತಿ ಸ್ಥಿತಿ ಸಂಹಾರಗಳಿಗೂ ಅನುಗ್ರಹಕ್ಕೂ ಕರ್ತನಾದ ದೊಡ್ಡ ಧನುಸ್ಸನ್ನು ಹಿಡಿದಿರುವ ಮನೋಹರವಾದ ಅವಯವಗಳುಳ್ಳ ಶಂಖದಂತೆ ಕತ್ತುಳ್ಳ ಮನೋಹರವಾದ ಕಣ್ಣುಗಳುಳ್ಳ ಎಲ್ಲಾ ಆಭರಣದಿಂದಲೂ ಕೂಡಿಕೊಂಡಿರುವ ಬೆಳ್ಳಗಿರುವ ಜನಿವಾರವನ್ನು ಹಾಕಿಕೊಂಡಿರುವ ಈಶ್ವರನು ಕೈಲಾಸ ಶಿಖರದಲ್ಲಿ ಸಂತೋಷದಿಂದ ಕುಳಿತಿರಲು ಇದನ್ನು ಪಾರ್ವತಿಯು ನೋಡಿ ಸಂತೋಷಗೊಂಡು ಅವಸರದಿಂದ ಬಂದು ನಮಸ್ಕರಿಸಿದಳು. ಆ ಪಾರ್ವತಿಯು ಅವಸರದಿಂದ ಈಶನ ಬಳಿಗೆ ಬರುವಾಗ

ಶುಭಾಂ ಶುಭಾವತೀಂ ಚೈವ ವದಾನ್ಯಾಂ ಚ ಸುಮಾಲಿನೀಂ ।
ಸಮಾಹೂಯಾಗತಾ ದೇವೀ ಭೂತಸ್ತ್ರೀಭಿಶ್ಚ ಸಂಯುತಾ ॥ ೧೮ ॥

ಭವಪಾದಾಬ್ಜಯುಗಲೇ ಭಕ್ತ್ಯಾ ಪರಮಯಾ ಯುತಾ ।
ವಿಕೀರ್ಯ ಪುಷ್ಪಜಾಲಾನಿ ಸುಮಾಲಿನ್ಯಾಹೃತಾನಿ ಚ ।
ಕೃತಾಂಜಲಿಪುಟಾ ಭೂತ್ವಾ ಪಪ್ರಚ್ಛ ಶುಭಲೋಚನಾ ॥ ೧೯ ॥

॥ ದೇವ್ಯುವಾಚ ॥

ಅಹೋಽಮೃತಮಯೀ ಚೈವ ಕಥಾ ಪಾಪಪ್ರಣಾಶಿನೀ ।
ತವ ಕ್ರೀಡಾಭಿಸಂಬಂಧಾತ್ತ್ವದ್ವಾಕ್ಯಾಮೃತಸಂಭವಾ ॥ ೨೦ ॥

ಸುಖಾವಹಾ ಸುಖೋದ್ಗೀರ್ಣಾ ದುಃಖಕ್ಷಯವಿಧಾಯಿನೀ ।
ನೀಲೋತ್ಪಲದಳಾನಾಂ ಚ ಮಾಲೇವೋತ್ತರಗಂಧಿನೀ ॥ ೨೧ ॥

---

ಶುಭೆ ಶುಭಾವತಿ ವದಾನ್ಯೆ ಸುಮಾಲಿನಿ ಇವರನ್ನು ಕರೆದುಕೊಂಡು ಭೂತಸ್ತ್ರೀಯರೊಂದಿಗೆ ಸೇರಿಕೊಂಡು ಅವಸರದಿಂದ ಬಂದಳು.

೧೯. ಸುಮಾಲಿನಿಯು ತಂದುಕೊಟ್ಟ ಹೂವನ್ನು ಪಾರ್ವತಿಯು ತಾನು ತೆಗೆದುಕೊಂಡು ಬಹುವಾದ ಭಕ್ತಿಯಿಂದ ಆ ಸ್ವಾಮಿಯ ಪಾದಪದ್ಮಗಳ ಮೇಲೆ ಹಾಕಿ ನಮಸ್ಕರಿಸಿ ಕೈಮುಗಿದುಕೊಂಡು ಸಂತೋಷದಿಂದ ಇಂತೆಂದು ಕೇಳಿದಳು.

೨೦. ದೇವಿಯು ಹೇಳಿದಳು–ಎಲೈ ಶಿವನೆ ! ನಿನ್ನಲ್ಲಿ ಸರಸವಾಗಿ ಮಾತನಾಡುತ್ತಿರುವಾಗ ನಿನ್ನ ಮಾತಿನಿಂದ ಬರುವ ಕಥೆಗಳು ಬಹು ಚೆನ್ನಾಗಿವೆ. ಪಾಪನಾಶಕವೂ ಆಗಿವೆ.

೨೧. ಆ ಕಥೆಗಳು ಸುಖವಾಗಿ ಹೊರಡುತ್ತವೆ. ಸುಖವನ್ನುಂಟು ಮಾಡುತ್ತವೆ. ದುಃಖವನ್ನು ನಾಶಮಾಡುತ್ತವೆ. ನೀಲೋತ್ಪಲ (ಕನ್ನೈದಿಲೆ) ದಳಗಳಿಂದ ಕಟ್ಟಿರುವ ಮಾಲೆಗಳಂತೆ ಸದಾಕಾಲದಲ್ಲಿಯೂ ಸುಖವನ್ನು ಕೊಡುತ್ತವೆ.

ನಾದ್ಯಾಪಿ ತೃಪ್ತಿರ್ದೇವೇಶ ಶೃಣ್ವತ್ಯಾ ಮಮ ಶಂಕರ ।
ಪ್ರಾರ್ಥಿತಾರ್ಥಾನ್ಯನೇಕಾನಿ ದಾನಂ ಧರ್ಮಸ್ತಥಾ ಪರೇ ॥ ೨೨ ॥

ಯಜ್ಞಾಶ್ಚ ಯಾಸಬಹುಳಾಸ್ತಪಾಂಸಿ ನಿಯಮಾನಿ ಚ ।
ಬಹೂನಿ ತಾನಿ ಲೋಕೇಽಸ್ಮಿನ್ ಪೂತಾನಿ ವೃಷಕೇತನ ॥ ೨೩ ॥

ವ್ರತಾನಾಮುತ್ತಮಂ ದೇವ ಭುಕ್ತಿಮುಕ್ತಿಪ್ರದಾಯಕಂ ।
ಯನ್ನ ಕಸ್ಯಚಿದಾಖ್ಯಾತಂ ತ್ವಯಾ ಸರ್ವಾರ್ಥಸಾಧಕಂ ॥ ೨೪ ॥

ಶೀಘ್ರಂ ನಿಲೀಯತೇ ಸರ್ವಂ ಪಾಪಂ ಯಚ್ಛ್ರವಣಾದಹೋ ।
ತದಹಂ ಶ್ರೋತುಮಿಚ್ಛಾಮಿ ಕಥಯಸ್ವ ಮಮಾಗ್ರತಃ ॥ ೨೫ ॥

॥ ಮಹೇಶ್ವರ ಉವಾಚ ॥

ಶೃಣು ದೇವಿ ವ್ರತಂ ಗುಹ್ಯಂ ವ್ರತಾನಾಮುತ್ತಮೋತ್ತಮಂ ।
ಯನ್ನ ಕಸ್ಯ ಚಿದಾಖ್ಯಾತಂ ರಹಸ್ಯಂ ಮುಕ್ತಿದಾಯಕಂ ॥ ೨೬ ॥

---

೨೨-೨೩. ಹೀಗೆ ನೀನು ಹೇಳುತ್ತಿರುವ ಕಥೆಯನ್ನು ಕೇಳುತ್ತಿದ್ದರೆ ನನಗೆ ತೃಪ್ತಿಯೆಂಬುದೇ ಉಂಟಾಗುವುದಿಲ್ಲ. ಅನೇಕವಾದ ದಾನಗಳೂ ಧರ್ಮಗಳೂ ಬೇಕಾದುವನ್ನು ಕೊಡುತ್ತವೆ. ಇವಕ್ಕೆ ಹಣವು ಬೇಕು. ಬಡವನಿಗೆ ಸಾಧ್ಯವಿಲ್ಲ. ಯಜ್ಞಗಳೂ ತಪಸ್ಸುಗಳೂ ನಿಯಮಗಳೂ ಇವೆಲ್ಲವೂ ಪರಿಶುದ್ಧವು. ಗಳಿಗೆ ಇವತಕ್ಕವು. ಇರುವುವಾದರೂ ಅವಕ್ಕೆ ಬಹುವಾಗಿ ಕಷ್ಟಪಡಬೇಕು.

೨೪. ಎಲೈ ದೇವನೇ! ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವ ಸರ್ವಾರ್ಥಸಾಧಕವಾದ ಒಂದು ವ್ರತವನ್ನೂ ನೀನು ಒಬ್ಬರಿಗೂ ಹೇಳಲೇ ಇಲ್ಲ.

೨೫. ಯಾವ ಕಥೆಯನ್ನು ಕೇಳುವುದರಿಂದಲೇ ಎಲ್ಲಾ ಪಾಪಗಳೂ ಹೋಗುತ್ತವೆಯೋ ಅಂತಹ ಒಂದು ವ್ರತವನ್ನು ನನ್ನ ಎದುರಿಗೆ ಹೇಳು. ಕೇಳಲಿಚ್ಛಿಸುತ್ತೇನೆ.

೨೬. ಮಹೇಶ್ವರನು ಹೇಳಿದನು-ಎಲೈ ದೇವಿಯೇ! ರಹಸ್ಯವಾದ ಉತ್ತಮೋತ್ತಮವಾದ ವ್ರತವನ್ನು ಹೇಳುತ್ತೇನೆ. ಕೇಳು. ರಹಸ್ಯವೂ ಮುಕ್ತಿದಾಯಕವೂ ಆದ ಈ ವ್ರತವನ್ನು ನಾನು ಒಬ್ಬರಿಗೂ ಹೇಳಿಯೇ ಇಲ್ಲವು.

ಯೇನ ವೈ ಕಥ್ಯಮಾನೇನಾಪ್ಯಧರ್ಮೋ ವಿಲಯಂ ವ್ರಜೇತ್ ।
ತದಹಂ ಕೀರ್ತಯಿಷ್ಯಾಮಿ ಶೃಣುಷ್ವೈಕಾಗ್ರಮಾನಸಾ ॥ ೨೭ ॥

ಮಾಘಫಾಲ್ಗುನಯೋರ್ಮಧ್ಯೇ ಕೃಷ್ಣಪಕ್ಷೇ ಚತುರ್ದಶೀ ।
ಶಿವರಾತ್ರಿರಿತಿ ಖ್ಯಾತಾ ಸರ್ವಯಜ್ಞೋತ್ತಮೋತ್ತಮಾ ॥ ೨೮ ॥

ದಾನಯಜ್ಞತಪಸ್ತೀರ್ಥವ್ರತಕರ್ಮಾಣಿ ಯಾನಿ ಚ ।
ಶಿವರಾತ್ರಿವ್ರತಸ್ಯಾಪಿ ಕೋಟ್ಯಂಶೇನ ಸಮಾನಿ ನ ॥ ೨೯ ॥

ಯೈರಿಯಂ ಕಲಿಹಂತ್ರೀ ಚ ಕೃತಾಂತಪಥನಾಶಿನೀ ।
ಭುಕ್ತಿದಾ ಮುಕ್ತಿದಾ ದೇವಿ ದಿವಾನಿಶಮುಪೋಷಿತಾ ।
ನ ತೇ ಯಮಪುರಂ ಯಾನ್ತಿ ಸತ್ಯಂ ಸತ್ಯಂ ವರಾನನೇ ॥ ೩೦ ॥

---

೨೭. ಯಾವುದನ್ನು ಕೇಳುವುದರಿಂದ ಅಧರ್ಮಗಳು ನಾಶವಾಗುವುವೋ ಅಂತಹ ವ್ರತವನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೨೮. ಮಾಘಫಾಲ್ಗುನಗಳ ಮಧ್ಯದಲ್ಲಿ ಮಾಘದ ಕೃಷ್ಣಚತುರ್ದಶಿಯ ದಿವಸ ಶಿವರಾತ್ರಿ ಎಂಬುದೊಂದು ವ್ರತವಿದೆ. ಅದು ಎಲಾ ಯಜ್ಞಗಳಿಗಿಂತಲೂ ಶ್ರೇಷ್ಠವಾದುದು.

೨೯. ದಾನ, ಯಜ್ಞ, ತಪಸ್ಸು, ತೀರ್ಥ, ವ್ರತ, ಇನ್ನೂ ಯಾವ ಒಳ್ಳೆಯ ಕರ್ಮಗಳಿವೆಯೋ ಅವೊಂದೂ ಕೂಡ ಈ ಶಿವರಾತ್ರಿವ್ರತದ ಕೋಟ್ಯಂಶದಲ್ಲಿ ಒಂದಂಶಕ್ಕೂ ಸರಿತೂಗಲಾರವು.

೩೦. ಪಾಪನಾಶಕವಾದ ಯಮಪುರದದಾರಿಯನ್ನು ನಾಶಮಾಡುವ ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವ ಈ ಶಿವರಾತ್ರಿಯ ದಿವಸ ಯಾರು ಹಗಲೂ ರಾತ್ರಿಯೂ ಉಪವಾಸವಿರುವರೋ ಅವರು ಯಮಪುರವನ್ನು ಹೊಂದುವುದಿಲ್ಲ. ಇದು ಸತ್ಯವು.

॥ ದೇವ್ಯುವಾಚ ॥

ಕಥಂ ಯಮಪುರಂ ವಧ್ಯಂ ಕಥಂ ಶಿವಪುರಂ ವ್ರಜೇತ್ ।
ಏತದೇವ ಮಹಾಶ್ಚರ್ಯಂ ಪ್ರತ್ಯಯಂ ಕುರು ಮೇ ಪ್ರಭೋ ॥ ೩೧ ॥

॥ ಮಹೇಶ್ವರ ಉವಾಚ ॥

ಶೃಣು ದೇವಿ ಯಥಾವೃತ್ತಂ ಕಥಾಂ ಪೌರಾಣಿಕೀಂ ಪ್ರಿಯೇ ।
ಕಶ್ಚಿದಾಸೀತ್ಪುರಾಕಾಲೇ ನಿಷಾದಶ್ಚಾಮಿಷಪ್ರಿಯಃ ॥ ೩೨ ॥

ಪರ್ವತಾಗ್ರನಿವಾಸೀ ಚ ಭೂಧರಾಸನ್ನಚಾರಿಭಿಃ ।
ಸಮುತ್ಪನ್ನೈರ್ಮೃಗೈರ್ಜೀವೇತ್ ಕುಟುಂಬಪರಿಪಾಲಕಃ ॥ ೩೩ ॥

ಆಪೀನಾಂಸೋ ಧನುಷ್ಪಾಣಿಃ ಶ್ಯಾಮಾಂಗಃ ಕೃಷ್ಣಕಂಚುಕಃ ।
ಬದ್ಧಗೋದಾಂಗುಳಿತ್ರಾಣೋ ವಾಮಬಾಹೌ ಚ ಚರ್ಮಧೃತ್ ॥ ೩೪ ॥

---

೩೧. ದೇವಿಯು ಹೇಳಿದಳು–ಎಲೈ ಸ್ವಾಮಿಯೇ ! ಈ ಶಿವರಾತ್ರಿಯನ್ನು ಮಾಡಿದವನು ಯಮಪುರಕ್ಕೇತಕ್ಕೆ ಹೋಗುವುದಿಲ್ಲ ? ಶಿವನ ಪುರಕ್ಕೆ ಏತಕ್ಕೆ ಹೇಗೆ ಹೋಗುವರು ? ಇದೇನೆ ನನಗೆ ಬಹು ಆಶ್ಚರ್ಯವಾಗಿದೆ. ಇದರ ವಿಷಯದಲ್ಲಿ ನಂಬಿಕೆಯಾಗುವಂತೆ ಹೇಳು.

೩೨. ಮಹೇಶ್ವರನು ಹೇಳಿದನು–ಎಲೈ ದೇವಿಯೇ ! ಕೇಳು. ಬಹುಕಾಲದ ಒಂದು ಇತಿಹಾಸವನ್ನು ಹೇಳುತ್ತೇನೆ. ಪೂರ್ವದಲ್ಲಿ ಮಾಂಸದಲ್ಲಿ ಆಸೆಯುಳ್ಳ ಒಬ್ಬ ಬೇಡನಿದ್ದನು.

೩೩. ಅವನು ಬೆಟ್ಟದಮೇಲುಗಡೆ ವಾಸವಾಗಿದ್ದನು. ಪರ್ವತದ ಹತ್ತಿರದಲ್ಲಿ ಜೀವಿಸಿಕೊಂಡಿರುವ ಮೃಗಗಳನ್ನು ಕೊಂದು ಅವುಗಳಿಂದ ಸಂಸಾರವನ್ನು ಪೋಷಿಸುತ್ತ ತಾನೂ ಜೀವಿಸಿಕೊಂಡಿದ್ದನು.

೩೪-೩೫. ಅವನ ಭುಜಗಳು ಬಹಳ ದಪ್ಪವಾಗಿದ್ದುವು. ಕೈಯ್ಯಲ್ಲಿ ಬಿಲ್ಲನ್ನು ಹಿಡಿದಿದ್ದನು. ಕಪ್ಪಗಿದ್ದನು. ಕಪ್ಪಾದ ಅಂಗಿಯನ್ನು ಹಾಕಿಕೊಂಡಿದ್ದನು. ಕೈಗೆ ಏಟುಬೀಳದಂತೆ ಚರ್ಮದ ಚೀಲವನ್ನು ಹಾಕಿಕೊಂಡಿದ್ದನು. ಎಡಗಡೆಯ

ಧನುರ್ವಾಮೇ ಗೃಹಿತ್ವಾ ಚ ದಕ್ಷಿಣೇ ಶರಮುತ್ತಮಂ ।
ನಿರ್ಗತಸ್ಸ ವನೋದ್ದೇಶಾನ್ನಿಷಾದೋ ಮಾಂಸಜೀವಕಃ ॥ ೩೫ ॥

ವನಂ ಗತೋ ನಿರೀಕ್ಷಿಷ್ಯ ಸೋನ್ತರ್ದಿಶಮಿತಸ್ತತಃ ।
ವನಮಾರ್ಗೇ ಸಮನ್ವಿಚ್ಛನ್ನಾಶ್ರಮೇ ವನಸೂಕರಾನ್ ॥ ೩೬ ॥

ನಿರಾಶೋ ಲುಬ್ಧಕೋತಿಷ್ಠದ್ಯಾವದಸ್ತಂ ಗತೋ ರವಿಃ ।
ಚಿಂತಯನ್ ಜಲಮಾಸನ್ನಂ ಗತೇರ್ಕೇ ಜೀವಘಾತಕಃ ॥ ೩೭ ॥

ಕರಿಷ್ಯೇ ಜಾಗರಂ ರಾತ್ರೌ ನಿಶ್ಚಿತಾ ಮಮ ಜೀವಿಕಾ ।
ಗತೋಽಸೌ ಜಲಮಾಸನ್ನಂ ತತ್ತೀರೇ ಜಾಲಿಮಧ್ಯತಃ ॥ ೩೮ ॥

ಪ್ರಚ್ಛನ್ನಂ ಕರ್ತುಮಾರಬ್ಧಶ್ಚಾತ್ಮನೋ ಗುಪ್ತಿಕಾರಣಂ ।
ತತ್ರ ಸಂತಿಷ್ಠತೇ ಲಿಂಗಂ ಸ್ವಯಂಭೂತಂ ವರಾನನೇ ॥ ೩೯ ॥

---

ತೋಳಿಗೆ ಹೊದ್ದಿಕೆಯನ್ನು ಕಟ್ಟಿಕೊಂಡಿದ್ದನು. ಎಡಗೈಯ್ಯಲ್ಲಿ ಬಿಲ್ಲನ್ನೂ ಬಲಗೈಯಲ್ಲಿ ಬಾಣವನ್ನೂ ಹಿಡಿದು ತಾನಿದ್ದ ಜಾಗದಿಂದ ಮೃಗಗಳನ್ನು ಕೊಂದು ತರಲು ಬೇರೆ ಕಡೆಗೆ ಹೊರಟನು.

೩೬-೪೪. ಈ ರೀತಿಯಾಗಿ ಕಾಡಿಗೆ ಹೋಗಿ ಎಲ್ಲಾ ಕಡೆಯಲ್ಲಿಯೂ ಹುಡುಕುತ್ತ ಆಶ್ರಮಗಳದಾರಿಯಲ್ಲಿ ಕಾಡು ಹಂದಿಗಳಿವೆಯೋ ಎಂದು ನೋಡುತ್ತಿದ್ದನು. ಕೊನೆಗೆ ಸೂರ್ಯನು ಅಸ್ತನಾದನು. ಪ್ರಾಣಿಗಳು ಸಿಕ್ಕಲಿಲ್ಲ. ಆಗ ಅವನಿಗೆ ನಿರಾಶೆಯಾಯಿತು. ಹೀಗೆ ಯೋಚಿಸುತ್ತ ಸೂರ್ಯನು ಮುಳುಗುವ ವೇಳೆಗೆ ಆ ಬೇಡನು ನೀರಿರುವ ಜಾಗಕ್ಕೆ ಬಂದು ಈ ದಿನದ ನನ್ನ ಜೀವನವು ನಿಶ್ಚಯವಾಯಿತು. ಆದ್ದರಿಂದ ರಾತ್ರಿಯಲ್ಲಿ ಉಪವಾಸ ಮಾಡುತ್ತೇನೆ. ಹೀಗೆಂದು ಯೋಚಿಸುತ್ತ ನೀರಿನ ದಡದಲ್ಲಿಯೇ ಹೋಗುತ್ತ ಅಲ್ಲಿ ಒಂದು ಪೊದರಿನ ಮಧ್ಯದಲ್ಲಿ ಹೊಕ್ಕನು. ಅಲ್ಲಿ ತಾನು ಆ ರಾತ್ರಿಯಿರಲು ಒಂದೂ ಕಾಣದಂತಿರುವ ಗುಟ್ಟಾದ ಜಾಗವನ್ನು ಮಾಡಿಕೊಳ್ಳಲು ಮೊದಲುಮಾಡಿದನು. ಆ ಪೊದರಿನ ಮಧ್ಯದಲ್ಲಿ ಒಂದು ತಾನಾಗಿಯೇ ಉದ್ಭವವಾದ ಲಿಂಗವು ಇದ್ದಿತು. ಅದರ

ಸಂಛನ್ನಂ ಬಿಲ್ವವಿಟಪೈಃ ಸಪತ್ರೈಃ ಜಾಲಿಸುಧ್ಯತಃ ।
ತಾನಿ ಬಿಲ್ವಸ್ಯ ಪತ್ರಾಣಿ ಗೃಹೀತ್ವಾ ಮಾರ್ಗಶೋಧನೇ ॥ ೪೦ ॥

ನೀತಾನಿ ದಕ್ಷಿಣೇ ಭಾಗೇ ನ್ಯಪತಲ್ಲಿಂಗಮೂರ್ಧನಿ ।
ನ ದಿವಾ ಭೋಜನಂ ತಸ್ಯ ಹ್ಯಾಮಿಷಾಲುಬ್ಧಚೇತಸಃ ॥ ೪೧ ॥

ನಿರೀಕ್ಷಿತಃ ಪುನಸ್ತಸ್ಯ ನ ನಿದ್ರಾಪ್ಯುಪಪದ್ಯತೇ ।
ತಸ್ಯ ಗಂಧಂ ಸಮಾಸಾದ್ಯ ಲುಬ್ಧಕಸ್ಯ ವರಾನನೇ ॥ ೪೨ ॥

ನ ತಿಷ್ಠಂತಿ ಮೃಗಾಸ್ಸರ್ವೇ ಶರಘಾತಭಯಾತ್ತದಾ ।
ತೇನ ಸಾ ಶರ್ವರೀ ನೀತಾ ಹ್ಯುದಿತೇ ಸೂರ್ಯಮಂಡಲೇ ॥ ೪೩ ॥

ಗತೋಽಸೌ ಗೃಹಮಾರ್ಗೇಣ ನಿರಾಶೋ ಧೃತತೋಮರಃ ।
ಮಾಂಸಶೂನ್ಯಕರಂ ದೃಷ್ಟ್ವಾ ಪಿತಾ ಪುತ್ರಮಭಾಷತ ॥ ೪೪ ॥

---

ಸುತ್ತಲೂ ಬಿಲ್ವಪತ್ರೆಯ ಮರವು ಬೆಳೆದು ಆ ಲಿಂಗವೂ ಆ ಬಿಲ್ವಪತ್ರೆಯ ಎಲೆಗಳುಳ್ಳ ಕೊಂಬೆಗಳಿಂದ ಮುಚ್ಚಿಕೊಂಡಿದ್ದಿತು. ಅವನು ದಾರಿಯನ್ನು ಸರಿಪಡಿಸಿಕೊಳ್ಳುವಾಗ ಆ ಬಿಲ್ವದ ಎಲೆಗಳುಳ್ಳ ಸಣ್ಣ ರೆಂಬೆಗಳನ್ನು ಮುರಿದು ಬಲಭಾಗಕ್ಕೆ ಹಾಕುತ್ತಿರಲು ಆ ಬಿಲ್ವಪತ್ರೆಯು ಆ ಲಿಂಗದ ತಲೆಯ ಮೇಲೆ ಬೀಳುತ್ತಿದ್ದಿತು. ಮಾಂಸದಲ್ಲಿಯೇ ಮನಸ್ಸುಳ್ಳ ಆತನು ಹಗಲಿನಲ್ಲಿ ಊಟಮಾಡಿರಲಿಲ್ಲ. ರಾತ್ರಿಯೂ ಕೂಡ ಯಾವುದಾದರೂ ಮೃಗವು ಬರುವುದೆಂದು ನಿರೀಕ್ಷಿಸುತ್ತಿದ್ದುದರಿಂದ ಅವನಿಗೆ ನಿದ್ದೆಯೂ ಬರಲಿಲ್ಲ. ಆ ಬೇಡನ ವಾಸನೆಯನ್ನು ತಿಳಿದುಕೊಂಡು ಅವನ ಹೊಡೆತದಿಂದ ಪ್ರಾಣವನ್ನು ಕಳೆದುಕೊಳ್ಳಬೇಕಾಗುವುದೆಂದು ಒಂದು ಪ್ರಾಣಿಯೂ ಅಲ್ಲಿಗೆ ಬರಲೇ ಇಲ್ಲ. ಹೀಗೆಯೇ ಇರುತ್ತಿರಲು ಆ ರಾತ್ರಿಯು ಕಳೆಯಿತು. ಕೊನೆಗೆ ಸೂರ್ಯೋದಯವಾಗಲು ಮಾಂಸದ ಆಶೆಯನ್ನು ಬಿಟ್ಟು ಕೈಯ್ಯಲ್ಲಿ ಆಯುಧವನ್ನು ಮಾತ್ರ ಹಿಡಿದುಕೊಂಡು ಮನೆಗೆ ಹೋದನು. ಮನೆಯಲ್ಲಿ ಈತನ ತಂದೆಯು ಮಗನು ಮಾಂಸವನ್ನು ತರದೆ ಬಂದುದನ್ನು ನೋಡಿ ಇಂತೆಂದನು.

|| ಪಿತೋವಾಚ ||

ನಾನೀತಮಾಮಿಷಂ ಪುತ್ರ ಕಥಂ ರಾತ್ರಿಮುಪೋಷಿತಃ || ೪೫ ||

|| ಮಹೇಶ್ವರ ಉವಾಚ ||

ತತೋ ನಿಷಾದಃ ಪಿತರಂ ಪೃಚ್ಛಂತಂ ಪ್ರತ್ಯಭಾಷತ || ೪೬ ||

|| ನಿಷಾದ ಉವಾಚ ||

ನಾನೀತಮಾಮಿಷಂ ತಾತ ನಿರಾಶಾಃ ಶಿಶವೋ ಗತಾಃ |
ಬಾಧತೇ ಕ್ಷುದಪರ್ಯಂತಾ ತ್ವಮಿತೋ ಭೋಜನಂ ಕುರು || ೪೭ ||

|| ಮಹೇಶ್ವರ ಉವಾಚ ||

ಭೋಜನಂ ತು ಕೃತಂ ತೇನ ವೃದ್ಧೇನ ಸಹ ಭಾರ್ಯಯಾ |
ಧರ್ಮಹೀನೋ ನಿಷ್ಹಾದಸ್ತು ಧರ್ಮವರ್ತೀ ವನಾಗತಃ || ೪೮ ||

---

೪೫. ತಂದೆಯು ಹೇಳಿದನು–ಎಲೈ ಮಗನೆ! ಇದೇನು ? ಮಾಂಸವನ್ನು ತರಲೇ ಇಲ್ಲವಲ್ಲ ? ಇದೇನು ? ರಾತ್ರಿಯಲ್ಲಿ ಉಪವಾಸವಿದ್ದೆಯಾ ?

೪೬. ಮಹೇಶ್ವರನು ಹೇಳಿದನು-ಆಗ ಆ ಬೇಡನು ಪ್ರಶ್ನಿಸುತ್ತಿರುವ ತಂದೆಯನ್ನು ಕುರಿತು ಇಂತೆಂದನು.

೪೭. ಬೇಡನು ಹೇಳಿದನು-ಎಲೈ ತಂದೆಯೇ! ನಾನು ಮಾಂಸವನ್ನು ತರಲಿಲ್ಲ. ಮಕ್ಕಳೆಲ್ಲವೂ ನಿರಾಶರಾಗಿ ಹೊರಟುಹೋದುವು. ನಿನಗೆ ಬಹುವಾದ ಹಸಿವಾಗುತ್ತಿದೆ. ಆದ್ದರಿಂದ ನೀನು ಊಟಮಾಡು.

೪೮ ಮಹೇಶ್ವರನು ಹೇಳಿದನು-ಆಗ ಆ ಮುದುಕನಾದ ತಂದೆಯು ತನ್ನ ಹೆಂಡತಿಯೊಡನೆ ಊಟಮಾಡಿಕೊಂಡನು. ಧರ್ಮದಿಂದ ರಹಿತನಾದ ಆ ಬೇಡನು ಕಾಡಿನಿಂದ ಬಂದು ಧರ್ಮದಿಂದ ನಡೆದುಕೊಂಡನು.

ಅಕಾಮಾಜ್ಜಾಗರಾದ್ರಾತ್ರೌ ಶಿವರಾತ್ರ್ಯಾಂ ವರಾನನೇ ।
ಮೃತೋಽಸೌ ಕಾಲಪರ್ಯಂತೇ ಗೃಹೀತೋ ಯಮಕಿಂಕರೈಃ ।
ಶಿವೇನ ಪ್ರೇಷಿತಾಸ್ತಸ್ಮೈ ವಿಮಾನಗಣಕೋಟಯಃ || ೪೯ ||

|| ಶಿವ ಉವಾಚ ||

ಶೀಘ್ರಮಾನಯತಂ ಗತ್ವಾ ಪ್ರಾಪ್ತೋsತ್ರೇ ಹಿ ಯಮಕಿಂಕರೈಃ ।
ನಿರ್ದಗ್ಧಂ ಕಿಲ್ಬಿಷಂ ತಸ್ಯ ಶಿವರಾತ್ರ್ಯಾಮುಪೋಷಣಾತ್ || ೫೦ ||

||ಮಹೇಶ್ವರ ಉವಾಚ ||

ಇತಿ ಶ್ರುತ್ವಾ ವಚೋ ದಿವ್ಯಂ ಗಣಾಸ್ತೇ ಗಂತುಮುದ್ಯತಾಃ ।
ಸ್ತುವಂತಃ ಪರಮಂ ದೇವಂ ಶಿವಂ ಶಾನ್ತಮನಾಮಯಂ || ೫೧ ||

ಗಚ್ಛಂತಂ ಚ ಗಣೇಶಾಸ್ತಮಪಶ್ಯಂಲ್ಲುಬ್ಧಕಂ ತಥಾ ।
ಗೃಹೀತಂ ಯಮದೂತೈಸ್ತು ಪಾಶಮುದ್ಗರಧಾರಿಭಿಃ || ೫೨ ||

---

೪೯. ಈತನು ಗೊತ್ತಿಲ್ಲದೇನೇ ಉಪವಾಸವಿದ್ದನು. ಅಂದು ಶಿವರಾತ್ರಿಯಾಗಿದ್ದಿತು. ಅವನಿಗೆ ಆಯುಸ್ಸು ಪೂರ್ಣವಾಗುತ್ತಲೂ ಸತ್ತನು. ಆಗ ಯಮನ ಆಳುಗಳು ಬಂದು ಹಿಡಿದುಕೊಂಡರು. ಶಿವನೂ ಕೂಡ ಅನೇಕವಾದ ವಿಮಾನಗಳನ್ನು ಈತನಿಗೋಸ್ಕರ ಕಳುಹಿಸಿಕೊಟ್ಟನು.

೫೦. ಶಿವನು ಹೇಳಿದನು-ಆ ಬೇಡನನ್ನು ಬೇಗ ಕರೆದುಕೊಂಡು ಬನ್ನಿರಿ. ಯಮನ ಆಳುಗಳು ಅವನ ಬಳಿಗೆ ಬಂದಿದ್ದಾರೆ. ಅವನು ಶಿವರಾತ್ರಿಯ ದಿನ ಉಪವಾಸ ಮಾಡಿರುವುದರಿಂದ ಅವನ ಪಾಪವೆಲ್ಲವೂ ಹೋಗಿ ಶುದ್ಧನಾಗಿದ್ದಾನೆ.

೫೧. ಮಹೇಶ್ವರನು ಹೇಳಿದನು-ಶಿವನು ಈ ಮಾತನ್ನು ಹೇಳುತ್ತಲೂ ಆ ದಿವ್ಯವಾದ ವಾಣಿಯನ್ನು ಕೇಳಿ ಶಾಂತನೂ, ರೋಗನಾಶಕನೂ, ಆದ ಆ ಸ್ವಾಮಿಯನ್ನು ಹೊಗಳುತ್ತ ಆ ಗಣಗಳು ಹೊದರು.

೫೨. ಶಿವನ ಆಳುಗಳು ಹೋಗುವ ಹೊತ್ತಿಗೆ ಆ ಬೇಡನನ್ನು ಪಾಶಮುದ್ಗರಗಳನ್ನು ಹಿಡಿದಿದ್ದ ಯಮದೂತರು ಕರೆದುಕೊಂಡು ಹೊಗುತ್ತಿದ್ದರು. ಇದನ್ನು ಈ ಶಿವದೂತರಾದ ಗಣೇಶರು ನೋಡಿದರು.

ಮುಂಚತೈನಂ ಮಹಾತ್ಮಾನಮಿತ್ಯೂಚುಸ್ತೇ ಗಣೇಶ್ವರಾಃ ।
ತತೋಽಬ್ರುವನ್ ಯಮಭಟಾಃ ಕಸ್ಮಾದೇಷ ವಿಮುಚ್ಯತಾಂ ॥ ೫೩ ॥

ಕ್ರೂರಾಸು ಯಾತನಾಸ್ವೇಷ ಪಾತ್ಯತಾಂ ಜೀವಘಾತಕಃ ।
ತತಸ್ತೇ ಹಂತುಮಾರಬ್ಧಾಃ ಖಡ್ಗಮುದ್ಗರಪಟ್ಟಿಶೈಃ ॥ ೫೪ ॥

ಗೃಹೀತ್ವೈನಂ ಮಹಾತ್ಮಾನಂ ಕಿಂಕರಾಃ ಕಾಲಚೋದಿತಾಃ ।
ಪ್ರಾವರ್ತತ ಮಹಾಯುದ್ಧಮನ್ಯೋನ್ಯವಧಕಾಂಕ್ಷಿಣಾಂ ॥ ೫೫ ॥

ಭಿನ್ನಮಸ್ತಕಕಾಯಾಶ್ಚ ಶೂಲಮುದ್ಗರಸಾಯಕೈಃ ।
ಜರ್ಜರೀಕೃತದೇಹಾಶ್ಚ ಕ್ರಂದಮಾನಾಃ ಸುದಾರುಣಂ ॥ ೫೬ ॥

ತ್ರಾಹಿ ತ್ರಾಹೀತಿ ಗರ್ಜಂತೋ ಗತಾಸ್ತೇ ಯಮಮಂದಿರಂ ।
ನಿಷಾದೋಽಥ ಗಣೈರ್ನೀತೋ ಯತ್ರ ದೇವೋ ಮಹೇಶ್ವರಃ ॥ ೫೭ ॥

---

೫೩. ಯಮದೂತರನ್ನು ಕುರಿತು ಈತನನ್ನು ಬಿಟ್ಟುಬಿಡಿರೆಂದರು. ಇದನ್ನು ಕೇಳಿ ಯಮಭಟರು ಇವನನ್ನು ಏಕೆ ಬಿಡಬೇಕು ?

೫೪–೫೫. ಇವನನ್ನು ಕ್ರೂರವಾದ ನರಕಗಳಿಗೆ ಹಾಕಿ ಶಿಕ್ಷಿಸುತ್ತೇವೆ. ಇವನು ಜೀವಘಾತಕನು. ಎನ್ನಲು ಗಣೇಶರುಗಳು ಇವರನ್ನು ಆಯುಧಗಳಿಂದ ಹೊಡೆಯಲು ಮೊದಲಿಟ್ಟರು. ಯಮನ ಕಡೆಯವರೂ ಜಗಳಕ್ಕೆ ಮೊದಲು ಮಾಡಿದರು. ನನ್ನ ಕಡೆಯವನು ನನ್ನ ಕಡೆಯವನು ಎಂದೆನ್ನುತ್ತಾ ಹೊಡೆದಾಡುವುದಕ್ಕೆ ಮೊದಲಿಟ್ಟರು.

೫೬-೫೭. ಶೂಲ, ಮುದ್ಗರ, ಸಾಯಕಗಳಿಂದ ಈ ಶಿವಗಣಗಳು ಯಮದೂತರನ್ನು ಬಹಳವಾಗಿ ಹೊಡೆಯಲು ಮೈ ಕೈ ತಲೆಗಳೆಲ್ಲವೂ ಜಜ್ಜಿ ಹೋಗಿ ಬಹುವಾಗಿ ಕೂಗಿಕೊಂಡು ಅಳುತ್ತಾ ತ್ರಾಹಿ ತ್ರಾಹಿ (ಕಾಪಾಡು ಕಾಪಾಡು) ಎಂದು ಕೂಗುತ್ತಾ ಯಮನಮನೆಗೆ ಓಡಿದರು. ಅನಂತರ ಶಿವದೂತರು ಮಹೇಶ್ವರನ ಬಳಿಗೆ ಆ ಬೇಡನನ್ನು ಕರೆದುಕೊಂಡು ಹೋದರು.

ದೃಷ್ಟಮಾತ್ರಃ ಶಿವೇನಾಸೌ ನಿಷಾದಸ್ಸುಖಿತಾಂ ಗತಃ ।
ತತೋಽಸೌ ದಿವ್ಯದೇಹಸ್ಥಃ ಕುಂಡಲಾಭರಣೋಜ್ಜ್ವಲಃ　　　　॥ ೫೮ ॥

ತಸ್ಮೈ ದತ್ತಂ ಮಹೇಶೇನ ವಿಮಾನಂ ಸಾರ್ವಗಾಮಿಕಂ ।
ಅಕ್ಷಮಾಲಾಸಮಾಕೀರ್ಣಂ ಪುಷ್ಪಮಾಲಾಪ್ರಲಂಬಿತಂ　　　　॥ ೫೯ ॥

ನಾನಾರತ್ನಸಮಾಯುಕ್ತಂ ನಾನಾವಾದಿತ್ರಘೋಷಿತಂ ।
ಭುಂಕ್ಷ್ವ ಭೋಗಾನ್ ಮಮ ಪುರೇ ಯಾವದಾಭೂತಸಂಪ್ಲವಂ　　॥ ೬೦ ॥

ಏವಂ ಲಬ್ಧವರೋ ಭೂತ್ವಾ ಹ್ಯತಿಷ್ಠಚ್ಛಿವಶಾಸನೇ ।
ಅಥ ದೂತಾ ವದಂತ್ಯಗ್ರೇ ಧರ್ಮರಾಜಪುರಸ್ಥಿತಾಃ　　　　॥ ೬೧ ॥

ರುಧಿರೇಣಾರುಣಾಂಗಾಸ್ತೇ ಜರ್ಜರೀಕೃತಮಸ್ತಕಾಃ ।
ಪ್ರೋಚುಶ್ಚ ಧರ್ಮರಾಜಾನಂ ಕೃತಾಂಜಲಿಪರಿಗ್ರಹಾಃ　　　　॥ ೬೨ ॥

---

೫೮-೬೦. ಈ ಬೇಡನು ಶಿವನನ್ನು ನೋಡಿದೊಡನೆಯೇ ಸುಖಿಯಾದನು. ಮತ್ತು ದಿವ್ಯದೇಹವನ್ನು ಹೊಂದಿ ಕರ್ಣಾಭರಣ ಭುಜಕೀರ್ತಿ ಮುಂತಾದ ಅಲಂಕಾರಗಳಿಂದ ಅಲಂಕೃತನಾದನು. ಅನಂತರ ಮಹೇಶನು ಅಕ್ಷಮಾಲೆಯಿಂದ ಕೂಡಿದ ಮಾಲೆಗಳು ಜೋಲಾಡುತ್ತಿರುವ ಅನೇಕ ಬಗೆಯರತ್ನಗಳಿಂದ ಕೂಡಿದ ಅನೇಕ ಬಗೆಯ ವಾದ್ಯಗಳುಳ್ಳ ಎಲ್ಲಾ ಕಡೆಗೂ ಹೋಗುವ ಶಕ್ತಿಯುಳ್ಳ ಒಂದು ವಿಮಾನವನ್ನು ಕೊಟ್ಟನು. ಮತ್ತು ಪ್ರಳಯಕಾಲದವರೆಗೂ ನನ್ನ ಈ ಕೈಲಾಸದಲ್ಲಿದ್ದುಕೊಂಡು ಅನೇಕ ಬಗೆಯ ಭೋಗಗಳನ್ನು ಅನುಭವಿಸು ಎಂದನು.

೬೧-೬೨. ಈ ರೀತಿಯಾಗಿ ವರವನ್ನು ಹೊಂದಿ ಆ ಕೈಲಾಸದಲ್ಲಿ ಶಿವನ ಅಪ್ಪಣೆಯಂತಿದ್ದನು. ಇತ್ತ ಯಮನ ಅಪ್ಪಣೆಯಂತೆ ಬಂದಿದ್ದ ಯಮದೂತರು ಯಮನ ಮುಂದೆ ನಿಂತುಕೊಂಡು ಜಜ್ಜಿಹೋದ ದೇಹವನ್ನೂ ಮೈಕೈಗಳ ರಕ್ತವನ್ನೂ ತೋರಿಸುತ್ತ ಕೈಮುಗಿದುಕೊಂಡು ಅವನಿಗೆ ಇಂತೆಂದು ಹೇಳಿದರು.

॥ ದೂತಾ ಊಚುಃ ॥

ಶೃಣು ರಾಜನ್ ಯಥಾವೃತ್ತಂ ಯುದ್ಧಂ ಶಿವಗಣೈಸ್ಸಹ ।
ನೀತೋಽಸೌ ಪಾಪಕರ್ಮಾ ತು ನಿಷಾದೋ ಜೀವಘಾತಕಃ ॥ ೬೩ ॥

ಅಸ್ಮಾಭಿರ್ನೀಯತೇ ರಾಜನ್ ಕಾಲಪ್ರಾಪ್ತಸ್ತ್ವದಾಜ್ಞಯಾ ।
ಏತಸ್ಮಿನ್ನೇವ ಕಾಲೇ ತು ಪರಮೇಶಗಣೇಶ್ವರಾಃ ॥ ೬೪ ॥

ಕಾಲಾಗ್ನಿರುದ್ರಸಂಕಾಶಾಃ ಶೂಲಟಂಕಗದಾಧರಾಃ ।
ಸಿದ್ಧಾಃ ಸಹಸ್ರಹಸ್ತಾಶ್ಚ ತ್ರಿನೇತ್ರಾಶ್ಚ ಜಟಾಧರಾಃ ॥ ೬೫ ॥

ದೃಷ್ಟಿಘ್ನಾಃ ಸರ್ವತೋಭದ್ರಾಃ ಭಸ್ಮಪಾಂಡುರವಿಗ್ರಹಾಃ ।
ಭುಜಂಗಹಾರವಲಯಾಃ ಶಶಾಂಕಕೃತಶೇಖರಾಃ ॥ ೬೬ ॥

ಗಂಭೀರೋದ್ದಂಡಸಂರಾವಾ ಬ್ರುವಂತಶ್ಚ ಮುಹುರ್ಮುಹುಃ ।
ತತ್ರಾಗತ್ಯ ತ್ವರಾಯುಕ್ತಾಃ ಪ್ರೋಚುರಸ್ಮಾನಿದಂ ವಚಃ ॥ ೬೭ ॥

---

೬೩-೬೭. ದೂತರು ಹೇಳಿದರು-ಎಲೈ ಯಮಧರ್ಮ ರಾಜನೇ ಕೇಳು. ನಮಗೂ ಶಿವಗಣಗಳಿಗೂ ಯುದ್ಧನಡೆದ ಬಗೆಯನ್ನು ಹೇಳುತ್ತೇವೆ. ಜೀವ ಘಾತಕನಾದ ಆ ನಿಷಾದನು ಮೃತನಾಗಲು ನಿನ್ನ ಅಪ್ಪಣೆಯಂತೆ ಕರೆದು ತರುತ್ತಿದ್ದೆವು. ಆಗಲೇನೇ ಪರಮೇಶ್ವರನ ಗಣಗಳೂ ಬಂದರು. ಅವರು ಕಾಲಾಗ್ನಿರುದ್ರರಂತಿದ್ದರು. ಶೂಲಟಂಕ ಗದೆಗಳನ್ನು ಧರಿಸಿದ್ದರು. ಸಿದ್ಧರಾಗಿದ್ದರು. ಸಾವಿರ ಕೈಗಳಿದ್ದುವು ಮೂರುಕಣ್ಣುಗಳಿದ್ದುವು. ಜಟೆಯನ್ನು ಧರಿಸಿದ್ದರು. ಕಣ್ಣಿನಿಂದಲೇ ಎಲ್ಲರನ್ನೂ ಸುಟ್ಟುಹಾಕುವಂತಿದ್ದರು. ಮಂಗಳಕರರು. ಬೂದಿಯನ್ನು ಬಳಿಯುಕೊಂಡು ಬೆಳ್ಳಗಿದ್ದರು. ಹಾವನ್ನು ಹಾರವಾಗಿ ಹಾಕಿಕೊಂಡಿದ್ದರು. ತಲೆಯಲ್ಲಿ ಚಂದ್ರನನ್ನು ಇಟ್ಟುಕೊಂಡಿದ್ದರು. ಗಂಭೀರ ವಾಗಿಯೂ ಗಟ್ಟಿಯಾಗಿಯೂ ಹೆದರಿಕೆಯಾಗುವಂತೆಯೂ ಕೂಗುತ್ತಿದ್ದರು. ಅಲ್ಲಿಗೆ ಆತುರದಿಂದಲೂ ವೇಗದಿಂದಲೂ ಬಂದು ಈ ಮಾತನ್ನು ಹೇಳಿದರು.

ಮುಂಚತ್ವೈನಂ ಮಹಾತ್ಮಾನಂ ತಪಸಾ ದಗ್ಧಕಿಲ್ಬಿಷಂ ।
ಶ್ರುತ್ವಾ ಗಣೇಶ್ವರಂ ವಾಕ್ಯಮುಕ್ತಮಸ್ಮಾಭಿರಸ್ಯಯಂ ॥ ೬೮ ॥

ನ ಮೋಕ್ತವ್ಯೋಽ ನಿಷಾದೋ ಹಿ ಪಾಪಾತ್ಮಾ ಜೀವಘಾತಕಃ ।
ಅನೇನ ಘಾತಿತಾ ಜೀವಾ ಅಸಂಖ್ಯಾತಾ ಗಣೇಶ್ವರಾಃ ॥ ೬೯ ॥

ಚಿತ್ರಾಭಿರ್ಯಾತನಾಭಿಸ್ತು ವಧ್ಯೋಽಯಂ ಹಿ ಯಮಾಜ್ಞಯಾ ।
ತೇತ್ವಸ್ಮದ್ವಚನಂ ಶ್ರುತ್ವಾ ಗಣೇಶಾಸ್ತ್ವತಿಗರ್ವಿತಾಃ ॥ ೭೦ ॥

ಶೂಲಟಂಕಗದಾಭಿಶ್ಚ ಖಡ್ಗಮುದ್ಗರತೋಮರೈಃ ।
ಭಿಂದಿಪಾಲಕುಠಾರೈಶ್ಚ ವಜ್ರಮುಷ್ಟ್ಯುಪಲೈಸ್ತಥಾ ॥ ೭೧ ॥

ಬದ್ಧಸ್ತು ವಿವಿಧೈಃ ಪಾಶೈಃ ಗೃಹೀತೋ ಜೀವಘಾತಕಃ ।
ಬಹುನಾತ್ರ ಕಿಮುಕ್ತೇನ ಪುನಸ್ತೈರೇವ ರಕ್ಷಿತಃ ॥ ೭೨ ॥

---

೬೮. ಎಲೈ ಯಮದೂತರಿರಾ ! ಈತನನ್ನು ಬಿಟ್ಟು ಬಿಡಿ. ತಪಸ್ಸಿನಿಂದ ಪಾಪಗಳನ್ನು ಕಳೆದುಕೊಂಡಿದ್ದಾನೆ. ಎಂದರು. ಆಗ ನಾವು ಆ ಗಣೇಶ್ವರರ ಮಾತನ್ನು ಕೇಳಿ ಇಂತೆಂದೆವು.

೬೯. ಎಲೈ ಗಣೇಶ್ವರರಿರಾ ! ಬೇಡನನ್ನು ಬಿಡಲಾಗುವುದಿಲ್ಲ. ಇವನು ಅನೇಕ ಜೀವಿಗಳನ್ನು ಕೊಂದ ಪಾಪಿಯು. ಈತನು ಕೊಂದುಹಾಕಿರುವ ಜೀವಗಳು ಅಸಂಖ್ಯೆಗಳಾಗಿವೆ.

೭೦–೭೨. ಇವನನ್ನು ನಾನಾಬಗೆಯಾದ ಯಾತನೆಗಳಿಂದ ಯಮನ ಅಪ್ಪಣೆಯನ್ನು ಪಡೆದು ಶಿಕ್ಷಿಸಬೇಕು. ಎಂದೆವು. ಅವರು ನಮ್ಮ ಮಾತನ್ನು ಕೇಳಿ ಬಹುವಾದ ಗರ್ವದಿಂದ ಶೂಲ, ಟಂಕ, ಗದೆ, ಖಡ್ಗ, ಮುದ್ಗರ, ತೋಮರ, ಭಿಂದಿಪಾಲ, ಕುಠಾರ, ವಜ್ರಮುಷ್ಟಿ, ಕಲ್ಲುಗಳು ಇವುಗಳಿಂದ ಹೊಡೆದರು. ಅವರು ಬಹು ಪರಾಕ್ರಮಿಗಳು. ನಾವು ಬಹುವಾದ ಕಟ್ಟುಗಳಿಂದ ಕಟ್ಟಿದ್ದ ಆ ಬೇಡನನ್ನು ಬಿಡಿಸಿ ಕರೆದುಕೊಂಡು ಹೋದರು. ಬಹು ಹೇಳಿದುದರಿಂದೇನು ? ಅವರೇ ಅವನನ್ನು ಬಿಡಿಸಿ ಕಾಪಾಡಿದರು.

॥ ಮಹೇಶ್ವರ ಉವಾಚ ॥

ತೈರೇವಮುಕ್ತಸ್ಸಂಕ್ರುದ್ಧೋ ಧರ್ಮಾತ್ಮಾ ಜೀವತೇಶ್ವರಃ । ॥ ೭೩ ॥

॥ ಯಮ ಉವಾಚ ॥

ಪಾಪಿಷ್ಠೋ ಜೀವಘಾತೀ ಚ ನಿಷಾದೋ ನಿರ್ಗುಣಸ್ತ್ವಯಂ ।
ಕಥಂ ಶಿವಪುರಂ ಯಾತಿ ಚಿತ್ರಗುಪ್ತ ವಿಚಾರಯ ॥ ೭೪ ॥

॥ ಚಿತ್ರಗುಪ್ತ ಉವಾಚ ॥

ನಿರೀಕ್ಷ್ಯ ಪುಸ್ತಕಂ ತೇನ ನ ಕಿಂಚಿತ್ಸುಕೃತಂ ಕೃತಂ ।
ಧರ್ಮಬುದ್ಧಿರ್ನ ತಸ್ಯಾಸ್ತಿ ಧರ್ಮಾಧರ್ಮಂ ನ ವಿಂದತಿ ।
ಏತಸ್ಮಿನ್ನಖಿಲಂ ಜ್ಞಾತಂ ಸತ್ಯಂ ಸತ್ಯಂ ವದಾಮ್ಯಹಂ ॥ ೭೫ ॥

---

೭೩. ಮಹೇಶ್ವರನು ಹೇಳಿದನು-ಈ ಯಮನ ಭಟರು ಹೀಗೆಂದು ಹೇಳಲು ಧರ್ಮಾತ್ಮನೂ ಜೀವಿಗಳಿಗೆ ಒಡೆಯನೂ ಆದ ಯಮನು ಕೋಪಗೊಂಡನು.

೭೪. ಯಮನು ಹೇಳಿದನು-ಎಲೈ ಚಿತ್ರಗುಪ್ತನೆ! ಈ ಬೇಡನು ಜೀವಿಗಳನ್ನು ಕೊಲ್ಲುವನು. ಪಾಪಿಯು. ಗುಣವಿಲ್ಲದವನು. ಕೈಲಾಸಕ್ಕೆ ಹೋಗಲು ಕಾರಣವೇನು ? ವಿಚಾರಮಾಡು.

೭೫. ಚಿತ್ರಗುಪ್ತನು ಹೇಳಿದನು—ಆಗ ಪುಸ್ತಕವೆಲ್ಲವನ್ನೂ ನೋಡಿ ಇವನು ಯಾವ ಧರ್ಮವನ್ನೂ ಮಾಡಿಲ್ಲವು. ಇವನಿಗೆ ಧರ್ಮದಲ್ಲಿ ಬುದ್ಧಿಯೇ ಇಲ್ಲ. ಧರ್ಮವೇನು ? ಅಧರ್ಮವೇನು ? ಎಂಬುದನ್ನೇ ತಿಳಿಯನು. ಈ ಪುಸ್ತಕದಲ್ಲಿ ಇವನ ವಿಷಯವೆಲ್ಲವೂ ತಿಳಿಯಿತು. ಸತ್ಯವಾಗಿಯೂ ಹೇಳುತ್ತೇನೆ.

॥ ಯಮ ಉವಾಚ ॥

ಇತಿಜ್ಞಾತ್ವಾ ನಿಷಾದಸ್ಯ ಚಿತ್ರಗುಪ್ತ ನಿವೇದಿತಂ ।
ಸೋಽಹಂ ಚಿಂತಾಂ ಕರೋಮೀಹ ಜನ್ತೂನಾಂ ಪಾಪಕರ್ಮಣಾಂ ।
ಗತ್ವಾ ನಿವೇದಯಿಷ್ಯಾಮಿ ಹ್ಯಯೋಗ್ಯಂ ತೈಸ್ತು ಯತ್ಕೃತಂ ॥ ೭೬ ॥

॥ ಮಹೇಶ್ವರ ಉವಾಚ ॥

ಏವಮುಕ್ತ್ವಾ ಗತಶ್ಶೀಘ್ರಂ ಯತ್ರಾಸ್ತೇ ಶಂಕರಸ್ಸ್ವಯಂ ।
ದೃಷ್ಟ್ವಾ ತು ದೇವದೇವೇಶಂ ಶಂಕರಂ ಸ್ತೋತುಮ್ಯೈರಯತ್ ॥ ೭೭ ॥

॥ ಯಮ ಉವಾಚ ॥

ನಮಸ್ತ್ರೈಲೋಕ್ಯನಾಥಾಯ ಮಹಾಬಲ ಪಿನಾಕಿನೇ ।
ಸಾಕ್ಷಾತ್ಕಾಲವಿನಾಶಾಯ ಕಾಲನಿರ್ದಾಹಿನೇ ನಮಃ ॥ ೭೮ ॥

---

೭೬. ಯಮನು ಹೇಳಿದನು–ಚಿತ್ರಗುಪ್ತನು ಬೇಡನ ವಿಷಯವನ್ನು ಹೀಗೆಂದು ಹೇಳಲು ಯಮನು ಅದನ್ನು ಕೇಳಿ ಪಾಪಿಯಾದ ಜಂತುಗಳಿಗೆ ಹೀಗೇಕೆ ಆಗಿರುವುದು ? ಎಂಬ ಚಿಂತೆಯನ್ನು ಹೊಂದಿ ತಿಳಿಯದೆ ನಾನು ಈಶ್ವರನಲ್ಲಿಗೆ ಹೋಗಿ ಅಯೋಗ್ಯರು ಮಾಡಿದ ಕೆಲಸವನ್ನು ಹೇಳುತ್ತೇನೆ. ಎಂದು ಕೊಂಡನು.

೭೭. ಮಹೇಶ್ವರನು ಹೇಳಿದನು-ಯಮನು ಹೀಗೆಂದು ಹೇಳಿ ಶಂಕರ ನಿರುವಲ್ಲಿಗೆ ಶೀಘ್ರವಾಗಿ ಹೋದನು. ಅಲ್ಲಿ ದೇವದೇವನಾದ ಶಂಕರನನ್ನು ನೋಡಿ ಸ್ತೋತ್ರಮಾಡುವುದಕ್ಕೆ ಪ್ರಾರಂಭಿಸಿದನು.

೭೮. ಯಮನು ಹೇಳಿದನು–ಮೂರುಲೋಕಕ್ಕೂ ಒಡೆಯನಾದ ನಿನಗೆ ನಮಸ್ಕಾರವು. ಮಹಾಬಲಿಷ್ಠನೂ ಪಿನಾಕವೆಂಬ ಧನುಸ್ಸನ್ನು ಹೊಂದಿರು ವವನೂ ಆದ ನಿನಗೆ ನಮಸ್ಕಾರವು. ಪ್ರತ್ಯಕ್ಷನಾದ ಯಮನನ್ನೇ ನಾಶಮಾಡುವ ನಿನಗೆ ನಮಸ್ಕಾರವು. ಆ ಕಾಲನನ್ನು ಸುಟ್ಟುಹಾಕುವ ನಿನಗೆ ನಮಸ್ಕಾರವು.

ಶಿವಾಗಮಾರ್ಣವಾಂತಸ್ಥ ಜ್ಞಾನರತ್ನಸುದಾಯಿನೇ ।
ಹೃದಿ ಸ್ಥಿತಾಯ ಸರ್ವೇಷಾಂ ಸಾಕ್ಷಿಣೇ ಜಗತಾಂ ವಿಭೋ ॥ ೭೯ ॥

ಅಜ್ಞಾನತಿಮಿರಾಂಧಸ್ಯ ತಮಸೋಽತೀತಮೂರ್ತಯೇ ।
ಅನಾಶ್ರಿತಾಯ ತುಷ್ಟಾಯ ಕಪಾಲಾಯ ನಮೋಽಸ್ತು ತೇ ॥ ೮೦ ॥

ಅನಾದಿಮಲಭೇತ್ರೇ ಚ ಚಿದ್ಗುಣೋದಯಹೇತವೇ ।
ಗುಣಪ್ರದಾಯ ಗೂಢಾರ್ಥದ್ಯೋತಕಾಯ ನಮೋಸ್ತು ತೇ ॥ ೮೧ ॥

॥ ಮಹೇಶ್ವರ ಉವಾಚ ॥

ಏವಂ ಸ್ತುತ್ವಾ ಮಹಾದೇವಂ ಪ್ರಣಾಮೋ ದಂಡವತ್ಕೃತಃ ॥ ೮೨ ॥

---

೭೯. ಶಿವಾಗಮದಲ್ಲಿ ಅಡಕವಾಗಿರುವ ಸೂಕ್ಷ್ಮಜ್ಞಾನವೆಂಬ ರತ್ನವನ್ನು ಕೊಡುವ ನಿನಗೆ ನಮಸ್ಕಾರವು. ಎಲ್ಲರ ಹೃದಯದಲ್ಲಿಯೂ ಇರುವ ನಿನಗೆ ನಮಸ್ಕಾರವು. ಜಗತ್ತಿಗೇ ಸಾಕ್ಷಿಭೂತನಾದ ಸ್ವಾಮಿಗೆ ನಮಸ್ಕಾರವು.

೮೦. ಅಜ್ಞಾನವೆಂಬ ಕತ್ತಲೆಯಿಂದ ಕೂಡಿಕೊಂಡು ಕಣ್ಣುಕಾಣಿಸದವನಿಗೆ ದೀಪದಂತಿರುವ ಅಜ್ಞಾನಕ್ಕಿಂತಲೂ ಬಹು ದೂರದಲ್ಲಿರುವ ಸ್ವಾಮಿಗೆ ನಮಸ್ಕಾರವು. ಆಶ್ರಯಿಸದಿರುವ ನಿನಗೆ ನಮಸ್ಕಾರವು. ಸಂತೋಷಗೊಂಡಿರುವ ನಿನಗೆ ನಮಸ್ಕಾರವು. ಕಪಾಲವನ್ನು ಧರಿಸಿರುವ ನಿನಗೆ ನಮಸ್ಕಾರವು.

೮೧. ಅನಾದಿಯಾಗಿರುವ ಪಾಪವನ್ನು ನಾಶಮಾಡುವ ನಿನಗೆ ನಮಸ್ಕಾರವು. ಚಿದ್ಗುಣವು ಹೆಚ್ಚಾಗುತ್ತಿರುವಂತೆ ಮಾಡುವ ನಿನಗೆ ನಮಸ್ಕಾರವು. ಒಳ್ಳೆಯ ಗುಣಗಳನ್ನು ಕೊಡುವ ನಿನಗೆ ನಮಸ್ಕಾರವು. ಗುಟ್ಟಾದ ಅರ್ಥಗಳು ತಿಳಿಯುವಂತೆ ಮಾಡುವ ನಿನಗೆ ನಮಸ್ಕಾರವು.

೮೨. ಮಹೇಶ್ವರನು ಹೇಳಿದನು—ಈ ರೀತಿಯಾಗಿ ಮಹಾದೇವನನ್ನು ಸ್ತುತಿಸಿ ದೀರ್ಘದಂಡನಮಸ್ಕಾರವನ್ನು ಮಾಡಿದನು.

॥ ಯಮ ಉವಾಚ ॥

ಮೇರುಮಂದರತುಲ್ಯಾನಿ ದುಷ್ಕೃತಾನಿ ಬಹೂನ್ಯಪಿ ।
ನಶ್ಯಂತಿ ತಾನಿ ಸರ್ವಾಣಿ ತವ ಪಾದಾಬ್ಜಚಿಂತಯಾ ॥ ೮೩ ॥

॥ ಮಹೇಶ್ವರ ಉವಾಚ ॥

ಇತ್ಯುಕ್ತ್ವಾ ದಂಡಮುದ್ರಾ ತು ಪಾದಾಬ್ಜೇ ತು ನಿವೇದಿತಾ ॥ ೮೪ ॥

॥ ಶಿವ ಉವಾಚ ॥

ಕಿಮರ್ಥಂ ದಂಡಮುದ್ರಾಪಿ ತ್ಯಕ್ತೇಯಂ ಯಮಸತ್ತಮ ।
ಕೇನಾಪರಾಧಿನಾ ಧರ್ಮೋ ಧರ್ಮರಾಜ ಉಪೇಕ್ಷಿತಃ ॥ ೮೫ ॥

॥ ಧರ್ಮರಾಜ ಉವಾಚ ॥

ತ್ವದ್ಗಣೈರ್ದೇವದೇವೇಶ ಜಗತಾಂ ಪಾಲನ ಪ್ರಭೋ ।
ಮದೀಯಾಃ ಕಿಂಕರಾ ದೇವ ಘಾತಿತಾಶ್ಶಕ್ತಿಮುದ್ಗರೈಃ ॥ ೮೬ ॥

---

೮೩. ಯಮನು ಹೇಳಿದನು-ಎಲೈ ಸ್ವಾಮಿಯೆ! ಮೇರು ಮಂದರ ಪರ್ವತಗಳಷ್ಟು ದೊಡ್ಡವಾಗಿದ್ದರೂ ಆ ಪಾಪಗಳೂ ಕೂಡ ನಿನ್ನ ಪಾದಗಳನ್ನು ಚಿಂತಿಸುವುದರಿಂದ ಹೋಗುತ್ತವೆ.

೮೪. ಮಹೇಶ್ವರನು ಹೇಳಿದನು-ಹೀಗೆಂದು ಹೇಳಿ ಆ ಸ್ವಾಮಿಯ ಪಾದಗಳಿಗೆ ದೀರ್ಘದಂಡನಮಸ್ಕಾರವನ್ನು ಮಾಡಿ ತನ್ನ ಯಮದಂಡವನ್ನೂ ಯಮಮುದ್ರೆಯನ್ನೂ ಕೊಟ್ಟುಬಿಟ್ಟನು.

೮೫. ಶಿವನು ಹೇಳಿದನು-ಎಲೈ ಯಮನೆ! ನಿನ್ನ ದಂಡಮುದ್ರೆಗಳನ್ನೇಕೆ ನನ್ನಮುಂದೆ ಇಟ್ಟುಬಿಟ್ಟೆ? ಯಾವನು ಧರ್ಮದ ವಿಷಯದಲ್ಲಿ ಅಪರಾಧ ಮಾಡಿದನು? ಅಥವಾ ಧರ್ಮದಂತೆ ನಡೆಯಲು ಉಪೇಕ್ಷಿಸಿದನು?

೮೬. ಧರ್ಮರಾಜನು ಹೇಳಿದನು-ಎಲೈ ಜಗತ್ಪಾಲಕನಾದ ಪ್ರಭುವೆ! ನಿನ್ನ ಗಣಗಳು ನನ್ನ ಆಳುಗಳನ್ನು ಶಕ್ತಿ ಮುದ್ಗರ ಮುಂತಾದುವುಗಳಿಂದ ಹೊಡೆದರು.

ನಿಷಾದೋ ಜೀವಘಾತೀ ಚ ಸರ್ವಕರ್ಮಬಹಿಷ್ಕೃತಃ ।
ಮಾಂಸಲುಬ್ಧಶ್ಚ ದೇವೇಶ ವಿಚಚಾರ ಮಹಾವನೇ ॥ ೮೭ ॥

ನ ಲಬ್ಧಂ ಪಿಶಿತಂ ತೇನ ನಿಷಾದೇನ ಧನುಷ್ಮತಾ ।
ಜಲಾಸನ್ನಗತೋ ರಾತ್ರ್ಯಾಂ ಗತೇಽರ್ಕೇ ಜೀವಘಾತಕಃ ॥ ೮೮ ॥

ಮೃಗಾ ವಾ ನ ಭವಂತ್ಯಸ್ಯ ನ ನಿದ್ರಾ ಚ ಭವತ್ಯಹೋ ।
ನ ಕೃತಂ ಭೋಜನಂ ದಿಷ್ಟ್ಯಾ ಶಿವರಾತ್ರ್ಯಾಮುಪೋಷಿತಃ ॥ ೮೯ ॥

ಅಪರ್ಯಂತಾಂ ಕ್ಷುಧಾಂ ಪ್ರಾಪ್ಯ ಉದಿತೇ ಸೂರ್ಯಮಂಡಲೇ ।
ಗೃಹಂ ಗತೋಽಸೌ ದೇವೇಶ ತ್ವಸಂಪ್ರಾಪ್ತಮನೋರಥಃ ॥ ೯೦ ॥

ಪಾಪಮೇವಾಕರೋತ್ಪಾಪೀ ನಿಷಾದೋ ಮಾಂಸವಿಕ್ರಯೀ ।
ಅನೇನ ಸುಕೃತಂ ದೇವ ನ ಕಿಂಚಿದುಪಪಾದಿತಂ ॥ ೯೧ ॥

---

೮೭. ಒಬ್ಬ ಬೇಡನಿದ್ದನು. ಅವನು ಅನೇಕ ಜೀವಗಳನ್ನು ಕೊಂದವನು ಒಂದು ಕರ್ಮಕ್ಕೂ ಯೋಗ್ಯವಲ್ಲದವನು. ಮಾಂಸಕ್ಕೋಸ್ಕರ ಆಸೆಪಟ್ಟು ಕಾಡಿನಲ್ಲಿ ಸಂಚರಿಸುತ್ತಿದ್ದನು.

೮೮. ಆದಿನ ಆ ಬೇಡನಿಗೆ ಮಾಂಸವೇ ಸಿಕ್ಕಲಿಲ್ಲ. ಆಗ ರಾತ್ರಿಯಾಗಲು ನೀರಿರುವ ಬಳಿಗೆ ಹೋದನು. ಆಗಲೂ ಕೂಡ ಯಾವ ಪ್ರಾಣಿಗಳಾದರೂ ಬರುವುದೇ ? ಎಂದು ನೋಡುತ್ತಿದ್ದನು.

೮೯. ಆ ರಾತ್ರಿಯಲ್ಲಿ ಅವನಿಗೆ ಮೃಗವೊಂದೂ ಸಿಗಲಿಲ್ಲ. ನಿದ್ದೆಯೂ ಬರಲಿಲ್ಲ ಅಂತು ಆದಿನ ಊಟಮಾಡಲಿಲ್ಲ. ಉಪವಾಸ ಮಾಡಿದನು. ಆದಿನ ಶಿವರಾತ್ರಿಯಾಗಿದ್ದಿತು.

೯೦ ಆದಿನ ಅವನಿಗೆ ಬಹುವಾದ ಹಸಿವುಂಟಾಯಿತು. ಮಾಂಸವನ್ನು ಹೊಂದದೆ ಸೂರ್ಯನು ಹುಟ್ಟಿದಮೇಲೆ ಮನೆಗೆ ಹೋದನು.

೯೧. ಈ ಮಾಂಸವನ್ನು ಮಾರುವ ಬೇಡನು ಪಾಪವನ್ನೇ ಮಾಡುತ್ತಿದ್ದನು. ಇವನು ಒಂದು ಸ್ವಲ್ಪವೂ ಪುಣ್ಯವನ್ನು ಮಾಡಿಯೇ ಇಲ್ಲ.

ವಿಚಿತ್ರಯಾತನಾರ್ಹಸ್ತು ಪಾಪಿಷ್ಠೋ ಜೀವಘಾತಕಃ ।
ಸರ್ವಾನ್ ಲೋಕಾನ್ ವಿನಿರ್ಜಿತ್ಯ ಗಾಣೇಶ್ವರಮವಾಪ್ತವಾನ್ ॥ ೯೨ ॥

ದೇವದೇವ ಮಹಾದೇವ ಭಕ್ತಾನಾಮಾರ್ತಿನಾಶನ ।
ಕಿಂ ಕೃತ್ಯಮತ್ರ ದೇವೇಶ ತ್ವದಾಜ್ಞಾಕಾರಿಣಾ ಮಯಾ ॥ ೯೩ ॥

॥ ಮಹೇಶ್ವರ ಉವಾಚ ॥

ಇತ್ಯುಕ್ತೋ ಧರ್ಮರಾಜೇನ ಭಗವಾನ್ ಭಕ್ತವತ್ಸಲಃ ।
ಪ್ರಾಹ ಗಂಭೀರಯಾ ವಾಚಾ ಶಿವರಾತ್ರಿಮನುಸ್ಮರನ್ ॥ ೯೪ ॥

॥ ಶಿವೋವಾಚ ॥

ಅಯಂ ಹಿ ಶುದ್ಧಶ್ಶಬರಃ ಪುಣ್ಯಾತ್ಮಾ ಧಾರ್ಮಿಕೋ ಮಹಾನ್ ।
ತಪಸ್ವೀ ಮತ್ಪ್ರಿಯೋ ನಿತ್ಯಂ ಶಿವರಾತ್ರಿಮುಪೋಷಿತಃ ॥ ೯೫ ॥

---

೯೨. ಈತನು ಪಾಪಿಷ್ಠನು. ಜೀವಹಿಂಸಕನು. ನಾನಾಬಗೆಯ ಯಾತನೆ ಹೊಂದಲು ಯೋಗ್ಯನು. ಇಂತಹವನು ಎಲ್ಲಾ ಲೋಕಗಳನ್ನೂ ಜಯಿಸಿ ಗಣೇಶ್ವರನಾದನು.

೯೩. ದೇವದೇವನೇ ! ಮಹಾದೇವನೇ ! ಭಕ್ತರ ತೊಂದರೆಯನ್ನು ನಾಶಮಾಡುವವನೇ ! ನಿನ್ನ ಆಜ್ಞೆಯಂತೆ ನಡೆಯುವ ನಾನು ಈಗ ಏನನ್ನು ಮಾಡಬೇಕು ?

೯೪. ಮಹೇಶ್ವರನು ಹೇಳಿದನು-ಹೀಗೆಂದು ಹೇಳಲು ಭಗವಂತನೂ ಭಕ್ತವತ್ಸಲನೂ ಆದ ಆ ಶಿವನು ಶಿವರಾತ್ರಿಯ ವಿಷಯವನ್ನು ಜ್ಞಾಪಿಸಿ ಕೊಳ್ಳುತ್ತಾ ಗಂಭೀರವಾದ ಧ್ವನಿಯಿಂದ ಇಂತೆಂದನು.

೯೫. ಶಿವನು ಹೇಳಿದನು-ಈ ಬೇಡನು ಶುದ್ಧನು. ಪುಣ್ಯಾತ್ಮನು. ಧರ್ಮಿಷ್ಠನು. ತಪಸ್ವಿಯು. ನನಗೆ ಪ್ರಿಯನು. ಶಿವರಾತ್ರಿಯಲ್ಲಿ ಉಪವಾಸ ಮಾಡಿರುವನು.

ಶಿವರಾತ್ರಿರಿತಿ ಖ್ಯಾತಾ ಮಾಘಕೃಷ್ಣ ಚತುರ್ದಶೀ ।
ಭುಕ್ತಿಮುಕ್ತಿ ಪ್ರದಾ ನಿತ್ಯಂ ಸರ್ವಪಾಪಪ್ರಣಾಶಿನೀ ॥ ೯೬ ॥

ಏವಂ ಮಂಗಳದಾಭೀಷ್ಟಪ್ರದಾ ಪುಣ್ಯವಿವರ್ಧಿನೀ ।
ಯಮಶಾಸನಹಂತ್ರೀ ಚ ಶ್ರೀಪದಾ ಯೋಗದಾಯಿನೀ ॥ ೯೭ ॥

ಸಮ್ಯಕ್ ಸಿದ್ಧಿಕರೀ ಪೂಜ್ಯಾ ಸೌಭಾಗ್ಯಫಲದಾಯಿನೀ ।
ನಿರ್ಮಿತಂ ಹಿ ಮಯಾ ಪೂರ್ವಂ ಸುಜಾಗರಮನುತ್ತಮಂ ॥ ೯೮ ॥

ವ್ರತಂ ತಸ್ಯಾಂ ತಿಥೌ ಶೈವಂ ಲೋಕಾನಾಂ ಹಿತಕಾಮ್ಯಯಾ ।
ಶಿವರಾತ್ರಿಪ್ರಭಾವೇನ ಕೃತಾರ್ಥಃ ಶಬರಸ್ತ್ವಯಂ ।
ಜಿವಿತೇಶ ವರಂ ಬ್ರೂಹಿ ವರದೋಹಂ ತವೇಪ್ಸಿತಂ ॥ ೯೯ ॥

॥ ಯಮ ಉವಾಚ ॥

ಕೃಪಾಲಯ ಮಹಾದೇವ ಭಕ್ತಾನಾಮಭಯಪ್ರದ ।
ಸಂಸಾರಸಾಗರಭ್ರಾಂತಿಪರಿವಿಚ್ಛೇದಿನೇ ನ ಮಃ ॥ ೧೦೦ ॥

---

೯೬. ಮಾಘ ಕೃಷ್ಣಚತುರ್ದಶಿಗೆ ಶಿವರಾತ್ರಿಯೆಂದು ಹೆಸರು. ಅದು ಭುಕ್ತಿಯನ್ನೂ ಮುಕ್ತಿಯನ್ನೂ ಕೊಡುವುದಲ್ಲದೆ ಪಾಪಗಳನ್ನೂ ನಾಶಮಾಡುತ್ತದೆ.

೯೭. ಈ ರೀತಿಯಾಗಿ ಈ ಶಿವರಾತ್ರಿಯು ಮಂಗಳಗಳನ್ನು ಕೊಡುತ್ತದೆ. ಪುಣ್ಯವನ್ನು ಹೆಚ್ಚಿಸುವುದು. ಯಮನ ಶಾಸನವನ್ನು ನಾಶಮಾಡುತ್ತದೆ. ಸಂಪತ್ತನ್ನು ಉಂಟುಮಾಡುತ್ತದೆ.

೯೮. ಇದು ಒಳ್ಳೆಯ ಸಿದ್ಧಿಯನ್ನು ಕೊಡುತ್ತದೆ. ಸೌಭಾಗ್ಯವನ್ನು ಕೊಡುತ್ತದೆ. ಈ ರೀತಿಯಾದ ಜಾಗರಣೆಯುಳ್ಳ ವ್ರತವನ್ನು ನಾನು ಪೂರ್ವದಲ್ಲಿ ನಿರ್ಮಿಸಿದೆನು.

೯೯. ಆ ಮಾಘ ಬಹುಳ ಚತುರ್ದಶಿಯ ದಿವಸ ಲೋಕಗಳಿಗೆ ಹಿತವನ್ನು ಕೊಡುವ ಶೈವವ್ರತವು ನಡೆಯುತ್ತದೆ. ಈ ಶಿವರಾತ್ರಿಯ ಮಹಿಮೆಯಿಂದ ಆ ಬೇಡನು ಕೃತಾರ್ಥನಾದನು. ಎಲೈ ಯಮನೆ! ವರವನ್ನು ಕೇಳಿಕೋ! ಬೇಕಾದ ವರವನ್ನು ಕೊಡುತ್ತೇನೆ.

೧೦೦-೧೦೧. ಯಮನು ಹೇಳಿದನು-ಕೃಪಾಕರನೆ! ಮಹಾದೇವನೆ! ಭಕ್ತರಿಗೆ ಅಭಯವನ್ನು ಕೊಡತಕ್ಕವನೆ! ಸಂಸಾರವೆಂಬ ಸಮುದ್ರದಲ್ಲಿ ಸುತ್ತುತ್ತಿರುವುದನ್ನು ತಪ್ಪಿಸುವವನೆ! ನಿನಗೆ ನಮಸ್ಕಾರವು. ಪಿನಾಕವನ್ನು

ನಮಃ ಪಿನಾಕಹಸ್ತಾಯ ನಮಸ್ತೇ ಕೃತ್ತಿವಾಸಸೇ ।
ತವ ಪಾದಬ್ಜಯುಗಳೇ ಭಕ್ತಿಂ ದೇಹಿ ಮಹೇಶ್ವರ || ೧೦೧ ||

|| ಮಹೇಶ್ವರ ಉವಾಚ ||

ಭವತ್ವಿತ್ಯಾಹ ಭಗವಾನ್ ಗಚ್ಛ ತ್ವಂ ನಗರಂ ಪ್ರತಿ || ೧೦೨ ||

ಇತ್ಯೇವಮುಕ್ತೋ ವೃಷಕೇತನೇನ
ಪ್ರಹೃಷ್ಟರೋಮಾವೃತಸರ್ವಗಾತ್ರಃ ।
ವ್ರತಪ್ರಭಾವಂ ಶಬರೇಣ ಲಬ್ಧಂ ।
ಪಶ್ಯನ್ ಪದಂ ಸ್ವಂ ಭವನಂ ಜಗಾಮ || ೧೦೩ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಶಿವರಾತ್ರಿಪ್ರಭಾವ ಕಥನಂ ನಾಮ ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

ಹಿಡಿದಿರುವ ನಿನಗೆ ನಮಸ್ಕಾರವು. ಆನೆಯ ಚರ್ಮವನ್ನು ಹೊದ್ದಿರುವ ನಿನಗೆ ನಮಸ್ಕಾರವು. ನಿನ್ನ ಪಾದಗಳಲ್ಲಿ ಭಕ್ತಿಯಿರುವಂತೆ ನನಗೆ ವರವನ್ನು ಕೊಡು.

೧೦೨. ಮಹೇಶ್ವರನು ಹೇಳಿದನು-ಹಾಗೆಯೇ ಆಗಲಿ ನೀನು ನಿನ್ನ ಊರಿಗೆ ಹೋಗು.

೧೦೩. ಈಶ್ವರನು ಹೀಗೆಂದು ಹೇಳಲು ಆ ಯಮನು ಸಂತೋಷದಿಂದ ರೋಮಾಂಚವುಳ್ಳವನಾಗಿ ಆ ಶಬರನು ಈ ವ್ರತಪ್ರಭಾವದಿಂದ ಹೊಂದಿದ ಸ್ಥಿತಿಯನ್ನು ನೋಡಿ ಸಂತೋಷಿಸುತ್ತಾ ಮನೆಗೆ ಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಶಿವರಾತ್ರಿಪ್ರಭಾವ ಕಥನ ಎಂಬ ಇನ್ನೂರ ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ದೇವ್ಯುವಾಚ ॥

ಶ್ರುತೋ ವ್ರತಾನುಭಾವಶ್ಚ ತ್ವನ್ಮುಖಾಂತಭೋರುಹಾನ್ಮಯಾ ।
ಚರಿತಂ ಶಬರಸ್ಯಾಪಿ ಜೀವಿತೇಶಗತಿಸ್ತಥಾ ॥ ೧ ॥

ನಾನಾರ್ಥದಂ ಮಹಾದೇವ ಶ್ರುತ್ವಾ ವಾಕ್ಯಾಮೃತಂ ಚ ತೇ ।
ಪ್ರೀತಿರಸ್ಯ ಸ್ವರೂಪಂ ಯತ್ಪುನರ್ಮೇ ವಕ್ತುಮರ್ಹಸಿ ॥ ೨ ॥

॥ ಮಹೇಶ್ವರ ಉವಾಚ ॥

ಜೀವಘಾತೀ ಚ ಶಬರಃ ಶಿವರಾತ್ರ್ಯಾಮುಪೋಷಿತಃ ।
ಅಬುದ್ಧಪೂರ್ವಂ ದೇವೇಶಿ ಗಾಣಪತ್ಯಮವಾಪ್ತವಾನ್ ॥ ೩ ॥

---

### ಇನ್ನೂರ ನಲವತ್ತೊಂದನೆಯ ಅಧ್ಯಾಯವು



೧. ದೇವಿಯು ಹೇಳಿದಳು-ಎಲೈ ಸ್ವಾಮಿಯೇ! ನಿನ್ನ ಮುಖಪದ್ಮದಿಂದಲೇ ಶಿವರಾತ್ರಿಯ ವ್ರತವನ್ನೂ ಬೇಡನ ಮತ್ತು ಯಮನ ಸ್ಥಿತಿಯನ್ನೂ ತಿಳಿದುಕೊಂಡೆನು.

೨. ನಿನ್ನ ಬಾಯಿಂದ ಅನೇಕ ಬಗೆಯಾದ ಅರ್ಥವುಳ್ಳ ಮಾತುಗಳನ್ನು ಕೇಳಿದೆನು. ಅದು ಬಹು ಪ್ರೀತಿಯನ್ನುಂಟುಮಾಡುತ್ತದೆ. ಇನ್ನೂ ಯಾವುದಾದರೂ ವಿಷಯಗಳನ್ನು ಹೇಳು.

೩. ಮಹೇಶ್ವರನು ಹೇಳಿದನು-ಪ್ರಾಣಿಹಿಂಸಕನಾದ ಬೇಡನು ಶಿವರಾತ್ರಿಯನ್ನು ತಿಳಿಯದೇನೇ ಉಪವಾಸಮಾಡಿ ಗಣಗಳಿಗೆ ಪತಿಯಾದನು.

ಶ್ರದ್ಧಯಾಭೀಪ್ಸಯಾ ಪ್ರೀತ್ಯಾ ಭೀತ್ಯಾ ಚ ಹೃದಯೇನ ವಾ ।
ಕೃತ್ವಾ ಚ ಜಾಗರಂ ರಾತ್ರೌ ಮುಚ್ಯತೇ ಸರ್ವಕಿಲ್ಬಿಷೈಃ ॥ ೪ ॥

ಪ್ರಭಾತಸಮಯೇ ಬುಧ್ವಾ ಗುರೋರ್ಗೇಹಂ ಸಮಾಗತಃ ।
ತಸ್ಯಾಜ್ಞಾಂ ಪ್ರಾರ್ಥಯೇತ್ಪೂರ್ವಂ ವ್ರತಾನುಚರಣಾಯ ವೈ ॥ ೫ ॥

ಸ್ನಾತ್ವಾ ಶುಕ್ಲಾಂಬರಧರಃ ಕೃತಮೌನೋ ಜಿತೇಂದ್ರಿಯಃ ।
ಕೃತಾಹ್ನಿಕವಿಧಿಸ್ತತ್ರ ಗತೇ ಚಾರ್ಕೇ ಸಮಾಹಿತಃ ॥ ೬ ॥

ಸ್ನಾತ್ವಾ ವೈನಾಯಿಕೀಂ ಪೂಜಾಂ ಕಲ್ಪಯೇತ್ಪುರತಃ ಶುಭೈಃ ।
ಯಜನಂ ಪ್ರತಿಯಾಮಂ ಚ ಪಾದ್ಯಾರ್ಘ್ಯೈರಾಗನೋದಿತೈಃ ॥ ೭ ॥

ಕೃತಾಭ್ಯಂಗಾಭಿಷೇಕಂ ಚ ಪ್ರತಿಯಾಮಂ ಸಮಾಚರೇತ್ ।
ಪಂಚಗವ್ಯಾದಿಭಿಶ್ಚೈವ ನಾಳಿಕೇರಫಲೋದಕೈಃ ॥ ೮ ॥

---

೪. ಶ್ರದ್ಧೆಯಿಂದಲೂ ಇಷ್ಟದಿಂದಲೂ ಪ್ರೀತಿಯಿಂದಲೂ ಭೀತಿಯಿಂದಲೂ ಮನಃಪೂರ್ವಕವಾಗಿಯೂ ರಾತ್ರಿಯಲ್ಲಿ ಜಾಗರಣೆಯನ್ನು ಮಾಡಿದರೆ ಎಲ್ಲಾ ಪಾಪಗಳೂ ಹೋಗುತ್ತವೆ.

೫. ಬೆಳಗ್ಗೆ ಎದ್ದು ಗುರುವಿನ ಮನೆಗೆ ಹೋಗಬೇಕು. ವ್ರತವನ್ನು ಮಾಡುವುದಕ್ಕೋಸ್ಕರ ಮೊದಲು ಆ ಗುರುವಿನ ಅಪ್ಪಣೆಯನ್ನು ಪಡೆಯಬೇಕು.

೬. ಅನಂತರ ಸ್ನಾನಮಾಡಿ ಬಿಳಿಯ ಮಡಿಯಾದ ಬಟ್ಟೆಯನ್ನು ಉಟ್ಟುಕೊಂಡು ಜಿತೇಂದ್ರಿಯನೂ ಮೌನವುಳ್ಳವನೂ ಆಗಿ ಆಹ್ನಿಕಾದಿಗಳನ್ನು ಮಾಡಿಕೊಳ್ಳಬೇಕು.

೭-೯. ಅನಂತರ ಸೂರ್ಯನು ಮುಳುಗಿದಮೇಲೆ ಸ್ನಾನಮಾಡಿ ವಿನಾಯಕ ಪೂಜೆಯನ್ನು ಮಾಡಬೇಕು. ಒಳ್ಳೆಯದಾಗಿರತಕ್ಕ ಪಾದ್ಯ ಅರ್ಘ್ಯ ಆಚಮನೀಯಗಳಿಂದ ಒಂದೊಂದು ಯಾಮದಲ್ಲಿಯೂ ಪೂಜೆಯನ್ನು ಮಾಡಬೇಕು. ದೇವರಿಗೂ ಅಭಿಷೇಕ ಅಭ್ಯಂಜನವನ್ನು ಪ್ರತಿಯಾಮದಲ್ಲಿಯೂ ಮಾಡುತ್ತಿರಬೇಕು. ಹಾಲು, ಮೊಸರು, ತುಪ್ಪ, ಜೇನು ಮುಂತಾದುವುಗಳಿಂದಲೂ

ಅಥಾನ್ಯೈರಭಿಷೇಕಾರ್ಹೈರೋಷಧೀಬಿಲ್ವಪತ್ರಕೈಃ ।
ಸ್ನಾಪನಂ ಚ ಮಹಾದೇವಂ ಸಹಸ್ರಾದ್ಯೈಶ್ಚ ಶಾಂಭವೈಃ ॥ ೯ ॥

ಪಿಷ್ಟಾಮಲಕಹಾರಿದ್ರಚೂರ್ಣೈರುದ್ವರ್ತಯೇತ್ಸುಧೀಃ ।
ಅರ್ಚಯೇದ್ಬಿಲ್ವಪತ್ರೈಶ್ಚ ಗಂಧತೋಯೈಶ್ಚ ಸೇವಯೇತ್ ॥ ೧೦ ॥

ಸ್ವರ್ಣೋದಕೈರತ್ನತೋಯೈಶ್ಚಾಭಿಷೇಕಂ ಸಮಾಚರೇತ್ ।
ತಾಂತವೇನಾಥ ನಿರ್ಮೃಜ್ಯ ನೀರಾಜನಮಥಾಚರೇತ್ ॥ ೧೧ ॥

ವಸ್ತ್ರೈರ್ನಾನಾವಿಧೈಶ್ಚೈವ ವಿಶೇಷೈರ್ಧೂಪಿತೈಸ್ತಥಾ ।
ಸಂವೇಷ್ಟಯೇದ್ಯಥಾಶೋಭಂ ಸೌವರ್ಣೈರ್ಭೂಷಣೈರಪಿ ॥ ೧೨ ॥

ಅಲಂಕೃತ್ಯ ಮಹಾದೇವಂ ಪೂಜಯೇದ್ಬಿಲ್ವಪತ್ರಕೈಃ ।
ಜಾತೀಚಂಕಪುನ್ನಾಗಪದ್ಮೋತ್ಪಲಕದಂಬಕೈಃ ॥ ೧೩ ॥

---

ಎಳನೀರಿನಿಂದಲೂ ಇನ್ನೂ ಯಾವು ಯಾವುದನ್ನು ಅಭಿಷೇಕಮಾಡಬಹುದೋ ಅವುಗಳಿಂದಲೂ ಮಹಾದೇವನಿಗೆ ಅಭಿಷೇಕಮಾಡಬೇಕು. ಆಗ ಪುರುಷಸೂಕ್ತ ರುದ್ರ ಚಮೆ ಶಂಭುವಿನ ಸಂಬಂಧವಾದ ಮಂತ್ರಗಳೆಲ್ಲವನ್ನೂ ಹೇಳಬೇಕು.

೧೦. ಹೆಸರುಹಿಟ್ಟು ನೆಲ್ಲಿಕಾಯಿ ಅರಸಿನ ಮುಂತಾದ ಪುಡಿಗಳಿಂದ ಆ ಮಹಾದೇವನನ್ನು ತಿಕ್ಕಿ ತೊಳೆಯಬೇಕು. ಬಿಲ್ವಪತ್ರೆ ಹೂ ಮುಂತಾದುವುಗಳಿಂದ ಪೂಜಿಸಬೇಕು. ಗಂಧದ ನೀರನ್ನು ಚುಮುಕಿಸಬೇಕು.

೧೧. ಚಿನ್ನವನ್ನು ಹಾಕಿದ ನೀರು ರತ್ನವನ್ನು ಹಾಕಿದ ನೀರು ಇವುಗಳಿಂದಲೂ ಅಭಿಷೇಕವನ್ನು ಮಾಡಬೇಕು. ಅನಂತರ ಹತ್ತಿಯ ಬಟ್ಟೆಯಿಂದ ಒರಸಬೇಕು. ಅನಂತರ ಮಂಗಳಾರತಿಯನ್ನು ಮಾಡಬೇಕು.

೧೨-೧೭. ಆಮೇಲೆ ಬಗೆ ಬಗೆಯಾದ ಬಟ್ಟೆಗಳಿಂದ ಅಲಂಕರಿಸಬೇಕು. ಧೂಪಹಾಕಿ ವಾಸನೆ ಬರುವಂತೆ ಮಾಡಬೇಕು. ಚಿನ್ನ ಬೆಳ್ಳಿಗಳ ಒಡವೆಗಳಿಂದ ಅಲಂಕರಿಸಬೇಕು. ಬಿಲ್ವಪತ್ರೆಯಿಂದ ಪೂಜಿಸಬೇಕು. ಜಾಜಿ, ಸಂಪಿಗೆ, ಸುರ ಹೊನ್ನೆ, ಪದ್ಮ, ಕನ್ನೈದಿಲೆ, ಕಡೆಹದಹೂ, ಬೆಟ್ಟದಾವರೆಹೂ, ಪಾರಿಜಾತ,

ಕರ್ಣಿಕಾರನವಶ್ವೇತಮಂದಾರಕುರವೈಸ್ತಥಾ ।
ಮಲ್ಲಿಕಾಶೋಕಧತ್ತೂರಶಮ್ಯರ್ಕಾರಗ್ವಧೈಸ್ತಥಾ ॥ ೧೪ ॥

ಕರವೀರಯವಾಂಕೋಲನಂದ್ಯಾವರ್ತಪಲಾಶಕೈಃ ।
ತುಲಸೀನಾಗಕೋರಂಟಕುಸುಮೈಶ್ಚ ಸುಪೂಜಯೇತ್ ॥ ೧೫ ॥

ನೀಲೋತ್ಪಲೈರ್ವಿಶೇಷೇಣ ಪೂಜಯೇಲ್ಲಿಂಗಮೀಶ್ವರಂ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲಘೃತದೀಪಕೈಃ ॥ ೧೬ ॥

ಅಶೇಷೈರ್ಬಹುಭಕ್ಷ್ಯೈಶ್ಚ ಭೋಜ್ಯೈಶ್ಚ ವಿವಿಧೈರಪಿ ।
ಜಾಗರೈರ್ಗೀತನೃತ್ತಾದ್ಯೈಃ ಪ್ರದೀಪಾದ್ಯುಪಹಾರಕೈಃ ॥ ೧೭ ॥

ತೂರ್ಯಘೋಷೈರನೇಕೈಶ್ಚ ವೀಣಾವೇಣುರವೈಸ್ತಥಾ ।
ಸ್ತೋತ್ರಮಂಗಳವಾದ್ಯೈಶ್ಚ ವೇದಘೋಷೈರನೇಕಶಃ ॥ ೧೮ ॥

ಶಿವಧರ್ಮಪುರಾಣಾದ್ಯೈರ್ಮಂತ್ರೈರ್ಮಾಹೇಶ್ವರೋಕ್ತಕೈಃ ।
ಪ್ರದಕ್ಷಿಣನಮಸ್ಕಾರಪ್ರಣವೈಶ್ಚುಲುಕೋದಕೈಃ ॥ ೧೯ ॥

---

ಕುರುವ, ಮಲ್ಲಿಗೆ, ಅಶೋಕ, ದತ್ತೂರಿ, ಬನ್ನಿ, ಎಕ್ಕ, ಕಣಿಗಿಲೆ, ಅಂಕೋಲ, ನಂದಿಬಟ್ಟಲು, ಮುತ್ತುಗ, ತುಲಸಿ, ನಾಗ ಸಂಪಿಗೆ, ಗೋರಂಟಿ ಇವೇ ಮುಂತಾದ ಹೂಗಳಿಂದ ಪೂಜಿಸಬೇಕು. ನೀಲೋತ್ಪಲದಿಂದ ಈಶ್ವರ ಲಿಂಗವನ್ನು ಪೂಜಿಸಿದರೆ ಬಹು ವಿಶೇಷವು. ಧೂಪ ದೀಪ ನೈವೇದ್ಯ ತಾಂಬೂಲ ತುಪ್ಪದ ದೀಪ ಮುಂತಾದುವುಗಳಿಂದಲೂ ಅನೇಕ ಬಗೆಯಾದ ಭಕ್ಷ್ಯಗಳಿಂದಲೂ ಭೋಜ್ಯಗಳಿಂದಲೂ ಹಾಡು ಕುಣಿತಗಳಿಂದಲೂ ಪೂಜಿಸಬೇಕು.

೧೮–೧೯. ವಾದ್ಯಘೋಷ, ವೀಣೆ ಕೊಳಲು ಮುಂತಾದುವುಗಳ ಧ್ವನಿ ಸ್ತೋತ್ರ ಮಂಗಳವಾದ್ಯ ವೇದಘೋಷ ಶಿವಧರ್ಮ ಪುರಾಣ ಮಹೇಶ್ವರನ ಸಂಬಂಧವಾದ ಮಂತ್ರಗಳು ಇವುಗಳನ್ನು ಉಚ್ಚರಿಸಿ ಪ್ರದಕ್ಷಿಣೆ ನಮಸ್ಕಾರವನ್ನು ಮಾಡಬೇಕು ಅನಂತರ ಚುಲುಕೋದಕವನ್ನು ಕೊಡಬೇಕು.

ಏವಂ ಪ್ರಜಾಗರಂ ಕುರ್ಯಾತ್ ಪ್ರತಿಯಾಮಂ ವಿಶೇಷತಃ ।
ಧ್ಯಾನಂ ಚ ಶ್ರವಣಂ ನಿತ್ಯಂ ಶಿವಧರ್ಮಾಗಮೇನ ತು ॥ ೨೦ ॥

ಶಿವಮಂತ್ರಜಪಂ ಕೃತ್ವಾ ಪ್ರಭಾತೇ ವಿಮಲೇ ಪುನಃ ।
ದಾನಂ ದತ್ವಾ ಚ ಭಕ್ತ್ಯಾ ನಾಂ ಬ್ರಾಹ್ಮಣಾನಾಂ ವಿಶೇಷತಃ ॥ ೨೧ ॥

ಬಾಲವೃದ್ಧಾತುರಾಣಾಂ ಚ ಶಕ್ತ್ಯಾ ಸುಪರಿತೋಷಯೇತ್ ।
ಯೋಗಿನಾಮನ್ನಪಾನಾಭ್ಯಾಮಕ್ಷಸೂತ್ರಕಮಂಡಲೂ ॥ ೨೨ ॥

ಕೌಪೀನಾಚ್ಛಾದನಂ ದಂಡಂ ಭಿಕ್ಷಾಪಾತ್ರಂ ಚ ಭಸ್ಮ ಚ ।
ದದದ್ವಿತ್ತಾನುಸಾರೇಣ ಗುರುಂ ಸಂಪೂಜಯೇತ್ತತಃ ॥ ೨೩ ॥

ಹೇಮಾಂಗುಲೀಯವಸ್ತ್ರಾದ್ಯೈರ್ಗಂಧಪುಷ್ಪಾದಿಭಿಶ್ಶುಭೈಃ ।
ಸಂಪೂಜ್ಯ ಪ್ರಾರ್ಥಯೇತ್ಪಶ್ಚಾತ್ ಕೃತಾಂಜಲಿಪರಿಗ್ರಹಃ ॥ ೨೪ ॥

---

೨೦-೨೩. ಈ ರೀತಿಯಾಗಿ ಪ್ರತಿಯಾಮದಲ್ಲಿಯೂ ಪೂಜೆಮಾಡಿ ಜಾಗರಣೆಮಾಡಬೇಕು. ಧ್ಯಾನವನ್ನು ಶಿವಧರ್ಮದ ರೀತಿಯಲ್ಲಿ ಪುರಾಣ ಶ್ರವಣವನ್ನೂ ಮಾಡಬೇಕು. ಶಿವಮಂತ್ರವನ್ನು ಜಪಿಸಬೇಕು. ಅನಂತರ ಬೆಳಗಾಗುತ್ತಲೂ ಸ್ನಾನಮಾಡಿ ನಿತ್ಯ ವಿಧಿಗಳನ್ನು ಮಾಡಿಕೊಂಡು ಮತ್ತೆ ಮಹಾದೇವನನ್ನು ಪೂಜಿಸಿ ದಾನಗಳನ್ನು ಮಾಡಬೇಕು. ಬ್ರಾಹ್ಮಣರಿಗೆ ಶ್ರದ್ಧೆಯಿಂದ ದಾನ ಕೊಡಬೇಕು. ಬಾಲರು ವೃದ್ಧರು ರೋಗಿಗಳು ಇವರನ್ನು ಕೈಲಾದಮಟ್ಟಿಗೂ ಸಂತೋಷಪಡಿಸಬೇಕು. ಯೋಗಿಗಳಿಗೆ ಅನ್ನಪಾನಗಳಿಂದಲೂ ಅಕ್ಷಸೂತ್ರ, ಕಮಂಡಲು, ಕೌಪೀನ, ಹೊದೆಯುವ ಬಟ್ಟೆ, ದಂಡ, ಭಿಕ್ಷಾಪಾತ್ರೆ, ಭಸ್ಮ ಇವನ್ನು ತನ್ನ ಯೋಗ್ಯತೆಗನುಗುಣವಾಗಿ ಕೊಟ್ಟು ತೃಪ್ತಿಪಡಿಸಬೇಕು. ಅನಂತರ ಗುರುವನ್ನು ಪೂಜಿಸಬೇಕು.

೨೪. ಚಿನ್ನದ ಉಂಗುರ, ಬಟ್ಟೆ, ಗಂಧ, ಪುಷ್ಪ ಮುಂತಾದುವುಗಳಿಂದ ಪೂಜಿಸಿ ಅನಂತರ ಕೈಮುಗಿದುಕೊಂಡು ಪ್ರಾರ್ಥನೆಮಾಡಿಕೊಳ್ಳಬೇಕು.

ತ್ವದಾಜ್ಞಯಾ ಕೃತಂ ಸರ್ವಂ ಶಿವರಾತ್ರಿಮಹಾವ್ರತಂ ।
ಅನುಗೃಹ್ಣೀಷ್ವ ಮಾಂ ನಿತ್ಯಮಪರಾಧಂ ಕ್ಷಮಸ್ವ ಮೇ ॥ ೨೫ ॥

ವ್ರತಂ ಕರ್ತುಮಶಕ್ತಶ್ಚೇತ್ ಚಲಚಿತ್ತಶ್ಚ ಮಾನವಃ ।
ಅಥವಾನ್ಯಪ್ರಕಾರೇಣ ಜಾಗರಂ ಕಾರಯೇತ್ಪುನಃ ॥ ೨೬ ॥

ಗೇಯನೃತ್ಯೋಪಹಾರೈಶ್ಚ ಸ್ತೋತ್ರಮಂಗಳವಾದನೈಃ ।
ನಾನಾಶ್ಚರ್ಯಪ್ರದಾನೈರ್ವಾ ನಾನಾವಿಧಫಲಾನ್ವಿತೈಃ ॥ ೨೭ ॥

ಶಿವರಾತ್ರ್ಯಾಂ ವಿಶೇಷೈರ್ವಾ ಶಿವಕ್ಷೇತ್ರೇ ವಿಶೇಷತಃ ।
ಯೇನ ಕೇನಾಪ್ಯುಪಾಯೇನ ಶಿವರಾತ್ರ್ಯಾಮುಪೋಷಿತಃ ॥ ೨೮ ॥

ಜಾಗರಂ ಕಾರಯೇದ್ಧೀಮಾನ್ ಪಾತಕೈಸ್ಸ ಪ್ರಮುಚ್ಯತೇ ।
ಪುರುಷೋ ವಾಥ ನಾರೀ ವಾ ಕುಮಾರೋ ವಾಥ ಕನ್ಯಕಾ ॥ ೨೯ ॥

---

೨೫. ಎಲೈ ಗುರುವೇ ! ನಿನ್ನ ಅಪ್ಪಣೆಯಿಂದ ಈ ಶಿವರಾತ್ರಿ ವ್ರತವೆಲ್ಲವನ್ನೂ ಮಾಡಿದೆನು. ನನ್ನಲ್ಲಿ ಅನುಗ್ರಹವಿಟ್ಟು ನನ್ನಲ್ಲಿರುವ ಅಪರಾಧವನ್ನು ಕ್ಷಮಿಸಿ ಅನುಗ್ರಹಿಸು.

೨೬. ಯಾವನಾದರೂ ಒಬ್ಬನು ಈ ವ್ರತವನ್ನು ಮಾಡಲು ಅಶಕ್ತನಾಗಿದ್ದರೆ ಮನಸ್ಸು ಚಂಚಲವಾಗಿದ್ದರೆ ಅವನು ಬೇರೆಯ ರೀತಿಯಿಂದ ಜಾಗರಣೆಯನ್ನು ಮಾಡಬೇಕು.

೨೭. ಗಾನ, ನೃತ್ಯ, ನೈವೇದ್ಯ, ಸ್ತೋತ್ರ, ಮಂಗಳವಾದ್ಯ, ಅನೇಕ ಬಗೆಯಾದ ಆಶ್ಚರ್ಯ ಕೆಲಸಗಳು ಇವುಗಳನ್ನು ಮಾಡುತ್ತ ಜಾಗರಣೆಮಾಡುವವರನ್ನು ಸಂತೋಷಪಡಿಸಬೇಕು. ಅನೇಕ ಬಗೆಯಾದ ಫಲಗಳನ್ನು ತಂದು ನಿವೇದನಕ್ಕೆ ಕೊಡುವುದರಿಂದಾಗಲಿ ದಾನಮಾಡುವುದರಿಂದಾಗಲಿ ಕಾಲವನ್ನು ಕಳೆಯಬೇಕು.

೨೮-೨೯. ಶಿವರಾತ್ರಿಯ ದಿವಸ ಉಪವಾಸಮಾಡುವುದೇ ಶ್ರೇಷ್ಠವು. ಅದರಲ್ಲಿಯಲ್ಲಿಯೂ ಶಿವಕ್ಷೇತ್ರದಲ್ಲಿಯಾದರೆ ಮತ್ತೂ ಉತ್ಕೃಷ್ಟವು. ಆದಿನ ಯಾವ ರೀತಿಯಿಂದಾಗಲಿ ಉಪವಾಸವಿದ್ದು ಜಾಗರಣೆಯನ್ನು ಮಾಡಬೇಕು. ಹಾಗೆ ಮಾಡಿದರೆ ಪಾತಕಗಳೆಲ್ಲಾ ಹೋಗುತ್ತವೆ. ಗಂಡಸಾಗಲಿ, ಹೆಂಗಸಾಗಲಿ,

ಕಿಂ ನ ವಿಂದೇತ ದೇವೇಶಿ ಶಿವರಾತ್ರಿಮಹೋತ್ಸವೇ ।
ಭರ್ತೃಹೀನಾ ಚ ಯಾ ನಾರೀ ಶಿವರಾತ್ರ್ಯುಪವಾಸತಃ ॥ ೩೦ ॥

ತಸ್ಯಾಸ್ತಿಷ್ಠತಿ ಮಾಂಗಲ್ಯಂ ಸುಚಿರಂ ಕಾಲಮಕ್ಷಯಂ ।
ಚಾಂದ್ರಾಯಣಸಹಸ್ರೈಶ್ಚ ಪ್ರಾಜಾಪತ್ಯಶತೈರಪಿ ॥ ೩೧ ॥

ಮಾಸೋಪವಾಸೈರನ್ಯೈಶ್ಚ ಯತ್ಫಲಂ ಲಭತೇ ಚ ಸಃ ।
ಶತಃ ಕೋಟಿಫಲಂ ಲಬ್ಧಂ ಶಿವರಾತ್ರಿಪ್ರಜಾಗರಾತ್ ॥ ೩೨ ॥

ಸರ್ವಯಜ್ಞತಪೋದಾನತೀರ್ಥವೇದೇಷು ಯತ್ಫಲಂ ।
ತತ್ಸರ್ವಂ ಲಭತೇ ದೇವಿ ಶಿವರಾತ್ರಿಮಹಾವ್ರತೇ ॥ ೩೩ ॥

ಸಂವತ್ಸರಂ ಪ್ರತಿದಿನಂ ತಪಸಾ ಯತ್ಫಲಂ ಭವೇತ್ ।
ತತ್ಸರ್ವಂ ತ್ರಿಗುಣೀಕೃತ್ಯ ಶಿವರಾತ್ರ್ಯಾಮುಪೋಷಿತಃ ॥ ೩೪ ॥

---

ಹುಡುಗನಾಗಲಿ ಈ ಶಿವರಾತ್ರಿಯ ದಿವಸ ಉಪವಾಸಮಾಡಿದರೆ ಯಾರಾದರೂ ಸರಿಯೇ ಏನನ್ನು ತಾನೇ ಹೊಂದಲಾರರು ! ಎಲ್ಲವೂ ಸಿಕ್ಕುತ್ತದೆ. ಗಂಡನಿಲ್ಲದವಳು ಶಿವರಾತ್ರಿಯಲ್ಲಿ ಉಪವಾಸಮಾಡಿದರೆ ಅದರಿಂದ ಬಹುಕಾಲದವರೆಗೂ ಮುಂದಿನ ಜನ್ಮದಲ್ಲಿ ಸೌಮಂಗಲ್ಯವಿರುತ್ತದೆ. ಸಾವಿರ ಚಾಂದ್ರಾಯಣಗಳು ನೂರು ಪ್ರಾಜಾಪತ್ಯಗಳು ಅನೇಕವಾದ ಮಾಸೋಪವಾಸಗಳು ಇವುಗಳಿಂದ ಮನುಷ್ಯನಿಗೆ ಯಾವ ಫಲವು ಬರುತ್ತದೆಯೋ ಅದರ ಕೋಟಿಪಾಲು ಹೆಚ್ಚು ಫಲವು ಈ ಶಿವರಾತ್ರಿಯ ಉಪವಾಸದಿಂದಲೂ ಜಾಗರಣೆಯಿಂದಲೂ ಬರುತ್ತದೆ.

೩೩. ಯಜ್ಞ, ತಪಸ್ಸು, ದಾನ, ತೀರ್ಥಸ್ನಾನ, ವೇದದ ಜಪ ಇವುಗಳೆಲ್ಲವನ್ನೂ ಮಾಡಿದರೆ ಯಾವ ಫಲವು ಬರುತ್ತದೆಯೋ ಅವೆಲ್ಲವನ್ನೂ ಶಿವರಾತ್ರಿ ವ್ರತಮಾಡಿದವನು ಹೊಂದುತ್ತಾನೆ.

೩೪. ನಿತ್ಯವೂ ಒಂದು ವರ್ಷದವರೆಗೂ ತಪಸ್ಸು ಮಾಡುತ್ತಿದ್ದರೆ ಯಾವ ಫಲವು ಬರುತ್ತದೆಯೋ ಅದರ ಮೂರರಷ್ಟು ಫಲವು ಈ ಶಿವರಾತ್ರಿಯಲ್ಲಿ ಉಪವಾಸ ಮಾಡಿ ಜಾಗರಣೆಮಾಡಿದರೆ ಬರುತ್ತದೆ.

ಜನ್ಮಕೋಟಿ ಸಹಸ್ರೈಸ್ತು ಯತ್ಫಲಂ ಪೂರ್ವಸಂಚಿತಂ ।
ತತ್ಫಲಂ ತಸ್ಯ ದೇವೇಶಿ ಶಿವರಾತ್ರಿಪ್ರಜಾಗರಾತ್ ॥ ೩೫ ॥

ಬ್ರಹ್ಮಹಾ ಗುರುಘಾತೀ ಚ ವೀರಹಾ ಭ್ರೂಣಹಾ ತಥಾ ।
ಮದ್ಯಪಶ್ಚ ತಥಾ ಗೋಘ್ನೋ ಮಾತೃಹಾ ಪಿತೃಹಾ ತಥಾ ॥ ೩೬ ॥

ಸ್ತೇಯೀ ಸುವರ್ಣಸ್ತೇಯೀ ಚ ಗುರುತಲ್ಪರತಸ್ತಥಾ ।
ಮುಚ್ಯತೇ ವೃಷಲೀಸಕ್ತಃ ಶಿವರಾತ್ರಿಪ್ರಜಾಗರಾತ್ ॥ ೩೭ ॥

ಪರದಾರಪ್ರಧರ್ಷೀ ಚ ದೇವಬ್ರಹ್ಮಸ್ವಹಾ ತಥಾ ।
ಮುಚ್ಯತೇ ಮಿತ್ರಘಾತೀ ಚ ಕೃತಘ್ನೋಽಪಿ ವರಾನನೇ ॥ ೩೮ ॥

---

೩೫. ಕೋಟಿಜನ್ಮಗಳಿಂದ ಇದುವರೆಗೂ ಯಾವ ಪುಣ್ಯವನ್ನು ಸೇರಿಸಿಕೊಂಡಿರುವನೋ ಅಷ್ಟು ಫಲವನ್ನು ಈ ಶಿವರಾತ್ರಿಯ ಜಾಗರಣೆಯಿಂದ ಹೊಂದುತ್ತಾನೆ.

೩೬-೩೭ ಬ್ರಹ್ಮಹತ್ಯೆಮಾಡಿದವನು, ಗುರುವನ್ನು ಕೊಂದವನು, ವೀರನನ್ನು ಕೊಂದವನು, ಗರ್ಭವನ್ನು ಹಾಳುಮಾಡಿದವನು, ಹೆಂಡಕುಡಿದವನು, ಗೋವನ್ನು ಕೊಂದವನು, ತಾಯಿಯನ್ನು ಕೊಂದವನು, ಕಳ್ಳನು, ಚಿನ್ನವನ್ನು ಕದ್ದವನು, ಗುರುವಿನ ಹೆಂಡತಿಯಲ್ಲಿ ರಮಿಸಿದವನು, ಶೂದ್ರ ಹೆಂಗಸರಲ್ಲಿ ಆಸಕ್ತನು, ಇವರಾರಾದರೂ ಕೂಡ ಈ ಶಿವರಾತ್ರಿಯಲ್ಲಿ ಉಪವಾಸಮಾಡಿದರೆ ಪಾಪದಿಂದ ಮುಕ್ತರಾಗುತ್ತಾರೆ.

೩೮. ಪರರ ಹೆಂಡತಿಯಲ್ಲಿ ಬಲಾತ್ಕಾರದಿಂದ ರಮಿಸಿದವನು, ದೇವರ ಧನ, ಬ್ರಾಹ್ಮಣನ ಧನಗಳನ್ನು ಕದ್ದವನು, ಮಿತ್ರನನ್ನು ಕೊಂದವನು, ಕೃತಘ್ನನು ಇವರೆಲ್ಲರೂ ಈ ಶಿವರಾತ್ರಿಯ ವ್ರತವನ್ನು ಮಾಡಿದರೆ ಪಾಪದಿಂದ ಮುಕ್ತರಾಗುತ್ತಾರೆ.

ವೀರ್ಯಪ್ರಚ್ಯಾವಕಶ್ಚೈವ ಲಿಂಗಪ್ರಧ್ವಂಸಕಸ್ತಥಾ ।
ಮುಚ್ಯತೇ ನಾತ್ರ ಸಂದೇಹಃ ಶಿವರಾತ್ರ್ಯಾಂ ಶಿವಾರ್ಚನಾತ್ ॥ ೩೯ ॥

ವಾಚಿಕಾನಿ ವಿಚಿತ್ರಾಣಿ ಮಾನಸಾನಿ ಮಹಾಂತಿ ಚ ।
ಕಾಯಿಕಾನಿ ಸಹಸ್ರಾಣಿ ತಥಾ ಸಾಂಸರ್ಗಿಕಾಣಿ ಚ ॥ ೪೦ ॥

ಭಿತ್ವಾ ವಿಮುಚ್ಯತೇ ಸರ್ವಃ ಶಿವರಾತ್ರಿಪ್ರಜಾಗರಾತ್ ।
ಅಸ್ಥಿಮಜ್ಜಾಗತಂ ಪಾಪಂ ಸರ್ವಜನ್ಮಾಂತರೈರಪಿ ॥ ೪೧ ॥

ಬುದ್ಧ್ಯಾಬುದ್ಧ್ಯಾ ಚ ದೇವೇಶಿ ಯದಿ ವಾ ವಾರುಣೀಂ ಪಿಬೇತ್ ।
ಮುಚ್ಯತೇ ನಾತ್ರ ಸಂದೇಹಃ ಶಿವರಾತ್ರಿಪ್ರಜಾಗರಾತ್ ॥ ೪೨ ॥

ಅಜಪಿತ್ವಾ ಹುತಾಶೀ ಚ ಅದಾತಾ ಚ ವಿಮುಚ್ಯತೇ ।
ಯೋ ಲಬ್ಧ್ವಾ ದೇವಿ ಮಾನುಷ್ಯಮಲ್ಪಸ್ವಪಿ ಚ ಜನ್ಮಸು ॥ ೪೩ ॥

---

೩೯. ವೀರ್ಯವನ್ನು ಕಳೆದುಹೋಗುವಂತೆ ಮಾಡಿಕೊಳ್ಳುವವನೂ ಲಿಂಗವು ಕೆಲಸಕ್ಕೆ ಬಾರದಂತೆ ಮಾಡುವವನೂ ಇವರೂ ಕೂಡ ಈ ಶಿವರಾತ್ರಿಯಲ್ಲಿ ಶಿವನನ್ನು ಪೂಜಿಸಿ ಉಪವಾಸ ಮಾಡುವುದರಿಂದ ಪಾಪವನ್ನು ಕಳೆದುಕೊಳ್ಳುತ್ತಾರೆ. ಸಂದೇಹವಿಲ್ಲ.

೪೦-೪೨. ನಾನಾಬಗೆಯಾದ ಮಾತಿನಿಂದುಂಟಾದ ಪಾಪಗಳು, ಮನಸ್ಸಿನಿಂದ ಯೋಚಿಸಿದ ಪಾಪಗಳು, ದೇಹದಿಂದ ಆಚರಿಸಿದ ಪಾಪಗಳು, ಇತರರ ಸಹವಾಸದಿಂದ ಬಂದ ಪಾಪಗಳು, ಇವೆಲ್ಲವನ್ನೂ ಕೂಡ ಈ ಶಿವರಾತ್ರಿಯ ಜಾಗರಣದಿಂದ ಹಾಳುಮಾಡಿಕೊಳ್ಳುತ್ತಾನೆ ಜನ್ಮ ಜನ್ಮಾಂತರಗಳ ಪಾಪಗಳಾಗಲಿ, ಮೂಳೆ ಕೊಬ್ಬುಗಳನ್ನು ಹೊಕ್ಕ ಪಾಪಗಳಾಗಲಿ, ಅವುಗಳೂ, ಬುದ್ಧಿಪೂರ್ವಕವಾಗಿಯಾಗಲಿ, ತಿಳಿಯದೆ ಆಗಲಿ, ಹೆಂಡವನ್ನು ಕುಡಿದ ಪಾಪವಾಗಲಿ, ಈ ಶಿವರಾತ್ರಿಯ ಉಪವಾಸದಿಂದ ಹೊರಟುಹೋಗುತ್ತದೆ. ಸಂದೇಹವಿಲ್ಲ.

೪೩-೪೫. ಈ ಶಿವರಾತ್ರಿಯ ಜಾಗರಣೆಯನ್ನು ಮಾಡಿದರೆ ಜಪಮಾಡದೆ ಇರುವವನೂ ಹೋಮ ಮಾಡದೆ ತಿನ್ನುವವನೂ ದಾನಮಾಡದಿರುವವನೂ

ಅರ್ಚಯೇದೈಶ್ವರಂ ಲಿಂಗಂ ವಿಘ್ನೇಶಂ ಷಣ್ಮುಖಂ ತಥಾ ।
ಅಧೀತ್ಯ ಶಿವವಿದ್ಯಾಂ ಚ ಪರೇಭ್ಯೋ ನ ವದಂತಿ ಯೇ ॥ ೪೪ ॥

ವಿವೃಣ್ವಂತಿ ನ ಶೃಣ್ವಂತಿ ತಮೋಪಹತಚೇತಸಃ ।
ತೇಷಾಂ ಪಾಪಾನಿ ನಶ್ಯಂತಿ ಶಿವರಾತ್ರಿಪ್ರಜಾಗರಾತ್ ॥ ೪೫ ॥

ಯೇ ನಿಂದಂತ್ಯೈಶ್ವರಂ ಮಾರ್ಗಮಾಶ್ಚರ್ಯಂ ಧರ್ಮದರ್ಶನಂ ।
ವೇದಾಂಶ್ಚ ಶಿವಭಕ್ತಾಂಶ್ಚ ವೈದಿಕಾಚಾರಮೇವ ಚ ॥ ೪೬ ॥

ನಶ್ಯಂತಿ ತೇಷಾಂ ಪಾಪಾನಿ ಶಿವರಾತ್ರಿಪ್ರಜಾಗರಾತ್ ।
ಅರ್ಚಿತಂ ಶಂಕರಂ ದೃಷ್ಟ್ವಾ ನ ನಮಂತ್ಯಲ್ಪಬುದ್ಧಯಃ ॥ ೪೭ ॥

ಯೇಷಾಂ ನ ರಾಜತೇ ದೇವಿ ಲಲಾಟಂ ಭಸ್ಮಕೈಶ್ಶುಭಂ ।
ತೇಷಾಂ ಪಾಪಾನಿ ನಶ್ಯಂತಿ ಶಿವರಾತ್ರಿಪ್ರಜಾಗರಾತ್ ॥ ೪೮ ॥

---

ಪಾಪಗಳಿಂದ ಮುಕ್ತನಾಗುತ್ತಾನೆ. ನಮಗೆ ಬರತಕ್ಕ ಜ್ಞಾನವಿರುವ ಜನ್ಮಗಳೇ ಸ್ವಲ್ಪವು. ಅದರಲ್ಲಿಯೂ ಈ ಮನುಷ್ಯ ಜನ್ಮವು ಸಿಕ್ಕುವುದು ಕಷ್ಟ. ಅದರಲ್ಲಿಯೂ ಈತನು ಈಶ್ವರಲಿಂಗವನ್ನೂ ವಿಘ್ನೇಶನನ್ನೂ ಷಣ್ಮುಖನನ್ನೂ ಪೂಜಿಸಿದರೆ ಅವನೇ ಪಾಪವನ್ನು ಕಳೆದುಕೊಳ್ಳತಕ್ಕವನು. ಶಿವಾಗಮವನ್ನು ಓದಿ ಯಾರು ಪರರಿಗೆ ಹೇಳುವುದಿಲ್ಲವೋ ಮತ್ತು ಪರರಿಗೆ ವಿವರಿಸುವುದಿಲ್ಲವೋ ಅದನ್ನು ಯಾರು ಕೇಳುವುದಿಲ್ಲವೋ ಅಂತಹ ಪಾಪಿಗಳು ಶಿವರಾತ್ರಿಯ ಜಾಗರಣೆಯನ್ನು ಮಾಡಿ ತಮ್ಮ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

೪೬-೪೮. ಈಶ್ವರನ ಮಾರ್ಗವನ್ನು ನಿಂದಿಸುವವರೂ ಅವನ ಆಶ್ಚರ್ಯರೂಪವಾದ ಧರ್ಮವನ್ನು ನಿಂದಿಸುವವರೂ ವೇದವನ್ನೂ ಶಿವಭಕ್ತರನ್ನೂ ವೈದಿಕಾಚಾರವನ್ನೂ ನಿಂದಿಸುವವರೂ ಈ ಶಿವರಾತ್ರಿಯ ಜಾಗರಣೆಯನ್ನು ಮಾಡಿದರೆ ಅವರ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಶಂಕರನನ್ನು ಪೂಜಿಸಿದರೆ ಅದನ್ನು ನೋಡಿ ಅಯೋಗ್ಯರು ಅಥವಾ ಬುದ್ಧಿಯಿಲ್ಲದವರು ನಮಸ್ಕರಿಸುವುದಿಲ್ಲ. ಎಲೈ ದೇವಿಯೆ ! ಯಾರಹಣೆಯು ಶುಭಕರವಾದ ಭಸ್ಮದಿಂದ ಪ್ರಕಾಶಿಸುವುದಿಲ್ಲವೋ ಅವರು ಶಿವರಾತ್ರಿಯ ಜಾಗರಣೆಯಿಂದ ತಮ್ಮ ಪಾಪಗಳನ್ನು ನಾಶಮಾಡಿಕೊಳ್ಳುತ್ತಾರೆ.

ಉತ್ತಮಾಂಗೇ ಜಟಾ ಯೇಷಾಂ ಸಂಸಾರಭಯನಾಶಿನೀ ।
ಪ್ರಾಂಜಲಿರ್ವಾ ಸದಾ ಮಹ್ಯಂ ನ ನಮಂತಿ ಚ ಶೋಭನೇ ॥ ೪೯ ॥

ತೇಷಾಂ ಪಾಪಾನಿ ನಶ್ಯಂತಿ ಶಿವರಾತ್ರಿಪ್ರಜಾಗರಾತ್ ।
ನ ಪಶ್ಯಂತ್ಯೈಶ್ವರಂ ಲಿಂಗಂ ದಿನಂಪ್ರತ್ಯಮರೇಶ್ವರಿ ॥ ೫೦ ॥

ಯೇ ತು ವಾ ನಾಪಿ ಗಚ್ಛಂತಿ ಶಿವಕ್ಷೇತ್ರೇಷು ಮಾನವಾಃ ।
ತೇಷಾಂ ಪಾಪಾನಿ ನಶ್ಯಂತಿ ಶಿವರಾತ್ರಿಪ್ರಜಾಗರಾತ್ ॥ ೫೧ ॥

ಯೇ ಚ ಬ್ರಹ್ಮಾದಿಭಿಸ್ತುಲ್ಯಂ ತ್ವಾಂ ಮಾಂ ಲಕ್ಷ್ಮ್ಯಾ ಚ ಶಕ್ತಿಭಿಃ ।
ಗುರುಂ ಯೇ ಪ್ರಾಕೃತೈಸ್ಸಾರ್ಧಂ ಸಂಸ್ಮರಂತಿ ವದಂತಿ ಯೇ ॥ ೫೨ ॥

ತೇಷಾಂ ಪಾಪಾನಿ ನಶ್ಯಂತಿ ಶಿವರಾತ್ರಿಪ್ರಜಾಗರಾತ್ ।
ಪರ್ವಮೈಥುನಕರ್ತಾರಃ ಪರದಾರಾಭಿಗಾಮಿನಃ ॥ ೫೩ ॥

---

೪೯-೫೧. ಸಂಸಾರದ ಭಯವನ್ನು ನಾಶಮಾಡುವ ಜಟೆಯು ಯಾರ ತಲೆಯಲ್ಲಿರುವುದಿಲ್ಲವೋ ಯಾರು ನನಗೆ ಕೈಮುಗಿದುಕೊಂಡು ನಮಸ್ಕಾರ ಮಾಡುವುದಿಲ್ಲವೋ ಅವರು ಈ ಶಿವರಾತ್ರಿಯ ಜಾಗರಣೆಮಾಡಿದರೆ ತಮ್ಮ ತಮ್ಮ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಯಾರು ನಿತ್ಯವೂ ಪರಮೇಶ್ವರಲಿಂಗ ದೇಹವನ್ನು ದರ್ಶನಮಾಡುವುದಿಲ್ಲವೋ ಯಾರು ಶಿವಕ್ಷೇತ್ರಗಳಿಗೆ ಹೋಗುವು ದಿಲ್ಲವೋ ಅವರು ಈ ಶಿವರಾತ್ರಿಯಲ್ಲಿ ಜಾಗರಣೆ ಮಾಡಿದರೆ ತಮ್ಮ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

೫೨-೫೫. ನನ್ನನ್ನು ಬ್ರಹ್ಮಾದಿಗಳಿಗೆ ಸಮನೆಂದೂ ನಿನ್ನನ್ನು ಲಕ್ಷ್ಮಿ ಶಕ್ತಿಗಳಿಗೆ ಸಮಳೆಂದೂ ಗುರುವನ್ನು ಇತರ ದಡ್ಡರಿಗೆ ಸಮನೆಂದೂ ಯಾರು ಹೇಳುತ್ತಾರೆಯೋ ಅಥವಾ ತಿಳಿದುಕೊಳ್ಳುತ್ತಾರೆಯೋ ಅಂತಹ ಪಾಪಿಗಳು ಈ ಶಿವರಾತ್ರಿಯ ಜಾಗರಣೆಯನ್ನು ಮಾಡಿದರೆ ತಮ್ಮ ಪಾಪವನ್ನು ಕಳೆದು ಕೊಳ್ಳುತ್ತಾರೆ. ಪರ್ವದಿನಗಳಲ್ಲಿ ಹೆಂಗಸರೊಡನೆ ರಮಿಸುವವರೂ ಪರರ

ಯೇ ಪರಿತ್ಯಾಗಸಂಯುಕ್ತಾಃ ಪುನಸ್ಸಂಗೇನ ಬಾಧಿತಾಃ ।
ಶಿವಲಿಂಗಂ ಮಹಾಪುಣ್ಯಂ ಯೇ ಸ್ಪೃಶಂತಿ ನ ತೇ ಕ್ವಚಿತ್ ॥ ೫೪ ॥

ಯೇಽಪಿ ಜನ್ಮಸ್ವನೇಕೇಷು ಸಾದರಂ ಧ್ರಿಯತೇ ನ ವಾ ।
ತೇಷಾಂ ಪಾಪಾನಿ ನಶ್ಯಂತಿ ಶಿವರಾತ್ರಿಪ್ರಜಾಗರಾತ್ ॥ ೫೫ ॥

॥ ವಸಿಷ್ಠ ಉವಾಚ ॥

ಇತ್ಯೇವಂ ಕಥಿತಂ ರಾಜನ್ ದೇವ್ಯೈ ದೇವೇನ ಭಾಷಿತಂ ।
ಶಿವರಾತ್ರ್ಯಾಶ್ಚ ಮಾಹಾತ್ಮ್ಯಂ ದೇವಾನಾಂ ಸನ್ನಿಧೌ ಪುರಾ ॥ ೫೬ ॥

ಮತ್ಪೂರ್ವಗಣಪಾಸ್ಸರ್ವೇ ದೇವಾ ಬ್ರಹ್ಮಪುರಸ್ಸರಾಃ ।
ಮುನಯಶ್ಚ ಮಹಾತ್ಮಾನಃ ಸನಾತನಪುರೋಗಮಾಃ ॥ ೫೭ ॥

ಕೈಲಾಸವಾಸಿನಸ್ಸರ್ವೇ ಮೇರೌ ದೇವನಿಕೇತನೇ ।
ಪ್ರೀತಾ ಬಭೂವುರ್ನಿಪ್ರೇಂದ್ರಾಃ ಶ್ರದ್ಧಾಂ ಕೃತ್ವಾ ಕುತೂಹಲಾತ್ ॥ ೫೮ ॥

---

ಹೆಂಡಿರಲ್ಲಿ ರಮಿಸುವವರೂ ಯಾರು ರೋಷದಿಂದ ಬೇರ್ಪಟ್ಟಿದ್ದಾರೆಯೋ ಮತ್ತು ಸಂಗಮಾಡಿದಮೇಲೆ ದೋಷಿಗಳಾಗಿದ್ದಾರೆಯೋ ಅವರೂ ಯಾರು ಜನ್ಮ ಜನ್ಮಗಳಲ್ಲಿಯೂ ಕೂಡ ಈಶ್ವರನನ್ನು ಭಜಿಸಿಯೇ ಇರುವುದಿಲ್ಲವೋ ಇಂಥವರೆಲ್ಲರ ಪಾಪಗಳೂ ಕೂಡ ಈ ಶಿವರಾತ್ರಿಯ ಜಾಗರಣೆಯಿಂದ ನಾಶವಾಗುತ್ತವೆ.

೫೬. ವಸಿಷ್ಠನು ಹೇಳಿದನು—ಎಲೈ ದಿಲೀಪನೇ! ಈ ರೀತಿಯಾಗಿ ಮಹಾದೇವನು ಪಾರ್ವತಿಗೆ ದೇವತೆಗಳ ಸಮೀಪದಲ್ಲಿ ಶಿವರಾತ್ರಿಯ ಮಹಿಮೆಯನ್ನು ಹೇಳಿದನು.

೫೭-೫೮. ಎಲ್ಲಾ ಗಣಪತಿಗಳೂ ಬ್ರಹ್ಮನೇ ಮುಂತಾದ ದೇವತೆಗಳೂ ಸನಾತನ ಸನತ್ಕುಮಾರ ಮುಂತಾದ ಮಹಾ ಮಹಿಮರಾದ ಋಷಿಗಳೂ ಕೈಲಾಸದಲ್ಲಿರುವವರೂ ಎಲ್ಲರೂ ಕೂಡ ದೇವತೆಗಳ ಸ್ಥಳವಾದ ಮೇರುಪರ್ವತದಲ್ಲಿ ಇದನ್ನು ಕೇಳಿ ಪ್ರೀತಿಗೊಂಡರು ಕುತೂಹಲದಿಂದಲೂ ಶ್ರದ್ಧೆಯಿಂದಲೂ ಕೇಳಿದರು.

ತದಾಪ್ರಭೃತಿ ಬ್ರಹ್ಮಾದ್ಯಾಃ ಶಿವರಾತ್ರಿಮಹಾವ್ರತಂ ।
ಕುರ್ವಂತಿ ಗೌರವಾತ್ಸರ್ವೇ ಶಿವಸ್ಯ ಪರಮಾತ್ಮನಃ ॥ ೫೯ ॥

ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಂ ತಚ್ಛಿವಾಜ್ಞಯಾ ।
ಶಿವರಾತ್ರಿವ್ರತಂ ರಾಜನ್ ಕೀರ್ತಯೇದ್ಯಃ ಶೃಣೋತಿ ಚ ॥ ೬೦ ॥

ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ।
ಯತ್ರೇದಂ ಕೀರ್ತ್ಯತೇ ಭೂಪ ದೇವ್ಯಾ ಸನ್ನಿಹಿತಶ್ಶಿವಃ ॥ ೬೧ ॥

ತತ್ರ ದೇವಾಸ್ಸಗಂಧರ್ವಾಃ ಸಕಿನ್ನರಮಹೋರಗಾಃ ।
ತಿಷ್ಠಂತ್ಯನುಗ್ರಹಂ ಕರ್ತುಂ ಶಿವರಾತ್ರ್ಯಾಂ ಪ್ರಜಾಗರಾತ್ ॥ ೬೨ ॥

ಅಸ್ಯಾಧ್ಯಾಯಸ್ಯ ಯೋಽರ್ಥಜ್ಞಃ ಸ ವಿಜ್ಞೇಯಃ ಸದಾಶಿವಃ ।
ತಂ ಪೂಜಯೇನ್ಮಹಾತ್ಮಾನಂ ಭುಕ್ತಿಮುಕ್ತಿಪ್ರವರ್ತಕಂ ॥ ೬೩ ॥

---

೫೯. ಅದು ಮೊದಲುಗೊಂಡು ಬ್ರಹ್ಮನೇ ಮುಂತಾದ ದೇವತೆಗಳು ಶಿವರಾತ್ರಿ ಮಹಾವ್ರತವನ್ನು ಗೌರವದಿಂದ ಮಾಡುತ್ತಾರೆ.

೬೦-೬೨. ಆದ್ದರಿಂದ ಪ್ರಯತ್ನದಿಂದ ಶಿವನ ಅಪ್ಪಣೆಯಂತೆ ಶಿವರಾತ್ರಿ ವ್ರತವನ್ನು ಮಾಡಬೇಕು. ಇದನ್ನು ಹೇಳಿದವನೂ ಕೇಳಿದವನೂ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಶಿವಲೋಕದಲ್ಲಿ ಸುಖಿಸುತ್ತಾರೆ. ಎಲ್ಲಿ ಈ ಶಿವರಾತ್ರಿಯ ವಿಷಯವನ್ನು ಹೇಳುತ್ತೇವೆಯೋ ಅಲ್ಲಿ ಶಿವನು ಪಾರ್ವತಿಯೊಡನೆ ಇರುತ್ತಾನೆ. ಎಲ್ಲಿ ಈ ಶಿವರಾತ್ರಿ ಜಾಗರಣೆಯನ್ನು ಮಾಡುತ್ತಾರೆಯೋ ಅಲ್ಲಿ ದೇವತೆಗಳೂ ಗಂಧರ್ವರೂ ಕಿನ್ನರರೂ ಉರಗರೂ ಅವರಿಗೆ ಅನುಗ್ರಹವನ್ನು ಮಾಡಲು ಸಿದ್ಧರಾಗಿರುತ್ತಾರೆ.

೬೩. ಈ ಅಧ್ಯಾಯದ ಅರ್ಥವನ್ನು ಯಾವನು ತಿಳಿದುಕೊಂಡಿರುವನೋ ಅವನೇ ಸದಾಶಿವನು. ಅವನೇ ಭುಕ್ತಿ ಮುಕ್ತಿಗಳನ್ನು ಕೊಡತಕ್ಕವನು. ಅವನನ್ನು ಎಲ್ಲರೂ ಪೂಜಿಸುತ್ತಾರೆ.

**ಮಹಾಪಾತಕೆಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ।**
**ದೋಷೈಃ ಕೃತೈರ್ನ ಲಿಪ್ಯೇತ ವ್ರತಾನುಶ್ರವಣಾದಹೋ ॥ ೬೪ ॥**

**ಕೀರ್ತನೀಯಮಿದಂ ಸದ್ಭಿಃ ಶಿವರಾತ್ರ್ಯಾಂ ವಿಶೇಷತಃ ।**
**ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಂ ॥ ೬೫ ॥**

**ತತ್ಸರ್ವಂ ಕೋಟಿಗುಣಿತಂ ಪ್ರಾಪ್ನೋತಿ ಶ್ರವಣಾದಪಿ ।**
**ಯತ್ಪುಣ್ಯಂ ಶಿವರಾತ್ರ್ಯಾಂ ವೈ ವ್ಯಾಖ್ಯಾನೇನೈವ ತದ್ಭವೇತ್ ॥ ೬೬ ॥**

**ಯಂ ಯಂ ಪ್ರಾರ್ಥಯತೇ ಕಾಮಂ ತಂ ತಂ ಪ್ರಾಪ್ನೋತಿ ಮಾನವಃ ।**
**ವ್ರತಾನುಶ್ಚರಣಾದೇವ ತತ್ಪುಣ್ಯಂ ಲಭತೇ ನರಃ ॥ ೬೭ ॥**

**॥ ದಿಲೀಪ ಉವಾಚ ॥**

**ಐಹಿಕಾಮುಷ್ಮಿಕಾಭೀಷ್ಟಪ್ರದಂ ಪರಮದುರ್ಲಭಂ ।**
**ಚತುರ್ಥನಿರ್ವೃತೇರ್ಮಾರ್ಗಂ ಚತುರ್ವರ್ಗಫಲಪ್ರದಂ ॥ ೬೮ ॥**

---

೬೪. ಈ ವ್ರತವನ್ನು ಮಾಡಿದರೆ ಮಹಾಪಾತಕಗಳಿಂದ ಕೂಡಿದ್ದರೂ ಆ ದೋಷಗಳು ಇವನಿಗೆ ಬರುವುದೇ ಇಲ್ಲ.

೬೫-೬೭. ಈ ಅಧ್ಯಾಯವನ್ನು ಶಿವರಾತ್ರಿಯಲ್ಲಿ ಸಜ್ಜನರು ಅವಶ್ಯಕವಾಗಿ ಕೇಳಬೇಕು. ಇದನ್ನು ಶಿವರಾತ್ರಿಯ ದಿನ ಕೇಳಿದರೆ ಎಲ್ಲಾ ತೀರ್ಥಗಳಿಗೂ ಹೋದರೆ ಯಾವ ಪುಣ್ಯವು ಬರುವುದೋ ಎಲ್ಲಾ ಯಜ್ಞಗಳನ್ನು ಮಾಡಿದರೆ ಯಾವ ಪುಣ್ಯವು ಬರುವುದೋ ಅದರ ಕೋಟಿಯಷ್ಟು ಪುಣ್ಯವನ್ನೂ ಅದನ್ನು ಕೇಳುವುದರಿಂದ ಬರುತ್ತದೆ. ಶಿವರಾತ್ರಿಯಲ್ಲಿ ಆ ಶಿವನ ಕಥೆಯನ್ನು ಹೇಳುವುದರಿಂದ ಹಿಂದೆ ಹೇಳಿದ ಪುಣ್ಯವೆಲ್ಲವೂ ಕೋಟಿಗುಣಿತವಾಗಿ ಬರುತ್ತವೆ. ಯಾವ ಯಾವುವನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವನ್ನೂ ಹೊಂದುತ್ತಾನೆ. ಅಲ್ಲದೆ ಈ ವ್ರತವನ್ನು ಮಾಡುವುದರಿಂದ ಬಹು ಪುಣ್ಯವು ಬರುತ್ತದೆ.

೬೮-೬೯. ದಿಲೀಪನು ಹೇಳಿದನು-ಹೊಂದಲಸಾಧ್ಯವಾದ ಇಹಪರ ಸುಖಗಳನ್ನು ಕೊಡುವ ಮೋಕ್ಷಕ್ಕೆ ದಾರಿಯನ್ನು ತೋರಿಸುವ ಧರ್ಮಾರ್ಥಕಾಮ

ಶೈವಂ ವ್ರತಂ ಸದಾ ಶುದ್ಧಂ ವಿಶೇಷಾತ್ಪುತ್ರದಾಯಕಂ ।
ತಪಶ್ಚರ್ಯಾಪುರಸ್ಕಾರಂ ತನ್ಮೇ ವದ ಮಹಾಮುನೇ ॥ ೭೯ ॥

॥ ವಸಿಷ್ಠ ಉವಾಚ ॥

ವ್ರತನಾಮುತ್ತಮಂ ಭೂಪ ವಿಶೇಷಾತ್ಪುತ್ರದಾಯಕಂ ।
ಐಹಿಕಾಮುಷ್ಮಿಕಾಭೀಷ್ಟಪ್ರದಂ ಪರಮದುರ್ಲಭಂ ॥ ೭೦ ॥

ಶೃಣು ತ್ವಂ ಸೋಮನಾಥಸ್ಯ ಸೌರಾಷ್ಟ್ರಪುರವಾಸಿನಃ ।
ಶಂಭೋರುಮಾಸಹಾಯಸ್ಯ ಸರ್ವಮಂಗಳದಾಯಿನಃ ॥ ೭೧ ॥

ಸೌರಾಷ್ಟ್ರಮಿತಿ ವಿಖ್ಯಾತಂ ನಾಮ್ನಾ ತ್ರೈಲೋಕ್ಯಪೂಜಿತಂ ।
ಪುತ್ರಕಾಮೋ ಬಹೂನ್ ಪುತ್ರಾನ್ ಧನಮಿಚ್ಛುರ್ಧನಂ ಲಭೇತ್ ॥ ೭೨ ॥

---

ಮೋಕ್ಷಗಳನ್ನು ಕೊಡುವ ಯಾವಾಗಲೂ ಶುದ್ಧವಾಗಿರುವ ಮಕ್ಕಳನ್ನು ಕೊಡುವ ತಪಸ್ಸೇ ಹೆಚ್ಚಾಗಿರುವ ಶೈವವ್ರತವನ್ನು ಹೇಳು.

೭೦-೭೧. ವಸಿಷ್ಠನು ಹೇಳಿದನು-ಎಲೈ ದೊರೆಯೆ! ವ್ರತಗಳೊಳಗೆಲ್ಲಾ ಉತ್ತಮವಾದ ವ್ರತವೂ ಮಕ್ಕಳನ್ನು ಕೊಡತಕ್ಕದ್ದೂ ಈ ಲೋಕಪರಲೋಕಗಳ ಸುಖವನ್ನು ಕೊಡುವುದೂ ಆದುದು ಲೋಕದಲ್ಲಿ ದುರ್ಲಭವೇ ಆಗಿದೆ. ಆದರೆ ಒಂದನ್ನು ಹೇಳುತ್ತೇನೆ. ಕೇಳು ಸೌರಾಷ್ಟ್ರ ಪಟ್ಟಣದಲ್ಲಿ ವಾಸಮಾಡುವ ಸೋಮನಾಥನ ಚರಿತ್ರೆಯನ್ನು ಕೇಳು. ಆ ಶಂಭುವು ಉಮಾಸಹಾಯಕನು. ಸರ್ವಮಂಗಳವನ್ನೂ ಕೊಡುವವನು.

೭೨. ಸೌರಾಷ್ಟ್ರವೆಂಬ ಒಂದು ಸ್ಥಳವಿರುವುದು. ಅದು ಮೂರು ಲೋಕದಲ್ಲಿಯೂ ಪೂಜಿತವಾದುದು ಅದರಲ್ಲಿ ಆ ಸ್ವಾಮಿಯು ಪುತ್ರನನ್ನು ಅಪೇಕ್ಷಿಸುವವರಿಗೆ ಪುತ್ರರನ್ನೂ, ಧನವನ್ನು ಅಪೇಕ್ಷಿಸುವವರಿಗೆ ಧನವನ್ನೂ, ಕೊಡುತ್ತಾನೆ.

ವಂಧ್ಯಾಪಿ ಲಭತೇ ಪುತ್ರಾನ್ ಕನ್ಯಾ ಸತ್ಪತಿಮಾಪ್ನುಯಾತ್ ।
ಕನ್ಯಾರ್ಥೀ ಲಭತೇ ಕನ್ಯಾಂ ಜಯಕಾಮೋ ಜಯಂ ಲಭೇತ್ ॥ ೭೩ ॥

ಶತ್ರುಭಿರ್ನಾಭಿಭೂಯೇತ ಪುತ್ರಪೌತ್ರೈಶ್ಚ ಸಂಯುತಃ ।
ಪಠಮಾನೋ ಲಭೇತ್ಸರ್ವಂ ಸ್ವಯಮುದ್ದಿಶ್ಯಪಠ್ಯತೇ ॥ ೭೪ ॥

ನಾಕಾಲೇ ಮರಣಂ ತಸ್ಯ ನ ಸರ್ಪೈರ್ದಶ್ಯತೇ ತತಃ ।
ನ ವಿಷಂ ಕ್ರಮತೇ ದೇಹೇ ಜಡಾಂಧತ್ವಂ ನ ಮೂಕತಾ ॥ ೭೫ ॥

ನ ಚೋತ್ಪಾತಭಯಂ ತಸ್ಯ ವೃಶ್ಚಿಕಸ್ಯ ಭಯಂ ತಥಾ ।
ನಾಭಿಚಾರಕೃತೈರ್ದೋಷೈರ್ನ ಲಿಪ್ಯೇತ ಕದಾಚನ ॥ ೭೬ ॥

---

೭೩. ಬಂಜೆಯೂ ಕೂಡ ಆ ದೇವರಿಂದ ಮಕ್ಕಳನ್ನು ಹೊಂದುತ್ತಾಳೆ. ಕನ್ಯೆಯು ಒಳ್ಳೆಯ ಗಂಡನನ್ನು ಹೊಂದುತ್ತಾಳೆ ಕನ್ಯೆಯನ್ನು ಅಪೇಕ್ಷಿಸುವವನು ಕನ್ಯೆಯನ್ನು ಹೊಂದುತ್ತಾನೆ. ಜಯಾಪೇಕ್ಷಿಯು ಜಯವನ್ನು ಹೊಂದುತ್ತಾನೆ.

೭೪. ಆ ದೇವರನ್ನು ಸೇವಿಸುವವನು ಶತ್ರುಗಳಿಂದ ಅಪಜಯವನ್ನು ಹೊಂದುವುದಿಲ್ಲ. ಮಕ್ಕಳು ಮುಮ್ಮಕ್ಕಳುಗಳು ಹೆಚ್ಚುತ್ತಾರೆ. ಈ ಅಧ್ಯಾಯವನ್ನು ಓದುವವನು ಎಲ್ಲವನ್ನೂ ಹೊಂದುತ್ತಾನೆ.

೭೫. ಇದನ್ನು ಓದುವವನು ಅಕಾಲಮರಣವನ್ನು ಹೊಂದುವುದಿಲ್ಲ. ಸರ್ಪಗಳು ಇವನನ್ನು ಕಡಿಯುವುದಿಲ್ಲ. ಕಡಿದರೂ ವಿಷವು ದೇಹಕ್ಕೆ ಅಂಟುವುದಿಲ್ಲ. ಇದನ್ನು ಓದುವವರೂ ಕೇಳುವವರೂ ದಡ್ಡರಾಗುವುದಿಲ್ಲ. ಕುರುಡರೂ ಮೂಗರೂ ಆಗುವುದಿಲ್ಲ.

೭೬. ಆ ಓದುವವನಿಗೆ ಅಕಸ್ಮಾತ್ತಾಗಿ ಬರುವ ಕಷ್ಟಗಳ ಭಯ ವಿರುವುದಿಲ್ಲ. ಚೇಳಿನ ಭಯವಿರುವುದಿಲ್ಲ. ಮಾಟಮಂತ್ರ ಮುಂತಾದುವುಗಳ ದೋಷವು ಅಂಟುವುದೇ ಇಲ್ಲವು.

**ಯತ್ರೇದಂ ಲಿಖಿತಂ ಭೂಪ ಸ್ಥಾಪಿತಂ ಪೂಜಿತಂ ಯದಿ ।**
**ನ ತತ್ರ ಚೈಕಂ ದೌರ್ಗತ್ಯಂ ಕದಾಚಿದಪಿ ಜಾಯತೇ ॥ ೭೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘಮಾಹಾತ್ಮ್ಯೇ ಶಿವರಾತ್ರಿವ್ರತಾಖ್ಯಾನಂ ನಾಮ ಏಕಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೭೭. ಎಲೈ ದೊರೆಯೆ ! ಇದನ್ನು ಬರೆದು ಎಲ್ಲಿ ಇಟ್ಟಿರುವರೋ ಅಥವಾ ಪೂಜಿಸುವರೋ ಬರೆಯುವರೋ ಅಲ್ಲಿ ಕಷ್ಟಗಳು ಒಂದೂ ಕೂಡ ಬರುವುದೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘಮಹಿಮೆಯಲ್ಲಿ ಶಿವರಾತ್ರಿವ್ರತಾಖ್ಯಾನ ಎಂಬ ಇನ್ನೂರ ನಾಲ್ವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ||



**|| ವಸಿಷ್ಠ ಉವಾಚ ||**

**ಪುನಸ್ತೇ ಕಥಯಿಷ್ಯಾಮಿ ಮಾಘಸ್ಯಾಸ್ಯ ಚ ವೈಭವಮ್ ।**
**ಪೃಚ್ಛತೇ ಕಾರ್ತವೀರ್ಯಾಯ ದತ್ತಾತ್ರೇಯೋದಿತಂ ಪುರಾ || ೧ ||**

**ದತ್ತಾತ್ರೇಯಂ ಹರಿಂ ಸಾಕ್ಷಾದ್ವಸನ್ತಂ ಸಹ್ಯಪರ್ವತೇ ।**
**ಪಪ್ರಚ್ಛ ತಂ ಮುನಿಂ ಜ್ಞಾತ್ವಾ ರಾಜಾ ಮಾಹಿಷ್ಮತೀಪತಿಃ || ೨ ||**

---

### ಇನ್ನೂರ ನಲವತ್ತೆರಡನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು-ಎಲೈ ದಿಲೀಪನೇ! ನಿನಗೆ ಮಾಘಮಾಸದ ವೈಭವವನ್ನು ಹೇಳುತ್ತೇನೆ. ಹಿಂದೆ ಕಾರ್ತವೀರ್ಯನು ದತ್ತಾತ್ರೇಯನನ್ನು ಕೇಳಲು ಆ ದತ್ತಾತ್ರೇಯನು ಅವನಿಗೆ ಹೇಳಿದನು.

೨. ಪ್ರತ್ಯಕ್ಷವಾದ ವಿಷ್ಣುವಿನ ಅವತಾರವಾದ ದತ್ತಾತ್ರೇಯನು ಸಹ್ಯ ಪರ್ವತದಲ್ಲಿರುತ್ತಿರಲು ಇದನ್ನು ತಿಳಿದು ಮಾಹಿಷ್ಮತಿಗೆ ಒಡೆಯನಾದ ಕಾರ್ತ ವೀರ್ಯಾರ್ಜುನನು ಇಂತೆಂದು ಕೇಳಿದನು.

|| ಕಾರ್ತವೀರ್ಯ ಉವಾಚ ||

ಭಗವನ್ ಯೋಗಿನಾಂ ಶ್ರೇಷ್ಠ ಸರ್ವೇ ಧರ್ಮಾ ಮಯಾ ಶ್ರುತಾಃ ।
ಮಾಘಸ್ನಾನಫಲಂ ಬ್ರೂಹಿ ಕೃಪಯಾ ಮಮ ಸುವ್ರತ || ೩ ||

|| ದತ್ತಾತ್ರೇಯ ಉವಾಚ ||

ಶ್ರೂಯತಾಂ ರಾಜಶಾರ್ದೂಲ ಏತತ್ಪ್ರಶ್ನೋತ್ತರಂ ಶುಭಂ ।
ಬ್ರಹ್ಮಣೋಕ್ತಂ ಪುರಾ ಹ್ಯೇತನ್ನಾರದಾಯ ಮಹಾತ್ಮನೇ || ೪ ||

ತತ್ಸರ್ವಂ ಕಥಯಿಷ್ಯಾಮಿ ಮಾಘಸ್ನಾನಫಲಂ ಮಹತ್ ।
ಯಥಾದೇಶಂ ಯಥಾತೀರ್ಥಂ ಯಥಾವಿಧಿ ಯಥಾಕ್ರಿಯಂ || ೫ ||

ಅಸ್ಮಿನ್ ವೈ ಭಾರತೇ ವರ್ಷೇ ಕರ್ಮಭೂಮೌ ವಿಶೇಷತಃ ।
ಅಮಾಘಸ್ನಾಯಿನಾಂ ನೃಣಾಂ ನಿಷ್ಫಲಂ ಜನ್ಮಕೀರ್ತಿತಂ || ೬ ||

---

೩. ಕಾರ್ತವೀರ್ಯನು ಹೇಳಿದನು-ಎಲೈ ಯೋಗಿಗಳಲ್ಲಿ ಶ್ರೇಷ್ಠನಾದ ದತ್ತಾತ್ರೇಯನೇ! ನಾನು ಎಲ್ಲಾ ಧರ್ಮಗಳನ್ನೂ ಕೇಳಿದ್ದೇನೆ. ಮಾಘಸ್ನಾನದ ಫಲವನ್ನು ಹೇಳು.

೪. ದತ್ತಾತ್ರೇಯನು ಹೇಳಿದನು-ಎಲೈ ರಾಜಶ್ರೇಷ್ಠನೆ! ನೀನು ಕೇಳುತ್ತಿರುವ ಉತ್ತಮವಾದ ವಿಷಯವನ್ನು ಹೇಳುತ್ತೇನೆ. ಈ ಪ್ರಶ್ನೆಯನ್ನೇ ಪೂರ್ವದಲ್ಲಿ ನಾರದನು ಬ್ರಹ್ಮನನ್ನು ಕೇಳಲು ಬ್ರಹ್ಮನು ಅವನಿಗೆ ಹೇಳಿರುವನು.

೫. ದೇಶ, ಕಾಲ, ತೀರ್ಥ, ವಿಧಿ ಇವುಗಳಿಗೆ ತಕ್ಕಂತೆ ಮಾಘಸ್ನಾನದ ಫಲವನ್ನು ಹೇಳುತ್ತೇನೆ. ಕೇಳು.

೬. ಈ ಭಾರತವರ್ಷದಲ್ಲಿ ಅದರಲ್ಲಿಯೂ ಈ ಕರ್ಮ ಭೂಮಿಯಲ್ಲಿ ಮಾಘಸ್ನಾನಮಾಡದಿರುವ ಮನುಷ್ಯರ ಜನ್ಮವು ಫಲವಿಲ್ಲವೆಂದು ಹೇಳಲ್ಪಟ್ಟಿದೆ.

ಅಸೂರ್ಯಂ ಗಗನಂ ಯದ್ವದಚಂದ್ರಮುಡುಮಂಡಲಂ ।
ತದ್ವನ್ನ ಭಾತಿ ಸತ್ಕರ್ಮ ಮಾಘಸ್ನಾನಂ ವಿನಾ ನೃಪ ॥ ೭ ॥

ವ್ರತೈರ್ದಾನೈಸ್ತಪೋಭಿಶ್ಚ ನ ತಥಾ ಪ್ರೀಯತೇ ಹರಿಃ ।
ಮಾಘಮಜ್ಜನಮಾತ್ರೇಣ ಯಥಾ ಪ್ರೀಣಾತಿ ಕೇಶವಃ ॥ ೮ ॥

ನ ಸಮಂ ವಿದ್ಯತೇ ಕಿಂಚಿತ್ತೇಜಸ್ಸೌರೇಣ ತೇಜಸಾ ।
ತದ್ವತ್ ಸ್ನಾನೇನ ಮಾಘಸ್ಯ ನ ಸಮಾಃ ಕ್ರತುಜಾಃ ಕ್ರಿಯಾಃ ॥ ೯ ॥

ಪ್ರೀತಯೇ ವಾಸುದೇವಸ್ಯ ಸರ್ವಪಾಪಾಪನುತ್ತಯೇ ।
ಮಾಘಸ್ನಾನಂ ಪ್ರಕುರ್ವಂತಿ ಸ್ವರ್ಗಲಾಭಾಯ ಮಾನವಾಃ ॥ ೧೦ ॥

---

೭. ಮನುಷ್ಯನು ಮಾಘಸ್ನಾನಮಾಡದಿದ್ದರೆ ಅವನು ಮಾಡಿದ ಸತ್ಕರ್ಮಗಳೆಲ್ಲವೂ ಸೂರ್ಯನಿಲ್ಲದಿರುವ ಅಂತರಿಕ್ಷದಂತೆಯೂ ಚಂದ್ರನಿಲ್ಲದಿರುವ ನಕ್ಷತ್ರಮಂಡಲದಂತೆಯೂ ಪ್ರಕಾಶಿಸುವುದೇ ಇಲ್ಲವು.

೮. ಮಾಘಸ್ನಾನಮಾಡುವುದರಿಂದ ಹರಿಯು ಪ್ರೀತಿಹೊಂದುವಂತೆ ಮತ್ತಾವ ವ್ರತದಿಂದಾಗಲೀ ದಾನದಿಂದಾಗಲೀ ತಪಸ್ಸಿನಿಂದಾಗಲೀ ಸಂತೋಷಗೊಳ್ಳುವುದಿಲ್ಲ.

೯. ಸೂರ್ಯನ ತೇಜಸ್ಸಿಗೆ ಸಮವಾದ ತೇಜಸ್ಸು ಒಂದೂ ಇಲ್ಲವೇ ಇಲ್ಲ. ಅದರಂತೆ ಮಾಘಮಾಸದ ಸ್ನಾನಕ್ಕೆ ಸಮನಾದ ಯಾಗದ ಕ್ರಿಯೆಯು ಒಂದೂ ಇಲ್ಲ

೧೦. ಮನುಷ್ಯರು ವಾಸುದೇವನಲ್ಲಿ ಪ್ರೀತಿಯನ್ನು ಸಂಪಾದಿಸುವುದಕ್ಕೂ ಪಾಪಗಳನ್ನು ಕಳೆದುಕೊಳ್ಳುವುದಕ್ಕೂ ಸ್ವರ್ಗವನ್ನು ಹೊಂದುವುದಕ್ಕೂ ಮಾಘಸ್ನಾನವನ್ನು ಮಾಡುತ್ತಾರೆ.

ಕಿಂ ರಕ್ಷಿತೇನ ದೇಹೇನ ಸುಪುಷ್ಟೇನ ಬಲಿಯುಸಾ ।
ಅಧ್ರುವೇಣಾಪ್ಯಶುಚಿನಾ ಮಾಘಸ್ನಾನಂ ವಿನಾ ಭವೇತ್ ॥ ೧೧ ॥

ಅಸ್ಥಿಸ್ತಂಭಂ ಸ್ನಾಯುಬಂಧಂ ಮಾಂಸಕ್ಷತಜಲೇಪನಂ ।
ಚರ್ಮಾವನದ್ಧಂ ದುರ್ಗಂಧಂ ಪೂರ್ಣಂ ಮೂತ್ರಪುರೀಷಯೋಃ ॥ ೧೨ ॥

ಆಧಿಶೋಕಜರಾವ್ಯಾಪ್ತಂ ರೋಗಮಂದಿರಮಾತುರಂ ।
ರಜಸ್ವಲಮನಿತ್ಯಂ ಚ ಸರ್ವದೋಷಸಮಾಶ್ರಯಂ ॥ ೧೩ ॥

ಪರೋಪತಾಪಿ ಪಾಪಾರ್ತಿ ಪರದ್ರೋಹಪರಾಣಂ ।
ಲೋಲುಪಂ ಪಿಶುನಂ ಕ್ರೂರಂ ಕೃತಘ್ನಂ ಕ್ಷಣಿಕಂ ತಥಾ ॥ ೧೪ ॥

---

೧೧. ಮಾಘಸ್ನಾನವನ್ನು ಮಾಡದೆ ಬಲವಿರುವಂತೆಯೂ ದಪ್ಪನಾಗಿರುವಂತೆಯೂ ಇರುವ ಶಾಶ್ವತವಲ್ಲದ ಅಶುಚಿಯಾದ ಈ ದೇಹದಿಂದ ಉಪಯೋಗವೇನು?

೧೨-೧೫. ಈ ದೇಹವು ಮೂಳೆಯೆಂಬ ಕಂಬವುಳ್ಳದ್ದು. ನರದ ಕಟ್ಟುಗಳುಳ್ಳದ್ದು. ಮಾಂಸರಕ್ತಗಳ ಬಳಿಕೆಯುಳ್ಳದ್ದು. ಚರ್ಮದ ಹೊದ್ದಿಕೆಯುಳ್ಳದ್ದು ದುರ್ಗಂಧವುಳ್ಳದ್ದು. ಮಲಮೂತ್ರಗಳಿಂದ ಇರತಕ್ಕದ್ದು. ಮನೋವ್ಯಥೆ ದುಃಖ ಮುಪ್ಪುಗಳಿಂದ ಕೂಡಿರತಕ್ಕದ್ದು. ರೋಗಕ್ಕೆ ಮನೆಯಾಗಿರತಕ್ಕದ್ದು. ಆ ರೋಗವನ್ನು ಅನುಭವಿಸತಕ್ಕದ್ದು. ಕೊಳೆಯಿಂದ ಕೂಡಿರತಕ್ಕದ್ದು. ಶಾಶ್ವತವಲ್ಲದ್ದು. ಎಲ್ಲಾ ದೋಷಗಳಿಗೂ ಆಶ್ರಯವಾದುದು. ಪರರಿಗೆ ತೊಂದರೆಕೊಡತಕ್ಕದ್ದು. ಪಾಪದ ವ್ಯಥೆಯುಳ್ಳದ್ದು. ಪರರಿಗೆ ದ್ರೋಹ ಮಾಡುವುದರಲ್ಲಿ ಆಸಕ್ತವಾದುದು. ಇಷ್ಟಬಂದಂತೆ ನಡೆಯತಕ್ಕದ್ದು. ಸುಳ್ಳನ್ನಾಡತಕ್ಕದ್ದು. ಕ್ರೂರವಾದುದು. ಉಪಕಾರ ಸ್ಮರಣೆಯಿಲ್ಲದುದು. ಕ್ಷಣ ಕ್ಷಣಕ್ಕೂ ವ್ಯತ್ಯಾಸವಾಗತಕ್ಕದ್ದು. ಕೆಟ್ಟಕೀವು ಮುಂತಾದ ಪ್ರವಾಹಗಳಿಂದಲೇ

**ದುಷ್ಪೂರಂ ಪಾಪಜಂ ದುಷ್ಟಂ ದೋಷತ್ರಯವಿದೂಷಿತಂ ।**
**ಅಶುಚಿಸ್ರಾವಿ ಸಚ್ಛಿದ್ರಂ ತಾಪತ್ರಯವಿಮೋಹಿತಂ　　|| ೧೫ ||**

**ನಿಸರ್ಗತೋಽಧರ್ಮರತಂ ತೃಷ್ಣಾಶತಸಮಾಕುಲಂ ।**
**ಕಾಮಕ್ರೋಧಸಮಾಯುಕ್ತಂ ನರಕದ್ವಾರಸುಸ್ಥಿತಂ　　|| ೧೬ ||**

**ಕ್ರಿಮಿವರ್ಚಸ್ಕಭೂಯಿಷ್ಠಂ ಪರಿಣಾಮೇ ಶುನಾಂ ಹವಿಃ ।**
**ಈದೃಕ್ ಶರೀರಕಂ ವ್ಯರ್ಥಂ ಮಾಘಸ್ನಾನವಿವರ್ಜಿತಂ　　|| ೧೭ ||**

**ಬುದ್ಬುದಾ ಇವ ತೋಯೇಷು ಪೂತಿಕಾ ಇವ ಜಂತುಷು ।**
**ಜಾಯಂತೇ ಮರಣಾಯೈವ ಮಾಘಸ್ನಾನವಿವರ್ಜಿತಾಃ　　|| ೧೮ ||**

---

ಕೂಡಿರುವುದು. ಪಾಪದಿಂದಲೇ ಹುಟ್ಟಿರುವುದು. ದುಷ್ಟವಾದುದು. ವಾತ ಕಫ ಪಿತ್ತಗಳೆಂಬ ಮೂರು ದೋಷಗಳಿಂದಲೂ ಕೂಡಿರುವುದು. ಅಶುಚಿಯಾದ ಕೀವು ಸಿಂಬಳ ಜೊಲ್ಲು ಮುಂತಾದುವುಗಳನ್ನು ಸೋರಿಸುತ್ತಿರುವುದು. ಅನೇಕ ತೂತುಗಳಿಂದ ಕೂಡಿರುವುದು ಅಧಿಭೌತಿಕ ಆದಿದೈವಿಕ ಆಧಿದೈವಿಕ ಎಂಬ ತಾಪತ್ರಯದಿಂದ ಕೂಡಿದುದು.

೧೬–೧೭. ಸ್ವಭಾವವಾಗಿ ಅಧರ್ಮದಲ್ಲಿ ಆಸಕ್ತವಾದುದು. ಅನೇಕ ಆಸೆಗಳಿಂದ ಕೂಡಿರುವುದು. ಕಾಮಕ್ರೋಧಗಳಿಂದ ಕೂಡಿರುವುದು. ನರಕದ ಬಾಗಿಲಲ್ಲಿಯೇ ಇರುವುದು. ಹುಳುಗಳುಳ್ಳ ಮಲದಿಂದ ಕೂಡಿರುವುದು. ಕೊನೆಗೆ ನಾಯಿಗಳಿಗೆ ಆಹಾರವಾಗಿ ಪರಿಣಮಿಸುವುದು. ಈ ಶರೀರದ ಸ್ಥಿತಿಯು ಹೀಗಿರುವುದು. ಆದ್ದರಿಂದಲೇ ಮಾಘಸ್ನಾನಮಾಡಿಕೊಂಡು ಜನ್ಮವನ್ನು ಸಫಲಗೊಳಿಸಿಕೊಳ್ಳಬೇಕು. ಆ ಮಾಘಸ್ನಾನವಿಲ್ಲದೆ ಈ ಶರೀರವನ್ನು ಹೊಂದಿ ವ್ಯರ್ಥಮಾಡಿಕೊಳ್ಳಬಾರದು.

೧೮. ಈ ಮಾಘಸ್ನಾನಮಾಡದವರು ನೀರಿನಮೇಲಿನ ಗುಳ್ಳೆಗಳಂತೆಯೂ ಪ್ರಾಣಿಗಳಲ್ಲಿ ಪೂತಿಕೆ (ಕೊಡತಿಯ ಹುಳು) ಗಳಂತೆಯೂ ಸಾಯುವುದಕ್ಕೆ ಹುಟ್ಟಿದ್ದಾರೆ.

ಅವೈಷ್ಣವೋ ಹತೋ ವಿಪ್ರೋ ಹತಂ ಶ್ರಾದ್ಧಮದಕ್ಷಿಣಂ ।
ಅಬ್ರಹ್ಮಣ್ಯಂ ಹತಂ ಕ್ಷತ್ರಮನಾಚಾರಂ ಕುಲಂ ಹತಂ ॥ ೧೯ ॥

ಸದಂಭಶ್ಚ ಹತೋ ಧರ್ಮಃ ಕ್ರೋಧೈನೈವ ಹತಂ ತಪಃ ।
ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಂ ॥ ೨೦ ॥

ದುರ್ಭಗಾ ಚ ಹತಾ ನಾರೀ ಬ್ರಹ್ಮಚಾರೀ ತಯಾ ಹತಃ ।
ಅದೀಪ್ತಾಗ್ನಿರ್ಹತೋ ಹೋಮೋ ಹತಾ ಭುಕ್ತಿರಸಾಕ್ಷಿಕಾ ॥ ೨೧ ॥

ಉಪಜೀವ್ಯಾ ಹತಾ ಕನ್ಯಾ ಸ್ವಾರ್ಥೇ ಪಾಕಕ್ರಿಯಾ ಹತಾ ।
ಶೂದ್ರಭಿಕ್ಷಾಹತೋ ಯಾಗಃ ಕೃಪಣಸ್ಯ ಹತಂ ಧನಂ ॥ ೨೨ ॥

---

೧೯. ವಿಷ್ಣುಭಕ್ತಿಯಿಲ್ಲದ ಬ್ರಾಹ್ಮಣನು ನಾಶವಾಗುತ್ತಾನೆ. ದಕ್ಷಿಣೆಕೊಡದೆ ಮಾಡಿದ ಶ್ರಾದ್ಧವು ಕೆಟ್ಟುಹೋಗುತ್ತದೆ. ಪ್ರಾಣದ ಭಿಕ್ಷೆಯನ್ನು ಬೇಡುವುದರಿಂದ ಕ್ಷತ್ರಿಯನು ಕೆಟ್ಟುಹೋಗುವನು. ದುರಾಚಾರದಿಂದ ಆ ಕುಲವೇ ನಾಶವಾಗುವುದು.

೨೦. ಡಂಭಾಚಾರ (ಬೂಟಾಟಿಕೆ)ದಿಂದ ಕೂಡಿದ ಧರ್ಮವು ನಾಶವಾಗುತ್ತದೆ. ಕೋಪಮಾಡುವುದರಿಂದ ತಪಸ್ಸು ನಾಶವಾಗುತ್ತದೆ. ಸರಿಯಾಗಿ ತಿಳಿದುಕೊಳ್ಳದಿದ್ದರೆ ಜ್ಞಾನವು ನಾಶವಾಗುತ್ತದೆ. ಎಚ್ಚರಿಕೆಯಿಂದ ಕೂಡಿರದಿದ್ದರೆ ಶಾಸ್ತ್ರವು ನಾಶವಾಗುತ್ತದೆ.

೨೧. ಹೆಂಗಸು ದುಷ್ಟಳಾದರೆ ಕೆಟ್ಟುಹೋಗುವಳು. ಬ್ರಹ್ಮಚಾರಿಯು ಸ್ತ್ರೀಸಹವಾಸದಿಂದ ನಾಶವಾಗುತ್ತಾನೆ. ಉರಿಯದಿರುವ ಬೆಂಕಿಯಲ್ಲಿ ಮಾಡಿದ ಹೋಮವು ವ್ಯರ್ಥವು. ಕಣ್ಣಿನಿಂದ ನೋಡದೆ ತಿನ್ನುವ ಅನ್ನವು ವ್ಯರ್ಥವಾದುದು.

೨೨. ತಮ್ಮಗಳ ಜೀವನವನ್ನು ಸಾಗಿಸಿಕೊಳ್ಳಲು ಕನ್ಯೆಯನ್ನು ಮತ್ತೊಬ್ಬರ ಮನೆಯಲ್ಲಿ ಆಳಾಗಿಟ್ಟರೆ ಅದರಿಂದ ಆ ಕನ್ಯೆಯು ನಾಶವಾಗುತ್ತಾಳೆ. ತನ್ನೊಬ್ಬನಿಗೋಸ್ಕರ ಮಾಡಿಕೊಂಡ ಅಡಿಗೆಯು ನಾಶವಾದುದು. (ಉಪಯೋಗವಿಲ್ಲದುದು) ಶೂದ್ರನಿಂದ ಯಾಚನೆಮಾಡಿ ತಂದು ಮಾಡಿದ ಶ್ರಾದ್ಧ ಯಾಗ ಮುಂತಾದುವು ನಾಶವಾಗುತ್ತವೆ. ಲೋಭಿಯ ಬಳಿಯಲ್ಲಿರುವ ಹಣವು ನಾಶವಾಗುತ್ತದೆ.

ಅನಭ್ಯಾಸಹತಾ ವಿದ್ಯಾ ಹತೋ ರಾಜವಿರೋಧಕೃತ್ ।
ಜೀವನಾರ್ಥೇ ಹತಂ ತೀರ್ಥಂ ಜೀವನಾರ್ಥಂ ಹತಂ ವ್ರತಂ ॥ ೨೩ ॥

ಅಸತ್ಯಾ ಚ ಹತಾ ವಾಣೀ ತಥಾ ಪೈಶುನ್ಯವಾದಿನೀ ।
ಸಂದಿಗ್ಧೋಽಪಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥ ೨೪ ॥

ಹತಮಶ್ರೋತ್ರಿಯಂ ದಾನಂ ಹತೋ ಲೋಕಶ್ಚ ನಾಸ್ತಿಕಃ ।
ಅಶ್ರದ್ಧಯಾ ಹತಂ ಸರ್ವಂ ಯತ್ಕೃತಂ ಪಾರಲೌಕಿಕಂ ॥ ೨೫ ॥

ಇಹ ಲೋಕೋ ಹತೋ ನೄಣಾಂ ದಾರಿದ್ರ್ಯೇಣ ಯಥಾ ನೃಪ ।
ಮನುಷ್ಯಾಣಾಂ ತಥಾ ಜನ್ಮ ಮಾಘಸ್ನಾನಂ ವಿನಾ ಹತಂ ॥ ೨೬ ॥

---

೨೩. ವಿದ್ಯೆಯನ್ನು ಮತ್ತೆ ಮತ್ತೆ ಅಭ್ಯಾಸಮಾಡದಿದ್ದರೆ ನಾಶವಾಗುತ್ತದೆ. ರಾಜನೊಡನೆ ವಿರೋಧವನ್ನು ಕಟ್ಟಿಕೊಂಡವನು ನಾಶವಾಗುತ್ತಾನೆ. ಜೀವನಕ್ಕೋಸ್ಕರ ತೀರ್ಥಯಾತ್ರೆ ಮಾಡಿದರೆ ಅದು ನಾಶವಾಗುತ್ತದೆ. ಫಲವಿಲ್ಲ. ಜೀವನಕ್ಕೋಸ್ಕರ ಮಾಡಿದ ವ್ರತಗಳೂ ಪೂಜೆಗಳೂ ನಾಶವಾಗುತ್ತವೆ.

೨೪. ಸುಳ್ಳು ಹೇಳುವುದರಿಂದ ಮಾತು ನಾಶವಾಗುತ್ತದೆ. (ಫಲವಿಲ್ಲದೆ ಹೋಗುತ್ತದೆ.) ಚಾಡಿ ಹೇಳುವುದರಿಂದಲೂ ಮಾತು ನಾಶವಾಗುತ್ತದೆ. ಸಂದೇಹವಾದ ಅಕ್ಷರದಿಂದ ಕೂಡಿದ ಮಂತ್ರವು ವ್ಯರ್ಥವಾಗುತ್ತದೆ. ಏಕಚಿತ್ತವಿಲ್ಲದೆ ಬೇರೆಯ ಜ್ಞಾನದಿಂದ ಮಾಡಿದ ಜಪವು ವ್ಯರ್ಥವಾಗುವುದು.

೨೫. ವೇದ ಓದದವನಲ್ಲಿ ದಾನ ಮಾಡಿದರೆ ಅದು ವ್ಯರ್ಥವು. ಶ್ರದ್ಧೆಯಿಲ್ಲದೆ ಪರಲೋಕ ಸಾಧನವಾದುವುಗಳನ್ನು ಏನನ್ನು ಮಾಡಿದರೂ ಎಲ್ಲವೂ ವ್ಯರ್ಥವು.

೨೬. ದರಿದ್ರರಾಗಿರುವ ಮನುಷ್ಯರ ಜನ್ಮವು ಈ ಲೋಕದಲ್ಲಿ ಹೇಗೆ ಸಾರ್ಥಕವಿಲ್ಲವೋ ಹಾಗೆ ಮಾಘ ಸ್ನಾನವನ್ನು ಮಾಡದಿರುವವರ ಮನುಷ್ಯ ಜನ್ಮವು ವ್ಯರ್ಥವು.

ಮಕರಸ್ಥೇ ರವೌ ಯೋ ಹಿ ನ ಸ್ನಾತ್ಯನುದಿತೇ ರವೌ ।
ಕಥಂ ಪಾಪೈಃ ಪ್ರಮುಚ್ಯೇತ ಸ ಕಥಂ ತ್ರಿದಿವಂ ವ್ರಜೇತ್ ॥ ೨೭ ॥

ಬ್ರಹ್ಮಹಾ ಸ್ವರ್ಣಹಾರೀ ಚ ಸುರಾಪೋ ಗುರುತಲ್ಪಗಃ ।
ಮಾಘಸ್ನಾಯಿಾ ವಿಪಾಪಸ್ಸ್ಯಾತ್ತತ್ಸಂಯೋಗೀ ಚ ಪಂಚಮಃ ॥ ೨೮ ॥

ಮಾಘಮಾಸೇ ರಟನ್ತ್ಯಾಪಃ ಕಿಂಚಿದಭ್ಯುದಿತೇ ರವೌ ।
ಬ್ರಹ್ಮಘ್ನಂ ವಾ ಸುರಾಪಂ ವಾ ಕಂ ಪತಂತಂ ಪುನೀಮಹೇ ॥ ೨೯ ॥

ಉಪಪಾತಕಸಂಘಾಶ್ಚ ಪಾತಕಾನಿ ಮಹಾಂತಿ ಚ ।
ಭಸ್ಮೀಭವಂತಿ ಸರ್ವಾಣಿ ಮಾಘಸ್ನಾಯಿನಿ ಮಾನವೇ ॥ ೩೦ ॥

---

೨೭. ಸೂರ್ಯನು ಮಕರರಾಶಿಯನ್ನು ಹೊಂದಿರುವಾಗ ಸೂರ್ಯೋದಯಕ್ಕೆ ಮೊದಲೇ ಯಾವನು ಸ್ನಾನ ಮಾಡುವುದಿಲ್ಲವೋ ಅವನ ಪಾಪಗಳು ಹೇಗೆ ಹೋಗುತ್ತವೆ ? ಅವನು ಸ್ವರ್ಗಕ್ಕೆ ತಾನೇ ಹೇಗೆ ಹೋಗುತ್ತಾನೆ ?

೨೮. ಬ್ರಾಹ್ಮಣನನ್ನು ಕೊಂದವನು, ಚಿನ್ನವನ್ನು ಕದ್ದವನು, ಹೆಂಡವನ್ನು ಕುಡಿದವನು, ಗುರುವಿನ ಹೆಂಡತಿಯಲ್ಲಿ ರಮಿಸಿದವನು, ಇವರ ಜೊತೆಯಲ್ಲಿದ್ದು ಕೊಂಡು ಸುಖಪಟ್ಟವನು, ಈ ಐವರು ಮಹಾಪಾತಕಿಗಳು. ಇವರೂ ಕೂಡ ಮಾಘದಲ್ಲಿ ಸ್ನಾನ ಮಾಡಿದರೆ ಆ ಪಾಪಗಳನ್ನೆಲ್ಲಾ ಕಳೆದುಕೊಳ್ಳುತ್ತಾರೆ.

೨೯. ಮಾಘಮಾಸದಲ್ಲಿ ಸೂರ್ಯನು ಅರ್ಧಉದಯವಾಗಿರುವಾಗ ನೀರುಗಳೆಲ್ಲವೂ, ಬ್ರಹ್ಮಹತ್ಯೆ ಮಾಡಿದವನಾಗಲಿ ಸುರಾಪಾನ ಮಾಡಿದವನಾಗಲಿ, ಯಾವನು ಬೇಕಾದರೂ ಆಗಲಿ ನೀರಿನಲ್ಲಿ ಬಿದ್ದರೆ ಅವನನ್ನು ಪವಿತ್ರನನ್ನಾಗಿ ಮಾಡುತ್ತೇವೆ. ಎಂದು ಕೂಗುತ್ತವೆ

೩೦. ಮಹಾಪಾತಕಗಳೂ, ಉಪಪಾತಕಗಳೂ, ಕೂಡ ಎಷ್ಟು ಹೆಚ್ಚಾಗಿದ್ದರೂ ಅವೆಲ್ಲವೂ ಕೂಡ ಮನುಷ್ಯನು ಮಾಘಸ್ನಾನ ಮಾಡಿದ ಪಕ್ಷದಲ್ಲಿ ಭಸ್ಮವಾಗಿ ಹೋಗುತ್ತವೆ.

ವೇಪಂತೇ ಸರ್ವಪಾಪಾನಿ ಮಾಘಮಾಸಸಮಾಗಮೇ ।
ನಾಶಕಾಲೋಽಯಮಸ್ಮಾಕಂ ಯದಿ ಸ್ನಾಸ್ಯತಿ ವಾರಿಣಿ || ೩೧ ||

ಪಾವಕಾ ಇವ ದೀಪ್ಯಂತೇ ಮಾಘಸ್ನಾನೈರ್ನರೋತ್ತಮಾಃ ।
ವಿಮುಕ್ತಾಃ ಸರ್ವಪಾಪೇಭ್ಯೋ ಮೇಘೇಭ್ಯ ಇವ ಚಂದ್ರಮಾಃ || ೩೨ ||

ಆರ್ದ್ರಂ ಶುಷ್ಕಂ ಲಘು ಸ್ಥೂಲಂ ವಾಙ್ಮನಃ ಕಾಯಕರ್ಮತಃ ।
ಕೃತಂ ಮಾಘೋ ದಹೇತ್ಪಾಪಂ ಪಾವಕಸ್ಸಮಿಧೋ ಯಥಾ || ೩೩ ||

ಪ್ರಾಮಾದಿಕಂ ಚ ಯತ್ಪಾಪಂ ಬುದ್ಧಿಪೂರ್ವಕೃತಂ ಚ ಯತ್ ।
ಸ್ನಾನಮಾತ್ರೇಣ ತನ್ನಶ್ಯೇತ್ ಮಕರಸ್ಥೇ ದಿವಾಕರೇ || ೩೪ ||

ನಿಷ್ಪಾಪಾಸ್ತ್ರಿದಿವಂ ಯಾಂತಿ ಪಾಪಿಷ್ಠಾ ಯಾಂತಿ ಶುದ್ಧಿತಾಂ ।
ಸಂದೇಹೋ ನಾತ್ರ ಕರ್ತವ್ಯೋ ಮಾಘಸ್ನಾನಾನ್ನರಾಧಿಪ || ೩೫ ||

---

೩೧. ಮಾಘಮಾಸವು ಬಂದೊಡನೆಯೇ ಎಲ್ಲಾ ಪಾಪಗಳೂ ಕೂಡ "ಇದು ನಮಗೆ ನಾಶ ಕಾಲವು. ನೀರಿನಲ್ಲಿ ಸ್ನಾನಮಾಡಿದರೆ ನಾವೆಲ್ಲವೂ ಹೋಗಬೇಕಾಗುವುದು "ಎಂದು ನಡುಗುತ್ತವೆ.

೩೨. ಮಾಘಸ್ನಾನ ಮಾಡುವುದರಿಂದ ಜನರು ಪಾಪಗಳಿಂದ ಮುಕ್ತರಾಗಿ ಮೋಡದಿಂದ ಹೊರಬಂದ ಚಂದ್ರನಂತೆಯೂ ಉರಿಯುತ್ತಿರುವ ಬೆಂಕಿಯಂತೆಯೂ ಪ್ರಕಾಶಿಸುತ್ತಾರೆ.

೩೩. ಮಾಘಸ್ನಾನ ಮಾಡಿದರೆ ಆ ಮಾಘವು ಹಸಿಯ ಒಣಗಿದ, ದಪ್ಪವಾದ, ಸಣ್ಣದಾದ, ಬಾಯಿ ಮನಸ್ಸು ದೇಹ ಕರ್ಮಗಳಿಂದ ಮಾಡಿದ ಪಾಪಗಳನ್ನು ಬೆಂಕಿಯು ಸೌದೆಯನ್ನು ಸುಡುವಂತೆ ಸುಟ್ಟುಹಾಕುತ್ತದೆ.

೩೪. ಮಕರರಾಶಿಯಲ್ಲಿ ಸೂರ್ಯನಿರುವಾಗ ಸ್ನಾನಮಾಡಿದರೆ ಪ್ರಮಾದದಿಂದ ಮಾಡಿದ, ತಿಳಿದುಮಾಡಿದ, ತಿಳಿಯದೇ ಮಾಡಿದ, ಎಲ್ಲಾ ಪಾಪಗಳೂ ನಾಶವಾಗುತ್ತವೆ.

೩೫. ಈ ಮಾಘಸ್ನಾನದಿಂದ ಪಾಪವಿಲ್ಲದಿದ್ದವರು ಸ್ವರ್ಗಕ್ಕೆ ಹೋಗುತ್ತಾರೆ. ಪಾಪಿಷ್ಠರು ಶುದ್ಧರಾಗುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಸರ್ವೇಧಿಕಾರಿಣೋ ಹ್ಯತ್ರ ವಿಷ್ಣುಭಕ್ತೌ ಯಥಾ ನೃಪ ।
ಸರ್ವೇಷಾಂ ಸ್ವರ್ಗದೋ ಮಾಘಃ ಸರ್ವೇಷಾಂ ಪಾಪನಾಶನಃ ॥ ೩೬ ॥

ಏಷ ಏವ ಪರೋ ಮಂತ್ರೋ ಹ್ಯೇತಚ್ಚ ಪರಮಂ ತಪಃ ।
ಪ್ರಾಯಶ್ಚಿತ್ತಂ ವ್ರತಂ ಚೈತನ್ಮಾಘಸ್ನಾನಮನುತ್ತಮಂ ॥ ೩೭ ॥

ನೃಣಾಂ ಜನ್ಮಾಂತರಾಭ್ಯಾಸಾನ್ಮಾಘಸ್ನಾನೇ ಮತಿರ್ಭವೇತ್ ।
ಅಧ್ಯಾತ್ಮಜ್ಞಾನಶೀಲತ್ವಂ ಜನ್ಮಾಭ್ಯಾಸಾದ್ಯಥಾ ನೃಪ ॥ ೩೮ ॥

ಸಂಸಾರಕರ್ದಮಾಲೇಪಪ್ರಕ್ಷಾಲನವಿಶಾರದಂ ।
ಪಾವನಂ ಪಾವನಾನಾಂ ಚ ಮಾಘಸ್ನಾನಂ ಪರಂತಪ ॥ ೩೯ ॥

ಸ್ನಾನ್ತಿ ಮಾಘೇ ನ ಯೇ ರಾಜನ್ ಸರ್ವಕಾಮಫಲಪ್ರದೇ ।
ತೇ ಕಥಂ ಭುಂಜತೇ ಲೋಕಾನ್ ಸೂರ್ಯಚಂದ್ರಗ್ರಹೋಪಮಾ ॥ ೪೦ ॥

---

೩೬. ವಿಷ್ಣುಭಕ್ತಿಯನ್ನು ಮಾಡುವುದರಲ್ಲಿ ಎಲ್ಲರಿಗೂ ಹೇಗೆ ಅಧಿಕಾರವಿದೆಯೋ ಹಾಗೆ ಈ ಮಾಘಸ್ನಾನದಲ್ಲಿ ಎಲ್ಲರೂ ಅಧಿಕಾರಿಗಳು. ಈ ಮಾಘವು ಸ್ನಾನಮಾತ್ರದಿಂದ ಎಲ್ಲರಿಗೂ ಪಾಪವನ್ನು ನಾಶಮಾಡಿ ಸ್ವರ್ಗವನ್ನು ಕೊಡುತ್ತದೆ.

೩೭. ಈ ಮಾಘಸ್ನಾನವು ಉತ್ತಮವಾದ ಮಂತ್ರವು. ಉತ್ತಮವಾದ ತಪಸ್ಸು, ಉತ್ತಮವಾದ ಪ್ರಾಯಶ್ಚಿತ್ತವು. ಎಲ್ಲದರಲ್ಲಿಯೂ ಉತ್ತಮೋತ್ತಮವಾದುದು.

೩೮. ಹಿಂದಿನ ಜನ್ಮದ ಅಭ್ಯಾಸದಿಂದ ಹೇಗೆ ಆತ್ಮಜ್ಞಾನದಲ್ಲಿ ಜ್ಞಾನವು ಬರುವುದೋ ಹಾಗೆ ಹಿಂದಿನ ಜನ್ಮದ ಅಭ್ಯಾಸವಿದ್ದರೇನೇ ಮನುಷ್ಯರಿಗೆ ಮಾಘಸ್ನಾನದಲ್ಲಿ ಬುದ್ಧಿಯುಂಟಾಗುತ್ತದೆ.

೩೯. ಎಲೈ ದಿಲೀಪನೇ ! ಮಾಘಸ್ನಾನವು ಸಂಸಾರದಲ್ಲಿ ಉಂಟಾದ ಪಾಪವೆಂಬ ಕೆಸರನ್ನು ತೊಳೆಯುವುದರಲ್ಲಿ ನಿಪುಣವಾದುದು. ಪವಿತ್ರವಾಗಿರುವುದರಲ್ಲೆಲ್ಲಾ ಪವಿತ್ರವಾದುದು.

೪೦. ಸರ್ವ ಕಾಮುಗಳನ್ನೂ ಕೊಡುವ ಮಾಘಮಾಸದಲ್ಲಿ ಯಾರು ಸ್ನಾನ ಮಾಡುವುದಿಲ್ಲವೋ ಅವರು ಸೂರ್ಯ ಚಂದ್ರರು ಇರುವಂತಹ ಲೋಕಗಳನ್ನು ಹೇಗೆ ತಾನೆ ಅನುಭವಿಸುತ್ತಾರೆ !

**ಶ್ರುಣು ರಾಜನ್ ಮಹಾಶ್ಚರ್ಯಂ ಪ್ರಭಾವಂ ಮಾಘಮಾಸಜಂ ।**
**ಋಚೀಕಾ ನಾಮ ಕಲ್ಯಾಣೀ ಬ್ರಾಹ್ಮಣೀ ಭೃಗುವಂಶಜಾ ॥ ೪೧ ॥**

**ಬಾಲವೈಧವ್ಯದುಃಖಾರ್ತಾ ತಪಸ್ತೇಪೇ ಸುದುಷ್ಕರಂ ।**
**ವಿಂಧ್ಯಪಾದಮಹಾಕುಕ್ಷೌ ರೇವಾಕಪಿಲಸಂಗಮೇ ॥ ೪೨ ॥**

**ತತ್ರ ಸಾ ವ್ರತಿನೀ ಭೂತ್ವಾ ನಾರಾಯಣಪರಾಯಣಾ ।**
**ಸದಾಚಾರವತೀ ನಿತ್ಯಂ ನಿತ್ಯಸಂಗವಿವರ್ಜಿತಾ ॥ ೪೩ ॥**

**ಜಿತೇಂದ್ರಿಯಾ ಜಿತಕ್ರೋಧಾ ಸತ್ಯವಾಗಲ್ಪಭಾಷಿಣೀ ।**
**ಸುಶೀಲಾ ದಾನಶೀಲಾ ಸಾ ದೇಹಶೋಷಣತತ್ಪರಾ ॥ ೪೪ ॥**

**ಪಿತೃದೇವದ್ವಿಜೇಭ್ಯಶ್ಚ ದತ್ವಾ ಹುತ್ವಾ ತಥಾನಲೇ ।**
**ಷಷ್ಠೇ ಕಾಲೇ ಚ ಸಾ ಭುಂಕ್ತೇ ಹ್ಯುಂಛವೃತ್ತಿಃ ಸದಾ ನೃಪ ॥ ೪೫ ॥**

---

೪೧–೪೨. ಎಲೈ ರಾಜನೇ ! ಮಾಘಮಾಸದ ಒಂದು ಆಶ್ಚರ್ಯಕರವಾದ ಪ್ರಭಾವವನ್ನು ಹೇಳುತ್ತೇನೆ. ಭೃಗುವಿನ ವಂಶದಲ್ಲಿ ಮಂಗಳಕರಳಾದ ಒಬ್ಬಳು ಋಷೀಕಳೆಂಬ ಹೆಂಗಸಿದ್ದಳು. ಅವಳಿಗೆ ಬಾಲ್ಯದಲ್ಲಿಯೇ ಗಂಡನು ಸತ್ತು ಹೋಗಲು ಅದರಿಂದ ದುಃಖಪಟ್ಟು ವಿಂಧ್ಯ ಪರ್ವತದ ತಪ್ಪಲಿನಲ್ಲಿರುವ ರೇವಾ ಕಪಿಲಾ ನದಿಗಳ ಸಂಗಮದಲ್ಲಿ ತಪಸ್ಸನ್ನು ಮಾಡಿದಳು.

೪೩–೪೪. ಅಲ್ಲಿ ಆಕೆಯು ವ್ರತವನ್ನು ಧರಿಸಿ ನಾರಾಯಣನನ್ನು ಧ್ಯಾನಿಸುತ್ತಿದ್ದಳು. ಸದಾಚಾರವುಳ್ಳವಳು. ಒಬ್ಬರ ಸಂಗವನ್ನೂ ಸೇರದೆ ಒಬ್ಬಂಟಿಗಳಾಗಿಯೂ, ಜಿತೇಂದ್ರಿಯಳಾಗಿಯೂ, ಕೋಪವನ್ನು ಬಿಟ್ಟೂ. ಸತ್ಯವನ್ನಾಡುವವಳಾಗಿಯೂ, ಒಳ್ಳೆಯ ಸ್ವಭಾವವುಳ್ಳವಳಾಗಿಯೂ ದಾನಮಾಡ ತಕ್ಕವಳಾಗಿಯೂ, ದೇಹವನ್ನು ತಪಸ್ಸಿನಿಂದ ಶೋಷಿಸುವುದರಲ್ಲಿ ಆಸಕ್ತಳಾಗಿಯೂ ಇದ್ದಳು.

೪೫-೪೬. ಪಿತೃಗಳಿಗೂ ದ್ವಿಜರಿಗೂ ದೇವತೆಗಳಿಗೂ ಅನ್ನವನ್ನು ಕೊಟ್ಟು ಹೋಮಮಾಡಿ ಹಗಲಿನ ಆರನೆಯ ಕಾಲದಲ್ಲಿ ಆಕೆಯು ಊಟಮಾಡುತ್ತಿದ್ದಳು. ಉಂಛವೃತ್ತಿಯಿಂದ ಆಹಾರವನ್ನು ತರುವಳು. ಕೃಚ್ಛ್ರ, ಅತಿಕೃಚ್ಛ್ರ, ಪರಾಕ,

ಕೃಚ್ಛ್ರಾತಿಕೃಚ್ಛ್ರಪಾರಾಕತಪ್ತ ಕೃಚ್ಛ್ರಾದಿಭಿರ್ವ್ರತೈಃ ।
ಪುಣ್ಯಾನ್ಯಯತಿ ಸಾ ಮಾಘಾನ್ನರ್ಮದಾಯಾಶ್ಚ ರೋಧಸಿ ॥ ೪೬ ॥

ಏವಂ ತ ಯಾ ತಪಸ್ವಿನ್ಯಾ ವಲ್ಕಲಿನ್ಯಾ ಸುನೇತ್ರಯಾ ।
ಸುಮುಹಾಸತ್ವಶಾಲಿನ್ಯಾ ಧೃತಸಂತೋಷಯುಕ್ತಯಾ ॥ ೪೭ ॥

ಷಷ್ಟಿರ್ಮಾಘಾಸ್ತು ಸುಸ್ನಾತಾ ರೇವಾಃಕಪಿಲಸಂಗಮೇ ।
ತತಃ ಸಾ ತಪಸಾ ಕ್ಷೀಣಾ ತಸ್ಮಿನ್ ತೀರ್ಥೇ ಮೃತೈವ ಸಾ ॥ ೪೮ ॥

ಮಾಘಸ್ನಾನಜಪುಣ್ಯೇನ ತೇನ ಸಾ ವೈಷ್ಣವೇ ಪುರೇ ।
ಉವಾಸ ಪ್ರಮುದಾಯುಕ್ತಾ ಚತುರ್ಯುಗಸಹಸ್ರಕಂ ॥ ೪೯ ॥

ತತ್ರ ಭುಕ್ತ್ವಾ ಮಹಾಭೋಗಾನ್ ಸತ್ಯಲೋಕಂ ಜಗಾಮ ಸಾ ।
ತತ್ರಸತ್ಯಪುರೇ ಸ್ಥಿತ್ವಾ ಭುಕ್ತ್ವಾ ಭೋಗಾನನೇಕಶಃ ॥ ೫೦ ॥

---

ತಪ್ತಕೃಚ್ಛ್ರ ಮುಂತಾದುವುಗಳನ್ನು ಮಾಡುತ್ತಿದ್ದಳು. ಈ ರೀತಿಯಾದ ಪುಣ್ಯಕೆಲಸಗಳನ್ನು ಮಾಡಿಕೊಂಡು ನರ್ಮದೆಯ ದಡದಲ್ಲಿ ಮಾಘಮಾಸವನ್ನು ಕಳೆಯುತ್ತಿದ್ದಳು.

೪೭–೪೮. ಈ ರೀತಿಯಾಗಿ ನಾರುಮಡಿಯನ್ನುಟ್ಟು ತಪಸ್ಸುಮಾಡುತ್ತ ಆ ಋಚೀಕೆಯು ಬಹುವಾದ ನಿಷ್ಠೆಯಿಂದಲೂ ಸಂತೋಷದಿಂದಲೂ ಇದ್ದಳು. ಹೀಗಿರುವಾಗ ಅರವತ್ತು ಮಾಘಮಾಸಗಳನ್ನು ಆ ರೇವಾನರ್ಮದಾನದಿಗಳ ಸಂಗಮದಲ್ಲಿ ಮಾಡಿದಳು. ಹೀಗೆ ತಪಸ್ಸುಮಾಡುತ್ತ ಆಕೆಯು ಕ್ಷೀಣಳಾಗಿ ಅದೇ ಸಂಗಮದಲ್ಲಿ ಮೃತಳಾದಳು.

೪೯. ಈ ಮಾಘಮಾಸದ ಪುಣ್ಯದಿಂದ ಆಕೆಯು ವೈಕುಂಠದಲ್ಲಿ ಅನೇಕಜನ ಹೆಂಗಸರೊಡನೆ ನಾಲ್ಕುಸಾವಿರ ವರ್ಷಗಳವರೆಗೂ ಸುಖಪಟ್ಟಳು.

೫೦–೫೧. ಆ ವಿಷ್ಣುವಿನ ಲೋಕದಲ್ಲಿ ಅನೇಕ ಭೋಗಗಳನ್ನು ಅನುಭವಿಸಿ ಅಲ್ಲಿಂದ ಸತ್ಯಲೋಕಕ್ಕೆ ಹೋದಳು ಆ ಸತ್ಯಲೋಕದಲ್ಲಿ ನಾಲ್ಕುಸಾವಿರ

ಚತುರ್ಯುಗಸಹಸ್ರಂ ತು ತತ್ಪ್ರೋಕ್ಷಿತ್ವಾ ಮಹಾಸತೀ ।
ಸುಂದೋಪಸುಂದನಾಶಾಯ ಪಶ್ಚಾತ್ಪದ್ಮಭುವಾ ಪುನಃ ॥ ೫೦ ॥

ತಿಲೋತ್ತಮೇತಿ ಸಾ ನಾಮ್ನಾ ಬ್ರಹ್ಮಲೋಕಾತಾರಿತಾ ।
ತೇನೈವ ಪುಣ್ಯಶೇಷೇಣ ರೂಪಸ್ಯೈಕಾಯನಂ ಯಯೌ ॥ ೫೧ ॥

ಅಯೋನಿಜಾಽಬಲಾರತ್ನಂ ದೇವಾನಾಮಪಿ ಮೋಹಿನೀ ।
ಲಾವಣ್ಯಹ್ರದಿನೀ ತನ್ವೀ ಸಾಭೂದಪ್ಸರಸಾಂ ವರಾ ॥ ೫೨ ॥

ನಿಪುಣಸ್ಯ ವಿಧೇಸ್ಸ್ರಷ್ಟುರ್ನೂತನಮಾಶ್ಚರ್ಯಕಾರಿಣೀ ।
ತಾಮುತ್ಪಾದ್ಯ ವಿಧಾತಾ ವೈ ತುಷ್ಟೋ ಆಜ್ಞಾಂ ದದೌ ತದಾ ॥ ೫೪ ॥

ಯತೋ ದೇವಾ ಜಿತಾಸ್ತಾಭ್ಯಾಂ ಜಗ್ಮತುರ್ಬ್ರಹ್ಮಣೋಂತಿಕಂ ।
ದೈತ್ಯಾಭ್ಯಾಂ ಪೀಡಿತಾಸ್ಸರ್ವೇ ವಿಧಾತ್ರೇಪಿ ನ್ಯವೇದಯನ್ ॥ ೫೫ ॥

---

ವರ್ಷಗಳವರೆಗೂ ಅನೇಕ ಭೋಗಗಳನ್ನು ಅನುಭವಿಸಿದಳು. ಅನಂತರ ಬ್ರಹ್ಮನೂ ಅವಳಿಗೆ ಬಹುವಾದ ರೂಪವನ್ನು ಕೊಟ್ಟು ಸುಂದರಿಯನ್ನಾಗಿ ಮಾಡಿ ತಿಲೋತ್ತಮೆಯೆಂದು ಹೆಸರನ್ನಿಟ್ಟು ಸುಂದೋಪಸುಂದರೆಂಬ ರಾಕ್ಷಸರ ನಾಶಕ್ಕೋಸ್ಕರವಾಗಿ ಬ್ರಹ್ಮಲೋಕದಿಂದ ಕಳುಹಿಸಿದನು. ಆ ಮಾಘಮಾಸದ ಪುಣ್ಯದಿಂದಲೇ ಬ್ರಹ್ಮನು ಅವಳನ್ನು ಬಹುರೂಪವತಿಯನ್ನಾಗಿ ರೂಪವತಿಯರಲ್ಲಿ ಮೊದಲನೆಯವಳನ್ನಾಗಿ ಮಾಡಿದನು.

೫೩. ಆಕೆಯು ಸ್ತ್ರೀರತ್ನವಾಗಿಯೂ ಯೋನಿ (ಹೆಂಗಸರ ಮೂತ್ರಸ್ಥಾನ) ಯಿಂದ ಹುಟ್ಟದೆಯೂ ದೇವತೆಗಳಿಗೂ ಮೋಹಕಳಾಗಿಯೂ ಲಾವಣ್ಯಕ್ಕೆ ಮಡುವಿನಂತೆಯೂ ಆಗಿ ಅವತರಿಸಿದಳು.

೫೪. ಸೃಷ್ಟಿಮಾಡುವುದರಲ್ಲಿ ನಿಪುಣನಾದ ಆ ಬ್ರಹ್ಮನು ಆಕೆಯನ್ನು ಈ ಸೃಷ್ಟಿಸಿ ತಾನೇ ಆಶ್ಚರ್ಯಪಡಲು ಮೊದಲುಮಾಡಿದನು. ಈ ಸೌಂದರ್ಯದಿಂದಲೇ ತುಷ್ಟನಾದ ಬ್ರಹ್ಮನು ಆಕೆಗೆ ಇಂತೆಂದು ಅಪ್ಪಣೆಯನ್ನು ಮಾಡಿದನು.

೫೫. ಇಷ್ಟರವೇಳೆಗೆ ಸರಿಯಾಗಿ ಆ ಸುಂದೋಪಸುಂದರುಗಳಿಂದ ಜಿತರಾದ ದೇವತೆಗಳು ಬ್ರಹ್ಮನ ಬಳಿಗೆಹೋಗಿ ತಮ್ಮ ಕಷ್ಟಗಳೆಲ್ಲವನ್ನೂ ವಿಜ್ಞಾಪಿಸಿಕೊಂಡರು.

ತಯೋರ್ವಿನಾಶಾಯ ಚ ತಾಂ ಮನಸಾ ಚಿಂತಯತ್ತದಾ ।
ತಾಂ ವಿಲೋಕ್ಯಾಥ ತಸ್ಸಂಗೀಮುವಾಚಾಥ ಪಿತಾಮಹಃ ॥ ೫೬ ॥

॥ ಬ್ರಹ್ಮೋವಾಚ ॥

ಏಣಶಾಬಾಕ್ಷಿ ಗಚ್ಛ ತ್ವಂ ದೈತ್ಯನಾಶಾಯ ಸತ್ವರಂ ॥ ೫೭ ॥

॥ ದತ್ತಾತ್ರೇಯ ಉವಾಚ ॥

ತತಸ್ಸಾ ಬ್ರಹ್ಮಣೋ ಲೋಕಾತ್ ವೀಣಾಮಾದಾಯ ಭಾಮಿನೀ ।
ಗತಾ ಪುಷ್ಕರಮಾರ್ಗೇಣ ಯತ್ರ ತೌ ದೇವವೈರಿಣೌ ॥ ೫೮ ॥

ತತ್ರ ಸ್ನಾತ್ವಾ ಚ ರೇವಾಯಾಃ ಪವಿತ್ರೇ ನಿರ್ಮಲೇ ಜಲೇ ।
ಪರಿಧಾಯಾಂಬರಂ ರಕ್ತಂ ಬಂಧೂಕಕುಸುಮಪ್ರಭಂ ॥ ೫೯ ॥

ರಣದ್ವಲಿಯಿನೀ ಚಾರುಸಿಂಜನ್ಮಂಜೀರನೂಪುರಾ ।
ಲೋಲಾ ಮುಕ್ತಾವಳೀಕಂಠಾ ಚಂಚತ್ಕುಂಡಲಶೋಭಿತಾ ॥ ೬೦ ॥

---

೫೬. ಆಕೆಯನ್ನು ನೋಡಿ ಇವಳನ್ನು ಕಳುಹಿಸಿ ಆ ಸುಂದೋಪಸುಂದರನ್ನು ನಾಶಮಾಡಬೇಕೆಂದುಕೊಂಡನು. ಅಂತೆಯೇ ಆಕೆಯನ್ನು ಕುರಿತು ಇಂತೆಂದು ಹೇಳಿದನು.

೫೭. ಬ್ರಹ್ಮನು ಹೇಳಿದನು–ಎಲೈ ಹರಿಣಾಕ್ಷಿಯೇ ! ನೀನು ಆ ದೈತ್ಯರನ್ನು ನಾಶಮಾಡಲು ಜಾಗ್ರತೆಯಾಗಿ ಹೋಗು.

೫೮. ದತ್ತಾತ್ರೇಯನು ಹೇಳಿದನು–ಆಗ ಆಕೆಯು ಬ್ರಹ್ಮಲೋಕದಿಂದ ಕೈಯ್ಯಲ್ಲಿ ವೀಣೆಯನ್ನು ಹಿಡಿದುಕೊಂಡು ಆಕಾಶಮಾರ್ಗವಾಗಿ ಆ ದೇವತೆಗಳ ವೈರಿಗಳಾದ ಸುಂದೋಪಸುಂದರು ಇರುವಲ್ಲಿಗೆ ಹೋದಳು.

೫೯. ಹಾಗೆ ಬರುವಾಗ ರೇವಾನದಿಯಲ್ಲಿ ಸ್ನಾನಮಾಡಿ ಕೆಂಪು ದಾಸವಾಳದ ಹೂವಿನ ಬಣ್ಣಕ್ಕಿರುವ ಕೆಂಪುಶೀರೆಯನ್ನು ಉಟ್ಟುಕೊಂಡಳು.

೬೦-೬೨. ಕೈಬಳೆಗಳನ್ನು ಅಲ್ಲಾಡಿಸುತ್ತ, ಕಾಲುಬಳೆಗಳನ್ನು ಸದ್ದು ಮಾಡುತ್ತ, ಮುತ್ತಿನಹಾರಗಳನ್ನು ಅಲಗಿಸುತ್ತ, ಕಿವಿಯ ಓಲೆಗಳನ್ನು

ಮಾಧವೀಕುಸುಮಾಪೀಡಾ ಕಂಕೇಲಿವಿಟಪೇ ಸ್ಥಿತಾ |
ಗಾಯಂತೀ ಸುಸ್ವರಂ ಸಾಧು ಪೀಡಯಂತೀ ಚ ವಲ್ಲಕೀಂ ॥ ೬೧ ॥

ಮೂರ್ಛಯಂತೀ ಸ್ವರಂ ಷಡ್ಜಂ ಸಸ್ನಿಗ್ಧಂ ಕೋಮಲಂ ಕಲಂ |
ಇತ್ಥಂ ತಿಲೋತ್ತಮಾ ಬಾಲಾ ತಿಷ್ಠಂತ್ಯಶೋಕಕಾನನೇ ॥ ೬೨ ॥

ದೃಷ್ಟಾ ದೈತ್ಯಭಟೈರಿಂದೋಃ ಕಲೇವ ಸುಖದಾಯಿನೀ |
ತಾಂ ದೃಷ್ಟ್ವಾ ವಿಸ್ಮಿತೈಃ ರಾಜ್ಞ ಸಮೇತ್ಯೈಸ್ತೈಃನಿಕೈರ್ಭೃಶಂ ॥ ೬೩ ॥

ತ್ವರಮಾಣೈಶ್ಚ ದೃಷ್ಟೈವ ಗತ್ವಾ ಸುಂದೋಪಸುಂದಯೋಃ |
ಕಥಿತಾ ಸಂಭ್ರಮೇಣೈವ ವರ್ಣಯಿತ್ವಾ ಪುನಃ ಪುನಃ ॥ ೬೪ ॥

॥ ಸೈನಿಕಾ ಊಚುಃ ॥

ಹೇ ದೈತ್ಯಾ ನ ವಿಜಾನೀಮೋ ದೈವೀ ವಾ ದಾನವೀ ನು ಕಿಂ |
ನಾಗಾಂಗನಾ ವಾ ಯಕ್ಷೀ ವಾ ಸ್ತ್ರೀರತ್ನಂ ಸರ್ವಥಾ ಹಿ ಸಾ ॥ ೬೫ ॥

---

ಬೆಳಗುವಂತೆ ಮಾಡುತ್ತ, ಜಾಜಿಯ ಹೂವನ್ನು ಮುಡಿದುಕೊಂಡು, ಅಶೋಕವೆಂಬ ಮರದಮೇಲೆ ಕುಳಿತುಕೊಂಡು, ಚೆನ್ನಾಗಿ ಹಾಡುತ್ತ, ಹಾಡಿಗೆ ಸರಿಯಾಗಿ ವೀಣೆಯನು ನುಡಿಸುತ್ತ ಷಡ್ಜಸ್ವರಗಳನ್ನೂ ಸುಸ್ವರವಾಗಿ ಆಲಾಪನೆಮಾಡುತ್ತ ಆ ಅಶೋಕವನದಲ್ಲಿ ಈ ರೀತಿಯಾಗಿ ಕುಳಿತಿದ್ದಳು.

೬೩. ಈರೀತಿ ಹಾಡುತ್ತ ಕುಳಿತಿರುವ ಚಂದ್ರನ ಕಲೆಯಂತೆ ಕಣ್ಣಿಗೆ ಆನಂದವನ್ನು ಬೀರುವ ತಿಲೋತ್ತಮೆಯೆಂಬ ಈಕೆಯನ್ನು ಆ ದೈತ್ಯನ ಭಟರು ನೋಡಿದರು. ನೋಡಿ ಆಶ್ಚರ್ಯಗೊಂಡು ಎಲ್ಲರೂ ಸೇರಿ ಯೋಚಿಸತೊಡಗಿದರು.

೬೪. ಹೀಗೆ ನೋಡಿ ಯೋಚಿಸಿ ಆಶ್ಚರ್ಯಪಟ್ಟು ಅವಸರಪಟ್ಟುಕೊಂಡು ಓಡಿಹೋಗಿ ಇದನ್ನು ಆ ಸುಂದೋಪಸುಂದರಿಗೆ ವರ್ಣಿಸುತ್ತ ವಿವರಿಸಿದರು.

೬೫. ಸೈನಿಕರು ಹೇಳಿದರು–ಎಲೈ ದೈತ್ಯರಿರಾ ! ಯಾವಳೋ ಒಬ್ಬಳು ಸುಂದರಿಯು ಅಶೋಕವನದಲ್ಲಿರುವಳು. ಅವಳು ದೇವತೆಯೋ, ದಾನವರವಳೋ ನಾಗಸ್ತ್ರೀಯೋ, ಯಕ್ಷರಸ್ತ್ರೀಯೋ ಯಾವಳೆಂಬುದನ್ನು ಕಾಣೆವು. ಅವಳು ಖಂಡಿತವಾಗಿಯೂ ಸ್ತ್ರೀಯರಲ್ಲಿ ಶ್ರೇಷ್ಠವಾದ ರತ್ನವು ಎಂಬುದರಲ್ಲಿ ಸಂದೇಹವಿಲ್ಲ.

ಯುವಾಂ ರತ್ನಭುಜೌ ಲೋಕೇ ರತ್ನಭೂತಾ ಚ ಸಾಽಬಲಾ ।
ವರ್ತತೇ ನಾತಿದೂರೇಗ್ರೇ ಹ್ಯಶೋಕೇ ಶೋಕಹಾರಿಣೀ ।
ಗತ್ವಾ ತಂ ಪಶ್ಯತಂ ನೂನಂ ಮನ್ಮಥಸ್ಯಾಪಿ ಮೋಹಿನೀಂ ॥ ೬೬ ॥

॥ ದತ್ತಾತ್ರೇಯ ಉವಾಚ ॥

ಇತಿ ಸೇನಾಪತೀನಾಂ ತೌ ಶ್ರುತ್ವಾ ವಾಚಂ ಮನೋಹರಾಂ ।
ಚಷಕಂ ಸೀಧುನಸ್ತ್ಯಕ್ತ್ವಾ ವಿಹಾಯ ಜಲಸೇಚನಂ ॥ ೬೭ ॥

ಉತ್ತಮಸ್ತ್ರೀಸಹಸ್ರಾಣಿ ತ್ಯಕ್ತ್ವಾ ತಸ್ಮಾಜ್ಜಲಾಶಯಾತ್ ।
ಶತಭಾರಾಯಸೀಂ ಘೋರಾಂ ಕಾಲದಂಡೋಪಮಾಂ ಗದಾಂ ॥ ೬೮ ॥

ಭಿನ್ನಾಂ ಭಿನ್ನಾಂ ಗೃಹೀತ್ವಾ ತೌ ಜವೇನಾತಿಪ್ಲುತಂ ಗತೌ ।
ಯತ್ರ ಶೃಂಗಾರಸಜ್ಜಾ ಸಾ ಹಂತುಂ ಚಂಡೀವ ಸಂಸ್ಥಿತಾ ॥ ೬೯ ॥

---

೬೬. ನೀವಿಬ್ಬರೂ ಲೋಕದಲ್ಲಿ ರತ್ನಗಳನ್ನು ಅನುಭವಿಸತಕ್ಕವರು. ಆ ಹೆಂಗಸಾದರೋ ರತ್ನವು. ಎದುರಿನಲ್ಲಿ ಹತ್ತಿರದಲ್ಲಿರುವ ಅಶೋಕವನದಲ್ಲಿಯೇ ಮನೋದುಃಖವೇನಿದ್ದರೂ ಅದನ್ನು ನಾಶಮಾಡುವ ಆಕೆಯು ಇರುವಳು. ಅಲ್ಲಿಗೆ ಹೋಗಿ ಮನ್ಮಥನಿಗೂ ಮೋಹವನ್ನುಂಟುಮಾಡುವ ಆಕೆಯನ್ನು ನೀವು ನೋಡಿರಿ.

೬೭-೬೯. ದತ್ತಾತ್ರೇಯನು ಹೇಳಿದನು–ಈ ರೀತಿಯಾಗಿ ಸೇನಾಪತಿಗಳು ಹೇಳಿದ ಮನೋಹರವಾದ ಮಾತನ್ನು ಕೇಳಿ ಪಾನಪಾತ್ರವಾದ ಚಷಕವನ್ನು ಬಿಟ್ಟು ಉತ್ತಮರಾದ ಸ್ತ್ರೀಯರೊಡನೆ ಕೊಳದಲ್ಲಿ ಜಲಕ್ರೀಡೆಯಾಡುವುದನ್ನೂ ಆ ಹೆಂಗಸರನ್ನೂ ಬಿಟ್ಟು ನೂರುಮಣದಷ್ಟು ಭಾರವಾಗಿರುವ ಕಬ್ಬಿಣದ ಭಯಂಕರವಾದ ಗದೆಯನ್ನು ಒಬ್ಬೊಬ್ಬರೂ ಒಂದೊಂದನ್ನು ತೆಗೆದುಕೊಂಡು ವೇಗದಿಂದ ನೆಗೆಯುತ್ತಾ ಶೃಂಗಾರವನ್ನು ಹೊಂದಿ ಚಂಡಿಯಂತೆ ಕೊಲ್ಲಲು ಸಿದ್ಧಳಾಗಿರುವ ಈ ತಿಲೋತ್ತಮೆಯು ಇರುವಲ್ಲಿಗೆ ಹೋದರು.

ರಾಜನ್ ಸಂಧುಕ್ಷಯಂತೀವ ದೈತ್ಯಯೋರ್ಮನ್ಮಥಾನಲಂ ।
ಸ್ಥಿತ್ವಾ ತಸ್ಯಾಃ ಪುರೋ ಜಾತೌ ತದ್ರೂಪೇಣಾತಿಮೋಹಿತೌ ।
ವಿಶೇಷಾನ್ಮಧುನಾ ಮತ್ತಾವೂಚತುಶ್ಚ ಪರಸ್ಪರಂ ॥ ೭೦ ॥

॥ ಸುಂದೋಪಸುಂದಾವೂಚತುಃ ॥

ಭ್ರಾತರ್ವಿರಮ ಭಾರ್ಯೇಯಂ ಮಮಾಸ್ತು ವರವರ್ಣಿನೀ ।
ತ್ವಮೇವಾರ್ಯ ತ್ಯಜೇಮಾಂ ಮೇ ಭಾರ್ಯಾಸ್ತು ಮದಿರೇಕ್ಷಣಾ ॥ ೭೧ ॥

॥ ದತ್ತಾತ್ರೇಯ ಉವಾಚ ॥

ಇತ್ಯಾಗ್ರಹೇಣ ಸಂರಬ್ಧೌ ಮಾತಂಗಾವಿವ ಸೋನ್ಮದೌ ।
ಅನ್ಯೋನ್ಯಕಾಲಸಂದಿಷ್ಟೌ ಗದಯಾ ಜಘ್ನತುಶ್ಚ ತೌ ॥ ೭೨ ॥

ಪರಸ್ಪರಪ್ರಹಾರೇಣ ಗತಾಸೂ ಪತಿತೌ ಭುವಿ ।
ತೌ ಮೃತೌ ಸೈನಿಕೈರ್ದೃಷ್ಟ್ವಾ ಕೃತಃ ಕೋಲಾಹಲೋ ಮಹಾನ್ ॥ ೭೩ ॥

---

೭೦. ಆಕೆಯನ್ನು ನೋಡಿದೊಡನೆಯೇ ಅವರ ಮನ್ಮಥಾನಲವು ಹೆಚ್ಚುವಂತಿದ್ದಳು. ಇಂತಹವಳ ಎದುರಿಗೆ ಆಕೆಯ ರೂಪದಿಂದ ಮೋಹಿತರಾಗಿ ನಿಂತುಕೊಂಡರು ರೂಪಕ್ಕೆ ಮೋಹಿತರಾಗಿರುವುದು ಒಂದಲ್ಲದೆ ಮದ್ಯವನ್ನು ಕುಡಿದು ಮತ್ತರಾಗಿದ್ದುಕೊಂಡಿದ್ದುದರಿಂದ ಒಬ್ಬರಿಗೊಬ್ಬರು ಇಂತೆಂದು ಕೊಂಡರು.

೭೧. ಸುಂದೋಪಸುಂದರರು ಹೇಳಿದರು–ತಮ್ಮ! ನೀನು ಸುಮ್ಮನಿರು. ಈಕೆಯು ನನಗೆ ಹೆಂಡತಿಯಾಗಿರಲಿ, ಎಂದು ಅಣ್ಣನೂ, ಎಲೈ ಅಣ್ಣನೆ! ಹಾಗೆ ಆಗುವುದಿಲ್ಲ. ನೀನು ಈಕೆಯನ್ನು ಬಿಟ್ಟು ಬಿಡು. ಈಕೆಯು ನನಗೇ ಹೆಂಡತಿಯಾಗಿರಲಿ. ಎಂದು ತಮ್ಮನೂ ವಾದಿಸಲು ಮೊದಲಿಟ್ಟರು

೭೨. ದತ್ತಾತ್ರೇಯನು ಹೇಳಿದನು–ಈ ರೀತಿಯಾಗಿ ಕೋಪದಿಂದ ಕುದಿಯುತ್ತಾ ಮದ್ದಾನೆಗಳಂತೆ ರೇಗುತ್ತಿದ್ದರು. ಕಾಲವು ಒದಗಿಬಂದಾಗ ಒಬ್ಬರಿಗೊಬ್ಬರು ಗದೆಯಿಂದಲೇ ಹೊಡೆದಾಡಲು ಮೊದಲುಮಾಡಿದರು.

೭೩-೭೫. ಆ ಸುಂದೋಪಸುಂದರು ಹೀಗೆ ಹೊಡೆದಾಡಿ ಪ್ರಾಣವನ್ನು ಕಳೆದುಕೊಂಡು ಕೆಳಗೆ ಬಿದ್ದರು ಅವರಿಬ್ಬರೂ ಸತ್ತುದನ್ನು ಸೈನಿಕರು ನೋಡಿ

ಕಾಲರಾತ್ರಿಸಮಾ ಕೇಯಂ ಹಾ ಕಿಮೇತದುಪಸ್ಥಿತಂ ।
ಏವಂ ವದತ್ಸು ದೈತ್ಯೇಷು ದೈತ್ಯೌ ಸುಂದೋಪಸುಂದರೌ ॥ ೭೪ ॥

ಪಾತಯಿತ್ವಾ ಗಿರೇಶ್ಶೃಂಗೇ ಹ್ರಾದಿನೀವ ತಿಲೋತ್ತಮಾ ।
ಪ್ರಸ್ಥಿತಾ ಗಗನಂ ಶೀಘ್ರಂ ದ್ಯೋತಯಂತೀ ದಿಶೋ ದಶ ॥ ೭೫ ॥

ದೇವಕಾರ್ಯಂ ತತಃ ಕೃತ್ವಾ ಗತಾ ಸಾ ಬ್ರಹ್ಮಣೋಂತಿಕಂ ।
ತತಸ್ತುಷ್ಟೇನ ದೇವೇನ ವಿಧಿನಾ ಸಾನುಮೋದಿತಾ ॥ ೭೬ ॥

॥ ಬ್ರಹ್ಮೋವಾಚ ॥

ಸ್ಥಾನಂ ಸೂರ್ಯರಥೇ ದತ್ತಂ ತವ ಚಂದ್ರಾನನೇ ಮಯಾ ।
ಭುಂಕ್ಷ್ವ ಭೋಗಾನನೇಕಾಂಸ್ತ್ವಂ ಯಾವತ್ಸೂರ್ಯೋಂಬರೇ ಸ್ಥಿತಃ॥ ೭೭ ॥

---

ಕಾಳರಾತ್ರಿಗೆ ಸಮಳಾದ ಈಕೆಯು ಯಾರು? ಎಲ್ಲಿಂದ ಬಂದಳು? ಇದೇನು ಗತಿಯು ಬಂದಿತು? ಎಂಬುದಾಗಿ ಕೋಲಾಹಲಮಾಡಲು ಮೊದಲಿಟ್ಟರು. ದೈತ್ಯರು ಹೀಗೆ ಹೇಳುತ್ತಿರಲು ಆ ಸುಂದೋಪಸುಂದರನ್ನು ಕೊಂದು ಆ ತಿಲೋತ್ತಮೆಯು ಮಿಂಚು ಪ್ರಕಾಶವನ್ನುಂಟುಮಾಡಿ ನಾಲ್ಕು ದಿಕ್ಕುಗಳನ್ನೂ ಬೆಳಗಿ ಅಂತರಿಕ್ಷಕ್ಕೆ ಹೋಗುವಂತೆ ಹೊರಟುಹೋದಳು.

೭೬. ಈ ರೀತಿಯಾಗಿ ದೇವತೆಗಳ ಕಾರ್ಯವನ್ನು ಮಾಡಿ ಬ್ರಹ್ಮನ ಬಳಿಗೆ ಹೋಗಲು ಸಂತೋಷಗೊಂಡ ಆ ಬ್ರಹ್ಮನು ಆಕೆಯನ್ನು ಬಹಳವಾಗಿ ಶ್ಲಾಘಿಸಿದನು.

೭೭. ಬ್ರಹ್ಮನು ಹೇಳಿದನು-ಎಲೈ ಚಂದ್ರಾನನೆಯಾದ ತಿಲೋತ್ತಮೆಯೇ! ನಿನಗೆ ಸೂರ್ಯನ ರಥದಲ್ಲಿ ಸ್ಥಾನವನ್ನು ಕೊಟ್ಟಿದ್ದೇನೆ. ಅಲ್ಲಿದ್ದುಕೊಂಡು ಸೂರ್ಯನು ಆಕಾಶದಲ್ಲಿರುವವರೆವಿಗೂ ಸೂರ್ಯಲೋಕದ ಸುಖಗಳನ್ನು ಅನುಭವಿಸುತ್ತಿರು.

॥ ದತ್ತಾತ್ರೇಯ ಉವಾಚ ॥

ಇತ್ಥಂ ಸಾ ಬ್ರಾಹ್ಮಣೀ ರಾಜನ್ ಭೂತ್ವಾ ಚಾಪ್ಸರಸಾಂ ವರಾ ।
ಭುಂಕ್ತೇದ್ಯಾಪಿ ರವೇರ್ಲೋಕೇ ಮಾಘಸ್ನಾನಫಲಂ ಮಹತ್ ॥ ೭೮ ॥

ತೇನ ಪ್ರಯತ್ನತೋ ರಾಜನ್ ಶ್ರದ್ಧದಾನೈಸ್ಸದಾ ನರೈಃ ।
ಸ್ನಾತವ್ಯಂ ಮಕರಾದಿತ್ಯೇ ವಾಂಛದ್ಭಿಃ ಪರಮಾಂ ಗತಿಂ ॥ ೭೯ ॥

ಅನವಾಪ್ತೋ ನ ತಸ್ಯಾಸ್ತಿ ಪುರುಷಾರ್ಥೋಽಪಿ ಕಶ್ಚನ ।
ನಾಕ್ಷೀಣಂ ಪಾತಕಂ ತಸ್ಯ ಮಾಘೇ ಮಜ್ಜತಿ ಯೋ ನರಃ ॥ ೮೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ತಿಲೋತ್ತಮಾಖ್ಯಾನಂ ನಾಮ ದ್ವಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೮. ದತ್ತಾತ್ರೇಯನು ಹೇಳಿದನು-ಎಲೈ ರಾಜನೇ ! ಆ ಬ್ರಾಹ್ಮಣ ಸ್ತ್ರೀಯು ಹೀಗೆ ಮಾಘಸ್ನಾನದ ಫಲದಿಂದ ಅಪ್ಸರಸ್ತ್ರೀಯರಲ್ಲಿ ಶ್ರೇಷ್ಠಳಾಗಿ ಈಗಲೂ ಕೂಡ ಸೂರ್ಯಲೋಕದಲ್ಲಿ ಆ ಮಾಘಸ್ಥಾನದ ಫಲವನ್ನು ಅನುಭವಿಸುತ್ತಿದ್ದಾಳೆ.

೭೯. ಆದ್ದರಿಂದ ಮನುಷ್ಯರು ಶ್ರದ್ಧೆಯಿಂದ ಪ್ರಯತ್ನಪಟ್ಟು ಮಕರರಾಶಿಗೆ ಸೂರ್ಯನು ಬಂದಾಗ ಸ್ನಾನಮಾಡಬೇಕು. ಹಾಗೆ ಮಾಡಿದರೆ ಉತ್ತಮವಾದ ಗತಿಯನ್ನು ಹೊಂದುತ್ತಾರೆ.

೮೦. ಆ ಮಾಘಸ್ನಾನಮಾಡಿದವನಿಗೆ ಸಿಕ್ಕದಿರುವ ಪುರುಷಾರ್ಥಗಳೇ ಇಲ್ಲ. ಮಾಘದಲ್ಲಿ ಸ್ನಾನಮಾಡುವವನ ಪಾಪಗಳು ನಾಶವಾಗಿಯೇ ಆಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ತಿಲೋತ್ತಮಾಖ್ಯಾನ ಎಂಬ ಇನ್ನೂರ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ಶ್ರೀ ದತ್ತಾತ್ರೇಯ ಉವಾಚ ॥

ತುಲಾಂ ಯಾಂತಿ ನ ತೇನಾತ್ರ ಯಜ್ಞಾಸ್ಸರ್ವೇ ಸದಕ್ಷಿಣಾಃ ।
ಮಾಘಸ್ನಾನೇನ ರಾಜೇಂದ್ರ ತೀರ್ಥೇ ಚೈವ ವಿಶೇಷತಃ ॥ ೧ ॥

ನ ಚಾನ್ಯತ್ ಸ್ವರ್ಗದಂ ಕರ್ಮ ನ ಚಾನ್ಯತ್ಪಾಪನಾಶನಂ ।
ನ ಚಾನ್ಯತ್ ಮೋಕ್ಷದಂ ಲೋಕೇ ಮಾಘಸ್ನಾನಸಮಂ ಭುವಿ ॥ ೨ ॥

ಅತ್ರೈವ ಕಥಯಿಷ್ಯಾಮಿ ಇತಿಹಾಸಂ ಪುರಾತನಂ ।
ಪುರಾ ಕೃತಯುಗೇ ರಾಜನ್ನೈಷಧೇ ನಗರೇ ವರೇ ॥ ೩ ॥

---

## ಇನ್ನೂರ ನಲವತ್ತಮೂರನೆಯ ಅಧ್ಯಾಯವು



೧. ಶ್ರೀ ದತ್ತಾತ್ರೇಯನು ಹೇಳಿದನು–ಪೂರ್ತಿಯಾದ ದಕ್ಷಿಣೆಯಿಂದ ಕೂಡಿದ ಅನೇಕ ಯಾಗಗಳು ಮಾಘಸ್ನಾನಕ್ಕೆ ಸರಿದೂಗಲಾರವು. ಹೀಗಿರುವಲ್ಲಿ ತೀರ್ಥಗಳಲ್ಲಿ ಸ್ನಾನಮಾಡಿದರೆ ಹೇಳತಕ್ಕದ್ದೇನಿರುವುದು!

೨. ಈ ಮಾಘಸ್ನಾನಕ್ಕಿಂತಲೂ ಸ್ವರ್ಗವನ್ನು ಕೊಡುವ ಕರ್ಮವು ಬೇರೆಯಿಲ್ಲ. ಪಾಪನಾಶಕವಾದ ಕರ್ಮವೂ ಬೇರೆಯಿಲ್ಲ. ಇದಕ್ಕಿಂತಲೂ ಮೋಕ್ಷವನ್ನು ಕೊಡುವ ಕರ್ಮವು ಬೇರೆ ಇಲ್ಲವೇ ಇಲ್ಲ.

೩–೪. ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ. ಪೂರ್ವದಲ್ಲಿ ಕೃತಯುಗದಲ್ಲಿ ನೈಷಧದೇಶದ ನಗರದಲ್ಲಿ ಒಬ್ಬ ವೈಶ್ಯನಿದ್ದನು. ಅವನು

ಆಸೀದ್ವೈಶ್ಯಃ ಕುಬೇರಾಭೋ ನಾಮತೋ ಹೇಮಕುಂಡಲಃ ।
ಕುಲೀನಃ ಸತ್ಕ್ರಿಯೋ ರಾಜನ್ ದ್ವಿಜಪಾವಕಪೂಜಕಃ ॥ ೪ ॥

ಕೃಷಿವಾಣಿಜ್ಯಕರ್ತಾ ಚ ಬಹುಧಾ ಕ್ರಯವಿಕ್ರಯೀ ।
ಗೋಘೋಟಕಮಹಿಷ್ಯಾದಿಯಾನಪೋಷಣತತ್ಪರಃ ॥ ೫ ॥

ಪಯೋ ದಧೀನಿ ತಕ್ರಾಣಿ ಗೋಮಯಾನಿ ತೃಣಾನಿ ಚ ।
ಕಾಷ್ಠಾನಿ ಫಲಮೂಲಾನಿ ಸರ್ಪಿರ್ಲವಣಪಿಪ್ಪಲೀಃ ॥ ೬ ॥

ಧಾನ್ಯಾನಿ ಶಾಕತೈಲಾನಿ ವಸ್ತ್ರಾಣಿ ವಿವಿಧಾನಿ ಚ ।
ಧಾತೂನಿಕ್ಷುವಿಕಾರಾಣಿ ವಿಕ್ರೀಣೀತೇ ಸ ಸರ್ವದಾ ॥ ೭ ॥

ಇತ್ಥಂ ನಾನಾವಿಧೈರ್ವೈಶ್ಯಃ ಉಪಾಯೈಃ ಪರಮೈಸ್ತಥಾ ।
ಕೋಟಿರ್ಹಾಟಕದ್ರವ್ಯಾಣಾಮರ್ಜಯಾಮಾಸ ಸೋಷ್ಟ ವೈ ॥ ೮ ॥

---

ಕುಬೇರನಂತೆ ಧನವಂತನು. ಅವನ ಹೆಸರು ಹೇಮಕುಂಡಲನು. ಒಳ್ಳೆಯ ಕುಲದಲ್ಲಿ ಹುಟ್ಟಿದವನು. ಒಳ್ಳೆಯ ಕೆಲಸದಲ್ಲಿ ಆಸಕ್ತಿಯುಳ್ಳವನು. ಬ್ರಾಹ್ಮಣರನ್ನು ಪೂಜಿಸುತ್ತಿದ್ದನು. ಹೋಮಾದಿಗಳನ್ನು ಮಾಡುತ್ತಿದ್ದನು.

೫. ಕೃಷಿಯನ್ನು ಮಾಡಿಸುತ್ತಿದ್ದನು. ವ್ಯಾಪಾರವನ್ನೂ ಮಾಡುತ್ತಿದ್ದನು ಅನೇಕ ಬಗೆಯಾಗಿ ಕೊಳ್ಳುವುದು ಮಾರುವುದು ಎಲ್ಲವನ್ನೂ ಮಾಡುತ್ತಿದ್ದನು. ಹಸು, ಕುದುರೆ, ಎಮ್ಮೆ, ಗಾಡಿ ಮುಂತಾದುವನ್ನು ಇಟ್ಟುಕೊಂಡಿದ್ದನು.

೬-೭. ಹಾಲು, ಮೊಸರು, ಮಜ್ಜಿಗೆ, ಬೆರಣಿ, ಹುಲ್ಲು, ಸೌದೆ ಹಣ್ಣು, ಗೆಣಸು, ಗೆಡ್ಡೆ, ತುಪ್ಪ, ಉಪ್ಪು, ಹಿಪ್ಪಲೀ ಧಾನ್ಯಗಳು, ಕಾಯಿಗಳು, ಎಣ್ಣೆಗಳು, ನಾನಾಬಗೆಯಾದ ಬಟ್ಟೆಗಳು, ಬಣ್ಣಗಳು, ಕಾವಿಕಲ್ಲು, ಮುಂತಾದುವು ಬೆಲ್ಲ ಸಕ್ಕರೆ ಇವನ್ನೂ ಯಾವಾಗಲೂ ಕೊಳ್ಳುವನು, ಮಾರುವನು.

೮. ಆ ವೈಶ್ಯನು ಇವೇ ಮೊದಲಾದ ರೀತಿಯಿಂದ ಎಂಟುಕೋಟಿ ರೂಪಾಯಿಯ ಚಿನ್ನ, ಬೆಳ್ಳಿಯನ್ನು ಸಂಪಾದಿಸಿದ್ದನು

ಏವಂ ಮಹಾಧನಃ ಸೋಥ ಆಕರ್ಣಪಲಿತೋಽಭವತ್ ।
ಪಶ್ಚಾದ್ವಿಚಾರ್ಯ ಸಂಸಾರಕ್ಷಣಿಕತ್ವಂ ಸ ಚೇತಸಿ ॥ ೯ ॥

ತದ್ಧನಸ್ಯ ಷಡಂಶೇನ ಧರ್ಮಕಾರ್ಯಂ ಚಕಾರ ಸಃ ।
ವಿಷ್ಣೋರಾಯತನಂ ಚಕ್ರೇ ಚಕ್ರೇ ಗೇಹಂ ಶಿವಸ್ಯ ಚ ॥ ೧೦ ॥

ತಟಾಗಂ ಕಾರಯಾಮಾಸ ವಿಪುಲಂ ಸಾಗರೋಪಮಂ ।
ವಾಪ್ಯಶ್ಚ ಪುಷ್ಕರಿಣ್ಯಶ್ಚ ಬಹುಶಸ್ತೇನ ಕಾರಿತಾಃ ॥ ೧೧ ॥

ವಟಾಶ್ವತ್ಥಾಮ್ರಕಕ್ಕೋಲಜಂಬೂನಿಂಬಾದಿಕಾನನಂ ।
ಆರೋಪಿತಂ ಸುಸತ್ವೇನ ತಯಾ ಪುಷ್ಪವನಂ ಶುಭಂ ॥ ೧೨ ॥

ಉದಯಾದಸ್ತಪರ್ಯನ್ತಮನ್ನದಾನಂ ಚಕಾರ ಸಃ ।
ಪುರಾದ್ಬಹಿಶ್ಚತುರ್ದಿಕ್ಷು ಪ್ರಪಾಶ್ಚಕ್ರೇತಿಶೋಭನಾಃ ॥ ೧೩ ॥

---

೯. ಈ ರೀತಿಯಾಗಿ ಬಹು ಹಣವನ್ನು ಸಂಪಾದಿಸಿ ಕೊನೆಗೆ ಆ ಧನಿಕನು ಮುದಕನಾದನು. ಅನಂತರ ಸಂಸಾರವು ನಶ್ವರವೆಂಬುದನ್ನು ಯೋಚಿಸಿದನು. ಆಗ ತನ್ನ ಹಣದಲ್ಲಿ ಆರನೆಯ ಒಂದು ಭಾಗವನ್ನು ಧರ್ಮಕಾರ್ಯಕ್ಕೆ ಉಪಯೋಗಿಸಿದನು.

೧೦-೧೧. ವಿಷ್ಣುವಿನ ದೇವಸ್ಥಾನವನ್ನು ಕಟ್ಟಿಸಿದನು. ಶಿವನ ದೇವಸ್ಥಾನವನ್ನು ಕಟ್ಟಿಸಿದನು. ಸಮುದ್ರದಂತೆ ತುಂಬಿ ತುಳುಕುವಂತೆ ಕೆರೆಯನ್ನು ಕಟ್ಟಿಸಿದನು. ಬಾವಿ, ಕೊಳ ಇವನ್ನು ಬಹು ಸಂಖ್ಯೆಯಲ್ಲಿ ಕಟ್ಟಿಸಿದನು.

೧೨. ಆಲ, ಅರಳಿ, ಮಾವು, ಕಗ್ಗಲಿ, ನೇರಳೆ ಇವುಗಳುಳ್ಳ ಕಾಡನ್ನು ಅನೇಕವಾಗಿ ಬೆಳೆಸಿದನು. (ತೋಪನ್ನು ಎಬ್ಬಿಸಿದನು) ಮತ್ತು ಅನೇಕವಾಗಿ ಹೂದೋಟಗಳನ್ನು ಏರ್ಪಡಿಸಿದನು.

೧೩. ಬೆಳಗಿನಿಂದ ಎಂದರೆ ಸೂರ್ಯೋದಯದಿಂದ ಮೊದಲುಮಾಡಿಕೊಂಡು ಸೂರ್ಯನ ಅಸ್ತಮಯದವರೆವಿಗೂ ಅನ್ನದಾನವನ್ನು ಮಾಡಿದನು. ಪಟ್ಟಣದಲ್ಲಿ ನಾಲ್ಕು ಕಡೆಗಳಲ್ಲಿಯೂ ಅರವಟ್ಟಿಗೆಗಳನ್ನು ಇಡಿಸಿದನು.

ಪುರಾಣೇಷು ಪ್ರಸಿದ್ಧಾನಿ ಯಾನಿ ದಾನಾನಿ ಭೂಪತೇ ।
ದದೌ ತಾನಿ ಸ ಧರ್ಮಾತ್ಮಾ ನಿತ್ಯಂ ದಾನಪರಸ್ಸದಾ ॥ ೧೪ ॥

ಯಾವಜ್ಜೀವಂ ಕೃತೇ ಪಾಪೇ ಪ್ರಾಯಶ್ಚಿತ್ತಂ ತಥಾಕರೋತ್ ।
ದೇವಪೂಜಾಪರೋ ನಿತ್ಯಂ ನಿತ್ಯಂ ಚಾತಿಥಿಪೂಜಕಃ ॥ ೧೫ ॥

ತಸ್ಯೇತ್ಥಂ ವರ್ತಮಾನಸ್ಯ ಸಂಜಾತೌ ದ್ವೌ ಸುತೌ ನೃಪ ।
ತೌ ಚ ಪ್ರಸಿದ್ಧನಾಮಾನೌ ಶ್ರೀಕುಂಡಲವಿಕುಂಡಲೌ ॥ ೧೬ ॥

ತಯೋರ್ಮೂರ್ಧ್ನಿ ಗೃಹಂ ತ್ಯಕ್ತ್ವಾ ಜಗಾಮ ತಪಸೇ ವನಂ ।
ಸಮಾರಾಧ್ಯ ಪರಂ ದೇವಂ ಗೋವಿಂದಂ ವರದಂ ವಿಭುಂ ॥ ೧೭ ॥

ತಪಃಕ್ಲಿಷ್ಟಶರೀರೋಸೌ ವಾಸುದೇವಮನಾಸ್ಸದಾ ।
ಪ್ರಾಪ್ತವಾನ್ ವೈಷ್ಣವಂ ಲೋಕಂ ಯತ್ರ ಗತ್ವಾ ನ ಶೋಚತಿ ॥ ೧೮ ॥

---

೧೪. ಪುರಾಣದಲ್ಲಿ ಎಷ್ಟು ದಾನಗಳನ್ನು ಹೇಳಿದ್ದಾನೆಯೋ ಅಷ್ಟು ದಾನಗಳನ್ನೂ ಮಾಡಿದನು. ಅಲ್ಲದೆ ನಿತ್ಯವೂ ದಾನಕೊಡುತ್ತಲೇ ಇದ್ದನು.

೧೫. ಹುಟ್ಟಿದಂದಿನಿಂದಲೂ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು. ದಿನವೂ ದೇವರ ಪೂಜೆಯಲ್ಲಿ ಆಸಕ್ತನಾಗಿದ್ದನು. ದಿನವೂ ಅತಿಥಿಗಳನ್ನು ಸತ್ಕರಿಸುತ್ತಿದ್ದನು.

೧೬. ಈರೀತಿ ದಾನಮಾಡುತ್ತಿರುವ ಇವನಿಗೆ ಇಬ್ಬರು ಮಕ್ಕಳಿದ್ದರು ಅವರು ಶ್ರೀಕುಂಡಲ ವಿಕುಂಡಲರೆಂಬ ಹೆಸರುಳ್ಳವರು.

೧೭-೧೮. ಆ ಇಬ್ಬರು ಮಕ್ಕಳಿಗೂ ಎಲ್ಲವನ್ನೂ ವಹಿಸಿ ತಪಸ್ಸಿಗೋಸ್ಕರ ಕಾಡಿಗೆ ಹೋದನು. ಅಲ್ಲಿ ವಾಸುದೇವನಲ್ಲಿಯೇ ಮನಸ್ಸಿಟ್ಟು ತಪಸ್ಸುಮಾಡುತ್ತ ತಪಸ್ಸಿನಿಂದಲೇ ಕ್ಷೀಣನಾದನು. ಈ ರೀತಿಯಾಗಿ ಆ ವರದನಾದ ಗೋವಿಂದನನ್ನು ಆರಾಧಿಸಿ ದುಃಖವನ್ನೂ ಯೋಚನೆಯನ್ನೂ ಕಾಣದ ಆ ವೈಷ್ಣವ ಪದವನ್ನು ಹೊಂದಿದನು.

ಅಥ ತೌ ತತ್ಸುತೌ ರಾಜರ್ ಮದಮಾನಸಮನ್ವಿತೌ ।
ತರುಣೌ ರೂಪಸಂಪನ್ನೌ ಧನಗರ್ವೇಣಮೋಹಿತೌ ॥ ೧೯ ॥

ದುಶ್ಶೀಲೌ ವ್ಯಸನಾಸಕ್ತೌ ಸರ್ವಕರ್ಮವಿದೂಷಕೌ ।
ಅಧರ್ಮನಿರತೌ ದೃಷ್ಟೌ ಪರದಾರಾಭಿಮರ್ಶಿನೌ ॥ ೨೦ ॥

ನ ವಾಕ್ಯಂ ಶೃಣುತೋ ಮಾತುರ್ವೃದ್ಧಾನಾಂ ವಚನಂ ತಥಾ ।
ದುರ್ಮಾರ್ಗಗೌ ದುರಾತ್ಮಾನೌ ಪಿತೃಮಿತ್ರನಿಷೇಧಕೌ ॥ ೨೧ ॥

ಗೀತವಾದಿತ್ರನಿರತೌ ವೇಣುವೀಣಾವಿನೋದಿತೌ ।
ವಾರಸ್ತ್ರೀಶತಸಂಯುಕ್ತೌ ಗಾಯಂತೌ ಚೇರತುಸ್ತದಾ ॥ ೨೨ ॥

ಚಾಟುಕಾರಪರ್ಯೈರ್ಯುಕ್ತೌ ವಿಟಗೋಷ್ಠೀವಿಶಾರದೌ ।
ನಾನಾಲಂಕಾರಶೋಭಾಢ್ಯೌ ಮೌಕ್ತಿಕೋದಾರಹಾರಿಣೌ ॥ ೨೩ ॥

---

೧೯–೨೦. ಎಲೈ ದೊರೆಯೆ ! ಆಮೇಲೆ ಅವನ ಮಕ್ಕಳುಗಳಿಬ್ಬರೂ ಮದಮೋಹಗಳಿಂದ ಕೂಡಿಕೊಂಡರು. ತರುಣರೂ ರೂಪವಂತರೂ ಆಗಿದ್ದರು. ಜೊತೆಗೆ ಹಣವೂ ಇದ್ದುದರಿಂದ ಎಲ್ಲದರ ಗರ್ವದಿಂದಲೂ ಮೆರೆಯುತ್ತಿದ್ದರು. ಇದರ ಫಲವಾಗಿ ದುರಾಚಾರಿಗಳಾದರು. ಯಾವಾಗಲೂ ಕೆಟ್ಟವಿಷಯ ಗಳಲ್ಲಿಯೇ ಮನಸ್ಸಿರುತ್ತಿದ್ದಿತು. ಧರ್ಮಗಳೆಲ್ಲವನ್ನೂ ನಿಂದಿಸುತ್ತಿದ್ದರು. ಪರರ ಹೆಂಡರಲ್ಲಿಯೇ ಆಸಕ್ತರಾಗಿ ಅಧರ್ಮದಲ್ಲಿಯೇ ಆಸಕ್ತಿಯನ್ನು ಬಹುವಾಗಿ ಹೊಂದಿದರು.

೨೧-೨೨. ಅವರು ತಾಯಿಯ ದೊಡ್ಡವರ ಹಿತಕಾರಿಗಳಾದ ಯಾರದೇ ಆಗಲಿ ಮಾತನ್ನು ಕೇಳದೆಹೋದರು. ಕೆಟ್ಟಮಾರ್ಗದಲ್ಲಿ ಹೊರಟು ದುಷ್ಟರಾಗಿ ತಂದೆಯ ಸ್ನೇಹಿತರನ್ನೆಲ್ಲಾ ನಿಂದಿಸುತ್ತಿದ್ದರು. ಸಂಗೀತದಲ್ಲಿಯೂ ಕುಣಿತ ದಲ್ಲಿಯೂ ಆಸಕ್ತರಾಗಿ ವೀಣೆ ಕೊಳಲುಗಳನ್ನು ನುಡಿಸುತ್ತಿದ್ದರು. ಅನೇಕಜನ ಸೂಳೆಯರೊಡನೆ ಸೇರಿಕೊಂಡು ಹಾಡುತ್ತ ಕುಣಿಯುತ್ತಾ ಎಲ್ಲಾ ಕಡೆಯಲ್ಲಿಯೂ ಸಂಚರಿಸಲು ಮೊದಲುಮಾಡಿದರು.

೨೩–೨೫. ಹೊಗಳಿಕೆಯ ಮಾತಿನಲ್ಲಿ ಆಸಕ್ತರಾದರು. ವಿಟರ ಗುಂಪಿ ನಲ್ಲಿ ಆಸಕ್ತಿಯುಳ್ಳವರಾದರು. ಬಗೆ ಬಗೆಯಾಗಿ ವೇಷಭೂಷಣಗಳನ್ನು

**ಗಜವಾಜಿತರಥೌಘೇನ ಕ್ರೀಡಂತೌ ತಾವಿತಸ್ತತಃ ।**
**ಮಧುಪಾನಸಮಾಯುಕ್ತೌ ವಾರಸ್ತ್ರೀರತಿಮೋಹಿತೌ** ॥ ೨೪ ॥

**ಸುವೇಷೌ ಚಾರುವಸನೌ ಚಾರುಚಂದನರೂಷಿತೌ ।**
**ನಾಶಯಂತೌ ಪಿತುರ್ದ್ರವ್ಯಂ ಸಹಸ್ರಂ ದದತುಶ್ಶತಂ** ॥ ೨೫ ॥

**ಸುಗಂಧಿಮಾಲ್ಯಮಾಲಾಢ್ಯೌ ಕಸ್ತೂರೀತಿಲಕೋಜ್ಜ್ವಲೌ ।**
**ತಸ್ಥತುಸ್ಸ್ವಗೃಹೇ ರಮ್ಯೇ ನಿತ್ಯಂ ಭೋಗಪರಾಯಣೌ** ॥ ೨೬ ॥

**ಇತ್ಥಂ ತು ತದ್ಧನಂ ತಾಭ್ಯಾಂ ವಿನಿಯುಕ್ತಮಸದ್ವ್ಯಯೈಃ ।**
**ವಾರಸ್ತ್ರೀವಿಟಶೈಲೂಷಮಲ್ಲಚಾರಣವಂದಿಷು** ॥ ೨೭ ॥

---

ಮಾಡಿಕೊಳ್ಳುತ್ತಿದ್ದರು. ಆನೆ ಕುದುರೆಗಳನ್ನು ಇಟ್ಟುಕೊಂಡು ಅದರಲ್ಲಿಯೇ ಸಂಚರಿಸುತ್ತ ಸುಖಪಡುತ್ತಿದ್ದರು. ಹೆಂಡ ಮುಂತಾದುವುಗಳನ್ನು ಕುಡಿಯುವುದಕ್ಕೆ ಆರಂಭಿಸಿದರು. ಅಂತೆಯೇ ವೇಶ್ಯಾಸ್ತ್ರೀಯರಲ್ಲಿ ಮೋಹಗೊಂಡು ರಮಿಸಿದರು ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳುತ್ತ ನೋಡಲು ಒಳ್ಳೆಯ ವೇಷಗಳನ್ನುಳ್ಳವ ರಾದರು. ಉತ್ತಮವಾದ ಗಂಧ, ಹೂವುಗಳನ್ನು ಧರಿಸುತ್ತಿದ್ದರು. ಇವಕ್ಕೋಸ್ಕರ ಸಾವಿರಗಟ್ಟಲೆಯಲ್ಲಿ ವ್ಯಯಮಾಡುತ್ತ ತಂದೆಯ ಹಣವನ್ನು ಹಾಳು ಮಾಡುತ್ತಿದ್ದರು.

೨೬. ಒಳ್ಳೆಯ ವಾಸನೆಯುಳ್ಳ ಹೂಮಾಲೆಗಳನ್ನು ಮುಡಿದುಕೊಳ್ಳುತ್ತಾ ಕಸ್ತೂರಿಯ ತಿಲಕವನ್ನು ಹಚ್ಚಿಕೊಳ್ಳುತ್ತಾ ಯಾವಾಗಲೂ ಉತ್ತಮವಾದ ಭೋಗಗಳನ್ನೇ ಹೊಂದುತ್ತ ಮನೋಹರವಾದ ತಮ್ಮ ಮನೆಯಲ್ಲಿ ಸುಖಿಸುತ್ತಿದ್ದರು.

೨೭-೨೮. ಹೀಗೆ ತಂದೆಯ ಹಣವನ್ನು ಅವರು ಕೆಟ್ಟದಾರಿಯಲ್ಲಿ ವ್ಯಯಮಾಡಿ ನಾಶಮಾಡುತ್ತಿದ್ದರು. ಸೂಳೆ, ವಿಟರು, ಕುಣಿಯುವವರು, ಕುಸ್ತಿಮಾಡುವವರು. ಹೊಗಳುಭಟರು ಸಂಗೀತಗಾರರು ಇವರಿಗೆ ಹಣವನ್ನು

ಅಪಾತ್ರೇಷು ಧನಂ ದತ್ತಮುಪ್ತಂ ಬೀಜಮಿವೋಷರೇ ।
ನ ಸತ್ಪಾತ್ರೇಷು ತದ್ದತ್ತಂ ನ ಬ್ರಾಹ್ಮಣಮುಖೇ ಹುತಂ ॥ ೨೮ ॥

ನಾರ್ಚಿತೋ ಭೂತಭೃದ್ವಿಷ್ಣುಃ ಸರ್ವಪಾಪಪ್ರಣಾಶನಃ ।
ತಯೋರೇವಂ ತು ತದ್ದ್ರವ್ಯಮಚಿರೇಣ ಕ್ಷಯಂ ಗತಂ ॥ ೨೯ ॥

ತತಸ್ತೌ ದುಃಖಮಾಪನ್ನೌ ಕಾರ್ಪಣ್ಯಂ ಪರಮಂ ಗತೌ ।
ಶೋಚಮಾನೌ ವಿಮುಹ್ಯೈತೌ ಕ್ಷುತ್ಪೀಡಾದುಃಖಕರ್ಶಿತೌ ॥ ೩೦ ॥

ತಯೋಸ್ತು ತಿಷ್ಠತೋರ್ಗೇಹೇ ಭೋಜ್ಯಂ ನಾಸ್ತಿ ಯದಾ ತದಾ ।
ಸ್ವಜನೈರ್ಬಾಂಧವೈಸ್ಸರ್ವೈಃ ಸೇವಕೈರುಪಜೀವಿಭಿಃ ॥ ೩೧ ॥

ದ್ರವ್ಯಾಭಾವೇ ಪರಿತ್ಯಕ್ತೌ ನಿಂದ್ಯಮಾನೌ ತತಃ ಪುರೇ ।
ಪಶ್ಚಾಚ್ಚೌರ್ಯಂ ಸಮಾರಬ್ಧಂ ತಾಭ್ಯಾಂ ತನ್ನಗರೇ ನೃಪ ॥ ೩೨ ॥

---

ಕೊಡುತ್ತಿದ್ದರು. ಹೀಗೆ ಕೊಡುತ್ತಿದ್ದುದರಿಂದ ಚೌಳುಭೂಮಿಯಲ್ಲಿ ಬೀಜವನ್ನು ಬಿತ್ತಿದಂತೆ ಆ ಹಣವು ಫಲಿಸದಿದ್ದಿತು. ಯೋಗ್ಯರಾದವರಿಗೆ ಒಂದುಕಾಸನ್ನೂ ಕೊಡಲೇ ಇಲ್ಲ. ಬ್ರಾಹ್ಮಣರಿಗಂತೂ ಏನನ್ನೂ ಕೊಡಲೇ ಇಲ್ಲ.

೨೯. ಎಲ್ಲಾ ಪಾಪಗಳನ್ನೂ ನಾಶಮಾಡುವ ಲೋಕಪಾಲಕನಾದ ವಿಷ್ಣುವನ್ನು ಪೂಜಿಸಲೇ ಇಲ್ಲ ಈರೀತಿಯಾಗಿ ಅವರ ಹಣವು ಸ್ವಲ್ಪಕಾಲದಲ್ಲಿಯೇ ನಾಶವಾಗಿ ಹೋಯಿತು.

೩೦. ಹಣವೆಲ್ಲವೂ ನಾಶವಾಗುತ್ತಲೂ ಕೊನೆಗೆ ಬಹುದುಃಖಕ್ಕೆ ಗುರಿಯಾದರು. ಕೃಪಣತನವು ಹೆಚ್ಚಿತು. ನೋಡಿದವರಿಗೂ ದುಃಖಕರರಾದರು. ಹಸಿವು ಬಾಯಾರಿಕೆಗಳಿಗೆ ತುತ್ತಾಗಿ ಯಾವಾಗಲೂ ಅಳುತ್ತಲೇ ಇದ್ದರು.

೩೧-೩೨. ಅವರು ಹೀಗೆ ಹಣವನ್ನು ಕಳೆದುಕೊಂಡು ಮನೆಯಲ್ಲಿರಲು ತಿನ್ನುವುದಕ್ಕೆ ಗತಿಯಿಲ್ಲದೆ ಹೋಯಿತು. ಹಾಗಾಗಲು ಸ್ವಜನರು, ಬಂಧುಗಳು, ಸೇವಕರು ಇವರ ಅನುಯಾಯಿಗಳು ಎಲ್ಲರೂ ಇವರನ್ನು ಬಿಟ್ಟುಬಿಟ್ಟರು. ಅನಂತರ ಹಣಕ್ಕೋಸ್ಕರ ಇವರು ಆ ಊರಿನಲ್ಲಿ ಕಳ್ಳತನ ಮಾಡಲು ಮೊದಲಿಟ್ಟರು.

ರಾಜತೋ ಲೋಕತೋ ಭೀತೌ ಸ್ವಪುರಾನ್ನಿರ್ಗತೌ ತದಾ ।
ಚಕ್ರತುರ್ವನವಾಸಂ ತೌ ಸರೋಷೌ ಪಾಣಿಪೀಡಿತೌ ॥ ೩೩ ॥

ಜಘ್ನತುಸ್ಸತತಂ ಮೂಢೌ ಜಾಲೈರ್ಬಾಣೈರ್ವಿಷಾನ್ವಿತೈಃ ।
ನಾನಾಪಕ್ಷಿವರಾಹಾಂಶ್ಚ ಹರಿಣಾನ್ ರೋಹಿತಾನ್ ತದಾ ॥ ೩೪ ॥

ಶಶಕಾನ್ ಶಲ್ಲಕೀಗೋಧಾಃ ಶ್ವಾಪದಾಂಶ್ಚ ತದಾ ಬಹೂನ್ ।
ಮಹಾಬಲೌ ಭಿಲ್ಲಸಂಗಾವಾಖೇಟಕರತೌ ತವಾ ॥ ೩೫ ॥

ಏವಂ ಮಾಂಸಮಯಾಹಾರೌ ಪಾಪಾಚಾರೌ ಪರಂತಪ ।
ಯದಾ ಚ ಭೂಧರಂ ಪ್ರಾಪ್ತ ಏಕೋನ್ಯಶ್ಚ ವನಂ ಗತಃ ॥ ೩೬ ॥

ಶಾರ್ದೂಲೇನ ಹತೋ ಜ್ಯೇಷ್ಠಃ ಕನಿಷ್ಠಸ್ಸರ್ಪದಂಶಿತಃ ।
ಏಕಸ್ಮಿನ್ ದಿವಸೇ ರಾಜನ್ ಪಾಪಿಷ್ಠೌ ನಿಧನಂ ಗತೌ ॥ ೩೭ ॥

---

೩೩. ರಾಜನಿಂದಲೂ ಜನಗಳಿಂದಲೂ ಹೆದರಿದವರಾಗಿ ಊರನ್ನು ಬಿಟ್ಟು ಹೊರಟರು. ತಮ್ಮ ಕೈಯ್ಯಲ್ಲೇನೂ ನಡೆಯದೆ ಹೋದುದರಿಂದ ಅವರು ಬಹು ವ್ಯಥೆಗೊಂಡವರಾಗಿ ಕಾಡಿನಲ್ಲಿ ಯಾರೂ ಕಾಣದಂತೆ ಇರುತ್ತಿದ್ದರು.

೩೪–೩೫. ಹೀಗೆ ಹೊಟ್ಟೆಗಿಲ್ಲದೆ ಹೋಗಲು ಆ ದಡ್ಡರು ಬಲೆಗಳಿಂದಲೂ, ಬಾಣಗಳಿಂದಲೂ, ವಿಷಹಾಕುವುದರಿಂದಲೂ, ಅನೇಕ ಪಕ್ಷಿಗಳನ್ನೂ ಹಂದಿಗಳನ್ನೂ, ಜಿಂಕೆಗಳನ್ನೂ, ಕಡಹಗಳನ್ನೂ, ಮೊಲಗಳನ್ನೂ, ಮುಳ್ಳುಹಂದಿಗಳನ್ನೂ, ಉಡಗಳನ್ನೂ, ಅನೇಕವಾದ ಕಾಡಿನ ದುಷ್ಟಮೃಗಗಳನ್ನೂ ಕೊಲ್ಲುತ್ತ ಬಂದರು, ಬಲಿಷ್ಠರಾದ ಅವರು ಭಿಲ್ಲರ ಸಹವಾಸವನ್ನು ಮಾಡಿಕೊಂಡು ಬೇಟೆಯಲ್ಲಿ ಆಸಕ್ತರಾದರು.

೩೬-೩೭. ಈ ರೀತಿಯಾಗಿ ಅವರಿಬ್ಬರೂ ಮಾಂಸವನ್ನೇ ತಿಂದುಕೊಂಡು ಇರುತ್ತಿದ್ದರು. ಒಂದುಸಾರಿ ಈ ಆಹಾರಕ್ಕೋಸ್ಕರವಾಗಿ ಒಬ್ಬನು ಬೆಟ್ಟಕ್ಕೂ ಮತ್ತೊಬ್ಬನು ಕಾಡಿಗೂ ಹೋಗಿರಲು ದೊಡ್ಡವನನ್ನು ಹುಲಿಯು ಕೊಂದಿತು. ಚಿಕ್ಕವನನ್ನು ಹಾವು ಕಚ್ಚಿತು. ಈ ರೀತಿಯಾಗಿ ಆ ಪಾಪಿಗಳಿಬ್ಬರೂ ಒಂದೇ ದಿನದಲ್ಲಿ ಸತ್ತುಹೋದರು.

ಯಮದೂತೈಸ್ತದಾ ಬದ್ಧ್ವಾ ಪಾಶೈರ್ನೀತೌ ಯಮಕ್ಷಯಂ ।
ಗತ್ವಾ ತು ಜಗದುಃ ಸರ್ವೇ ತೇ ದೂತಾಃ ಪಾಪಿನಾವಿಮೌ ॥ ೩೮ ॥

ಧರ್ಮರಾಜ ನರಾವೇತಾವಾನೀತೌ ತವ ಶಾಸನಾತ್ ।
ಆಜ್ಞಾಂ ದೇಹಿ ಸ್ವಭೃತ್ಯೇಷು ಪ್ರಸೀದ ಕರವಾಮ ಕಿಂ ।
ಆಲೋಚ್ಯ ಚಿತ್ರಗುಪ್ತೇನ ತದಾ ದೂತಾನ್ ಜಗೌ ಯಮಃ ॥ ೩೯ ॥

॥ ಯಮ ಉವಾಚ ॥

ಏಕಸ್ತು ನೀಯತಾಂ ಘೋರೇ ನಿರಯೇ ತೀವ್ರವೇದನೇ ।
ಅಪರಃ ಸ್ಥಾಪ್ಯತಾಂ ಸ್ವರ್ಗೇ ಯತ್ರ ಭೋಗಾ ಅನುತ್ತಮಾಃ ॥ ೪೦ ॥

॥ ದತ್ತಾತ್ರೇಯ ಉವಾಚ ॥

ಕೃತಾಂತಾಜ್ಞಾಂ ತತಃ ಪ್ರಾಪ್ಯ ದೂತೈಶ್ಚ ಕ್ಷಿಪ್ರಕಾರಿಭಿಃ ।
ನಿಕ್ಷಿಪ್ತೋ ರೌರವೇ ಘೋರೇ ತಯೋರ್ಜ್ಯೇಷ್ಠೋ ನರಾಧಿಪ ।
ತೇಷಾಂ ದೂತವರಃ ಕಶ್ಚಿದುವಾಚ ಮಧುರಂ ವಚಃ ॥ ೪೧ ॥

---

೩೮-೩೯. ಆಗ ಯಮದೂತರು ಪಾಶಗಳಿಂದ ಕಟ್ಟಿ ಯಮನ ಪಟ್ಟಣಕ್ಕೆ ತೆಗೆದುಕೊಂಡು ಹೋದರು. ಅಲ್ಲಿಗೆ ಹೋಗಿ ಯಮನ ಎದುರಿಗೆ ನಿಲ್ಲಿಸಿ ಎಲೈ ಧರ್ಮರಾಜನೆ! ನಿನ್ನ ಅಪ್ಪಣೆಯಪ್ರಕಾರ ಈ ಪಾಪಿಗಳಿಬ್ಬರನ್ನೂ ಕರೆದು ತಂದಿದ್ದೇವೆ. ಎಂಬುದಾಗಿ ಆ ದೂತರು ಹೇಳಿದರು. ನಾವು ಏನುಮಾಡ ಬೇಕೆಂಬುದನ್ನು ನಿನ್ನ ಆಳಾದ ನಮಗೆ ಅಪ್ಪಣೆಯನ್ನು ಮಾಡು, ಎಂದು ಹೇಳಿದರು. ಆಗ ಯಮನು ಚಿತ್ರಗುಪ್ತನೊಡನೆ ಯೋಚಿಸಿ ದೂತರನ್ನು ಕುರಿತು ಇಂತೆಂದನು.

೪೦. ಯಮನು ಹೇಳಿದನು–ಒಬ್ಬನನ್ನು ತೀವ್ರವಾದ ಯಾತನೆಯುಳ್ಳ ನರಕಕ್ಕೆ ಕರೆದುಕೊಂಡು ಹೋಗಿರಿ. ಮತ್ತೊಬ್ಬನನ್ನು ಉತ್ತಮವಾದ ಭೋಗಗಳನ್ನು ಅನುಭವಿಸತಕ್ಕ ಸ್ವರ್ಗಕ್ಕೆ ಕರೆದುಕೊಂಡು ಹೋಗಿರಿ. ಎಂದನು.

೪೧. ದತ್ತಾತ್ರೇಯನು ಹೇಳಿದನು–ಶೀಘ್ರವಾಗಿ ಕೆಲಸಮಾಡುವ ಆ ದೂತರು ಯಮನ ಅಪ್ಪಣೆಯಂತೆ ಆ ಇಬ್ಬರಲ್ಲಿ ದೊಡ್ಡವನಾದವನನ್ನು ಘೋರವಾದ ರೌರವನರಕದಲ್ಲಿ ಹಾಕಿದರು. ಅವರಲ್ಲಿ ಒಬ್ಬ ದೂತನು ಒಳ್ಳೆಯ ಮಾತುಗಳಿಂದ ಕಿರಿಯವನನ್ನು ಕುರಿತು ಇಂತೆಂದನು.

|| ಯಮದೂತ ಉವಾಚ ||

ವಿಕುಂಡಲ ಮಯಾ ಸಾರ್ಧಮೇಹಿ ಸ್ವರ್ಗಂ ದದಾಮಿ ತೇ ।
ಭುಂಕ್ಷ್ವ ಭೋಗಾನನೇಕಾಂಸ್ತ್ವಂ ಆರ್ಜಿತಾನ್ ಸ್ವೇನ ಕರ್ಮಣಾ || ೪೨ ||

|| ದತ್ತಾತ್ರೇಯ ಉವಾಚ ||

ತತೋ ಹೃಷ್ಟಮನಸ್ಕೋಽಥ ದೂತಂ ಪ್ರಪಚ್ಛ ತಂ ಪಥಿ ।
ಸಂದೇಹಂ ಹೃದಿ ಕೃತ್ವಾ ತು ವಿಸ್ಮಯಂ ಪರಮಂ ಗತಃ ।
ವಿಚಾರಯನ್ ಹೃದಿ ಸ್ವರ್ಗಃ ಕಸ್ಯ ಹೇತೋಃ ಫಲಂ ಮಮ || ೪೩ ||

|| ವಿಕುಂಡಲ ಉವಾಚ ||

ಭೋ ದೂತವರ ಪೃಚ್ಛಾಮಿ ಸಂಶಯಂ ತ್ವಾಮಹಂ ಪರಂ ।
ಆವಾಂ ಜಾತೌ ಕುಲೇ ತುಲ್ಯೇ ತುಲ್ಯಂ ಕರ್ಮ ತಥಾ ಕೃತಂ || ೪೪ ||

ಮೃತ್ಯುಕಾಲೋಽಪಿ ತುಲ್ಯೋಽಭೂತ್ ತುಲ್ಯಂ ದೃಷ್ಟೋ ಯಮಸ್ತಥಾ ।
ಕಥಂ ಸ ನರಕೇ ಕ್ಷಿಪ್ತಸ್ತುಲ್ಯಕರ್ಮಾ ಮಮಾಗ್ರಜಃ || ೪೫ ||

---

೪೨. ಯಮದೂತನು ಹೇಳಿದನು—ಎಲೈ ವಿಕುಂಡಲನೆ ! ನನ್ನ ಜೊತೆಯಲ್ಲಿ ಬಾ. ನಿನಗೆ ಸ್ವರ್ಗವನ್ನು ಕೊಡುತ್ತೇನೆ. ನಿನ್ನ ಕೆಲಸದಿಂದ ಸಂಪಾದಿಸಿದ ಅನೇಕವಾದ ಭೋಗಗಳನ್ನು ಅಲ್ಲಿ ಅನುಭವಿಸು.

೪೩. ದತ್ತಾತ್ರೇಯನು ಹೇಳಿದನು-ಆಗ ವಿಕುಂಡಲನು ದಾರಿಯಲ್ಲಿ ಹೋಗುತ್ತ ಮನಸ್ಸಿನಲ್ಲಿ ಆಶ್ಚರ್ಯವನ್ನೂ ಸಂದೇಹವನ್ನೂ ಹೊಂದಿ ಯೋಚಿಸುತ್ತ ಆ ದೂತನನ್ನು ಕುರಿತು ಎಲೈ ದೂತನೇ ! ನನಗೆ ಬಂದಿರುವ ಈ ಸ್ವರ್ಗವು ಯಾವುದರಿಂದ ಬಂದಿದೆ ? ಎಂಬುದಾಗಿ ಕೇಳಿದನು.

೪೪-೪೫. ವಿಕುಂಡಲನು ಹೇಳಿದನು-ಎಲೈ ದೂತಶ್ರೇಷ್ಠನೇ ! ನಿನ್ನನ್ನು ಒಂದು ವಿಷಯವನ್ನು ಕೇಳುತ್ತೇನೆ. ನನಗೆ ಬಹುವಾಗಿ ಸಂಶಯವು ಬಂದಿರುವುದು. ನಾವಿಬ್ಬರೂ ಒಂದೇ ಕುಲದಲ್ಲಿ ಹುಟ್ಟಿದೆವು. ಒಂದೇ ಬಗೆಯಾಗಿ ಕೆಲಸಗಳನ್ನು ಮಾಡುತ್ತ ಬಂದೆವು. ಒಂದೇ ಕಾಲದಲ್ಲಿ ಸತ್ತೆವು. ಜೊತೆಯಲ್ಲಿಯೇ ಯಮನನ್ನು ನೋಡಿದೆವು. ಆದರೆ ಅವನಿಗೆ ನರಕವು ಬರಲು ಕಾರಣವೇನು ?

ಮಮ ಭಾವೀ ಕಥಂ ನಾಕ ಇತಿ ಮೇ ಛಿಂಧಿ ಸಂಶಯಂ ।
ದೇವದೂತ ನ ಪಶ್ಯಾಮಿ ಮಮ ಸ್ವರ್ಗಸ್ಯ ಕಾರಣಂ ॥ ೪೬ ॥

॥ ದತ್ತಾತ್ರೇಯ ಉವಾಚ ॥

ಇತಿ ಪೃಷ್ಟೋ ದೇವದೂತೋ ವಿಕುಂಡಲಮುವಾಚ ಹ ॥ ೪೭ ॥

॥ ಯಮದೂತ ಉವಾಚ ॥

ಮಾತಾ ಪಿತಾ ಸುತೋ ಜಾಯಾ ಸ್ವಸಾ ಭ್ರಾತಾ ವಿಕುಂಡಲ ।
ಜನ್ಮಹೇತೋರಿಯಂ ಸಂಜ್ಞಾ ಕೃತಂ ಕರ್ಮೋಪಭುಕ್ತಯೇ ॥ ೪೮ ॥

ಏಕಸ್ಮಿನ್ ಪಾದಪೇ ಯದ್ವಚ್ಛಕುಂತಾನಾಂ ಸಮಾಗಮಃ ।
ಪುತ್ರಭ್ರಾತೃಪಿತೄಣಾಂ ತು ತಥಾ ಭವತಿ ಸಂಗಮಃ ॥ ೪೯ ॥

ತೇಷಾಂ ಯದ್ಯದ್ಧಿ ಯಃ ಕರ್ಮ ಕುರುತೇ ಪೂರ್ವಭಾವತಃ ।
ತಸ್ಯ ತಸ್ಯ ಫಲಂ ಭುಂಕ್ತೇ ಪುರುಷಃ ಕರ್ಮಣಸ್ತದಾ ॥ ೫೦ ॥

---

೪೬. ನನಗೆ ಸ್ವರ್ಗವು ಬರಲು ಕಾರಣವೇನು ? ಎಲೈ ದೇವದೂತನೇ ! ನನಗೆ ಸ್ವರ್ಗವು ಬರುವುದಕ್ಕೆ ಕಾರಣವೇ ಗೊತ್ತಾಗುವುದಿಲ್ಲವಲ್ಲ ! ಈ ಸಂದೇಹವನ್ನು ನಿವಾರಣೆ ಮಾಡುವವನಾಗು.

೪೭. ದತ್ತಾತ್ರೇಯನು ಹೇಳಿದನು-ದೇವದೂತನನ್ನು ಕುರಿತು ಇಂತೆಂದು ಕೇಳಲು ಅವನು ವಿಕುಂಡಲನನ್ನು ಕುರಿತು ಇಂತೆಂದನು.

೪೮. ಯಮದೂತನು ಹೇಳಿದನು-ಎಲೈ ವಿಕುಂಡಲನೇ ! ತಾಯಿ ತಂದೆ, ಮಗ, ಹೆಂಡತಿ, ಅಕ್ಕತಂಗಿಯರು, ಅಣ್ಣತಮ್ಮಂದಿರು ಇವರು ಒಬ್ಬರೂ ನಮಗೆ ಆಗುವುದಿಲ್ಲ. ಇದೆಲ್ಲವೂ ಹುಟ್ಟಿನ ಕಾರಣಕ್ಕೆ ಹೆಸರುಗಳು, ಅಷ್ಟೆ ! ತಾನು ಮಾಡಿದುದನ್ನೇ ತಾನು ಅನುಭವಿಸಬೇಕು

೪೯. ಒಂದು ಮರದಲ್ಲಿ ಹಕ್ಕಿಗಳೆಲ್ಲವೂ ಬಂದು ಹೇಗೆ ಸೇರಿಕೊಳ್ಳುತ್ತವೆಯೋ ಹಾಗೆ ಮಗ, ಸಹೋದರ, ತಾಯಿತಂದೆಗಳು ಎಲ್ಲರೂ ಒಟ್ಟಿಗೆ ಸೇರುತ್ತಾರೆ.

೫೦. ಮನುಷ್ಯನು ಹಿಂದಿನ ಜನ್ಮದಲ್ಲಿ ಯಾವ ಕೆಲಸಗಳನ್ನು ಮಾಡುತ್ತಾನೆಯೋ ಅದರದರ ಫಲವನ್ನು ಅವನವನು ಅನುಭವಿಸುತ್ತಾನೆ.

ಸತ್ಯಂ ವದಾಮಿ ತೇ ಪ್ರೀತ್ಯಾ ನರೈಃ ಕರ್ಮ ಶುಭಾಶುಭಂ ।
ಸ್ವಕೃತಂ ಭುಜ್ಯತೇ ವೈಶ್ಯ ಪ್ರಾಪ್ತೇ ಕಾಲೇ ಪುನಃ ಪುನಃ ॥ ೫೧ ॥

ಏಕಃ ಕರೋತಿ ಕರ್ಮಾಣಿ ಏಕಸ್ತತ್ಫಲಮಶ್ನುತೇ ।
ಅನ್ಯೋ ನ ಲಿಪ್ಯತೇ ವೈಶ್ಯ ಕರ್ಮಣಾನ್ಯಸ್ಯ ಕಸ್ಯ ಚಿತ್ ॥ ೫೨ ॥

ಅತಸ್ತು ನರಕಂ ಪಾಪೈಸ್ತವ ಭ್ರಾತಾ ಸುದಾರುಣಂ ।
ತ್ವಂ ಚ ಧರ್ಮೇಣ ಧರ್ಮಾತ್ಮನ್ ಸ್ವರ್ಗಂ ಪ್ರಾಪ್ನೋಸಿ ಶಾಶ್ವತಂ ॥ ೫೩ ॥

॥ ವಿಕುಂಡಲ ಉವಾಚ ॥

ಆಬಾಲ್ಯಾನ್ಮಮ ಪಾಪೇಷು ಸತತಂ ರಮತೇ ಮನಃ ।
ಅಸ್ಮಿನ್ ಜನ್ಮನಿ ಹೇ ದೂತ ದುಷ್ಕೃತಂ ಹಿ ಕೃತಂ ಮಯಾ ॥ ೫೪ ॥

---

೫೧. ಎಲೈ ವೈಶ್ಯನೇ ! ನಿನಗೆ ಸತ್ಯವಾಗಿ ಹೇಳುತ್ತೇನೆ. ಮನುಷ್ಯನು ಪೂರ್ವಜನ್ಮದಲ್ಲಿ ಮಾಡಿದ ಒಳ್ಳೆಯದನ್ನಾಗಲೀ ಕೆಟ್ಟದ್ದನ್ನಾಗಲೀ ಆಯಾ ಕಾಲದಲ್ಲಿ ಅವನವನು ಅನುಭವಿಸುತ್ತಾನೆ.

೫೨. ಒಳ್ಳೆಯ ಕೆಟ್ಟ ಕೆಲಸವನ್ನು ಮಾಡುವಾಗ ತಾನೊಬ್ಬನೇ ಮಾಡುವನು. ಒಬ್ಬನೇ ಅದನ್ನು ಅನುಭವಿಸುವನು. ಒಬ್ಬನ ಕರ್ಮದಿಂದ ಮತ್ತೊಬ್ಬನು ಖಂಡಿತವಾಗಿಯೂ ಸಂಬಂಧಪಡುವುದಿಲ್ಲ.

೫೩. ಆದ್ದರಿಂದಲೇ ಅವನ ಪಾಪದಿಂದ ಆ ನಿನ್ನ ಸಹೋದರನು ನರಕಕ್ಕೆ ಹೋದನು. ನೀನು ಧರ್ಮದಿಂದ ಶಾಶ್ವತವಾದ ಸ್ವರ್ಗವನ್ನು ಹೊಂದಿದ್ದೀಯೆ.

೫೪-೫೫. ವಿಕುಂಡಲನು ಹೇಳಿದನು-ನನ್ನ ಮನಸ್ಸು ಚಿಕ್ಕಂದಿನಿಂದಲೂ ಪಾಪಕೆಲಸದಲ್ಲಿಯೇ ಆಸಕ್ತವಾಗಿದ್ದಿತು. ನಾನು ಈ ಜನ್ಮದಲ್ಲಿ ಪೂರ್ತಿಯಾಗಿ ಪಾಪಗಳನ್ನೇ ಮಾಡಿದ್ದೇನೆ. ಎಲೈ ದೇವದೂತನೇ ! ನಾನು ಈ ಜನ್ಮದಲ್ಲಿ

ದೇವದೂತ ನ ಜಾನಾಮಿ ಸುಕೃತಂ ಕರ್ಮ ಚಾತ್ಮನಃ ।
ಯದಿ ಜಾನಾಸಿ ತತ್ಪುಣ್ಯಂ ತನ್ಮಮಾಚಕ್ಷ್ವ ಪೃಚ್ಛತಃ ॥ ೩೫ ॥

॥ ದೇವದೂತ ಉವಾಚ ॥

ಶೃಣು ವೈಶ್ಯ ಪ್ರವಕ್ಷ್ಯಾಮಿ ಯತ್ತ್ವಯಾ ಪುಣ್ಯಮರ್ಜಿತಂ ।
ಜಾನಾಮಿ ತದಹಂ ಸರ್ವಂ ನ ತ್ವಂ ವೇತ್ಸಿ ಸುನಿಶ್ಚಿತಂ ॥ ೩೬ ॥

ಹರಿಮಿತ್ರಸುತೋ ಮಿತ್ರಃ ಸುಮಿತ್ರೋ ವೇದಪಾರಗಃ ।
ಆಸೀತ್ತಸ್ಯಾಶ್ರಮಃ ಪುಣ್ಯೋ ಯಮುನಾದಕ್ಷಿಣೇ ತಟೇ ॥ ೩೭ ॥

ತೇನ ಸಖ್ಯಂ ವನೇ ತಸ್ಮಿನ್ ತವ ಜಾತಂ ವಿಶಾಂ ವರ ।
ತತ್ಸಂಗೇನ ತ್ವಯಾ ಸ್ನಾತಂ ಮಾಘಮಾಸದ್ವಯಂ ತಥಾ ॥ ೩೮ ॥

ಕಾಳಿಂದೀಪುಣ್ಯಪಾನೀಯೇ ಸರ್ವಪಾಪಹರೇ ವರೇ ।
ತತ್ತೀರ್ಥೇ ಲೋಕವಿಖ್ಯಾತೇ ನಾಮ್ನಾ ಪಾಪಪ್ರಣಾಶನೇ ॥ ೩೯ ॥

---

ಸ್ವಲ್ಪವಾದರೂ ಸುಕೃತವನ್ನು ಮಾಡಿದ ಜ್ಞಾಪಕವೇ ಇಲ್ಲವು. ನಾನು ಮಾಡಿದ ಆ ಪುಣ್ಯವು ನಿನಗೇನಾದರೂ ತಿಳಿದಿದ್ದರೆ ಅದನ್ನು ನನಗೆ ಹೇಳು.

೩೬. ದೇವದೂತನು ಹೇಳಿದನು-ಎಲೈ ವೈಶ್ಯನೇ ! ನೀನು ಸಂಪಾದಿಸಿರುವ ಪುಣ್ಯವನ್ನು ಹೇಳುತ್ತೇನೆ ಕೇಳು. ಅದನ್ನು ನಾನು ತಿಳಿದಿದ್ದೇನೆ. ನಿನಗೆ ನಿಶ್ಚಯವಾಗಿಯೂ ತಿಳಿಯದು.

೩೭. ಹರಿಮಿತ್ರನಿಗೆ ಮಗನಾದ ಸುಮಿತ್ರನೆಂಬ ಒಬ್ಬ ಋಷಿಯಿದ್ದಾನೆ. ಅವನು ವೇದಪಾರಗನು. ಅವನ ಆಶ್ರಮವು ಯಮುನೆಯ ದಕ್ಷಿಣದ ದಡದಲ್ಲಿ ಇರುವುದು.

೩೮-೩೯. ಆ ಕಾಡಿನಲ್ಲಿ ಅವನೊಡನೆ ನಿನಗೆ ಸ್ನೇಹವುಂಟಾಯಿತು. ಅವನ ಸ್ನೇಹದಿಂದ ನೀನು ಸಕಲಪಾಪಹಾರಕವಾದ ಕಾಂಳಿದಿಯ ನೀರಿನಲ್ಲಿ ಪಾಪಪ್ರಣಾಶಕವೆಂಬ ಪ್ರಸಿದ್ಧವಾದ ಜಾಗದಲ್ಲಿ ಎರಡು ಮಾಘಮಾಸಗಳಲ್ಲಿ ಸ್ನಾನಮಾಡಿದ್ದೀಯೆ.

ಏಕೇನ ಸರ್ವಪಾಪೇಭ್ಯೋ ವಿಮುಕ್ತಸ್ತ್ವಂ ವಿಶಾಂ ವರ ।
ದ್ವಿತೀಯಮಾಘಪುಣ್ಯೇನ ಸ್ವರ್ಗಪ್ರಾಪ್ತಿಸ್ತವಾನಘ ॥ ೬೦ ॥

ತ್ವಂ ತತ್ಪುಣ್ಯಪ್ರಭಾವೇನ ಮೋದಸ್ವ ಸತತಂ ದಿವಿ ।
ನರಕೇಷು ತವ ಭ್ರಾತಾ ಸಹತಾಂ ಯಮಯಾತನಾಂ ॥ ೬೧ ॥

ಛಿದ್ಯಮಾನೋಽಸಿಪತ್ರೈಶ್ಚ ಭಿದ್ಯಮಾನಶ್ಚ ಮುದ್ಗರೈಃ ॥
ಚೂರ್ಣ್ಯಮಾನಃ ಶಿಲಾಪೃಷ್ಠೇ ತಪ್ತಾಂಗಾರೇಷು ಭರ್ಜಿತಃ ॥ ೬೨ ॥

॥ ಶ್ರೀ ದತ್ತಾತ್ರೇಯ ಉವಾಚ ॥

ಇತಿ ದೂತವಚಃ ಶ್ರುತ್ವಾ ಭ್ರಾತೃದುಃಖೇನ ದುಃಖಿತಃ ।
ಪುಲಕಾಂಕಿತಸರ್ವಾಂಗೋ ದೀನೋಽಸೌ ವಿನಯಾನ್ವಿತಃ ॥
ಉವಾಚ ದೇವದೂತಂ ತಂ ಸಾಂತ್ವಯನ್ನಿಪುಣಂ ವಚಃ ॥ ೬೩ ॥

---

೬೦. ಒಂದು ಮಾಘಸ್ನಾನದಿಂದ ನೀನು ಪಾಪಗಳೆಲ್ಲವನ್ನೂ ಕಳೆದುಕೊಂಡೆ. ಎರಡನೆಯ ಮಾಘಪುಣ್ಯದಿಂದ ನಿನಗೆ ಸ್ವರ್ಗಪ್ರಾಪ್ತಿಯುಂಟಾಯಿತು.

೬೧. ಆ ಪುಣ್ಯದ ಪ್ರಭಾವದಿಂದ ನೀನು ಸ್ವರ್ಗದಲ್ಲಿ ಯಾವಾಗಲೂ ಸುಖಿಸು. ನಿನ್ನ ಸಹೋದರನು ನರಕದಲ್ಲಿ ಯಮಯಾತನೆಯನ್ನು ಸಹಿಸಿಕೊಂಡಿರಲಿ.

೬೨. ಅಸಿಪತ್ರಗಳೆಂಬ ಕತ್ತಿಗಳಂತಿರುವ ಎಲೆಗಳಿಂದ ಕತ್ತರಿಸಲ್ಪಡುತ್ತಲೂ ಮುದ್ಗರಗಳಿಂದ ಹೊಡೆಯಲ್ಪಡುತ್ತಲೂ ಬಂಡೆಗಳಮೇಲೆ ಚೂರು ಚೂರುಮಾಡಲ್ಪಡುತ್ತಲೂ, ಕಾಯುತ್ತಿರುವ ಕೆಂಡಗಳಮೇಲೆ ಹುರಿಯಲ್ಪಡುತ್ತಲೂ ಯಾತನೆಯನ್ನು ಅನುಭವಿಸಲಿ.

೬೩. ದತ್ತಾತ್ರೇಯನು ಹೇಳಿದನು–ದೂತನು ಹೀಗೆ ಹೇಳಿದುದನ್ನು ಕೇಳಿ ಆ ಸಹೋದರನು ಪಡುವ ದುಃಖದಿಂದ ದುಃಖಗೊಂಡವನಾಗಿ ಮೈಬೆವತು ದೀನತನದಿಂದಲೂ ವಿನಯದಿಂದಲೂ ಆ ದೇವದೂತನಿಗೆ ಒಳ್ಳೆಯ ಮಾತಿನಿಂದ ಇಂತೆಂದನು.

॥ ವಿಕುಂಡಲ ಉವಾಚ ॥

ಮೈತ್ರೀಸಾಪ್ತಪದೀ ಸಾಧೋ ಸತಾಂ ಭವತಿ ಸತ್ಫಲಾ ।
ಮಿತ್ರಭಾವಂ ವಿಚಿಂತ್ಯ ತ್ವಂ ಮಾಮುಪಾಕರ್ತುಮರ್ಹಸಿ ॥ ೬೪ ॥

ತ್ವತ್ತೋಹಂ ಶ್ರೋತುಮಿಚ್ಛಾಮಿ ಸರ್ವಜ್ಞಸ್ತ್ವಂ ಮತೋ ಮಮ ।
ಯಮಲೋಕಂ ನ ಪಶ್ಯಂತಿ ಕರ್ಮಣಾ ಯೇನ ಮಾನವಾಃ ॥
ಗಚ್ಛಂತಿ ನಿರಯಂ ಯೇನ ತನ್ಮೇ ತ್ವಂ ಕೃಪಯಾ ವದ ॥ ೬೫ ॥

॥ ಯಮದೂತ ಉವಾಚ ॥

ಸಮ್ಯಕ್ ಪೃಷ್ಟಂ ತ್ವಯಾ ವೈಶ್ಯ ಲುಪ್ತಪಾಪೋಸಿ ಸಾಂಪ್ರತಂ ।
ವಿಶುದ್ಧೇ ಹೃದಯೇ ಪುಂಸಾಂ ಬುದ್ಧಿಃ ಶ್ರೇಯಸಿ ಜಾಯತೇ ॥ ೬೬ ॥

ಯದ್ಯಪ್ಯವಸರೋ ನಾಸ್ತಿ ಮಮ ಸೇವಾಪರಸ್ಯ ಚ ।
ತಥಾಪಿ ಚ ತವಸ್ನೇಹಾತ್ ಪ್ರವಕ್ಷ್ಯಾಮಿ ಯಥಾಮತಿ ॥ ೬೭ ॥

---

೬೪. ವಿಕುಂಡಲನು ಹೇಳಿದನು-ಎಲೈ ಸಾಧುವೇ! ಏಳು ಹೆಜ್ಜೆಗಳಿಂದಾಗಲಿ, ಏಳುಮಾತುಗಳಿಂದಾಗಲಿ, ಸತ್ಪುರುಷರು ಸ್ನೇಹಿತರಾಗುತ್ತಾರೆ ಅದು ಒಳ್ಳೆಯ ಫಲವನ್ನು ಕೊಡುತ್ತದೆ. ನೀನು ಈ ಮಿತ್ರಭಾವವನ್ನು ಯೋಚಿಸಿ ನನಗೆ ಉಪಕಾರವನ್ನು ಮಾಡು.

೬೫. ನೀನು ಸರ್ವಜ್ಞನು ಎಂದು ನನಗೆ ಕಾಣುತ್ತದೆ. ಆದ್ದರಿಂದ ನಿನ್ನಿಂದ ಕೆಲವು ವಿಷಯಗಳನ್ನು ಕೇಳಬೇಕೆಂದಿದ್ದೇನೆ. ಯಾವ ಕೆಲಸವನ್ನು ಮಾಡಿದರೆ ಮನುಷ್ಯರು ಯಮಲೋಕವನ್ನು ನೋಡುವುದಿಲ್ಲ? ಯಾವುದನ್ನು ಆಚರಿಸಿದರೆ ನರಕವು ಬರುತ್ತದೆ? ಅದನ್ನು ಕೃಪೆಯಿಟ್ಟು ಹೇಳು.

೬೬. ಯಮದೂತನು ಹೇಳಿದನು–ಎಲೈ ವೈಶ್ಯನೇ! ನೀನು ಕೇಳಿದುದು ಸರಿ. ಈಗ ನಿನ್ನ ಪಾಪವೆಲ್ಲವೂ ಹೋದುವು. ಜನರಿಗೆ ಹೃದಯವು ಶುದ್ಧವಾದ ಮೇಲೆ ಶ್ರೇಯಸ್ಸನ್ನು ಹೊಂದಲು ಬುದ್ಧಿಯು ಹುಟ್ಟುತ್ತದೆ.

೬೭. ಎಲೈ ವಿಕುಂಡಲನೇ! ನಾನಾದರೋ ಇತರರ ಸೇವಕನು. ಹೇಳಿದಷ್ಟು ಕೆಲಸವನ್ನು ಮಾಡಬೇಕೇ ಹೊರತು ಹೆಚ್ಚಿನ ಕೆಲಸ ನನ್ನದಾಗಿಲ್ಲ. ಆದರೂ ಕೂಡ ನಿನ್ನಲ್ಲಿರುವ ಸ್ನೇಹದಿಂದ ತಿಳಿದಮಟ್ಟಿಗೆ ಹೇಳುತ್ತೇನೆ.

ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ।
ಪರಪೀಡಾಂ ನ ಕುರ್ವಂತಿ ನ ತೇ ಯಾಂತಿ ಯಮಾಲಯಂ ॥ ೬೮ ॥

ನ ವೇದೈರ್ನ ಚ ದಾನೈಶ್ಚ ನ ತಪೋಭಿರ್ನ ಚಾಧ್ವರೈಃ ।
ಕದಾಚಿತ್ಸದ್ಗತಿಂ ಯಾಂತಿ ಪುರುಷಾಃ ಪ್ರಾಣಿಹಿಂಸಕಾಃ ॥ ೬೯ ॥

ಅಹಿಂಸಾ ಪರಮೋ ಧರ್ಮಃ ತ್ವಹಿಂಸಾ ಪರಮಂ ತಪಃ ।
ಅಹಿಂಸಾ ಪರಮಂ ದಾನಮಿತ್ಯೂಚುರ್ಮುನಯಸ್ಸದಾ ॥ ೭೦ ॥

ಮಶಕಾನ್ ಮತ್ಕುಣಾನ್ ದಂಶಾನ್ ಯೂಕಾದಿಪ್ರಾಣಿನಃ ಸದಾ ।
ಆತ್ಮೌಪಮ್ಯೇನ ರಕ್ಷಂತಿ ಮಾನವಾ ಯೇ ದಯಾಲವಃ ॥ ೭೧ ॥

ತಪ್ತಾಂಗಾರಮಯಂ ಕೀಲಮಾರ್ಗಂ ಪ್ರೇತತರಂಗಿಣೀಂ ।
ದುರ್ಗತಿಂ ನೈವ ಯಾಸ್ಯಂತಿ ಕೃತಾಂತಸ್ಯ ಚ ತೇ ನರಾಃ ॥ ೭೨ ॥

---

೬೮. ಮನಸ್ಸು, ಕೆಲಸ, ಮಾತುಗಳಿಂದ ಒಂದುಸಾರಿಯೂ ಕೂಡ ಪರರಿಗೆ ಹಿಂಸೆಯನ್ನು ಮಾಡದವರು ಯಮನ ಮನೆಗೆ ಹೋಗುವುದಿಲ್ಲ.

೬೯. ಪ್ರಾಣಿಹಿಂಸೆ ಮಾಡತಕ್ಕವರು ವೇದವೋದುವುದರಿಂದಾಗಲಿ, ದಾನಮಾಡುವುದರಿಂದಾಗಲಿ, ತಪಸ್ಸಿನಿಂದಾಗಲಿ, ಯಾಗಗಳಿಂದಾಗಲಿ, ಸ್ವರ್ಗವನ್ನು ಹೊಂದಲಾರರು.

೭೦. ಅಹಿಂಸೆಯೇ ಬಹು ಉತ್ತಮವಾದ ಧರ್ಮವು. ಅಹಿಂಸೆಯೇ ಬಹು ಉತ್ತಮವಾದ ತಪಸ್ಸು. ಅಹಿಂಸೆಯೇ ಉತ್ತಮವಾದ ದಾನವು. ಎಂಬುದಾಗಿ ಮುನಿಗಳು ಯಾವಾಗಲೂ ಹೇಳುತ್ತಿರುವರು.

೭೧. ದಯಾವಂತರಾದ ಮನುಷ್ಯರು ನೊಣವನ್ನಾಗಲಿ, ತಿಗಣೆಯನ್ನಾಗಲಿ, ಸೊಳ್ಳೆಯನ್ನಾಗಲೀ, ಹೇನು, ಸೀರುಗಳನ್ನಾಗಲಿ, ಸಣ್ಣಪ್ರಾಣಿಗಳೆಂದು ಉದಾಸೀನ ಮಾಡದೆ ತಮಗೆ ಸಮವಾಗಿ ನೋಡಿಕೊಳ್ಳುತ್ತಾರೆ.

೭೨. ಈ ರೀತಿಯಾದ ಪ್ರಾಣಿಹಿಂಸಕರಲ್ಲದ ಮನುಷ್ಯರು ಯಮಲೋಕದ ತಪಿಸುತ್ತಿರುವ ಕೆಂಡವುಳ್ಳ ನರಕವನ್ನಾಗಲಿ, ಮುಳ್ಳುಳ್ಳ ಮಾರ್ಗವನ್ನಾಗಲಿ, ಯಮಲೋಕದ ವೈತರಣಿನದಿಯನ್ನಾಗಲಿ, ನೋಡುವುದೇ ಇಲ್ಲ.

ಭೂತಾನಿ ಯೇತ್ರ ಹಿಂಸಂತಿ ಜಲಸ್ಥಳಚರಾಣಿ ಚ ।
ಜೀವನಾರ್ಥಂ ನರಾ ಯಾನ್ತಿ ಕಾಲಸೂತ್ರಂ ಚ ದುರ್ಗತಿಂ ॥ ೭೩ ॥

ಸ್ವಮಾಂಸಭೋಜನಾಸ್ತತ್ರ ಪೂಯಶೋಣಿತಫೇನಪಾಃ ।
ಮಜ್ಜನ್ತಶ್ಚ ವಸಾಪಂಕೇ ದಷ್ಟಾಃ ಕೀಟೈರಯೋಮುಖೈಃ ॥ ೭೪ ॥

ಪರಸ್ಪರಂ ಚ ಖಾದಂತೋ ಧ್ವಾನ್ತೇ ಚಾನ್ಯೋನ್ಯಘಾತಿನಃ ।
ವಸಂತಿ ಕಲ್ಪಮೇಕಾಂತೇ ರುದಂತೋ ದಾರುಣಸ್ವರಂ ॥ ೭೫ ॥

ನರಕಾನ್ನಿರ್ಗತಾ ವೈಶ್ಯ ಸ್ಥಾವರಾಃ ಸ್ಯುಶ್ಚಿರಂ ತು ತೇ ।
ತತೋ ಗಚ್ಛಂತಿ ತೇ ಕ್ರೂರಾಸ್ತಿರ್ಯಗ್ಯೋನಿಶತೇಷು ಚ ॥ ೭೬ ॥

ಪಶ್ಚಾದ್ಭವಂತಿ ಜಾತ್ಯಂಧಾಃ ಕಾಣಾಃ ಕುಬ್ಜಾಶ್ಚ ಪಂಗವಃ ।
ದರಿದ್ರಾ ಅಂಗಹೀನಾಶ್ಚ ಮನುಷ್ಯಾಃ ಪ್ರಾಣಿಹಿಂಸಕಾಃ ॥ ೭೭ ॥

---

೭೩. ಯಾವ ಮನುಷ್ಯರು ಜೀವನಕ್ಕೋಸ್ಕರ ನೀರಿನಮೇಲಿರುವ ಅಥವಾ ನೆಲದಮೇಲಿರುವ ಪ್ರಾಣಿಗಳನ್ನು ಹಿಂಸಿಸುತ್ತಾರೆಯೋ ಅವರು ಕಾಲಸೂತ್ರವೆಂಬ ನರಕವನ್ನು ಹೊಂದುತ್ತಾರೆ.

೭೪-೭೫. ಅಂತಹ ಪ್ರಾಣಿಹಿಂಸಕರು ತಮ್ಮ ತಮ್ಮ ಮಾಂಸವನ್ನೇ ತಿನ್ನುತ್ತಾ ಕೀವು ರಕ್ತಗಳನ್ನೂ ಕುಡಿಯುತ್ತಾ ಕೊಬ್ಬಿನ ಕೆಸರಿನಲ್ಲಿ ಮುಳುಗುತ್ತಾ ಕಬ್ಬಿಣದ ಮುಖವುಳ್ಳ ಕೀಟಗಳಿಂದ ಕಚ್ಚಿಸಿಕೊಳ್ಳುತ್ತಾ ಕತ್ತಲೆಯಲ್ಲಿ ಒಬ್ಬರನ್ನೊಬ್ಬರು ತಿಂದುಕೊಳ್ಳುತ್ತಾ ಆ ಧ್ವಾಂತವೆಂಬ ನರಕದಲ್ಲಿ ವಾಸಿಸುತ್ತಾರೆ.

೭೬. ನರಕದಿಂದ ಬಂದಮೇಲೆ ಸ್ಥಾವರ (ಮರ)ಗಳಾಗಿ ಹುಟ್ಟುತ್ತಾರೆ. ಹಾಗೆ ಬಹುಕಾಲದವರೆವಿಗೂ ಇರುತ್ತಾರೆ. ಅನಂತರ ಕೀಳುಜಾತಿಯ ಪ್ರಾಣಿಗಳಾಗಿ ಅನೇಕ ಜನ್ಮಗಳನ್ನು ಹೊಂದುತ್ತಾರೆ.

೭೭. ಅನಂತರ ಅವರು ಹುಟ್ಟು ಕುರುಡರಾಗಿ ಹುಟ್ಟುತ್ತಾರೆ ಇಲ್ಲವೇ ಹುಟ್ಟಿದನಂತರ ಕಣ್ಣು ಹೋಗುತ್ತದೆ. ಕುಳ್ಳರಾಗಿಯಾಗಲಿ, ಕುಂಟರಾಗಿಯಾಗಲಿ ಹುಟ್ಟುತ್ತಾರೆ. ದರಿದ್ರರಾಗಿಯೂ ಅಂಗಹೀನರಾಗಿಯೂ ಆಗಿರುತ್ತಾರೆ.

ತಸ್ಮಾದ್ವೈಶ್ಯ ಪರದ್ರೋಹಂ ಕರ್ಮಣಾ ಮನಸಾ ಗಿರಾ ।
ಲೋಕದ್ವಯಹಿತೇಚ್ಛುರ್ಯೋ ಧರ್ಮತೋ ವೈ ಸ ನಾಚರೇತ್ ॥ ೭೮ ॥

ಲೋಕದ್ವಯೇ ನ ವಿಂದಂತಿ ಸುಖಾನಿ ಪ್ರಾಣಿಹಿಂಸಕಾಃ ।
ಯೇ ನ ಹಿಂಸಂತಿ ಭೂತಾನಿ ತೇ ನ ಬಿಭ್ಯತಿ ಕುತ್ರಚಿತ್ ॥ ೭೯ ॥

ಪ್ರವಿಶಂತಿ ಯಥಾ ನದ್ಯಃ ಸಮುದ್ರಮೃಜುವಕ್ರಗಾಃ ।
ಸರ್ವೇಽಧರ್ಮಾಶ್ಚ ಹಿಂಸಾಯಾಂ ಪ್ರವಿಶಂತಿ ತಥಾ ದೃಢಂ ॥ ೮೦ ॥

ಸ ಸ್ನಾತಸ್ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಅಭಯಂ ಸರ್ವಭೂತೇಭ್ಯೋ ದತ್ತಂ ಯೇನ ವಿಶಾಂ ವರ ॥ ೮೧ ॥

---

೭೮. ಎಲೈ ವೈಶ್ಯನೇ ! ಆದುದರಿಂದ ಎರಡು ಲೋಕಗಳಲ್ಲಿಯೂ ಹಿತವನ್ನು ಅಪೇಕ್ಷಿಸುವವನು. ಧರ್ಮಾಕಾಂಕ್ಷಿಯಾಗಿ ಪರದ್ರೋಹವನ್ನು ಕಾಯಾ ವಾಚಾ ಮನಸಾ ಮಾಡಬಾರದು.

೭೯. ಪ್ರಾಣಿಗಳನ್ನು ಹಿಂಸಿಸುವವರು. ಇಹಲೋಕ ಪರಲೋಕಗಳಲ್ಲಿ ಸುಖವನ್ನು ಹೊಂದುವುದೇ ಇಲ್ಲ. ಯಾರು ಪ್ರಾಣಿಗಳನ್ನು ಹಿಂಸಿಸುವುದಿಲ್ಲವೋ ಅವರು ಎಲ್ಲಿಯೂ ಯಾವುದಕ್ಕೂ ಹೆದರಬೇಕಾದುದೇ ಇಲ್ಲ.

೮೦. ನೇರವಾಗಿ ಹರಿಯತಕ್ಕ ನದಿಗಳೇ ಆಗಲೀ ಡೊಂಕು ಡೊಂಕಾಗಿ ಹರಿಯುವ ನದಿಗಳೇ ಆಗಲಿ ಸಮುದ್ರವನ್ನು ಸೇರುವಂತೆ ಎಲ್ಲಾ ಅಧರ್ಮಗಳೂ ಕೂಡ ಹಿಂಸೆಯಲ್ಲಿಯೇ ಖಂಡಿತವಾಗಿಯೂ ಸೇರಿಹೋಗುತ್ತವೆ.

೮೧. ಎಲೈ ವೈಶ್ಯನೇ ! ಯಾವನು ಎಲ್ಲಾ ಪ್ರಾಣಿಗಳಿಗೂ ಅಭಯವನ್ನು ಕೊಡುತ್ತಾನೆಯೋ ಅವನೇ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವನ್ನು ಹೊಂದತಕ್ಕವನು. ಅವನೇ ಎಲ್ಲಾ ಯಜ್ಞವನ್ನೂ ಮಾಡಿದವನು.

ಧರ್ಮಾನ್ನಿಜಾಂಶ್ಚ ಶಾಸ್ತ್ರೋಕ್ತಾನ್ ವರ್ಣಧರ್ಮಾನುಮಿಶ್ರಿತಾನ್ ।
ಪಾಲಿಯಂತೀಹ ಯೇ ವೈಶ್ಯ ನ ತೇ ಯಾಂತಿ ಯಮಾಲಯಂ ॥ ೮೨ ॥

ಬ್ರಹ್ಮಚಾರೀ ಗೃಹಸ್ಥೋಪಿ ವಾನಪ್ರಸ್ಥೋ ಯತಿಸ್ತಥಾ ।
ಸ್ವಧರ್ಮನಿರತಾಸ್ಸರ್ವೇ ನಾಕಪೃಷ್ಠೇ ವಸಂತಿ ತೇ ॥ ೮೩ ॥

ಯಥೋಕ್ತಕಾರಿಣಸ್ಸರ್ವೇ ವರ್ಣಾಶ್ರಮಸಮನ್ವಿತಾಃ ।
ನರಾ ಜಿತೇಂದ್ರಿಯಾ ಯಾಂತಿ ಬ್ರಹ್ಮಲೋಕಂ ಸನಾತನಂ ॥ ೮೪ ॥

ಇಷ್ಟಾಪೂರ್ತರತಾ ಯೇ ಚ ಪಂಚಯಜ್ಞರತಾಶ್ಚ ಯೇ ।
ದಯಾನ್ವಿತಾಶ್ಚ ಯೇ ನಿತ್ಯಂ ತೇ ನೇಕ್ಷಂತೇ ಯಮಾಲಯಂ ॥ ೮೫ ॥

ಇಂದ್ರಿಯಾರ್ಥಾನ್ನಿವೃತ್ತಾ ಯೇ ಸಮರ್ಥಾ ವೇದವಾದಿನಃ ।
ಅಗ್ನಿಪೂಜಾರತಾ ನಿತ್ಯಂ ತೇ ವಿಪ್ರಾಃ ಸ್ವರ್ಗಗಾಮಿನಃ ॥ ೮೬ ॥

---

೮೨. ವರ್ಣಧರ್ಮ ಆಶ್ರಮ ಧರ್ಮಗಳೊಡನೆ ಕೂಡಿರುವ ಸರಿಯಾದ ಧರ್ಮವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಯಾವನು ಪಾಲಿಸುತ್ತಾನೆಯೋ ಅವನು ಯಮನ ಮನೆಗೆ ಹೋಗುವುದಿಲ್ಲ.

೮೩. ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ, ಯತಿಯಾಗಲಿ ಯಾರೇ ಆಗಲಿ ತಮ್ಮ ತಮ್ಮ ಧರ್ಮದಲ್ಲಿ ಆಸಕ್ತರಾಗಿದ್ದರೆ ಅವರು ಸ್ವರ್ಗದಲ್ಲಿ ವಾಸಿಸುತ್ತಾರೆ.

೮೪. ಜನರು ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ಅನುಸರಿಸಿ ಕೊಂಡು ಜಿತೇಂದ್ರಿಯರಾಗಿದ್ದರೆ ಬ್ರಹ್ಮಲೋಕವನ್ನು ಹೊಂದುತ್ತಾರೆ.

೮೫. ಪರರಿಗೆ ಹಿತವನ್ನು ಮಾಡುತ್ತ ಅವರನ್ನು ಸಂತೋಷಪಡಿಸುತ್ತ ಬ್ರಹ್ಮಯಜ್ಞಾದಿ ಪಂಚಯಜ್ಞಗಳನ್ನು ಮಾಡಿಕೊಂಡು ದಯಾವಂತರಾಗಿರುವವರು ಯಮನ ಮನೆಯನ್ನು ನೋಡುವುದಿಲ್ಲ.

೮೬. ಇಂದ್ರಿಯಗಳಿಗೆ ಅಧೀನರಾಗದೆ ಅವನ್ನು ನಿಗ್ರಹಿಸಿಕೊಂಡು ವೇದದಲ್ಲಿ ಹೇಳಿರುವಂತೆ ನಡೆಯುತ್ತಾ ಅಗ್ನಿಯನ್ನು ಪೂಜಿಸಿಕೊಂಡು (ಔಪಾಸನಾದಿಗಳನ್ನು ಮಾಡಿಕೊಂಡು) ಇದ್ದರೆ ಅವರು ಸ್ವರ್ಗವನ್ನು ಹೊಂದುತ್ತಾರೆ.

ಅದೀನವದನಾಶ್ಶೂರಾಃ ಶತ್ರುಭಿಃ ಪರಿವೇಷ್ಟಿತಾಃ ।
ಆಹವೇಷು ವಿಪನ್ನಾ ಯೇ ತೇಷಾಂ ಮಾರ್ಗೋ ದಿವಾಕರಃ ॥ ೮೭ ॥

ಅನಾಥಸ್ತ್ರೀದ್ವಿಜಾರ್ಥೇ ಚ ಶರಣಾಗತಪಾಲನೇ ।
ಪ್ರಾಣಾಂಸ್ತ್ಯಜಂತಿ ಯೇ ವೈಶ್ಯ ನ ತ್ಯಜಂತಿ ದಿವಂ ತು ತೇ ॥ ೮೮ ॥

ಪಂಗ್ವಂಧಬಾಲವೃದ್ಧಾಂಶ್ಚ ರೋಗ್ಯನಾಥದರಿದ್ರಿಣಃ ।
ಯೇ ಪುಷ್ಣಂತಿ ಸದಾ ವೈಶ್ಯ ತೇ ಮೋದಂತೇ ಸದಾ ದಿವಿ ॥ ೮೯ ॥

ಗಾಂ ದೃಷ್ಟ್ವಾ ಪಂಕನಿರ್ಮಗ್ನಾಂ ರೋಗಮಗ್ನಂ ತಥಾ ದ್ವಿಜಂ ।
ಉದ್ಧರಿಷ್ಯಂತಿ ಯೇ ವೈಶ್ಯ ತೇಷಾಂ ಲೋಕೋಶ್ವಮೇಧಿನಾಂ ॥ ೯೦ ॥

ಗೋಗ್ರಾಸಂ ಯೇ ಪ್ರಯಚ್ಛಂತಿ ಶುಶ್ರೂಷಂತಿ ಚ ಯೇ ಸದಾ ।
ಯೇ ನಾರೋಹಂತಿ ಗೋಪೃಷ್ಠೇ ತೇ ಸ್ಯುಃ ಸ್ವರ್ಲೋಕವಾಸಿನಃ ॥ ೯೧ ॥

---

೮೭. ಶತ್ರುಗಳು ಮುತ್ತಿಕೊಂಡಾಗ ಮುಖಭಾವದಿಂದಲೂ ಕೂಡ ದೀನತೆಯನ್ನು ಪ್ರಕಾಶಪಡಿಸದೆ ಯಾರು ಯುದ್ಧದಲ್ಲಿ ಮೃತರಾಗುವರೋ ಅವರು ಸೂರ್ಯನನ್ನು ಭೇದಿಸಿಕೊಂಡು ಸ್ವರ್ಗಕ್ಕೆ ಹೋಗುವರು.

೮೮. ಅನಾಥರು, ಬ್ರಾಹ್ಮಣರು ಶರಣಾಗತರು ಇವರನ್ನು ಕಾಪಾಡುವುದರಲ್ಲಿ ಯಾರು ಪ್ರಾಣವನ್ನಾದರೂ ಬಿಡುತ್ತಾರೆಯೋ ಅವರು ಸ್ವರ್ಗದಿಂದ ಹಿಂತಿರುಗದೆ ಅಲ್ಲಿಯೇ ಇದ್ದುಕೊಂಡು ಸುಖವನ್ನು ಅನುಭವಿಸುತ್ತಾರೆ.

೮೯-೯೦. ಕುಂಟರು, ಕುರುಡರು, ಬಾಲರು, ಮುದುಕರು, ರೋಗಿಗಳು, ಅನಾಥರು, ದರಿದ್ರರು ಇವರನ್ನು ಯಾವಾಗಲೂ ಕಾಪಾಡುವವರು ಸ್ವರ್ಗದಲ್ಲಿಯೇ ವಾಸಿಸುತ್ತಾರೆ. ಕೆಸರಿನಲ್ಲಿ ಹೂತುಕೊಂಡಿರುವ ಗೋವನ್ನೂ ರೋಗದಲ್ಲಿ ಮಲಗಿರುವ ದ್ವಿಜನನ್ನೂ ಯಾರು ಕಾಪಾಡುತ್ತಾರೆಯೋ ಅವರಿಗೆ ಅಶ್ವಮೇಧ ಮಾಡಿದವರು ಹೊಂದುವ ಲೋಕವು ಸಿಕ್ಕುತ್ತದೆ.

೯೧. ಯಾರು ಗೋಗ್ರಾಸವನ್ನು ನಿತ್ಯವೂ ಕೊಡುತ್ತಾರೆಯೋ ಯಾರು ನಿತ್ಯವೂ ಗೋವನ್ನು ಸೇವಿಸುತ್ತಾರೆಯೋ ಯಾರು ಗೋವಿನಮೇಲೆ ಕುಳಿತು ಕೊಳ್ಳುವುದಿಲ್ಲವೋ ಅವರು ಸ್ವರ್ಗದಲ್ಲಿ ವಾಸಿಸುತ್ತಾರೆ.

ಅಗ್ನಿಪೂಜಾದೇವಪೂಜಾಗುರುಪೂಜಾರತಾಶ್ಚ ಯೇ ।
ಸರ್ವಪೂಜಾರತಾ ನಿತ್ಯಂ ತೇ ವಿಪ್ರಾಃ ಸ್ವರ್ಗಗಾಮಿನಃ ॥ ೯೨ ॥

ಗರ್ತಮಾತ್ರಂ ತು ಯೇ ಖನ್ಯುರ್ಯತ್ರ ಗೌರ್ವಿತೃಷಾ ಭವೇತ್ ।
ಯಮಲೋಕಮದೃಷ್ಟ್ವೈವ ಸದ್ಗತಿಂ ಯಾಂತಿ ತೇ ನರಾಃ ॥ ೯೩ ॥

ವಾಪೀಕೂಪತಟಾಕಾದೌ ಧರ್ಮಸ್ಯಾನ್ತೋ ನ ವಿದ್ಯತೇ ।
ಪಿಬಂತಿ ಸ್ವೇಚ್ಛಯಾ ಯತ್ರ ಜಲಸ್ಥಲಚರಾಸ್ಸದಾ ॥ ೯೪ ॥

ನಿತ್ಯಂ ದಾನಪರಸ್ಸೋಽಥ ಕಥ್ಯತೇ ವಿಬುಧೈರಪಿ ।
ಯಥಾ ಯಥಾ ಚ ಪಾನೀಯಂ ಪಿಬಂತಿ ಸ್ವೇಚ್ಛಯಾ ನರಾಃ ॥ ೯೫ ॥

---

೯೨. ಅಗ್ನಿ, ದೇವರು, ಗುರುವು ಇವರನ್ನು ನಿತ್ಯವೂ ಯಾರು ಪೂಜಿಸುವರೋ ಅವರೂ, ಇವರಲ್ಲಿ ಒಬ್ಬರನ್ನಾದರೂ ಯಾವಾಗಲೂ ಪೂಜಿಸುವವರೂ ಸ್ವರ್ಗವನ್ನು ಹೊಂದುತ್ತಾರೆ.

೯೩. ಗೋವು ನೀರನ್ನು ಕುಡಿದು ಬಾಯಾರಿಕೆಯನ್ನು ನಾಶ ಮಾಡಿಕೊಳ್ಳುವಷ್ಟು ಒಂದು ಗುಂಡಿಯನ್ನು ತೋಡಿ ಅದರಿಂದ ಗೋವು ನೀರು ಕುಡಿದು ತೃಪ್ತಿ ಹೊಂದಿದರೆ ಅವನು ಯಮಲೋಕವನ್ನು ನೋಡದೆ ಒಳ್ಳೆಯ ಗತಿಯನ್ನು ಹೊಂದುತ್ತಾನೆ.

೯೪. ಬಾವಿ, ಕೊಳ, ಕೆರೆ ಇವೇ ಮುಂತಾದುವನ್ನು ನಿರ್ಮಿಸಿದರೆ ಅದರಿಂದ ಬರುವ ಧರ್ಮಕ್ಕೆ ಕೊನೆಯೇ ಇಲ್ಲ. ಅಲ್ಲಿ ಜಲದಲ್ಲಿ ವಾಸಿಸುವ ಪ್ರಾಣಿಗಳೂ ನೆಲದಲ್ಲಿ ವಾಸಿಸುವ ಪ್ರಾಣಿಗಳೂ ಸ್ವೇಚ್ಛೆಯಾಗಿ ನೀರನ್ನು ಕುಡಿಯುತ್ತವೆ.

೯೫. ಹಾಗೆ ನೀರಿಗೆ ಆಶ್ರಯವನ್ನು ಉಂಟುಮಾಡಿದವನು ನಿತ್ಯವೂ ದಾನ ಮಾಡುತ್ತಿರುವವನೆಂದು ದೇವತೆಗಳೂ ಹೊಗಳುತ್ತಾರೆ. ಅದರಲ್ಲಿ ಎಲ್ಲ ಪ್ರಾಣಿಗಳೂ ಬೇಕಾದಾಗ ಬೇಕಾದಷ್ಟು ನೀರನ್ನು ಕುಡಿಯುತ್ತವೆ.

ತಥಾ ತಥಾऽಕ್ಷಯಸ್ಸ್ವರ್ಗೋ ಧರ್ಮವೃದ್ಧ್ಯಾ ವಿಶಾಂ ವರ ।
ಪ್ರಾಣಿನಾಂ ಜೀವನಂ ವಾರಿ ಪ್ರಾಣಾ ವಾರಿಣಿ ಸಂಸ್ಥಿತಾಃ ॥
ತತ್ಪ್ರಪಾಂ ಯೇ ಪ್ರಯಚ್ಛಂತಿ ತೇ ದೀಪ್ಯಂತೇ ಸದಾ ದಿವಿ ॥ ೯೬ ॥

ಅಶ್ವತ್ಥಮೇಕಂ ಪಿಚುಮರ್ದಮೇಕಂ
ನ್ಯಗ್ರೋಧಮೇಕಂ ದಶತಿಂತಿಡೀಶ್ಚ ।
ಕಪಿತ್ಥಬಿಲ್ವಾಮಲಕತ್ರಯಂ ಚ
ಪಂಚಾಮ್ರವಾಪೀರ್ನರಕಂ ನ ಪಶ್ಯೇತ್ ॥ ೯೭ ॥

ವರಂ ಭೂಮಿರುಹಾಃ ಪಂಚ ನ ತು ಕೋಷ್ಠರುಹಾ ದಶ ।
ಪತ್ರೈಃ ಪುಷ್ಪೈಃ ಫಲೈರ್ಮೂಲೈಃ ಕುರ್ವಂತಿ ಪಿತೃತರ್ಪಣಂ ॥ ೯೮ ॥

---

೯೬. ಆ ಪ್ರಾಣಿಗಳು ಕುಡಿದಂತೆಲ್ಲಾ ಧರ್ಮವು ವೃದ್ಧಿಯಾಗಿ ಅಕ್ಷಯವಾದ ಸ್ವರ್ಗವು ಸಿಕ್ಕುತ್ತದೆ. ಪ್ರಾಣಿಗಳಿಗೆ ಜೀವನವು ನೀರೇ ಆಗಿರುತ್ತದೆ. ಮತ್ತು ಪ್ರಾಣವು ನೀರಿನಿಂದಲೇ ನಿಂತಿರುವುದು. ಆದ್ದರಿಂದ ಯಾರು ಅರವಟ್ಟಿಗೆಯನ್ನಿರಿಸಿ ಪಾನೀಯಗಳನ್ನು ಕೊಡುತ್ತಾರೆಯೋ ಅವರು ಯಾವಾಗಲೂ ಸ್ವರ್ಗದಲ್ಲಿ ಸುಖಿಸುತ್ತಾರೆ.

೯೭. ಒಂದು ಅರಳಿಯಮರ, ಒಂದು ಆಲದಮರ, ಹತ್ತು ಹುಣಿಸೆಮರ, ಮೂರು ನೆಲ್ಲಿಯಮರ, ಮೂರು ಬಿಲ್ವಪತ್ರೆಮರ, ಐದು ಮಾವಿನಮರ, ಒಂದು ಬಾವಿ ಇವೆಲ್ಲವೂ ಒಂದು ಸಮವಾದುವು. ಇವುಗಳಲ್ಲಿ ಯಾವುದೊಂದನ್ನು ಮಾಡಿದರೂ ಅವನು ನರಕವನ್ನು ನೋಡುವುದೇ ಇಲ್ಲ.

೯೮. ಭೂಮಿಯಲ್ಲಿ ಹುಟ್ಟುವ ಮರಗಳು ಐದಿದ್ದರೂ ಅದು ಬಹು ಉತ್ತಮವು. ಮನೆಯಲ್ಲಿ ಹುಟ್ಟಿದವರು ಹತ್ತು ಜನ ಮಕ್ಕಳಿದ್ದರೂ ಅವರು ಉಪಯೋಗವೇ ಇಲ್ಲ. ಈ ಮರಗಳು ಎಲೆಗಳಿಂದಲೂ, ಹೂಗಳಿಂದಲೂ, ಹಣ್ಣುಗಳಿಂದಲೂ, ಬುಡಗಳಿಂದಲೂ ಪಿತೃಗಳನ್ನು ತೃಪ್ತಿಪಡಿಸುತ್ತವೆ.

ನ ತತ್ಕರೋತ್ಯಗ್ನಿಹೋತ್ರಂ ಸುಹುತಂ ಯೋಷಿತಸ್ಸುತಃ |
ಯತ್ಕರೋತಿ ಘನಚ್ಛಾಯಃ ಪಾದಪಃ ಪಥಿ ರೋಪಿತಃ ॥ ೯೯ ॥

ಸದಾ ಸುಖೀ ಸ ವಸತಿ ಸದಾ ದಾನಂ ಪ್ರಯಚ್ಛತಿ |
ಸದಾ ಯಜ್ಞಂ ಸ ಯಜತೇ ಯೋ ರೋಪಯತಿ ಪಾದಪಂ ॥ ೧೦೦ ॥

ಸುಚ್ಛಾಯಾರ್ ಫಲಪುಷ್ಪಾಢ್ಯಾನ್ ಪಾದಪಾರ್ ಪಥಿ ರೋಪಿತಾರ್ |
ಛಿಂದಂತಿ ಯೇ ನರಾ ಮೂಢಾಸ್ತೇ ಯಾಂತಿ ನಿರಯಂ ಚಿರಂ ॥ ೧೦೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಶುಭಾಶುಭಕರ್ಮ ವರ್ಣನಂ ನಾಮ ತ್ರಿಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೯೯. ದಾರಿಯಲ್ಲಿ ಬೆಳೆಸಿದ ಇಂತಹ ಒಳ್ಳೆಯ ಮರವು ಕೊಡುವ ನಿಬಿಡವಾದ ನೆರಳಿನಿಂದ ಬರುವ ಧರ್ಮವನ್ನು ಅಗ್ನಿಹೋತ್ರ ಮಾಡುವ ತನ್ನ ಹೆಂಡತಿಯಲ್ಲಿ ಹುಟ್ಟಿದ ಮಕ್ಕಳು ಉಂಟುಮಾಡುವುದಿಲ್ಲ.

೧೦೦. ಯಾವನು ಮರವನ್ನು ಬೆಳೆಸುವನೋ ಅವನು ಯಾವಾಗಲೂ ದಾನ ಮಾಡುತ್ತಾನೆ. ಯಾವಾಗಲೂ ಯಾಗ ಮಾಡುತ್ತಾನೆ. (ಆ ಫಲಗಳನ್ನು ಹೊಂದುತ್ತಾನೆ.)

೧೦೧. ಒಳ್ಳೆಯ ನೆರಳಿರುವ ಹೂವು ಹಣ್ಣುಗಳನ್ನು ಬಿಡುವ ಮರಗಳನ್ನು ಕಡಿಯುವ ಮೂಢನು ಬಹುಕಾಲ ನರಕದಲ್ಲಿ ವಾಸಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಶುಭಾಶುಭಕರ್ಮ ವರ್ಣನ ಎಂಬ ಇನ್ನೂರ ನಲವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಶ್ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ॥



॥ ಯಮದೂತ ಉವಾಚ ॥

ನ ಪಶ್ಯಂತಿ ಯಮಂ ವೈಶ್ಯ ತುಲಸೀವನರೋಪಣಾತ್ ।
ಸರ್ವಪಾಪಹರಂ ಪೂತಂ ಕಾಮದಂ ತುಲಸೀವನಂ ॥ ೧ ॥

ತುಲಸೀಕಾನನಂ ವೈಶ್ಯ ಗೃಹೇ ಯಸ್ಮಿಂಸ್ತು ತಿಷ್ಠತಿ ।
ತದ್ಗೃಹಂ ತೀರ್ಥಭೂತಂ ಹಿ ನೋ ಯಾಂತಿ ಯಮಕಿಂಕರಾಃ ॥ ೨ ॥

ತಾವದ್ವರ್ಷಸಹಸ್ರಾಣಿ ಯಾವದ್ಬೀಜದಳಾನಿ ಚ ।
ವಸಂತಿ ದೇವಲೋಕೇ ತೇ ತುಲಸೀಂ ರೋಪಯಂತಿ ಯೇ ॥ ೩ ॥

---

## ಇನ್ನೂರ ನಲವತ್ತನಾಲ್ಕನೆಯ ಅಧ್ಯಾಯವು



೧. ಯಮದೂತನು ಹೇಳಿದನು–ಎಲೈ ವೈಶ್ಯನೇ! ತುಲಸಿಯ ವನವನ್ನು ಬೆಳೆಸುವುದರಿಂದ ಮನುಷ್ಯರು ಯಮನನ್ನು ನೋಡುವುದಿಲ್ಲ. ಅದು ಎಲ್ಲಾ ಪಾಪವನ್ನೂ ನಾಶ ಮಾಡುತ್ತದೆ. ಇಷ್ಟಾರ್ಥವನ್ನು ಕೊಡತಕ್ಕದ್ದು.

೨. ಎಲೈ ವೈಶ್ಯನೇ! ತುಲಸಿಯ ವನವು ಯಾರ ಮನೆಯಲ್ಲಿರುತ್ತದೆಯೋ ಆ ಮನೆಯು ತೀರ್ಥಕ್ಕೆ ಸಮವಾದುದು. ಅಲ್ಲಿಗೆ ಯಮನ ಆಳುಗಳು ಬರುವುದಿಲ್ಲ.

೩. ಆದರಲ್ಲಿ ಬೀಜಗಳೂ, ದಳಗಳೂ, ಎಷ್ಟು ಇವೆಯೋ ಅಷ್ಟು ಸಾವಿರ ವರ್ಷಗಳವರೆಗೂ ಬೆಳೆಸಿದವನು ದೇವಲೋಕದಲ್ಲಿ ವಾಸಿಸುತ್ತಾನೆ.

ತುಲಸೀಗಂಧಮಾಘ್ರಾಯ ಪಿತರಸ್ತುಷ್ಟಮಾನಸಾಃ ।
ಪ್ರಯಾಂತಿ ಗರುಡಾರೂಢಾಸ್ತತ್ಪದಂ ಚಕ್ರಪಾಣಿನಃ ॥ ೪ ॥

ದರ್ಶನಂ ನರ್ಮದಾಯಾಸ್ತು ಗಂಗಾಸ್ನಾನಂ ವಿಶಾಂ ವರ ।
ತುಲಸೀದಳಸಂಸ್ಪರ್ಶಃ ಸಮಮೇತತ್ತ್ರಯಂ ಸ್ಮೃತಂ ॥ ೫ ॥

ರೋಪಣಾತ್ಪಾಲನಾತ್ ಸೇಕಾತ್ ದರ್ಶನಾತ್ ಸ್ಪರ್ಶನಾನ್ನೃಣಾಂ ।
ತುಲಸೀ ದಹತೇ ಪಾಪಂ ವಾಙ್ಮನಃಕಾಯಸಂಚಿತಂ ॥ ೬ ॥

ಪಕ್ಷೇ ಪಕ್ಷೇ ತು ಸಂಪ್ರಾಪ್ತೇ ದ್ವಾದಶ್ಯಾಂ ವೈಶ್ಯಸತ್ತಮ ।
ಬ್ರಹ್ಮಾದಯೋಽಪಿ ಕುರ್ವಂತಿ ತುಲಸೀವನಪೂಜನಂ ॥ ೭ ॥

ಮಣಿಕಾಂಚನಪುಷ್ಪಾಣಿ ತಥಾ ಮುಕ್ತಾಫಲಾನಿ ತು ।
ತುಲಸೀಪತ್ರದಾನಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೮ ॥

---

೪. ತುಲಸಿಯ ವಾಸನೆಯನ್ನು ವಾಸಿಸಿ ನೋಡಿ ಪಿತೃಗಳು ಸಂತೋಷ ಗೊಂಡು ಗರುಡನಮೇಲೆ ಕುಳಿತು ವೈಕುಂಠಕ್ಕೆ ಹೋಗುತ್ತಾರೆ.

೫. ನರ್ಮದಾನದಿಯ ದರ್ಶನ, ಗಂಗಾನದಿಯ ಸ್ನಾನ, ತುಲಸೀದಳದ ಸ್ಪರ್ಶನ ಈ ಮೂರೂ ಒಂದೇ ರೀತಿಯಾದ ಫಲವುಳ್ಳವೆಂದು ತಿಳಿ.

೬. ತುಲಸಿಯನ್ನು ಬೆಳೆಸುವುದರಿಂದಲೂ, ಕಾಪಾಡುವುದರಿಂದಲೂ, ನೀರು ಹಾಕುವುದರಿಂದಲೂ, ನೋಡುವುದರಿಂದಲೂ, ಮುಟ್ಟುವುದರಿಂದಲೂ ಆ ತುಲಸಿಯು ಮನಸ್ಸು, ದೇಹ, ಮಾತುಗಳಿಂದ ಮಾಡಿದ ಪಾಪಗಳನ್ನು ನಾಶ ಮಾಡುತ್ತದೆ.

೭. ಒಂದೊಂದು ಪಕ್ಷದಲ್ಲಿಯೂ ದ್ವಾದಶಿಯ ದಿವಸ ಬ್ರಹ್ಮಾದಿಗಳೂ ಕೂಡ ತುಲಸಿಯ ವನದ ಪೂಜೆಯನ್ನು ಮಾಡುತ್ತಾರೆ.

೮. ಮಣಿಯಿಂದ ಮಾಡಿದ ಹೂವು, ಚಿನ್ನದಿಂದ ಮಾಡಿದ ಹೂವು, ಮುತ್ತಿನ ಹೂವು ಇವುಗಳೊಂದೂ ಕೂಡ ತುಲಸೀಪತ್ರದಾನದ ಹದಿನಾರನೆಯ ಒಂದಂಶವನ್ನೂ ಹೋಲಲಾರುವು.

ಆಮ್ರಾರೋಪಸಹಸ್ರೇಣ ಪಿಪ್ಪಲಾನಾಂ ಶತೇನ ಚ ।
ಯತ್ಫಲಂ ಹಿ ತದೇಕೇನ ತುಲಸೀವಿಟಪೇನ ತು ॥ ೯ ॥

ವಿಷ್ಣುಪೂಜನಸಂಸಕ್ತಸ್ತುಲಸೀಂ ಯಸ್ತು ರೋಪಯೇತ್ ।
ಯುಗಾಯುತಂ ದಶೈಕಂ ಚ ರೋಪಕೋ ರಮತೇ ದಿವಿ ॥ ೧೦ ॥

ತುಲಸೀಮಂಜರೀಭಿರ್ಯಃ ಕುರ್ಯಾದ್ಧರಿಹರಾರ್ಚನಂ ।
ನ ಸ ಗರ್ಭಗೃಹಂ ಯಾತಿ ಮುಕ್ತಿಭಾಗೀ ಭವೇನ್ನರಃ ॥ ೧೧ ॥

ಪುಷ್ಕರಾದೀನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ ।
ವಾಸುದೇವಾದಯೋ ದೇವಾ ವಸಂತಿ ತುಲಸೀದಲೇ ॥ ೧೨ ॥

ಆರೋಪ್ಯ ತುಲಸೀಂ ವೈಶ್ಯ ಸಂಪೂಜ್ಯ ಸುದಲೈರ್ಹರಿಂ ।
ವಸಂತಿ ಮೋದಮಾನಾಸ್ತೇ ಯತ್ರ ದೇವಶ್ಚತುರ್ಭುಜಃ ॥ ೧೩ ॥

---

೯. ಒಂದು ಸಾವಿರ ಮಾವಿನಮರಗಳನ್ನು ಬೆಳೆಸುವುದರಿಂದಲೂ, ನೂರು ಅರಳಿಯಮರಗಳನ್ನು ಬೆಳಸುವುದರಿಂದಲೂ ಯಾವ ಫಲವು ಬರುತ್ತದೆಯೋ ಆ ಫಲವು ಒಂದು ತುಲಸಿಯ ಗಿಡವನ್ನು ಬೆಳೆಸುವುದರಿಂದ ಬರುತ್ತದೆ.

೧೦. ವಿಷ್ಣುವಿನ ಪೂಜೆಯಲ್ಲಿ ಆಸಕ್ತನಾಗಿರುವವನು ತುಲಸಿಯನ್ನು ಬೆಳಸಿದರೆ ಹತ್ತುಸಾವಿರದಹನ್ನೊಂದು ಯುಗಗಳವರೆಗೆ ಸ್ವರ್ಗದಲ್ಲಿ ವಾಸಿಸುತ್ತಾನೆ.

೧೧. ತುಲಸಿಯ ಗೊಂಚಲಿನಿಂದ ಯಾವನು ಹರಿಹರರ ಪೂಜೆಯನ್ನು ಮಾಡುತ್ತಾನೆಯೋ ಅವನು ಮತ್ತೆ ಜನ್ಮವನ್ನು ಹೊಂದುವುದೇ ಇಲ್ಲ. ಮುಕ್ತಿಯನ್ನು ಹೊಂದುತ್ತಾನೆ.

೧೨. ಪುಷ್ಕರವೇ ಮುಂತಾದ ತೀರ್ಥಗಳೂ ಗಂಗೆಯೇ ಮುಂತಾದ ನದಿಗಳೂ ವಾಸುದೇವನೇ ಮುಂತಾದ ದೇವತೆಗಳೂ ತುಲಸಿಯದಳದಲ್ಲಿ ವಾಸಿಸುತ್ತಾರೆ.

೧೩. ತುಲಸಿಯನ್ನು ಬೆಳಸಿ ಆ ತುಲಸಿಯ ದಳಗಳಿಂದ ಹರಿಯನ್ನು ಪೂಜಿಸಿದರೆ ಅವರು ಚತುರ್ಭುಜನಾದ ವಿಷ್ಣುವಿರುವಲ್ಲಿಗೆ ಹೋಗಿ ಸುಖಿಸುತ್ತಾರೆ.

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾಪಿ ಯೋ ನರಃ ।
ಸಮರ್ಚಯತಿ ದೇವೇಶಂ ಲಿಂಗೇ ರೇವಾಸಮುದ್ಭವೇ ॥ ೧೪ ॥

ಸ್ಫಾಟಿಕೇ ರತ್ನಲಿಂಗೇ ವಾ ಪಾರ್ಥಿವೇ ವಾ ಸ್ವಯಂ ಭುವಿ ।
ಸ್ಥಾಪಿತೇ ವಾ ಕ್ವಚಿದ್ವೈಶ್ಯ ತೀರ್ಥೇ ಕ್ಷೇತ್ರೇಥ ಪಾವನೇ ॥ ೧೫ ॥

ನಮಶ್ಶಿವಾಯ ಮಂತ್ರೇಣ ಕುರ್ವಂತಸ್ತಜ್ಜಪಂ ಸದಾ ।
ಶೃಣ್ವಂತಿ ಯಮಲೋಕಸ್ಯ ಕಥಾಮಪಿ ನ ತೇ ನರಾಃ ॥ ೧೬ ॥

ಶಿವಪೂಜಾಪ್ರಭಾವೇನ ಶಿವಭಕ್ತಾಃ ಶಿವೇ ರತಾಃ ।
ಮೋದಂತೇ ಶಿವಲೋಕೇ ತೇ ಯಾವದಿಂದ್ರಾಶ್ಚತುರ್ದಶ ॥ ೧೭ ॥

ಭಿಂದಂತಿ ಶೈಲಾನುದಧೀನ್ ಪಿಬಂತಿ ವ್ಯತ್ಯಾಸಯಂತಿ ಕ್ಷಿತಿಮಂತರಿಕ್ಷಂ ।
ತೃಣೀಕೃತಬ್ರಹ್ಮಪುರಂದರಾಣಾಂ ಕಿಂ ದುಷ್ಕರಂ ಶಂಕರಕಿಂಕರಾಣಾಂ॥೧೮॥

---

೧೪–೧೬. ರೇವಾ ನದಿಯಲ್ಲಿ ಹುಟ್ಟಿದ ಲಿಂಗವನ್ನಾಗಲಿ, ಸ್ಫಟಿಕ ಲಿಂಗವನ್ನಾಗಲಿ, ರತ್ನಲಿಂಗವನ್ನಾಗಲಿ, ಪಾರ್ಥಿವಲಿಂಗವನ್ನಾಗಲಿ, ತಾನಾಗಿಯೇ ಹುಟ್ಟಿದ ಲಿಂಗವನ್ನಾಗಲಿ, ಯಾರು ಮೂರುಹೊತ್ತು ಅಥವಾ ಎರಡುಹೊತ್ತು ಇಲ್ಲವೆ ಒಂದುಹೊತ್ತಾದರೂ ತೀರ್ಥಕ್ಷೇತ್ರಗಳಲ್ಲಿ ಈ ತುಲಸಿಯ ದಳದಿಂದ ಪೂಜಿಸಿ ಓಂನಮಶ್ಶಿವಾಯ ಎಂಬ ಮಂತ್ರವನ್ನು ಜಪಿಸುತ್ತಾರೆಯೋ ಅವರು ಯಮಲೋಕದ ಕಥೆಯನ್ನು ಕೇಳುವುದೇ ಇಲ್ಲ.

೧೭. ಶಿವನಲ್ಲಿ ಭಕ್ತಿಯುಳ್ಳ ಶಿವಪೂಜೆಯಲ್ಲಿ ಆಸಕ್ತರಾದವರು ಶಿವಪೂಜೆಯ ಪ್ರಭಾವದಿಂದ ಹದಿನಾಲ್ಕುಜನ ಇಂದ್ರರು ಸ್ವರ್ಗವನ್ನು ಆಳುವವರೆಗೂ ಶಿವಲೋಕದಲ್ಲಿ ಸುಖಿಸುತ್ತಾರೆ.

೧೮. ಶಂಕರನಿಗೆ ಆಳಾದವರು (ಶಿವಭಕ್ತರು) ಪರ್ವತಗಳನ್ನು ಬೇಕಾದರೂ ಸೀಳುತ್ತಾರೆ. ಸಮುದ್ರವನ್ನಾದರೂ ಕುಡಿಯುತ್ತಾರೆ. ಆಕಾಶವನ್ನು ಭೂಮಿಯನ್ನಾಗಿಯೂ ಭೂಮಿಯನ್ನು ಆಕಾಶವನ್ನಾಗಿಯೂ ಮಾರ್ಪಡಿಸುತ್ತಾರೆ. ಬ್ರಹ್ಮ ಇಂದ್ರ ಮುಂತಾದವರನ್ನು ಬಹು ತುಚ್ಛರನ್ನಾಗಿ ಕಾಣುತ್ತಾರೆ. ಅವರ ಕೈಲಾಗದ ಕೆಲಸವೇ ಇಲ್ಲ.

ಸೌಭಾಗ್ಯಂ ಕಾಂತಿಮದ್ರೂಪಂ ಸತ್ಯಂ ತ್ಯಾಗಃ ಪ್ರವಕ್ತೃತಾ ।
ಶೌರ್ಯಂ ಚ ಜಗತಿ ಖ್ಯಾತಿಃ ಶಿವಪೂಜಾವಿಧೇಃ ಫಲಂ　　|| ೧೯ ||

ಬ್ರಹ್ಮಣಃ ಸೃಷ್ಟಿಕರ್ತೃತ್ವಂ ವಿಷ್ಣೋಽರ್ದಾನವಮರ್ದನಂ ।
ಬಲೇರ್ದಾನಪ್ರಭಾವಶ್ಚ ಶಿವಪೂಜಾವಿಧೇಃ ಫಲಂ　　|| ೨೦ ||

ಕರ್ಣಸ್ಯ ದಾನಶೂರತ್ವಂ ಕಾರ್ತವೀರ್ಯಸ್ಯ ಶೂರತಾ ।
ಕುಬೇರಧನಸಂಪತ್ತಿಃ ಶಿವಪೂಜಾವಿಧೇಃ ಫಲಂ　　|| ೨೧ ||

ದ್ರೌಪದೀಸುಪತಿತ್ವಂ ಚ ಧ್ರುವಸ್ಯ ಪದಮುನ್ನತಂ ।
ಅರ್ಜುನಸ್ಯ ಜಯಪ್ರಾಪ್ತಿಃ ಶಿವಪೂಜಾವಿಧೇಃ ಫಲಂ　　|| ೨೨ ||

ಸುಹೃತ್ತ್ವಂ ವಾಸುದೇವಸ್ಯ ವಾಕ್ ಪ್ರಿಯತ್ವಂ ಬೃಹಸ್ಪತೇಃ ।
ಬ್ರಹ್ಮತೇಜೋ ವಸಿಷ್ಠಸ್ಯ ಶಿವಪೂಜಾವಿಧೇಃ ಫಲಂ　　|| ೨೩ ||

---

೧೯. ಸೌಭಾಗ್ಯ, ಕಾಂತಿ, ರೂಪ, ಸತ್ಯ, ತ್ಯಾಗ, ಚೆನ್ನಾಗಿ ಮಾತನಾಡುವಿಕೆ, ಶೌರ್ಯ, ಖ್ಯಾತಿ ಇವೆಲ್ಲವೂ ಕೂಡಾ ಶಿವಪೂಜೆಯ ಫಲವು.

೨೦. ಬ್ರಹ್ಮನು ಸೃಷ್ಟಿಸುವಿಕೆಯೂ ವಿಷ್ಣುವು ದಾನವರನ್ನು ನಿಗ್ರಹಿಸುವಿಕೆಯೂ ಬಲಿಯು ಅತ್ಯಂತ ದಾನಿಯಾದುದೂ ಈ ಶಿವಪೂಜೆಯ ಫಲವಾಗಿರುವುದು.

೨೧. ಕರ್ಣನು ದಾನಶೂರನಾದುದೂ, ಕಾರ್ತವೀರ್ಯನು ಪರಾಕ್ರಮಿಯಾದುದೂ, ಕುಬೇರನು ಧನವನ್ನು ಹೊಂದಿರುವುದೂ ಶಿವಪೂಜೆಯ ಫಲವೇ ಆಗಿರುವುದು.

೨೨. ದ್ರೌಪದಿಗೆ ಒಳ್ಳೆಯ ಗಂಡಂದಿರು ಸಿಕ್ಕಿರುವುದೂ, ಧ್ರುವನಿಗೆ ಉತ್ತಮವಾದ ಲೋಕವು ಸಿಕ್ಕಿರುವುದೂ, ಅರ್ಜುನನಿಗೆ ಜಯ ಲಭಿಸುತ್ತಿರುವುದೂ ಶಿವಪೂಜೆಯ ಫಲವೇ ಆಗಿರುವುದು.

೨೩. ವಾಸುದೇವನು ಎಲ್ಲರೊಡನೆಯೂ ಸ್ನೇಹದಿಂದಿರುವುದೂ ಬೃಹಸ್ಪತಿಯ ಮಾತು ಎಲ್ಲರಿಗೂ ಹಿತವಾಗಿರುವುದೂ, ವಸಿಷ್ಠನು ಬ್ರಹ್ಮತೇಜಸ್ಸನ್ನು ಹೊಂದಿರುವುದೂ, ಶಿವಪೂಜೆಯ ಮಹಿಮೆಯ ಫಲವು.

ಅಗಸ್ತ್ಯೇನಾರ್ಣವಃ ಪೀತಃ ಸುತೀರ್ಣಶ್ಚ ಹನೂಮತಾ ।
ರಾಘವೇಣೋದಧಿರ್ಬದ್ಧಃ ಶಿವಪೂಜಾವಿಧೇಃ ಫಲಂ ॥ ೨೪ ॥

ಅಮಂತ್ರಂ ವಾ ಸಮಂತ್ರಂ ವಾ ಲಿಂಗಸ್ಯೋಪರಿ ವಿನ್ಯಸೇತ್ ।
ಪತ್ರಂ ವಾ ಪುಷ್ಪಮೇಕಂ ವಾ ಕುಲಕೋಟಿಂ ಸಮುದ್ಧರೇತ್ ॥ ೨೫ ॥

ಪ್ರಸನ್ನೇನಾಪಿ ಶಾಂತೇನ ದಂಭೇನಾಪಿ ಹಿ ಲೋಭತಃ ।
ಯೇ ಸೇವಂತೇ ಮಹಾದೇವಂ ನ ತೇ ಪಶ್ಯಂತಿ ಭಾಸ್ಕರಿಂ ॥ ೨೬ ॥

ಶಿವಾರ್ಚನಸಮಂ ಪುಣ್ಯಂ ಸರ್ವಪಾಪಪ್ರಣಾಶನಂ ।
ಸರ್ವೈಶ್ವರ್ಯಪ್ರದಂ ವೈಶ್ಯ ನಾಸ್ತಿ ಕಿಂಚಿಜ್ಜಗತ್ರಯೇ ॥ ೨೭ ॥

ಶಿವಭಕ್ತಿಂ ಪ್ರಕುರ್ವಾಣಾ ಯೇ ದ್ವಿಷಂತಿ ಜನಾರ್ದನಂ ।
ತೇಷಾಂ ನಿರಯಪಾತಸ್ತು ಯಾವದಿಂದ್ರಾಶ್ಚತುರ್ದಶ ॥ ೨೮ ॥

---

೨೪. ಅಗಸ್ತ್ಯನು ಸಮುದ್ರವನ್ನು ಕುಡಿದುದೂ, ಹನುಮಂತನು ಸಮುದ್ರವನ್ನು ದಾಟಿದುದೂ, ರಾಮನು ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿದುದೂ ಶಿವಪೂಜೆಯ ಫಲವು.

೨೫. ಮಂತ್ರವನ್ನು ಹೇಳುತ್ತಲಾಗಲಿ, ಮಂತ್ರವನ್ನು ಹೇಳದೆಯಾಗಲಿ, ಒಂದು ಹೂವನ್ನಾಗಲಿ, ಒಂದು ಪತ್ರೆಯನ್ನಾಗಲಿ, ಲಿಂಗದ ಮೇಲೆ ಹಾಕಬೇಕು. ಹಾಗೆ ಹಾಕಿದರೆ ಅದು ತನ್ನ ಕೋಟಿ ಕುಲಗಳನ್ನು ಉದ್ಧರಿಸುತ್ತದೆ.

೨೬. ಹರ್ಷದಿಂದಾಗಲಿ, ಶಾಂತಚಿತ್ತದಿಂದಾಗಲಿ, ಡಂಭಾಚಾರದಿಂದಾಗಲಿ, ಲೋಭಿತನದಿಂದಾಗಲಿ, ಯಾರು ಮಹಾದೇವನನ್ನು ಸೇವಿಸುತ್ತಾರೆಯೋ ಅವರು ಯಮನನ್ನು ನೋಡುವುದೇ ಇಲ್ಲ.

೨೭. ಶಿವಾರ್ಚನೆಗೆ ಸಮವಾದ ಪುಣ್ಯವೂ, ಶಿವಾರ್ಚನೆಯಂತೆ ಪಾಪಗಳನ್ನೆಲ್ಲವನ್ನೂ ನಾಶಮಾಡತಕ್ಕದ್ದೂ ಶಿವಾರ್ಚನೆಯಂತೆ ಸಕಲೈಶ್ವರ್ಯಗಳನ್ನೂ ಕೊಡತಕ್ಕದ್ದೂ ಮೂರು ಲೋಕದಲ್ಲಿಯೂ ಮತ್ತೊಂದಿರುವುದಿಲ್ಲ.

೨೮. ಯಾರು ಶಿವನಲ್ಲಿ ಭಕ್ತಿಯನ್ನು ಮಾಡುತ್ತಾ ವಿಷ್ಣುವನ್ನು ದ್ವೇಷಿಸುತ್ತಾರೆಯೋ ಅವರಿಗೆ ಹದಿನಾಲ್ಕುಜನ ಇಂದ್ರರಿರುವವರೆಗೆ ನರಕದಲ್ಲಿ ವಾಸವು ಉಂಟಾಗುತ್ತದೆ.

ಪರಾತ್ಪರತರಂ ಯಾನ್ತಿ ನಾರಾಯಣಪರಾಯಣಾಃ |
ನ ತೇ ತತ್ರ ಗಮಿಷ್ಯಂತಿ ಯೇ ದ್ವಿಷಂತಿ ಮಹೇಶ್ವರಂ || ೨೯ ||

ದ್ರವ್ಯಮನ್ನಂ ಫಲಂ ತೋಯಂ ಶಿವಸ್ವಂ ನ ಸ್ಪೃಶೇತ್ಕ್ವಚಿತ್ |
ನಿರ್ಮಾಲ್ಯಂ ನೈವ ಸಂಲಂಘೇತ್ ಕೂಪೇ ಸರ್ವಂ ಚ ತತ್ಕ್ಷಿಪೇತ್ || ೩೦ ||

ಮಕ್ಷಿಕಾಪಾದಮಾತ್ರಂ ಹಿ ಶಿವಸ್ವಮುಪಜೀವತಿ |
ಮೋಹಾಲ್ಲೋಭಾತ್ಸ ಪಚ್ಯೇತ ಕಲ್ಪಾಂತಂ ನರಕಂ ನರಃ || ೩೧ ||

ತೃಣೈಃ ಕಾಷ್ಠೈಶ್ಚ ಪಾಷಾಣೈರ್ಯೇ ಕುರ್ವಂತಿ ಶಿವಾಲಯಂ |
ಮೋದನ್ತೇ ಸಹ ರುದ್ರೇಣ ತೇ ನರಾಶ್ಶಿವಸನ್ನಿಧೌ || ೩೨ ||

---

೨೯. ನಾರಾಯಣನಲ್ಲಿಯೇ ಭಕ್ತಿಯನ್ನಿಟ್ಟು ಪೂಜೆಮಾಡುವವರು ಉತ್ತಮೋತ್ತಮವಾದ ಲೋಕವನ್ನು ಹೊಂದುತ್ತಾರೆ. ಆ ರೀತಿಯಾಗಿ ವಿಷ್ಣು ಭಕ್ತಿ ಮಾಡುವವರು ಶಿವನನ್ನು ದ್ವೇಷಿಸಿದರೆ ಅವರಿಗೆ ಉತ್ತಮೋತ್ತಮವಾದ ಲೋಕವು ಸಿಕ್ಕುವುದಿಲ್ಲ.

೩೦. ಶಿವನಿಗೆ ನಿವೇದಿತವಾದ ಅಥವಾ ಶಿವನ ಸಂಬಂಧವಾದ ಹಣ, ಅನ್ನ, ಹಣ್ಣು, ನೀರು ಒಂದನ್ನೂ ಮುಟ್ಟಲೇ ಕೂಡದು. ಶಿವನಿಂದ ತೆಗೆದ ನಿರ್ಮಾಲ್ಯವನ್ನು ಊಟಮಾಡಬಾರದು. ಅದನ್ನು ಯಾವುದಾದರೂ ಬಾವಿಗೆ ಹಾಕಬೇಕು.

೩೧. ಶಿವನ ಪದಾರ್ಥವನ್ನು ಒಂದು ನೊಣದ ಹೆಜ್ಜೆಯಷ್ಟನ್ನಾದರೂ ಉಪಯೋಗಿಸಬಾರದು. ಆಸೆಯಿಂದಲೋ ತಿಳಿಯದೆ ಇರುವುದರಿಂದಲೋ ಹಾಗೆ ಉಪಯೋಗಿಸಿಕೊಂಡರೆ ಕಲ್ಪದಕಾಲದವರೆಗೂ ನರಕದಲ್ಲಿ ಬಿದ್ದಿರುತ್ತಾನೆ.

೩೨. ಹುಲ್ಲು, ಮರ, ಕಲ್ಲು ಮೊದಲಾದುವುಗಳಿಂದ ಯಾವುದರಿಂದಲಾದರೂ ಈಶ್ವರನಿಗೆ ದೇವಸ್ಥಾನವನ್ನು ಕಟ್ಟಿಸಿದರೆ ಅವರು ರುದ್ರನೊಡನೆ ಕೈಲಾಸದಲ್ಲಿ ಸುಖಿಸುತ್ತಾರೆ.

ಬ್ರಹ್ಮವಿಷ್ಣುಮಹಾದೇವಪ್ರಾಸಾದಂ ಮಠಮೇವ ವಾ |
ಕೃತ್ವಾ ತು ಸುಚಿರಂ ಕಾಲಂ ತತ್ರ ಲೋಕೇ ವಸಂತಿ ತೇ ॥ ೩೩ ॥

ಯೇ ಧರ್ಮಮಠಗೋಶಾಲಾಃ ಪಥಿ ವಿಶ್ರಾಮಮಂದಿರಂ |
ಯತೀನಾಂ ಸದನಂ ವೈಶ್ಯ ದೀನಾನಾಥಕುಟೀರಕಂ ॥ ೩೪ ॥

ಬ್ರಹ್ಮಶಾಲಾಂ ಸುವಿಪುಲಾಂ ಬ್ರಾಹ್ಮಣಸ್ಯ ಚ ಮಂದಿರಂ |
ಕುರ್ವಂತಿ ತೇ ಯಾಂತಿ ವೈಶ್ಯ ಇಂದ್ರಸ್ಯ ಸದನಂ ಮಹತ್ ॥ ೩೫ ॥

ಜೀರ್ಣೋದ್ಧಾರೇಣ ವೈ ತೇಷಾಂ ತತ್ಫಲಂ ದ್ವಿಗುಣಂ ಭವೇತ್ |
ತನ್ಮುಕ್ತ್ವಾನ್ಯತ್ರ ಯಃ ಕುರ್ಯಾತ್ಸ ಗಚ್ಛೇನ್ನಿರಯಂ ಧ್ರುವಂ ॥ ೩೬ ॥

ದೇವವಿಪ್ರಯತೀನಾಂ ತು ಮಠೇ ಲೋಭವಿಮೋಹಿತಃ |
ಮಠಾಧಿಪತ್ಯಂ ಯಃ ಕುರ್ಯಾತ್ಸರ್ವಕರ್ಮಬಹಿಷ್ಕೃತಃ ॥ ೩೭ ॥

---

೩೩. ಬ್ರಹ್ಮ, ವಿಷ್ಣು, ರುದ್ರರುಗಳಿಗೆ ಮನೆಯನ್ನಾಗಲಿ ಗುಡಿಯನ್ನಾಗಲಿ ಮಠವನ್ನಾಗಲಿ ಕಟ್ಟಿಸಿದವನು ಬಹುಕಾಲದವರೆಗೆ ಯಾರಿಗೆ ಧರ್ಮ ಮಾಡಿರುವನೋ ಅವರ ಲೋಕದಲ್ಲಿ ಸುಖವಾಗಿ ವಾಸಿಸುತ್ತಾನೆ.

೩೪–೩೫. ಧರ್ಮಾರ್ಥವಾಗಿ ಮಠ, ಗೋಶಾಲೆ, ಛತ್ರ, ಯತಿಗಳಿಗೆ ಮಂಟಪಗಳು, ದೀನರು ಅನಾಥರುಗಳಿಗೆ ವಾಸದ ಮನೆಗಳು, ಬ್ರಾಹ್ಮಣರಿಗೆ ಅಗ್ರಹಾರಗಳು, ಬ್ರಾಹ್ಮಣರಿಗೆ ಇಳಿದುಕೊಳ್ಳಲು ಛತ್ರ ಇವನ್ನು ಕಟ್ಟಿಸಿದರೆ ಅವರು ಇಂದ್ರಲೋಕಕ್ಕೆ (ಸ್ವರ್ಗಕ್ಕೆ) ಹೋಗುತ್ತಾರೆ.

೩೬. ಆ ದೇವತೆಗಳ ಸ್ಥಾನಗಳನ್ನಾಗಲಿ, ಜನಗಳ ಧರ್ಮದ ಸ್ಥಾನಗಳನ್ನಾಗಲಿ ಹಳೆಯದನ್ನು ಸರಿಮಾಡಿದರೆ ಕಟ್ಟಿಸಿದುದಕ್ಕಿಂತಲೂ ಎರಡರಷ್ಟು ಧರ್ಮವು ಬರುತ್ತದೆ. ಹಳೆಯವುಗಳಿದ್ದರೂ ಅವನ್ನು ಸರಿಮಾಡಿಸದೆ ಬೇರೆಯಾಗಿ ಕಟ್ಟಿಸಲು ಪ್ರಯತ್ನಪಟ್ಟರೆ ಅವನು ನರಕವನ್ನು ಹೊಂದುತ್ತಾನೆ.

೩೭. ದೇವಸ್ಥಾನಗಳು, ಯತಿಗಳಮಠಗಳು, ಬ್ರಾಹ್ಮಣರ ಧರ್ಮಸ್ಥಾನಗಳು, ಇವುಗಳಲ್ಲಿ ಆಸೆಪಟ್ಟು ಯಾವನು ಅವುಗಳಲ್ಲಿ ಆಧಿಪತ್ಯವನ್ನು ಮಾಡುತ್ತಾನೆಯೋ ಅವನು ಯಾವ ಕರ್ಮವನ್ನು ಮಾಡಲೂ ಯೋಗ್ಯನಲ್ಲ.

ಸ ಪಚ್ಯತೇ ಮಹಾಘೋರೇ ರೌರವೇ ನರಕೇಽಕ್ಷಯೇ ।
ಪತ್ರಂ ಪುಷ್ಪಂ ಫಲಂ ತೋಯಂ ದ್ರವ್ಯಮನ್ಯನ್ಮಠಸ್ಯ ತು ॥ ೩೮ ॥

ಯೋಽಶ್ನಾತಿ ಸ ಪತೇದ್ಘೋರೇ ನರಕೇ ನಾತ್ರ ಸಂಶಯಃ ।
ಯಮಿಚ್ಛೇನ್ನರಕಾನ್ನೇತುಂ ಸಪುತ್ರಪಶುಬಾಂಧವಂ ॥ ೩೯ ॥

ತಂ ದೇವೇಷ್ವಧಿಪಂ ಕುರ್ಯಾತ್ ಗೋಷು ಚ ಬ್ರಾಹ್ಮಣೇಷು ಚ ।
ಅಭೋಜ್ಯಂ ಮಠಿನಾಮನ್ನಂ ಭುಕ್ತ್ವಾ ಚಾಂದ್ರಾಯಣಂ ಚರೇತ್॥ ೪೦ ॥

ಸ್ಪೃಷ್ಟ್ವಾ ಮಠಪತೀನ್ವೈಶ್ಯ ಸವಾಸಾ ಜಲಮಾವಿಶೇತ್ ।
ಬ್ರಹ್ಮವಿಷ್ಣುಮಹೇಶಾನಾಂ ಪೂಜಾರ್ಥಂ ಪುಷ್ಪವಾಟಿಕಾಂ ॥ ೪೧ ॥

ಆರೋಪಯಂತಿ ಯೇ ಧನ್ಯಾ ದೇವಲೋಕೇ ವಸಂತಿ ತೇ ।
ಯೇ ಸದಾ ಪಿತೃದೇವಾಂಶ್ಚ ಪ್ರೀಣಯಂತ್ಯತಿಥೀನಪಿ ॥ ೪೨ ॥

---

೩೮-೫೧. ಅವನು ಆ ರೀತಿಯಾಗಿ ಕರ್ಮಬಹಿಷ್ಕೃತನಾಗುವುದಲ್ಲದೆ ಅಕ್ಷಯವಾದ ರೌರವನರಕದಲ್ಲಿ ಹಾಕಲ್ಪಡುತ್ತಾನೆ. ಮಠಗಳ ಸಂಬಂಧವಾದ ಹೂವು, ಎಲೆ, ಹಣ್ಣು, ನೀರುಮೊದಲಾದುವಲ್ಲಿ ಯಾವುದನ್ನು ತಿಂದರೂ ಘೋರವಾದ ನರಕದಲ್ಲಿ ಬೀಳುತ್ತಾನೆ. ಸಂಶಯವಿಲ್ಲ. ಯಾವನು ನರಕದಿಂದ ತನ್ನವರೊಡನೆ ಉದ್ಧಾರವಾಗಬೇಕೆಂದು ಎನ್ನುತ್ತಾನೆಯೋ ಅವನನ್ನು ಮಠಾಧಿಪತಿಯನ್ನಾಗಿಯೂ, ದೇವರಸ್ಥಾನದ ಅಧಿಪವನ್ನಾಗಿಯೂ ಗೋವುಗಳಿಗೂ ಬ್ರಾಹ್ಮಣರಿಗೂ ಅಧಿಪನನ್ನಾಗಿಯೂ ಮಾಡಬೇಕು. (ಧರ್ಮವನ್ನು ತಿಳಿದು ನರಕದಿಂದ ಹೆದರುವವನನ್ನು ಧರ್ಮಕಾರ್ಯಗಳಿಗೆ ನಿಯಮಿಸಬೇಕು.) ಮಠವನ್ನು ಮಾಡಿಕೊಂಡು ಇರುವವರಲ್ಲಿ ಅನ್ನವನ್ನು ತಿನ್ನಬಾರದು. ಹಾಗೆ ತಿಂದರೆ ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಮಠಾಧಿಪತಿಗಳನ್ನು ಮುಟ್ಟಿದರೆ ಉಟ್ಟ ಬಟ್ಟೆಯೊಡನೆ ಸ್ನಾನಮಾಡಬೇಕು. ಬ್ರಹ್ಮ ವಿಷ್ಣು ಶಿವರ ಪೂಜೆಗೋಸ್ಕರ ಹೂವಿನ ತೋಟವನ್ನು ಯಾರು ಮಾಡುತ್ತಾರೆಯೋ ಅವರು ಧನ್ಯರು. ಮತ್ತು ದೇವಲೋಕದಲ್ಲಿ ವಾಸಿಸುತ್ತಾರೆ. ಸದಾಕಾಲದಲ್ಲಿಯೂ ಯಾರು ಪಿತೃಗಳನ್ನೂ ದೇವತೆಗಳನ್ನೂ ಅತಿಥಿಗಳನ್ನೂ ತೃಪ್ತಿಪಡಿಸುತ್ತಾರೆಯೋ

ಪ್ರಾಜಾಪತ್ಯಂ ಹಿ ತೇ ಯಾನ್ತಿ ಲೋಕಂ ಸರ್ವೋತ್ತಮೋತ್ತಮಂ ।
ಮೂರ್ಖೋ ವಾ ಪಂಡಿತೋ ವಾಪಿ ಶ್ರೋತ್ರಿಯಃ ಪತಿತೋಽಪಿ ವಾ ॥೪೩॥

ಬ್ರಹ್ಮತುಲ್ಯೋಽತಿಥಿರ್ವೈಶ್ಯ ಮಧ್ಯಾಹ್ನೇ ಯಸ್ಸಮಾಗತಃ ।
ಪಥಿ ಶ್ರಾನ್ತಾಯ ವೃದ್ಧಾಯ ಅನ್ಯಸ್ಮೈ ಕ್ಷುಧಿತಾಯ ವಾ ॥ ೪೪ ॥

ಪ್ರಯಚ್ಛಂತ್ಯನ್ನಪಾನಂ ಯೇ ತೇ ನಾಕೇ ಚಿರವಾಸಿನಃ ।
ಅದೃಷ್ಟಪೂರ್ವಾ ಯೇ ಪಾಂಥಾ ಭೋಕ್ತುಕಾಮಾಃ ಕ್ಷುಧಾಕುಲಾಃ ॥ ೪೫ ॥

ಯದ್ಗೃಹೇ ತೃಪ್ತಿಮಾಯಾಂತಿ ಬ್ರಹ್ಮಲೋಕೇ ವಸಂತಿ ತೇ ।
ಅತಿಥಿರ್ವಿಮುಖೋ ಯಸ್ಯ ಸಂಘಚ್ಛೇದ್ಗೃಹಮಾಗತಃ ॥ ೪೬ ॥

ಮಧ್ಯಾಹ್ನೇ ವೈಶ್ಯ ಸಾಯಂ ವಾ ಸ ಪ್ರಯಾತಿ ಯಮಾಲಯಂ ।
ನಾಸ್ತೀತಿ ವಚನಂ ಶ್ರುತ್ವಾ ಖಿನ್ನೋ ಗೇಹಾದ್ವ್ರಜೇತ್ತು ಯಃ ॥ ೪೭ ॥

---

ಅವರು ಉತ್ತಮೋತ್ತಮವಾದ ಬ್ರಹ್ಮಲೋಕವನ್ನು ಹೊಂದುತ್ತಾರೆ. ಮೂರ್ಖನಾಗಲಿ, ಪಂಡಿತನಾಗಲಿ, ಶ್ರೋತ್ರಿಯನಾಗಲಿ, ಪತಿತನೇ ಆಗಲಿ ಅವನು ಹೇಗೆ ಇರಲಿ ಮಧ್ಯಾಹ್ನದ ಸಮಯಕ್ಕೆ ಬಂದ ಅತಿಥಿಯು ಬ್ರಹ್ಮನಿಗೆ ಸಮನಾದವನು. ಅವನನ್ನು ಉಪಚರಿಸಬೇಕು. ದಾರಿಯಲ್ಲಿ ಪ್ರಯಾಣ ಮಾಡುತ್ತಿದ್ದು ಆಯಾಸಗೊಂಡವನಿಗೂ ಮುದುಕನಿಗೂ ಹಸಿದವನು ಯಾವನೇ ಆಗಲಿ ಅವನಿಗೂ ಆ ಕಾಲದಲ್ಲಿ ಅನ್ನ ನೀರುಗಳನ್ನು ಕೊಟ್ಟರೆ ಅವರು ಸ್ವರ್ಗದಲ್ಲಿ ಸುಖಿಸುತ್ತಾರೆ. ಗುರುತು ಪರಿಚಯವಿಲ್ಲದ ಪ್ರಯಾಣಿಕರು ಹಸಿವುಗೊಂಡು ಊಟಕ್ಕೆ ಬಂದರೆ ಅವರಿಗೆ ಅನ್ನವನ್ನು ಹಾಕಬೇಕು. ಅವರು ಯಾವ ಮನೆಯಲ್ಲಿ ಊಟಮಾಡಿ ತೃಪ್ತಿಯನ್ನು ಹೊಂದುತ್ತಾರೆಯೋ ಅವರು ಬ್ರಹ್ಮನ ಲೋಕದಲ್ಲಿ ಸುಖವನ್ನು ಹೊಂದುತ್ತಾರೆ. ಅತಿಥಿಯು ಯಾವನ ಮನೆಗೆ ಮಧ್ಯಾಹ್ನದಲ್ಲಿ ಅಥವಾ ಸಾಯಂಕಾಲದಲ್ಲಿ ಬಂದು ತನ್ನ ಹಸಿವು ಬಾಯಾರಿಕೆಗಳನ್ನು ಅಡಗಿಸಿಕೊಳ್ಳದೆ ಹತಾಶನಾಗಿ ಹೋಗುವನೋ ಆ ಗೃಹಸ್ಥನು ನರಕವನ್ನು ಹೊಂದುತ್ತಾನೆ ಅತಿಥಿಯು ಯಾವನ ಮನೆಗೆ ಬಂದು ಇಲ್ಲ, ಹೋಗು ಎಂಬ ಮಾತನ್ನು ಕೇಳಿ ಹೋಗುತ್ತಾನೆಯೋ ಹೋಗುವಾಗ ಅವನು ಆ ಗೃಹಸ್ಥನ

ಆಜನ್ಮಸಂಚಿತಂ ಪುಣ್ಯಂ ಗೃಹ್ಣಾತಿ ಗೃಹಮೇಧಿನಃ ।
ನಾಸ್ತ್ಯತಿಥಿಸಮೋ ಬಂಧುಃ ನಾಸ್ತ್ಯತಿಥಿಸಮೋ ಧನಂ ॥ ೪೮ ॥

ನಾಸ್ತ್ಯತಿಥಿಸಮೋ ಧರ್ಮೋ ನಾಸ್ತ್ಯತಿಥಿಸಮಂ ಹಿತಂ ।
ಆತಿಥ್ಯಸ್ಯ ಪ್ರಭಾವೇನ ರಾಜಾನೋ ಮುನಯಸ್ತದಾ ॥ ೪೯ ॥

ಬ್ರಹ್ಮಲೋಕಂ ಗತಾದ್ಯಾಪಿ ನ ಚ್ಯವಂತೇ ವಿಶಾಂ ವರ ।
ಜನ್ಮಮಧ್ಯೇ ಗೃಹಸ್ಥೋ ಯಃ ಪ್ರಮಾದಾದ್ವಾ ಕಥಂಚನ ॥ ೫೦ ॥

ಭೋಜಯತ್ಯತಿಥೀನ್ನೂನಂ ನೈವ ಪಶ್ಯತಿ ಸೋಂತಕಂ ।
ಸುದೀಪ್ತೇಷು ವಿಮಾನೇಷು ಭುಂಕ್ತೇ ಪೀಯೂಷಮನ್ನದಾಃ ॥ ೫೧ ॥

ಯಾತಿ ಸ್ವರ್ಗಾಚ್ಚ್ಯುತೋ ವೈಶ್ಯ ಉತ್ತರಾಂಶ್ಚ ಕುರೂಂಶ್ಚ ಸಃ ।
ತತಶ್ಚ ಭಾರತೇ ವರ್ಷೇ ರಾಜಾ ಭವತಿ ಧಾರ್ಮಿಕಃ ॥ ೫೨ ॥

---

ಹುಟ್ಟಿದಾಗಿನಿಂದ ಮಾಡಿದ ಪುಣ್ಯವನ್ನು ತೆಗೆದುಕೊಂಡು ಹೋಗುತ್ತಾನೆ. ಅತಿಥಿಗೆ ಸಮನಾದ ಬಂಧುವಾಗಲಿ ಅತಿಥಿಗೆ ಸಮವಾದ ದ್ರವ್ಯವಾಗಲಿ, ಅತಿಥಿಗೆ ಸಮನಾದ ಧರ್ಮವಾಗಲಿ, ಅತಿಥಿಗೆ ಸಮವಾದ ಹಿತವೇ ಆಗಲಿ ಒಂದೂ ಇಲ್ಲವು. ಅತಿಥಿಯ ಸತ್ಕಾರದ ಪ್ರಭಾವದಿಂದಲೇ ರಾಜರೂ ಮುನಿಗಳೂ ಬ್ರಹ್ಮಲೋಕವನ್ನು ಹೊಂದಿದ್ದಾರೆ. ಯಾವಾಗಲೂ ಅದರಿಂದ ಚ್ಯುತರಾಗುವುದೇ ಇಲ್ಲವು. ಗೃಹಸ್ಥನಾದವನು ತಾನು ತನ್ನ ಜನ್ಮದ ಮಧ್ಯದಲ್ಲಿ ತಿಳಿದಾಗಲಿ ತಿಳಿಯದೆ ಆಗಲಿ ಒಂದುಸಾರಿಯಾದರೂ ಅತಿಥಿಯನ್ನು ಸತ್ಕರಿಸಿ ತೃಪ್ತಿಪಡಿಸಿದರೆ ಅವನು ಯಮನನ್ನು ನೋಡುವುದೇ ಇಲ್ಲವು. ಅನ್ನವನ್ನು ಹಾಕದವರು ಜಾಜ್ವಲ್ಯ ಮಾನವಾದ ವಿಮಾನದಲ್ಲಿ ಅಮೃತವನ್ನು ಕುಡಿಯುತ್ತಾರೆ

೫೨. ಎಲೈ ವೈಶ್ಯನೆ ! ಅನಂತರ ಅವನು ಸ್ವರ್ಗದಿಂದ ಬಂದಮೇಲೆ ಉತ್ತರ ಕುರು ದೇಶದಲ್ಲಿ ಹುಟ್ಟುವನು. ಅನಂತರ ಭಾರತವರ್ಷದಲ್ಲಿ ರಾಜನಾಗಿ ರಾಜ್ಯವಾಳುತ್ತಾ ಧರ್ಮಿಷ್ಠನಾಗಿರುವನು.

ಅನ್ನದೋ ದೀರ್ಘಮಾಯುಶ್ಚ ವಿಂದೇದಕ್ಷೀಣವಂಶತಾಂ ।
ಸರ್ವೇಷಾಮೇವ ಜನ್ತೂನಾಮನ್ನೇ ಪ್ರಾಣಾಃ ಪ್ರತಿಷ್ಠಿತಾಃ || ೫೩ ||

ತೇನಾನ್ನದೋ ವಿಶಾಂ ಶ್ರೇಷ್ಠ ಪ್ರಾಣದಾತಾ ಸ್ಮೃತೋ ಬುಧೈಃ ।
ಪ್ರಾಹ ವೈವಸ್ವತೋ ದೇವೋ ರಾಜಾನಂ ಕೇಸರಿಧ್ವಜಂ || ೫೪ ||

ಪತಂತಂ ಸ್ವರ್ಗಲೋಕಾತ್ತಂ ಕಾರುಣ್ಯೇನ ವಿಶಾಂ ವರ ।
ದದಸ್ವಾನ್ನಂ ದದಸ್ವಾನ್ನಂ ದದಸ್ವಾನ್ನಂ ನರಾಧಿಪ || ೫೫ ||

ಕರ್ಮಭೂಮೌ ಗತೋ ಭೂಯೋ ಯದಿ ಸ್ವರ್ಗತಿಮಿಚ್ಛಸಿ ।
ಇತ್ಯಶ್ರಾವಿ ಮಯಾ ವೈಶ್ಯ ಸಾಕ್ಷಾದ್ಯಮಮುಖಾತ್ತದಾ || ೫೬ ||

ಅನ್ನದಾನಸಮಂ ದಾನಮತೋ ನಾಸ್ತಿ ಮಯೋದಿತಂ ।
ಪಾನೀಯಂ ಪ್ರದದದ್ಗ್ರೀಷ್ಮೇ ಹೇಮಂತೇ ಚ ತಥೇಂಧನಂ || ೫೭ ||

---

೫೩. ಅನ್ನವನ್ನು ಹಾಕುವವನು ಧೀರ್ಘಾಯಸ್ಸನ್ನೂ ನಾಶವಾಗದೆ ಇರುವ ವಂಶವನ್ನೂ ಹೊಂದುತ್ತಾನೆ. ಎಲ್ಲಾ ಪ್ರಾಣಿಗಳ ಪ್ರಾಣಗಳೂ ಅನ್ನ ದಿಂದಲೇ ಉಳಿದಿರುತ್ತವೆ. ಆದ್ದರಿಂದ ಅನ್ನ ಕೊಡುವವನು ಪ್ರಾಣವನ್ನು ಕೊಡುವವನೆಂದೇ ಹೇಳುತ್ತಾರೆ.

೫೪–೫೬. ಯಮಧರ್ಮರಾಜನು ಕೇಸರಿಧ್ವಜನೆಂಬ ರಾಜನನ್ನು ಕುರಿತು ಸ್ವರ್ಗಲೋಕದಿಂದ ಬೀಳುತ್ತಿರುವಾಗ ಕೃಪೆಯಿಂದ ಇಂತೆಂದು ಹೇಳಿದನು. ಎಲೈ ಕೇಸರಿಧ್ವಜನೆ ! ನೀನು ಮತ್ತೆ ಸ್ವರ್ಗವನ್ನು ಅಪೇಕ್ಷಿಸುವೆಯಾದರೆ ಈ ಕರ್ಮ ಭೂಮಿಯನ್ನು ಹೊಂದಿದ ಮೇಲೆ ಮತ್ತೆ ಮತ್ತೆ ಅನ್ನದಾನವನ್ನು ಮಾಡು, ಅನ್ನದಾನವನ್ನು ಮಾಡು. ಮರೆಯಬೇಡ. ಎಲೈ ವೈಶ್ಯನೇ ! ಈರೀತಿ ಯಾಗಿ ಯಮನ ಮುಖದಿಂದಲೇ ಅವನು ಹೇಳುತ್ತಿದ್ದುದನ್ನು ನಾನು ಪ್ರತ್ಯಕ್ಷವಾಗಿ ಕೇಳಿದ್ದೇನೆ.

೫೭-೫೯. ಆದ್ದರಿಂದಲೇ ಅನ್ನದಾನದ ಸಮವಾದ ದಾನವಿಲ್ಲವೆಂದು ನಾನು ನಿನಗೆ ಹೇಳಿದೆನು. ಬೇಸಿಗೆಯಲ್ಲಿ ಕುಡಿಯಲು ಪಾನೀಯಗಳನ್ನು ಕೊಡು ವವನೂ ಚಳಿಗಾಲದಲ್ಲಿ ಸೌದೆಯನ್ನು ಕೊಡುವವನೂ ಯಾವಾಗಲೂ ಅನ್ನದಾನ

ಅನ್ನಂ ಚೈವ ಸದಾ ದತ್ವಾ ಯಾಮೀಂ ಯಾಂತಿ ನ ಯಾತನಾಂ |
ಜ್ಞಾತಾಜ್ಞಾತೇಷು ಪಾಪೇಷು ಕ್ಷುದ್ರೇಷು ಚ ಮಹತ್ಸು ಚ || ೫೮ ||

ಷಟ್ಸು ಷಟ್ಸು ಚ ಮಾಸೇಷು ಪ್ರಾಯಶ್ಚಿತ್ತಂ ಮಹತ್ಸು ಚ |
ನಿಷ್ಕಲ್ಮಷೋ ನರೋ ವೈಶ್ಯ ಸ ಕೃತಾಂತಂ ನ ಪಶ್ಯತಿ || ೫೯ ||

ಪ್ರಾಯಶ್ಚಿತ್ತಮಕೃತ್ವೇಹ ನರೋ ಭವತಿ ನಾರಕೀ |
ಪ್ರಾಯಶ್ಚಿತ್ತಂ ಚರೇದ್ಯಸ್ತು ವಾಙ್ಮನಃಕಾಯಕರ್ಮಸು || ೬೦ ||

ಸ ಪ್ರಾಪ್ನೋತಿ ಶುಭಾನ್ ಲೋಕಾನ್ ದೇವಗಂಧರ್ವಸೇವಿತಾನ್ |
ನಿತ್ಯಂ ಜಪಂತಿ ಯೇ ವೈಶ್ಯ ಗಾಯಿತ್ರೀಂ ವೇದಮಾತರಂ || ೬೧ ||

ಅನ್ಯದ್ವಾ ವೈದಿಕಂ ಜಪ್ಯಂ ನ ತೇ ಲಿಪ್ಯಂತಿ ಪಾತಕೈಃ |
ವೇದಾಭ್ಯಾಸರತಾ ನಿತ್ಯಂ ಸಾಯಂ ಪ್ರಾತರ್ಹುತಾಶನೇ || ೬೨ ||

---

ಮಾಡುವವನೂ ಯಮನ ಯಾತನೆಯನ್ನು ಹೊಂದುವುದಿಲ್ಲ. ತಿಳಿದು ಮಾಡಿದ ಪಾಪವಾಗಲಿ ತಿಳಿಯದೆ ಮಾಡಿದ ಪಾಪವಾಗಲಿ ದೊಡ್ಡ ಪಾಪವಾಗಲಿ ಯಾವುದೇ ಇರಲಿ ಆರಾರು ತಿಂಗಳಿಗೊಮ್ಮೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಿದ್ದರೆ ಅವನು ಪಾಪವನ್ನು ನಾಶಮಾಡಿಕೊಂಡು ಯಮನ ಯಾತನೆಯನ್ನಾಗಲಿ ಯಮನನ್ನಾಗಲಿ ನೋಡುವುದೇ ಇಲ್ಲ.

೬೦-೬೫. ಆ ರೀತಿಯಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಅವನು ನರಕವನ್ನು ಹೊಂದುತ್ತಾನೆ. ಮನೋವಾಕ್ಕಾಯ ಕರ್ಮಗಳಿಂದ ಯಾವನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆಯೋ ಅವನು ದೇವತೆಗಳೂ ಗಂಧರ್ವರೂ ಇರುವ ಲೋಕವನ್ನು ಹೊಂದುತ್ತಾನೆ. ಎಲೈ ವೈಶ್ಯನೇ ! ಯಾರು ನಿತ್ಯವೂ ವೇದಮಾತೆಯಾದ ಗಾಯತ್ರಿಯನ್ನಾಗಲಿ ಬೇರೆಯಾದ ವೈದಿಕ ಮಂತ್ರವನ್ನಾಗಲಿ ಜಪಿಸುತ್ತಿದ್ದರೆ ಅವರಿಗೆ ಪಾಪವೆಂಬುದು ಅಂಟುವುದೇ ಇಲ್ಲವು. ಯಾವಾಗಲೂ ವೇದವನ್ನು ಅಭ್ಯಾಸ ಮಾಡುತ್ತಿರುವವರೂ ಬೆಳಗ್ಗೆ ಸಾಯಂಕಾಲಗಳಲ್ಲಿ

ಯೇ ಜುಹ್ವತಿ ದ್ವಿಜಾ ವೈಶ್ಯ ತೇ ಲಭ್ಯಂತೇsಕ್ಷಯಾಂ ಗತಿಂ ।
ನಿತ್ಯಂ ವ್ರತಸಮಾಚಾರೋ ನಿತ್ಯಂ ತೀರ್ಥೋಪಸೇವಕಃ ॥ ೬೩ ॥

ಜಿತೇಂದ್ರಿಯಃ ಸತ್ಯವಾಗ್ಯೋ ಯಮಂ ರೌದ್ರಂ ನ ಪಶ್ಯತಿ ।
ಪರಾನ್ನಂ ಪರಪಾಕಂ ಚ ನಿತ್ಯಂ ಧರ್ಮರತಸ್ತ್ಯಜೇತ್ ॥ ೬೪ ॥

ಯೋ ಯಸ್ಯಾನ್ನಂ ಸಮಶ್ನಾತಿ ಸ ತಸ್ಯಾಶ್ನಾತಿಪಾತಕಂ ।
ಸರ್ವತ್ರ ಪ್ರತಿಗೃಹ್ಣೀಯಾದ್ಭೋಜನಂ ನ ಸಮಾಚರೇತ್ ॥ ೬೫ ॥

ನರಕಂ ದಾರುಣಂ ಮತ್ವಾ ಪರಾನ್ನೇ ಚ ರತಿಂ ತ್ಯಜೇತ್ ।
ಯಾಮ್ಯಂ ಹಿ ಯಾತನಾದುಃಖಂ ಪ್ರಾತಸ್ಸ್ನಾಯೀ ನ ಪಶ್ಯತಿ ॥ ೬೬ ॥

ಪ್ರಾತಸ್ಸ್ನಾನೇನ ಪೂಯಂತೇ ಅಪಿ ಪಾಪಕೃತೋ ಜನಾಃ ।
ಪ್ರಾತಸ್ಸ್ನಾನಂ ಹರೇದ್ವೈಶ್ಯ ತತ್ತ್ವದ್ಬಾಹ್ಯಾನ್ತರಂ ಮಲಂ ॥ ೬೭ ॥

---

ಅಗ್ನಿಹೋತ್ರವನ್ನು ಮಾಡುವವರೂ ಉತ್ತಮವಾದ ಗತಿಯನ್ನು ಹೊಂದುತ್ತಾರೆ. ನಿತ್ಯವೂ ವ್ರತವನ್ನು ಮಾಡುವವನೂ ನಿತ್ಯವೂ ತೀರ್ಥದಲ್ಲಿ ಸ್ನಾನಮಾಡುವವನೂ ಜಿತೇಂದ್ರಿಯನಾಗಿಯೂ ಸತ್ಯವನ್ನಾಡುವವನಾಗಿಯೂ ಇರುವನೋ ಅವನು ಯಮನ ರೌದ್ರಮುಖವನ್ನು ನೋಡುವುದೇ ಇಲ್ಲ. ಪರರ ಮನೆಯಲ್ಲಿ ಊಟ ಮಾಡುವುದಾಗಲಿ, ಪರರು ನಿಯಮವಾಗಿ ಕೊಡುತ್ತಿರುವ ಅಕ್ಕಿ ಮುಂತಾದುವನ್ನಾಗಲಿ, ತಿನ್ನಬಾರದು. ಯಾರ ಅನ್ನವನ್ನು ಯಾವನು ತಿನ್ನುತ್ತಾನೆಯೋ ಅವನು ಅವನ ಪಾಪವನ್ನು ತಿನ್ನುತ್ತಾನೆ. ಎಲ್ಲರಲ್ಲಿಯೂ ದಾನವನ್ನು ತೆಗೆದುಕೊಳ್ಳಬಹುದು. ಊಟವನ್ನು ಮಾತ್ರ ಮಾಡಕೂಡದು.

೬೬. ನರಕವು ಬಹು ಕ್ರೂರವೆಂಬುದಾಗಿ ತಿಳಿದುಕೊಂಡು ಪರರ ಅನ್ನದಲ್ಲಿ ಆಸೆಯನ್ನು ಬಿಟ್ಟು ಬಿಡಬೇಕು. ಪ್ರಾತಸ್ನಾನಮಾಡುವವನು ಯಮನ ಯಾತನೆಯನ್ನು ನೋಡುವುದೇ ಇಲ್ಲ.

೬೭. ಪ್ರಾತಸ್ನಾನದಿಂದ ಎಂತಹ ಪಾಪಿಗಳಾದರೂ ಶುದ್ಧರಾಗುತ್ತಾರೆ. ಪ್ರಾತಸ್ನಾನವು ಒಳಗಿನ ಮತ್ತು ಹೊರಗಿನ ಮಲಗಳನ್ನು ನಾಶಮಾಡುತ್ತದೆ.

ಪ್ರಾತಃಸ್ನಾನೇನ ನಿಷ್ಪಾಪೋ ನರೋ ನ ನಿರಯಂ ವ್ರಜೇತ್ ।
ಸ್ನಾನಂ ವಿನಾ ತು ಯೋ ಭುಂಕ್ತೇ ಮಲಾಶೀ ತು ಸದಾ ನರಃ ॥ ೬೮ ॥

ಅಶ್ನೀಯಾದ್ಯಸ್ತುಸ್ಯ ವೈಶ್ಯ ವಿಮುಖಾಸ್ಸರ್ವದೇವತಾಃ ।
ಸ್ನಾನಹೀನೋ ನರಃ ಪಾಪೀ ಸ್ನಾನಹೀನೋಽಶುಚಿಸ್ಸದಾ ॥ ೬೯ ॥

ಅಸ್ನಾಯೀ ನರಕಂ ಭುಕ್ತ್ವಾ ಪುಲ್ಕಸಾದಿಷು ಜಾಯತೇ ।
ಯೇ ಪುನಃ ಸ್ರೋತಸಿ ಸ್ನಾನಮಾಚರಂತೀಹ ಪರ್ವಣಿ ॥ ೭೦ ॥

ತೇ ನೈವ ದುರ್ಗತಿಂ ಯಾಂತಿ ನ ಜಾಯಂತೇ ಕುಯೋನಿಷು ।
ದುಸ್ಸ್ವಪ್ನೋ ದುಷ್ಟಚಿಂತಾ ಚ ವಂಧ್ಯಾ ಭವತಿ ಸರ್ವದಾ ॥ ೭೧ ॥

ಪ್ರಾತಸ್ಸ್ನಾನವಿಶುದ್ಧಾನಾಂ ಪುರುಷಾಣಾಂ ವಿಶಾಂ ವರ ।
ತಿಲಾಂಶ್ಚ ತಿಲಪಾತ್ರಂ ಚ ತಿಲಪದ್ಮಂ ಯಥಾವಿಧಿ ॥ ೭೨ ॥

---

೬೮. ಪ್ರಾತಸ್ನಾನದಿಂದ ಮನುಷ್ಯನು ಪಾಪಗಳನ್ನು ಕಳೆದುಕೊಂಡು ನರಕಕ್ಕೆ ಹೋಗುವುದಿಲ್ಲ. ಸ್ನಾನಮಾಡದೇ ಊಟಮಾಡುವವನು ಯಾವಾಗಲೂ ಪಾಪವನ್ನೇ ತಿನ್ನುತ್ತಾನೆ.

೬೯. ಸ್ನಾನಮಾಡದೆ ಯಾವನು ಊಟಮಾಡುವನೋ ಅವನ ವಿಷಯದಲ್ಲಿ ದೇವತೆಗಳೆಲ್ಲರೂ ವಿಮುಖರಾಗುತ್ತಾರೆ. ಆ ಸ್ನಾನವಿಲ್ಲದ ನರನು ಪಾಪಿಯಾಗುತ್ತಾನೆ. ಸ್ನಾನವಿಲ್ಲದವನು ಯಾವಾಗಲೂ ಅಶುಚಿಯು.

೭೦–೭೧. ಸ್ನಾನಮಾಡುವವನು ನರಕದಲ್ಲಿ ಕಷ್ಟಗಳನ್ನು ಅನುಭವಿಸಿ ಚಂಡಾಲರಲ್ಲಿ ಹುಟ್ಟುತ್ತಾನೆ. ಯಾರು ಪರ್ವಕಾಲಗಳಲ್ಲಿ ನದಿಗಳಲ್ಲಿ ಸ್ನಾನ ಮಾಡುತ್ತಾರೆಯೋ ಅವರು ನರಕವನ್ನು ಹೊಂದುವುದಿಲ್ಲ. ಹೀನಜಾತಿಯಲ್ಲಿ ಹುಟ್ಟುವುದೂ ಇಲ್ಲ. ದುಸ್ವಪ್ನಗಳೂ ದುರ್ಯೋಚನೆಗಳೂ ಉಂಟಾಗುವುದಿಲ್ಲ.

೭೨-೭೫. ಪ್ರಾತಸ್ನಾನಮಾಡಿಕೊಂಡು ಶುದ್ಧರಾದವರಿಗೆ ಎಳ್ಳು, ಎಳ್ಳಿನ ಪಾತ್ರೆ, ಎಳ್ಳಿನ ಪದ್ಮಗಳನ್ನು ಕ್ರಮದಿಂದ ಕೊಟ್ಟರೆ ಅವರು ಯಮನ ಭೂಮಿಗೆ

ದತ್ವಾ ಪ್ರೇತಪತೇರ್ಭೂಮಿಂ ನ ವ್ರಜಂತಿ ನರಾಃ ಕ್ವಚಿತ್ ।
ಪೃಥಿವೀಂ ಕಾಂಚನಂ ಗಾಂ ಚ ಮಹಾದಾನಾನಿ ಷೋಡಶ ॥ ೭೩ ॥

ದತ್ವಾ ತು ನ ನಿವರ್ತಂತೇ ಸ್ವರ್ಗಲೋಕಾದ್ವಿಕುಂಡಲ ।
ಪುಣ್ಯಾಸು ತಿಥಿಷು ಪ್ರಾಜ್ಞೋ ವ್ಯತೀಪಾತೇಷು ಸಂಕ್ರಮೇ ॥ ೭೪ ॥

ಸ್ನಾತ್ವಾ ದತ್ವಾ ಚ ಯೋ ಭುಂಕ್ತೇ ನೈವ ಮಜ್ಜತಿ ದುರ್ಗತಿಂ ।
ನೈವ ಪಶ್ಯಂತಿ ದಾತಾರೋ ದಾರುಣಂ ರೌರವಂ ಪಥಂ ॥ ೭೫ ॥

ಇಹ ಲೋಕೇ ನ ಜಾಯಂತೇ ಕುಲೇ ಧನವಿವರ್ಜಿತೇ ।
ಸತ್ಯವಾದೀ ಸದಾ ಮೌನೀ ಪ್ರಿಯವಾದೀ ಚ ಯೋ ನರಃ ॥ ೭೬ ॥

ಅಕ್ರೋಧನಃ ಕ್ಷಮಾಸಿಂಧುಃ ನಾತಿವಾಗನಸೂಯಕಃ ।
ಸದಾ ದಾಕ್ಷಿಣ್ಯಸಂಪನ್ನಃ ಸದಾ ಭೂತದಯಾನ್ವಿತಃ ॥ ೭೭ ॥

---

ಹೋಗುವುದೇ ಇಲ್ಲ. ಭೂಮಿ, ಚಿನ್ನ, ಗೋವು ಇವನ್ನೂ ಹದಿನಾರು ಬಗೆಯ ಮಹಾದಾನಗಳನ್ನೂ ಆ ಪ್ರಾತಸ್ನಾನಮಾಡುವವನಿಗೆ ಕೊಟ್ಟರೆ ಸ್ವರ್ಗದಿಂದ ಹಿಂದಿರುಗುವುದೇ ಇಲ್ಲ. ಬುದ್ಧಿವಂತನಾದವನು ಪುಣ್ಯತಿಥಿಗಳಲ್ಲಿಯೂ ವ್ಯತೀಪಾತಗಳಲ್ಲಿಯೂ ಸಂಕ್ರಮಣಗಳಲ್ಲಿಯೂ ಸ್ನಾನಮಾಡಿ ದಾನಮಾಡಿ ಊಟ ಮಾಡಿದರೆ ಅವನು ನರಕವನ್ನು ಹೊಂದುವುದೇ ಇಲ್ಲ. ಹಾಗೆ ದಾನಮಾಡಿದವರು ದಾರುಣವಾದ ರೌರವನರಕದ ದಾರಿಯನ್ನೂ ಸಹ ನೋಡುವುದೇ ಇಲ್ಲ. ಈ ಲೋಕದಲ್ಲಿ ಹಣವಿಲ್ಲದ ಬಡವರ ಕುಲದಲ್ಲಿ ಹುಟ್ಟದೆ ಧನಿಕರಲ್ಲಿ ಹುಟ್ಟುತ್ತಾನೆ.

೭೬-೮೧. ಸತ್ಯವಾದಿಯೂ ಯಾವಾಗಲೂ ಮೌನವಾಗಿರುವವನೂ ಪ್ರಿಯವಾದ ಮಾತನ್ನು ಆಡುವವನೂ, ಕೋಪವಿಲ್ಲದವನೂ. ಕ್ಷಮಾವಂತನೂ, ಹೆಚ್ಚುಮಾತನಾಡದವನೂ, ಅಸೂಯೆ ಪಡದವನೂ, ಯಾವಾಗಲೂ ದಾಕ್ಷಿಣ್ಯದಿಂದ ಕೂಡಿರುವವನೂ, ಪ್ರಾಣಿಗಳಲ್ಲಿ ಯಾವಾಗಲೂ ದಯೆಯುಳ್ಳವನೂ,

**ಗೋಪ್ತಾ ಚ ಪರಧರ್ಮಾಣಾಂ ವಕ್ತಾ ಪರಗುಣಸ್ಯ ಚ |**
**ಪರಸ್ವಂ ತೃಣಮಾತ್ರಂ ಚ ಮನಸಾಪಿ ನ ಯೋ ಹರೇತ್ || ೭೮ ||**

**ನ ಪಶ್ಯತಿ ವಿಶಾಂ ಶ್ರೇಷ್ಠ ಸ ವೈ ನರಕಯಾತನಾಂ |**
**ಪರಾಪವಾದೀ ಪಾಪಿಷ್ಠಃ ಪಾಪೇಭ್ಯೋಽಪಿ ಮತೋ ಮಮ || ೭೯ ||**

**ಪಚ್ಯತೇ ನರಕೇ ತಾವದ್ಯಾವದಾಭೂತಸಂಪ್ಲವಂ |**
**ವಕ್ತಾ ಪರುಷವಾಕ್ಯಾನಾಂ ಮಂತವ್ಯೋ ನರಕಾಗತಃ || ೮೦ ||**

**ಸಂದೇಹೋ ನ ವಿಶಾಂ ಶ್ರೇಷ್ಠ ಪುನರ್ಯಾಸ್ಯತಿ ದುರ್ಗತಿಂ |**
**ನ ತೀರ್ಥೈರ್ನ ತಪೋಭಿಶ್ಚ ಕೃತಘ್ನಸ್ಯಾಸ್ತಿ ನಿಷ್ಕೃತಿಃ || ೮೧ ||**

**ಸಹತೇ ಯಾತನಾಂ ಘೋರಾಂ ಸ ನರೋ ನರಕೇ ಚಿರಂ |**
**ಪೃಥಿವ್ಯಾಂ ಯಾನಿ ತೀರ್ಥಾನಿ ತೇಷು ಮಜ್ಜತಿ ಯೋ ನರಃ || ೮೨ ||**

---

ಪರರುಮಾಡಿದ ಧರ್ಮವನ್ನು ಕಾಪಾಡುವವನೂ ಪರರಗುಣವನ್ನು ಹೊಗಳುವವನೂ, ಪರರಧನವನ್ನು ತೆಗೆದುಕೊಳ್ಳಲು ಮನಸ್ಸಿನಲ್ಲಿಯೂ ಯೋಚಿಸದವನೂ ನರಕಯಾತನೆಯನ್ನು ನೋಡುವುದೇ ಇಲ್ಲ. ಪರರಮೇಲೆ ಅಪವಾದವನ್ನು ಹೊರಿಸುವವನು ಪಾಪಿಯು. ಅವನು ಪಾಪಿಗಳೆಲ್ಲರಿಗಿಂತಲೂ ಹೆಚ್ಚಿನವನು. ಪ್ರಳಯಕಾಲದವರೆಗೂ ನರಕದಲ್ಲಿ ಯಾತನೆಯನ್ನು ಹೊಂದುತ್ತಾನೆ. ಕಠಿಣವಾದ ಮಾತುಗಳನ್ನಾಡುವವನನ್ನು ನರಕದಿಂದ ಬಂದವನೆಂದು ತಿಳಿಯತಕ್ಕದ್ದು. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಮತ್ತೆಯೂ ನರಕಕ್ಕೆ ಹೋಗುವನು. ಅದೂ ಖಂಡಿತವು. ಉಪಕಾರವನ್ನು ಸ್ಮರಿಸದವನಿಗೆ ತೀರ್ಥದಿಂದಾಗಲಿ, ತಪಸ್ಸಿನಿಂದಾಗಲಿ ಪ್ರಾಯಶ್ಚಿತ್ತವೇ ಇರುವುದಿಲ್ಲ. (ಆ ಪಾಪವನ್ನು ಕಳೆದುಕೊಳ್ಳಲಾರನು).

೮೨–೮೪. ಅವನು ಆ ನರಕದಲ್ಲಿ ಘೋರವಾದ ಯಾತನೆಯನ್ನು ಅನುಭವಿಸುತ್ತಾನೆ. ಭೂಮಿಯಲ್ಲಿ ಇರುವ ತೀರ್ಥದಲ್ಲೆಲ್ಲಾ ಸ್ನಾನ ಮಾಡುತ್ತಾ

**ಜಿತೇಂದ್ರಿಯೋ ಜಿತಾಹಾರೋ ನ ಸ ಯಾತಿ ಯಮಾಲಯಂ ।**
**ನ ತೀರ್ಥೇ ಪಾತಕಂ ಕುರ್ಯಾತ್ತ್ಯಜೇತ್ತೀರ್ಥೋಪಜೀವನಂ || ೮೩ ||**

**ತೀರ್ಥೇ ಪ್ರತಿಗ್ರಹಸ್ತ್ಯಾಜ್ಯಃ ತ್ಯಾಜ್ಯೋ ಧರ್ಮಸ್ಯ ವಿಕ್ರಯಃ ।**
**ದುರ್ಜರಂ ಪಾತಕಂ ತೀರ್ಥೇ ದುರ್ಜರಶ್ಚ ಪ್ರತಿಗ್ರಹಃ || ೮೪ ||**

**ತೀರ್ಥೇಷು ದುರ್ಜರಂ ಸರ್ವಮೇತತ್ಕೃನ್ನರಕಂ ವ್ರಜೇತ್ ।**
**ಸಕೃದ್ಗಂಗಾಂಭಸಿ ಸ್ನಾತ್ವಾ ಪೂತೋ ಭವತಿ ವಾರಿಣಾ || ೮೫ ||**

**ನರೋ ನ ನಿರಯಂ ಯಾತಿ ಅಪಿ ಪಾತಕರಾಶಿಕೃತ್ ।**
**ವ್ರತಂ ದಾನಂ ತಪೋ ಯಜ್ಞಃ ಪವಿತ್ರಾಣೀತರಾಣಿ ಚ || ೮೬ ||**

**ಗಂಗಾಬಿಂದ್ವಭಿಷೇಕಸ್ಯ ನ ಸಮಾನೀತಿ ವಿಶ್ರುತಂ ।**
**ಅನ್ಯತೀರ್ಥಸಮಾಂ ಗಂಗಾಂ ಯೋ ಬ್ರವೀತಿ ನರಾಧಮಃ || ೮೭ ||**

---

ಜಿತೇಂದ್ರಿಯನಾಗಿಯೂ ಜಿತಾಹಾರಿಯಾಗಿಯೂ ಇದ್ದರೆ ಅವನು ಯಮನ ಮನೆಯನ್ನು ನೋಡುವುದೇ ಇಲ್ಲ. ತೀರ್ಥಸ್ಥಳಗಳಲ್ಲಿ ಪಾಪವನ್ನು ಮಾಡಬಾರದು. ತೀರ್ಥಗಳಲ್ಲಿ ಸಂಪಾದಿಸಿಕೊಂಡು ಅದರಿಂದ ಜೀವನಮಾಡುವುದನ್ನು ಬಿಡಬೇಕು. ತೀರ್ಥದಲ್ಲಿ ದಾನತೆಗೆದುಕೊಳ್ಳಬಾರದು ಧರ್ಮವನ್ನು ಮಾರಬಾರದು. ತೀರ್ಥದಲ್ಲಿ ಮಾಡಿದ ಪಾಪವನ್ನು ಹೋಗಲಾಡಿಸಿಕೊಳ್ಳುವುದು ಕಷ್ಟವು ತೀರ್ಥಗಳಲ್ಲಿ ತೆಗೆದುಕೊಂಡ ದಾನಕ್ಕೆ ಪ್ರತೀಕಾರ ಮಾಡಿಕೊಳ್ಳುವುದು ಕಷ್ಟವು. ತೀರ್ಥಗಳಲ್ಲಿ ಮಾಡಿದ ಪಾಪಕೆಲಸಗಳನ್ನು ನಾಶಮಾಡಿಕೊಳ್ಳುವುದು ಕಷ್ಟವು. ಈ ರೀತಿಯಾಗಿ ತೀರ್ಥಗಳಲ್ಲಿ ಪಾಪಗಳನ್ನು ಮಾಡಿದವನು ನರಕವನ್ನು ಹೊಂದುತ್ತಾನೆ. ಗಂಗೆಯ ನೀರಿನಲ್ಲಿ ಒಂದುಸಾರಿ ಸ್ನಾನಮಾಡಿದರೇನೇ ಅದರಿಂದ ಪವಿತ್ರನಾಗುತ್ತಾನೆ. ಅವನು ಪಾಪಗಳ ರಾಶಿಗಳನ್ನೇ ಮಾಡಿದ್ದರೂ ನರಕವನ್ನೇ ಹೊಂದುವುದಿಲ್ಲ. ವ್ರತಗಳು, ತಪಸ್ಸುಗಳು, ದಾನಗಳು, ಯಜ್ಞಗಳು, ಪವಿತ್ರವಾದುವೂ ಉತ್ತಮವಾದುವೂ ಯಾವುವು ಇವೆಯೋ ಅವು ಇವುಗಳೊಂದೂ ಕೂಡ ಗಂಗೆಯ ಒಂದು ಬಿಂದುವಿನಲ್ಲಿ ಮಾಡಿದ ಸ್ನಾನಕ್ಕೆ ಸಮಾನವಲ್ಲವೆಂಬುದಾಗಿ ಪ್ರಸಿದ್ಧವಾಗಿದೆ. ಯಾವ ಅಯೋಗ್ಯನು ಗಂಗೆಯನ್ನು

**ಸ ಯಾತಿ ರೌರವಂ ವೈಶ್ಯ ನರಕಂ ದಾರುಣಂ ಮಹತ್ ।**
**ಅರ್ಥವಾದಮಿಮಂ ಚಾಪಿ ಪುರಾಣಮಿತಿ ಯೋ ವದೇತ್ ॥**
**ಪಚ್ಯತೇ ನರಕೇ ಘೋರೇ ಕುಲಾನಾಮೇಕವಿಂಶತಿಃ ॥ ೮೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ವೈಶ್ಯ ದೇವದೂತ ಸಂವಾದೇ ದಾನಾದಿ ಮಹಿಮ ವರ್ಣನಂ ನಾಮ ಚತುಶ್ಚತ್ವಾರಿಂಶದಧಿಕ ದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

ಮಿಕ್ಕ ತೀರ್ಥಗಳಿಗೆ ಸಮವೆಂದು ಹೇಳುವನೋ ಅವನು. ದಾರುಣವಾಗಿರುವ ರೌರವನರಕವನ್ನು ಹೊಂದುತ್ತಾನೆ. ಇದು ಪುರಾಣವೆಂಬುದಾಗಿಯೂ ಅಥವಾ ಹೊಗಳಿಕೆ ಎಂಬುದಾಗಿಯೂ ಯಾವನು ಹೇಳುವನೋ ಅವನು ತನ್ನ ಇಪ್ಪತ್ತೊಂದು ತಲೆಗಳನ್ನು ಸೇರಿಸಿಕೊಂಡು ಘೋರವಾದ ನರಕದಲ್ಲಿ ಬಿದ್ದು ಕಷ್ಟಗಳನ್ನು ಅನುಭವಿಸುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ವೈಶ್ಯ ದೇವದೂತರ ಸಂವಾದದಲ್ಲಿ ದಾನಾದಿ ಮಹಿಮೆಯ ವರ್ಣನ ಎಂಬ ಇನ್ನೂರ ನಲ್ವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಚತ್ವಾರಿಂಶದಧಿಕದ್ವಿಶತತಮೋऽಧ್ಯಾಯಃ ||



|| ದೇವದೂತ ಉವಾಚ ||

ಧರ್ಮದ್ರವೋ ಹ್ಯಪಾಂ ಬೀಜಂ ವೈಕುಂಠಚರಣಚ್ಯುತಂ ।
ಧೃತಂ ಮೂರ್ಧ್ನಿ ಮಹೇಶೇನ ಯದ್ಗಾಂಗಮಮಲಂ ಜಲಂ || ೧ ||

ತದ್ಬ್ರಹ್ಮೈವ ನ ಸಂದೇಹೋ ನಿರ್ಗುಣಂ ಪ್ರಕೃತೇಃ ಪರಂ ।
ತೇನ ಕಿಂ ಸಮತಾಂ ಗಚ್ಛೇದಪಿ ಬ್ರಹ್ಮಾಂಡಗೋಲಕೇ || ೨ ||

---

## ಇನ್ನೂರ ನಲವತ್ತೈದನೆಯ ಅಧ್ಯಾಯವು



೧. ದೇವದೂತನು ಹೇಳಿದನು–ಆ ಗಂಗಾನದಿಯು ಧರ್ಮದ ದ್ರವವುಳ್ಳದು. ಧರ್ಮದ ದ್ರವವೇ ಈ ಗಂಗಾನದಿಯ ನೀರಿಗೆ ಬೀಜ (ಮುಖ್ಯಕಾರಣ) ವಾಗಿದೆ. ವೈಕುಂಠ ನಿವಾಸಿಯಾದ ವಿಷ್ಣುವಿನ ಪಾದದಿಂದ ಬಂದುದು. ಆ ನೀರನ್ನು ಮಹೇಶನು ತಲೆಯಿಂದ ಧರಿಸಿರುವನು. ಆ ಗಂಗೆಯ ನೀರು ಈ ರೀತಿಯಾಗಿ ಪವಿತ್ರವಾದುದು.

೨. ಆ ನೀರು ಬ್ರಹ್ಮವೆಂಬುದರಲ್ಲಿ ಸಂದೇಹವೇ ಇಲ್ಲವು. ಗುಣರಹಿತ ವಾದ ಯಾವ ಪ್ರಕೃತಿಯು ಉಂಟೋ ಅದಕ್ಕಿಂತಲೂ ಉತ್ತಮವಾದುದು. ಈ ಬ್ರಹ್ಮಾಂಡದಲ್ಲಿ ಅದಕ್ಕೆ ಸಮವಾದುದು ಯಾವುದು ಇದೆ? ಯಾವುದೂ ಇಲ್ಲವು !

ಗಂಗೇತಿ ನಾಮಗ್ರಹಣಾದ್ಯೋಜನಾನಾಂ ಶತೈರಪಿ ।
ನರೋ ನ ನಿರಯಂ ಯಾತಿ ಕಿಂ ತಯಾ ಸದೃಶಂ ಭವೇತ್ ॥ ೩ ॥

ನಾರಕೀ ದಹ್ಯತೇ ಸದ್ಯಃ ಕ್ರಿಯಾ ನರಕದಾಯಿನಿ ।
ಗಂಗಾಂಭಸಿ ಪ್ರಯತ್ನೇನ ಸ್ನಾತವ್ಯಂ ಸರ್ವದಾ ನರೈಃ ॥ ೪ ॥

ಪ್ರತಿಗ್ರಹನಿವೃತ್ತೋ ಯಃ ಪ್ರತಿಗ್ರಹಕ್ಷಮೋಪಿ ಸನ್ ।
ಸ ದ್ವಿಜೋ ದ್ಯೋತತೇ ನೃಕ್ಷ್ಯ ಕಾಮರೂಪಶ್ಚರನ್ ದಿವಿ ॥ ೫ ॥

ಯಮಲೋಕಂ ನ ಪಶ್ಯಂತಿ ಪ್ರಾಣಾಯಾಮರತಾ ನರಾಃ ।
ಅಪಿ ದುಷ್ಕೃತಕರ್ಮಾಣಸ್ತ ಏವ ಹತಕಿಲ್ಬಿಷಾಃ ॥ ೬ ॥

---

೩. ಮನುಷ್ಯನು ನೂರು ಯೋಜನಗಳ ದೂರದಲ್ಲಿದ್ದರೂ "ಗಂಗೆ" ಎಂದು ಹೆಸರನ್ನು ಹೇಳಿದ ಮಾತ್ರದಿಂದಲೇ ನರಕವನ್ನು ಹೊಂದುವುದೇ ಇಲ್ಲ. ಆ ನೀರಿಗೆ ಸಮವಾದ ನೀರು ಯಾವುದು ತಾನೇ ಇರುವುದು ? ಯಾವುದೂ ಇಲ್ಲ.

೪. ಈ ಗಂಗೆಯಲ್ಲಿ ಸ್ನಾನ ಮಾಡುವುದರಿಂದ ನರಕವನ್ನುಂಟುಮಾಡುವ ಕ್ರಿಯೆಗಳೆಲ್ಲವೂ ನಾಶವಾಗುತ್ತವೆ. ಆದ್ದರಿಂದ ಗಂಗಾ ನದಿಯಲ್ಲಿ ಜನರು ಯಾವಾಗಲೂ ಸ್ನಾನಮಾಡಬೇಕು.

೫. ದಾನ ತೆಗೆದುಕೊಳ್ಳಲು ಶಕ್ತನಾಗಿದ್ದರೂ ಯಾವನು ದಾನವನ್ನು ತೆಗೆದುಕೊಳ್ಳುವುದಿಲ್ಲವೋ ಅವನು ಸ್ವರ್ಗದಲ್ಲಿ ಮನಸ್ಸು ಬಂದಂತೆ ಸಂಚರಿಸುತ್ತಾ ಪ್ರಕಾಶಿಸುತ್ತಾನೆ.

೬. ಪ್ರಾಣಾಯಾಮದಲ್ಲಿ ಆಸಕ್ತರಾದ ನರರೂ ಕೂಡ ಪಾಪಿಗಳಾದರೂ ಆ ಪ್ರಾಣಾಯಾಮದಿಂದ ತಮ್ಮ ಪಾಪಗಳನ್ನು ಕಳೆದುಕೊಂಡು ಯಮನ ಲೋಕವನ್ನೇ ನೋಡುವುದಿಲ್ಲ.

ದಿವಸೇ ದಿವಸೇ ವೈಶ್ಯ ಪ್ರಾಣಾಯಾಮಾಸ್ತು ಷೋಡಶ ।
ಅಪಿ ಭ್ರೂಣಹನಂ ಮಾಸಾತ್ಪುನಂತ್ಯಹರಹಃಕೃತಾಃ ॥ ೭ ॥

ತಪಾಂಸಿ ಯಾನಿ ತಪ್ಯಂತೇ ವ್ರತಾನಿ ನಿಯಮಾಶ್ಚ ಯೇ ।
ಗೋಸಹಸ್ರಪ್ರದಾನಂ ಚ ಪ್ರಾಣಾಯಾಮಾಸ್ತು ತತ್ಸಮಾಃ ॥ ೮ ॥

ಗಂಗಾಂಭೋಽಪಿ ಕುಶಾಗ್ರೇಣ ಮಾಸಮೇಕಂ ತು ಯಃ ಪಿಬೇತ್ ।
ಸಂವತ್ಸರಶತಂ ಸಾಗ್ರಂ ಪ್ರಾಣಾಯಾಮಾಸ್ತು ತತ್ಸಮಾಃ ॥ ೯ ॥

ಯಸ್ತು ವರ್ಷಶತಂ ಧತ್ತೇ ಲಲಾಟೇ ಗೋಪಿಚಂದನಂ ।
ಶಿಖಾಯಾಂ ತುಲಸೀಂ ಚೈವ ಪ್ರಾಣಾಯಾಮಾಸ್ತು ತತ್ಸಮಾಃ ॥ ೧೦ ॥

---

೭. ಎಲೈ ವೈಶ್ಯನೆ! ಪ್ರತಿ ದಿವಸದಲ್ಲಿಯೂ ಮನುಷ್ಯನು ಹದಿನಾರು ಪ್ರಾಣಾಯಾಮಗಳನ್ನು ಮಾಡಬೇಕು. ಹಾಗೆ ಮಾಡಿದರೆ ಆ ಪ್ರಾಣಯಾಮವು, ಅವನು ಭ್ರೂಣಹತ್ಯೆಯನ್ನು ಮಾಡಿದ್ದರೂ ಒಂದು ತಿಂಗಳವರೆಗೆ ಮಾಡಿದರೆ ಪವಿತ್ರನಾಗುತ್ತಾನೆ.

೮. ಅನೇಕವಾದ ತಪಸ್ಸುಗಳೂ, ವ್ರತಗಳೂ, ನಿಯಮಗಳೂ, ಸಾವಿರ ಗೋದಾನಗಳೂ ಆ ಒಂದು ತಿಂಗಳಿನ ಪ್ರಾಣಾಯಾಮಕ್ಕೆ ಸಮವಾಗುತ್ತವೆ.

೯. ಗಂಗೆಯ ನೀರನ್ನು ದರ್ಭೆಯ ತುದಿಯಿಂದ ಬಿಟ್ಟುಕೊಂಡು ಒಂದು ತಿಂಗಳವರೆಗೆ ಕುಡಿದರೆ ಅದು ಒಂದು ವರ್ಷ ಪೂರ್ತಿಯಾಗಿ ಪ್ರಾಣಾಯಾಮವನ್ನು ಮಾಡಿದವನ ಪುಣ್ಯಗಳಿಗೆ ಸಮವಾಗುತ್ತವೆ.

೧೦. ಯಾವನು ನೂರು ವರ್ಷಗಳವರೆಗೂ ಹಣೆಯಲ್ಲಿ ಗೋಪೀ ಚಂದನವನ್ನು ಇಟ್ಟುಕೊಂಡು ತಲೆಯಲ್ಲಿ ತುಳಸಿಯ ದಳವನ್ನೂ ಇಟ್ಟು ಕೊಳ್ಳುತ್ತಾನೆಯೋ ಆ ಪುಣ್ಯವೂ ಹದಿನಾರು ಪ್ರಾಣಾಯಾಮಗಳನ್ನು ಮಾಡಿದ ಪುಣ್ಯವೂ ಸಮವಾಗುತ್ತವೆ.

ಪಾತಕಂ ತು ಮಹದ್ಯಚ್ಚ ತಥಾ ಕ್ಷುದ್ರೋಪಪಾತಕಂ ।
ಪ್ರಾಣಾಯಾಮೈಸ್ತು ತತ್ಸರ್ವಂ ಭಸ್ಮಸಾತ್ಕುರ್ಯಾದ್ದ್ವಿಜೋತ್ತಮ ॥ ೧೧

ಮಾತೃವತ್ಪರದಾರಾನ್ಯೇ ಸಂಪಶ್ಯಂತಿ ನರೋತ್ತಮಾಃ ।
ನ ತೇ ಯಾಂತಿ ವಿಶಾಂ ಶ್ರೇಷ್ಠ ಕದಾಚಿದ್ಯಮಯಾತನಾಂ ॥ ೧೨

ಮನಸಾಪಿ ಪರೇಷಾಂ ಯಃ ಕಲತ್ರಾಣಿ ನ ಸೇವತೇ ।
ಸ ಹಿ ಲೋಕದ್ವಯೇ ಪೂಜ್ಯಸ್ತೇನ ವೈಶ್ಯ ಧೃತಾ ಧರಾ ॥ ೧೩

ತಸ್ಮಾದ್ಧರ್ಮರತೈಸ್ತ್ಯಾಜ್ಯಂ ಪರದಾರಾವಲೋಕನಂ ।
ನಯಂತಿ ಪರದಾರಾಸ್ತಾನ್ನರಕಾನೇಕವಿಂಶತಿಂ ॥ ೧೪

ನ ಲೋಭೇ ಜಾಯತೇ ಯೇಷಾಂ ಪರದ್ರವ್ಯೇಷು ಮಾನಸಂ ।
ತೇ ಯಾಂತಿ ದೇವಲೋಕಂ ಹಿ ನ ಯಮಂ ವೈಶ್ಯಸತ್ತಮ ॥ ೧೫

---

೧೧. ಮಹಾಪಾತಕಗಳೂ, ಉಪಪಾತಕಗಳೂ, ಅಲ್ಪ ಪಾತಕಗಳೂ ಎಲ್ಲವೂ ಕೂಡಾ ಪ್ರಾಣಾಯಾಮದಿಂದ ಸುಟ್ಟು ಬೂದಿಯಾಗಿ ಹೋಗುತ್ತವೆ

೧೨. ಯಾವ ಮನುಷ್ಯಶ್ರೇಷ್ಠರು ಪರರ ಹೆಂಡತಿಯನ್ನು ತಾಯಿಯರಂತೆ ಕಾಣುತ್ತಾರೆಯೋ ಅವರು ಯಾವಾಗಲೂ ಯಮ ಯಾತನೆಯನ್ನು ಕಾಣುವುದೇ ಇಲ್ಲ.

೧೩. ಯಾವನು ಮನಸ್ಸಿನಲ್ಲಿಯೂ ಕೂಡ ಪರರ ಹೆಂಡಿರನ್ನು ಕಾಮಿಸು ವುದಿಲ್ಲವೋ ಅವನೇ ಇಹ ಪರಗಳಲ್ಲಿ ಪೂಜ್ಯನು. ಅವನಿಂದಲೇ ಈ ಭೂಮಿಯು ನಿಂತಿರುವುದು.

೧೪. ಆದ್ದರಿಂದ ಪರರ ಹೆಂಡಿರನ್ನು ಧರ್ಮದಲ್ಲಿ ಮನಸ್ಸುಳ್ಳವರು ಕಾಮಿಸ ಬಾರದು. ಆ ಪರರ ಹೆಂಡಿರನ್ನು ಕಾಮಿಸಿ ಭೋಗಿಸಿದರೆ ಅವರು ಇಪ್ಪತ್ತೊಂದು ತಲೆಗಳನ್ನೂ ನರಕಕ್ಕೆ ಕೆಡಗುತ್ತಾರೆ.

೧೫. ಪರರ ದ್ರವ್ಯವನ್ನು ನೋಡಿ ಯಾರ ಮನಸ್ಸು ಆಸೆಪಡುವುದಿಲ್ಲವೋ ಅವರು ದೇವಲೋಕಕ್ಕೆ ಹೋಗುತ್ತಾರೆ. ಯಮನನ್ನು ನೋಡುವುದೇ ಇಲ್ಲ

ಸಂಧ್ಯಾಮಠೇ ದೇವಗೃಹೇ ಪುರಾಣಪಠನಂ ಸದಾ |
ಕಾರಯಂತಿ ಚ ಕುರ್ವಂತಿ ತೇ ನ ಯಾಂತಿ ಯಮಾಲಯಂ ॥ ೧೬ ॥

ಸತ್ಸು ಕ್ರೋಧನಿದಾನೇಷು ಯಃ ಕ್ರೋಧೇನ ನ ಜೀಯತೇ |
ಜಿತನಾಕಸ್ಸ ಮನ್ತವ್ಯಃ ಪುರುಷೋಽಕ್ರೋಧನೋ ಭುವಿ ॥ ೧೭ ॥

ಮಾತರಂ ಪಿತರಂ ಪುತ್ರಸ್ತ್ವಾರಾಧಯತಿ ದೇವವತ್ |
ಸಂಪ್ರಾಪ್ತೇ ವಾರ್ಧಕೇ ಕಾಲೇ ನ ಸ ಯಾತಿ ಯಮಾಲಯಂ ॥ ೧೮ ॥

ಪಿತುರಾಧಿಕ್ಯಭಾವೇನ ಯೇಽರ್ಚಯಂತಿ ಗುರುಂ ನರಾಃ |
ಭವಂತ್ಯತಿಥಯಸ್ತೇ ವೈ ಬ್ರಹ್ಮಣೋ ವೈಶ್ಯಸತ್ತಮ ॥ ೧೯ ॥

ಏತಾ ಏವ ಸ್ತ್ರಿಯೋ ಧನ್ಯಾಃ ಶೀಲಸ್ಯ ಪರಿರಕ್ಷಣಾತ್ |
ಶೀಲಭಂಗೇನ ನಾರೀಣಾಂ ಯಮಲೋಕಸ್ಸುದಾರುಣಃ ॥ ೨೦ ॥

---

೧೬. ಸಂಧ್ಯಾಮಂಟಪ, ದೇವಸ್ಥಾನಗಳಲ್ಲಿ ಯಾರು ಯಾವಾಗಲೂ ಪುರಾಣವನ್ನು ಹೇಳಿಸುತ್ತಾರೆಯೋ ಅಥವ ಹೇಳುತ್ತಾರೆಯೋ ಅವರು ಯಮನನ್ನು ನೋಡುವುದೇ ಇಲ್ಲ.

೧೭. ಯಾವನು ಕೋಪಕ್ಕೆ ಒಳಗಾಗುವುದಿಲ್ಲವೋ ಅವನು ಸ್ವರ್ಗವನ್ನೂ ಜಯಿಸಿರುವನೆಂದು ತಿಳಿ. ಅವನೇ ಲೋಕದಲ್ಲಿ ಕ್ರೋಧವಿಲ್ಲದವನು.

೧೮. ಮುಪ್ಪಿನ ಕಾಲಬಂದಾಗ ಯಾವನು ತಾಯಿತಂದೆಗಳನ್ನು ದೇವರಂತೆ ಪೂಜಿಸುತ್ತಾನೆಯೋ ಅವನು ನರಕವನ್ನು ಹೊಂದುವುದಿಲ್ಲ.

೧೯. ತಂದೆಗಿಂತಲೂ ಹೆಚ್ಚಾಗಿ ಗುರುವನ್ನು ಯಾರು ಪೂಜಿಸುತ್ತಾರೆಯೋ ಅವರು ಬ್ರಹ್ಮನಿಗೆ ಅತಿಥಿಗಳಾಗುತ್ತಾರೆ.

೨೦. ಯಾವ ಹೆಂಗಸರು ಶೀಲವನ್ನು ರಕ್ಷಿಸಿಕೊಂಡಿರುವರೋ ಅವರೇ ಧನ್ಯರು. ಹೆಂಗಸರು ಶೀಲವನ್ನು ಕೆಡಿಸಿಕೊಂಡರೆ ದಾರುಣವಾದ ಯಮಲೋಕವು ಬರುತ್ತದೆ.

**ಶೀಲಂ ರಕ್ಷ್ಯಂ ಸದಾ ಸ್ತ್ರೀಣಾಂ ದುಷ್ಟಸಂಗವಿವರ್ಜನಾತ್ ।**
**ಶೀಲೇನೈವ ಪರಂ ಸ್ವರ್ಗಃ ಸ್ತ್ರೀಣಾಂ ವೈಶ್ಯ ನ ಸಂಶಯಃ ॥ ೨೧ ॥**

**ವಿಶುದ್ಧಪಾಕೆಯಜ್ಞೇನ ನಿದೇಶಕರಣೇನ ಚ ।**
**ಸ್ವರ್ಗತಿರ್ವಿಹಿತಾ ವೈಶ್ಯ ತಸ್ಯ ನೋ ನಾರಕೀ ಗತಿಃ ॥ ೨೨ ॥**

**ವಿಚಾರಯಂತಿ ಯೇ ಶಾಸ್ತ್ರಂ ವೇದಾಭ್ಯಾಸರತಾಶ್ಚ ಯೇ ।**
**ಪುರಾಣಸಂಹಿತಾಂ ಯೇ ಚ ಶ್ರಾವಯಂತಿ ಪಠಂತಿ ಚ ॥ ೨೩ ॥**

**ವ್ಯಾಕುರ್ವಂತಿ ಸ್ಮೃತಿಂ ಯೇ ಚ ಯೇ ಚ ಧರ್ಮಪ್ರಬೋಧಕಾಃ ।**
**ವೇದಾಂತನಿಪುಣಾ ಯೇ ವೈ ತೈರಿಯಂ ಜಗತೀ ಧೃತಾ ॥ ೨೪ ॥**

**ತತ್ತದಭ್ಯಾಸಮಾಹಾತ್ಮ್ಯಾತ್ಸರ್ವೇ ತೇ ಹತಕಿಲ್ಬಿಷಾಃ ।**
**ಗಚ್ಛಂತಿ ಬ್ರಹ್ಮಣೋ ಲೋಕೇ ಯತ್ರ ಮೋಹೋ ನ ವಿದ್ಯತೇ ॥ ೨೫ ॥**

---

೨೧. ಹೆಂಗಸರು ದುಷ್ಟಸಹವಾಸವನ್ನು ಬಿಡೋಣದರಿಂದ ತಮ್ಮ ಶೀಲವನ್ನು ಕಾಪಾಡಿಕೊಳ್ಳಬೇಕು. ಹೆಂಗಸರಿಗೆ ಶೀಲವು ಸರಿಯಾಗಿದ್ದರೆ ಅವರು ಸ್ವರ್ಗವನ್ನು ಹೊಂದುವುದರಲ್ಲಿ ಸಂಶಯವಿಲ್ಲ.

೨೨. ಶುದ್ಧವಾದ ಅಡಿಗೆಯನ್ನು ಊಟಮಾಡುವುದರಿಂದಲೂ ಶಾಸ್ತ್ರದಂತೆ ನಡೆಯುವುದರಿಂದಲೂ ಎಲ್ಲರಿಗೂ ಸ್ವರ್ಗವು ಸಿಕ್ಕುತ್ತದೆ. ಅವನಿಗೆ ನರಕವು ಇಲ್ಲವೇ ಇಲ್ಲ.

೨೩. ಯಾರು ಯಾವಾಗಲೂ ಶಾಸ್ತ್ರವನ್ನು ವಿಚಾರಮಾಡುತ್ತಿರುವರೋ, ಯಾರು ಯಾವಾಗಲೂ ವೇದಾಭ್ಯಾಸವನ್ನೇ ಮಾಡುತ್ತಿರುವರೋ, ಅವರು ಸ್ವರ್ಗವನ್ನು ಹೊಂದುತ್ತಾರೆ.

೨೪. ಸ್ಮೃತಿಗೆ ಯಾರು ಅರ್ಥವನ್ನು ಹೇಳುತ್ತಾರೆಯೋ ಯಾರು ಧರ್ಮವನ್ನು ಮಾಡುವಂತೆ ಪ್ರೇರಿಸುತ್ತಾರೆಯೋ ಯಾರು ವೇದಾಂತದಲ್ಲಿ ನಿಪುಣರೋ ಅವರಿಂದ ಈ ಭೂಮಿಯು ನಿಂತಿದೆ.

೨೫. ಆಯಾ ಧರ್ಮಗಳನ್ನು ಅಭ್ಯಾಸಮಾಡಿಕೊಂಡು ನಡೆಸುತ್ತಿರುವುದರಿಂದ ಅವರು ಪಾಪಿಗಳನ್ನು ನಾಶಮಾಡಿಕೊಂಡು ಅಜ್ಞಾನದ ತೊಂದರೆಯಿಲ್ಲದಿರುವ ಬ್ರಹ್ಮಲೋಕವನ್ನು ಹೊಂದುತ್ತಾರೆ.

ಜ್ಞಾನಮಜ್ಞಾಯ ಯೋ ದದ್ಯಾತ್ ವೇದಶಾಸ್ತ್ರಸಮುದ್ಭವಂ ।
ಅಪಿ ದೇವಾಸ್ತಮರ್ಚಂತಿ ಭವಬಂಧವಿದಾರಕಂ ॥ ೨೬ ॥

ಶ್ರೂಯತಾಮದ್ಭುತಂ ಹ್ಯೇತದ್ರಹಸ್ಯಂ ವೈಶ್ಯಸತ್ತಮ ।
ಸಮ್ಮತಂ ಧರ್ಮರಾಜಸ್ಯ ಸರ್ವಲೋಕಾಮೃತಪ್ರದಂ ॥ ೨೭ ॥

ನ ಯಮಂ ಯಮಲೋಕಂ ಚ ಯಮದೂತಾನ್ ಮಹಾಭಯಾನ್ ।
ಪಶ್ಯಂತಿ ವೈಷ್ಣವಾಃ ಕ್ವಾಪಿ ಸತ್ಯಂ ಸತ್ಯಂ ವದಾಮ್ಯಹಂ ॥
ಪ್ರಾಹಾಸ್ಮಾನ್ಸ ಯಮೋ ಭ್ರಾತಃ ಸಾದರೇಣ ಪುನಃ ಪುನಃ ॥ ೨೮ ॥

॥ ಯಮ ಉವಾಚ ॥

ಪಾಪಿಷ್ಠಾ ಅಪಿ ತೇ ತ್ಯಾಜ್ಯಾ ಅಸ್ಮಾಕಂ ದೃಷ್ಟಿಗೋಚರಾಃ ।
ಯೇ ಸ್ಮರಂತಿ ಸಕೃದ್ದೂತಾಃ ಪ್ರಸಂಗೇನಾಪಿ ಕೇಶವಂ ॥ ೨೯ ॥

---

೨೬. ವೇದಶಾಸ್ತ್ರಗಳ ಜ್ಞಾನವನ್ನು ದಡ್ಡನಿಗೆ ಯಾವನು ಹೇಳಿಕೊಡುತ್ತಾನೆಯೋ ಅವನನ್ನು ಸಂಸಾರಬಂಧನಿವರ್ತಕನೆಂದು ದೇವತೆಗಳು ಪೂಜಿಸುತ್ತಾರೆ.

೨೭. ಎಲೈ ವೈಶ್ಯನೆ! ಧರ್ಮರಾಜನಿಗೆ ಸಮ್ಮತವಾದ ಸರ್ವಜನಗಳಿಗೂ ಅಮೃತದಂತಿರುವ ಅದ್ಭುತವಾದ ಈ ರಹಸ್ಯವನ್ನು ಕೇಳು.

೨೮. ವೈಷ್ಣವರಾದವರು ಯಮನನ್ನಾಗಲೀ ಯಮಲೋಕವನ್ನಾಗಲಿ ಮಹಾಭಯಂಕರರಾದ ಯಮದೂತರನ್ನಾಗಲಿ ಯಾವಾಗಲೂ ನೋಡುವುದೇ ಇಲ್ಲ. ಸತ್ಯವು. ಸತ್ಯವಾಗಿಯೂ ಹೇಳುತ್ತೇನೆ. ಇಂತೆಂದು ಯಮನು ನಮ್ಮನ್ನು ಕುರಿತು ಬಾರಿ ಬಾರಿಗೂ ಪ್ರಯತ್ನಪಟ್ಟು ಹೇಳುತ್ತಲೇ ಇರುವನು.

೨೯-೩೧. ಯಮನು ಹೇಳಿದನು–ಎಲೈ ದೂತರಿರಾ! ಪ್ರಸಂಗಬಂದಾಗ ಒಂದುಸಾರಿಯಾದರೂ ಯಾರು ಕೇಶವನನ್ನು ಸ್ಮರಿಸುತ್ತಾರೆಯೋ ಅವರ

ತೇ ವಿಧ್ವಸ್ತಾಖಿಲಾಘೌಘಾ ಯಾಂತಿ ವಿಷ್ಣೋಃ ಪರಂ ಪದಂ ।
ದುರಾಚಾರಃ ಕೃತಘ್ನೋ ವಾ ಮಹಾಪಾಪರತೋಽಪಿ ವಾ ॥ ೩೦ ॥

ಭವದ್ಭಿಃ ಸರ್ವದಾ ತ್ಯಾಜ್ಯೋ ವಿಷ್ಣುಂ ಚೇದ್ಭಜತೇ ನರಾಃ ।
ವೈಷ್ಣವೋ ಯದ್ಗೃಹೇ ಭುಂಕ್ತೇ ಯೇಷಾಂ ವೈಷ್ಣವಸಂಗತಿಃ ॥
ತೇಽಪಿ ವಃ ಪರಿಹಾರ್ಯಾ ಸ್ಯುಸ್ತತ್ಸಂಗಹತಕಿಲ್ಬಿಷಾಃ ॥ ೩೧ ॥

॥ ಯಮದೂತ ಉವಾಚ ॥

ಇತಿ ವೈಶ್ಯಾನುಶಾಸ್ತ್ಯಸ್ಮಾನ್ ಯಮೋ ದಂಡಧರಸ್ಸದಾ ।
ಅತೋ ನ ವೈಷ್ಣವಾ ಯಾಂತಿ ರಾಜಧಾನೀಂ ಯಮಸ್ಯ ತು ॥ ೩೨ ॥

ವಿಷ್ಣುಭಕ್ತಿಂ ವಿನಾ ನೃಣಾಂ ಪಾಪಿಷ್ಠಾನಾಂ ವಿಶಾಂ ವರ ।
ಉಪಾಯೋ ನಾಸ್ತಿ ನಾಸ್ತ್ಯನ್ಯಃ ಸಂತರ್ತುಂ ನರಕಾಂಬುಧಿಂ ॥ ೩೩ ॥

---

ಪಾಪಗಳೆಲ್ಲವೂ ಹೋಗುತ್ತವೆ. ಅವರು ಪಾಪಿಷ್ಠರಾಗಿ ನಿಮ್ಮ ಕಣ್ಣಿಗೆ ಬಿದ್ದರೂ ಅವರನ್ನು ಬಿಟ್ಟುಬಿಡಿರಿ. ಮನುಷ್ಯನು ದುರಾಚಾರಿಯಾಗಿರಲಿ ಕೃತಘ್ನನಾಗಿರಲಿ ಪಾಪದಲ್ಲಿಯೇ ಆಸಕ್ತನಾಗಿರಲಿ ಅವನು ವಿಷ್ಣುವನ್ನು ಭಜಿಸಿದರೆ ಅವನನ್ನು ನೀವು ಖಂಡತವಾಗಿಯೂ ಬಿಟ್ಟುಬಿಡಿರಿ. ವೈಷ್ಣವರು ಯಾರು ಮನೆಯಲ್ಲಿ ಊಟಮಾಡುತ್ತಾರೆಯೋ, ಯಾರು ವೈಷ್ಣವರ ಸಹವಾಸದಲ್ಲಿಯೇ ಇರುವರೋ ಅವರು ಆ ಸಹವಾಸದಿಂದ ಪಾಪವನ್ನು ಕಳೆದುಕೊಂಡಿರುವುದರಿಂದ ಅವರನ್ನು ಬಿಟ್ಟುಬಿಡಿರಿ.

೩೨. ಯಮದೂತನು ಹೇಳಿದನು—ಎಲೈ ವೈಶ್ಯನೆ! ದಂಡಧರನಾದ ಯಮನು ಹೀಗೆಂಬುದಾಗಿ ನಮಗೆ ನಿತ್ಯವೂ ಎಚ್ಚರಿಸುತ್ತಾ ಹೇಳುತ್ತಿರುವನು. ಆದ್ದರಿಂದ ವೈಷ್ಣವರು ಯಮನ ರಾಜಧಾನಿಗೆ ಹೋಗುವುದೇ ಇಲ್ಲ.

೩೩. ಎಲೈ ವೈಶ್ಯನೆ! ಪಾಪಿಷ್ಠರಾದವರಿಗೆ ವಿಷ್ಣುಭಕ್ತಿಯನ್ನು ಒಂದನ್ನು ಹೊರತಾಗಿ ಬೇರೆಯಾದ ಉಪಾಯವು ನರಕವೆಂಬ ಸಾಗರವನ್ನು ದಾಟಲು ಇಲ್ಲವೇ ಇಲ್ಲ.

ಶ್ವಪಾಕಮಿವ ನೇಕ್ಷಂತೇ ಲೋಕೇ ವಿಪ್ರಮವೈಷ್ಣವಂ ।
ವೈಷ್ಣವೋ ವರ್ಣಬಾಹ್ಯೋಽಪಿ ಪುನಾತಿ ಭುವನತ್ರಯಂ ॥ ೩೪ ॥

ಏತಾವತಾಲಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ ।
ಆಕ್ರೈಶ್ಯ ಪುತ್ರಮಘವಾನ್ಯದಜಾಮಿಲೋಽಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥ ೩೫ ॥

ನರಕೇಽಪಿ ಚಿರಂ ಮಗ್ನಾಃ ಪೂರ್ವಜಾ ಯೇ ಕುಲದ್ವಯೇ ।
ತದೈವ ಯಾಂತಿ ತೇ ಸ್ವರ್ಗಂ ಯಸ್ಯಾರ್ಚತಿ ಸುತೋ ಹರಿಂ ॥ ೩೬ ॥

ವಿಷ್ಣುದಾಸಸ್ಯ ದಾಸಾ ಯೇ ವೈಷ್ಣವಾನ್ನ ಭುಜಶ್ಚ ಯೇ ।
ತೇಽಪಿ ಕ್ರತುಭುಜಾಂ ವೈಶ್ಯ ಗತಿಂ ಯಾಂತಿ ನಿರಾಮಯಾಃ ॥ ೩೭ ॥

---

೩೪. ಲೋಕದಲ್ಲಿ ಜನರು ವಿಷ್ಣುಭಕ್ತನಲ್ಲದವನನ್ನು ಹೊಲೆಯನ ಅಡಿಗೆಯಂತೆ ಕಣ್ಣೆತ್ತಿಯೂ ನೋಡುವುದೇ ಇಲ್ಲ. ವೈಷ್ಣವನು ವರ್ಣದಿಂದ ನೀಚನಾದರೂ ಮೂರುಲೋಕವನ್ನೂ ಪವಿತ್ರವನ್ನಾಗಿ ಮಾಡುತ್ತಾನೆ.

೩೫. ಭಗವಂತನ ಗುಣಕರ್ಮಗಳ ಹೊಗಳುವಿಕೆಯೂ ಆ ಭಗವಂತನ ನಾಮಸ್ಮರಣೆಯೂ ಮನುಷ್ಯರ ಪಾಪವನ್ನು ನಾಶಮಾಡಲು ಶಕ್ತವಾಗಿರುತ್ತವೆ. ಪಾಪಿಯಾದ ಅಜಾಮಿಳನು ಸಾಯುವಾಗ ಮಗನನ್ನು "ನಾರಾಯಣ" ನೆಂದು ಕರೆದು ಮುಕ್ತಿಯನ್ನು ಹೊಂದಿದನು.

೩೬. ಯಾವನು ಹರಿಯನ್ನು ಪೂಜಿಸುತ್ತಾನೆಯೋ ಅವನ ತಾಯಿ ತಂದೆಯರ ಕುಟುಂಬದಲ್ಲಿ ಯಾರು ನರಕದಲ್ಲಿ ಬಿದ್ದಿರುವರೋ ಅವರು ಒಡನೆಯೇ ಎದ್ದು ಸ್ವರ್ಗವನ್ನು ಹೊಂದುತ್ತಾರೆ.

೩೭. ವಿಷ್ಣುವಿನ ದಾಸರಿಗೆ ದಾಸರಾಗಿರುವವರೂ ವೈಷ್ಣವಾನ್ನವನ್ನು ಊಟಮಾಡುವವರೂ ಕೂಡ ಯಾಗಮಾಡಿದವರು ಹೊಂದುವ ಉತ್ತಮವಾದ ಗತಿಯನ್ನು ಹೊಂದುತ್ತಾರೆ.

ಪ್ರಾರ್ಥಯೇದ್ವೈಷ್ಣವಸ್ಯಾನ್ನಂ ಪ್ರಯತ್ನೇನ ವಿಚಕ್ಷಣಃ ।
ಸರ್ವಪಾಪವಿಶುದ್ಧ್ಯರ್ಥಂ ತದಭಾವೇ ಜಲಂ ಪಿಬೇತ್ ॥ ೩೮ ॥

ಗೋವಿಂದೇತಿ ಜಪನ್ಮಂತ್ರಂ ಕುತ್ರಚಿನ್ಮ್ರಿಯತೇ ಭುವಿ ।
ಸ ನರೋ ನ ಯಮಂ ಪಶ್ಯೇತ್ತಂ ಚ ನೇಕ್ಷಾಮಹೇ ವಯಂ ॥ ೩೯ ॥

ಸಾಂಗಂ ಸಮುದ್ರಂ ಸನ್ಯಾಸಂ ಸರ್ಷಿಚ್ಛಂದಂ ಸದೈವತಂ ।
ಸದೀಕ್ಷಾವಿಧಿ ಸಧ್ಯಾನಂ ಸಮಂತ್ರಂ ದ್ವಾದಶಾಕ್ಷರಂ ॥ ೪೦ ॥

ಅಷ್ಟಾಕ್ಷರಂ ಚ ಮಂತ್ರೇಶಂ ಯೇ ಜಪಂತಿ ನರೋತ್ತಮಾಃ ।
ತಾನ್ ದೃಷ್ಟ್ವಾ ಬ್ರಹ್ಮಹಾ ಶುದ್ಧ್ಯೇತ್ಕಿಂ ಪುನರ್ವೈಷ್ಣವಃ ಸ್ವಯಂ ॥ ೪೧ ॥

---

೩೮. ತಿಳಿವಳಿಕೆಯುಳ್ಳವನು ಪ್ರಯತ್ನಪಟ್ಟು ಪ್ರಾರ್ಥಿಸಿಕೊಂಡು ವೈಷ್ಣವರ ಮನೆಯ ಅನ್ನವನ್ನು ತಿನ್ನಬೇಕು. ಅದು ಸಿಕ್ಕದಿದ್ದರೆ ನೀರನ್ನಾದರೂ ಕೇಳಿ ತೆಗೆದುಕೊಂಡು ಕುಡಿಯಬೇಕು. ಹಾಗೆ ಮಾಡಿದರೆ ಎಲ್ಲಾ ಪಾಪಗಳೂ ಹೋಗುತ್ತವೆ.

೩೯. ಯಾವನಾದರೂ ಗೋವಿಂದ ಎಂಬತಕ್ಕ ಮಂತ್ರವನ್ನು ಜಪಿಸುತ್ತಾ ಎಲ್ಲಿ ಸತ್ತರೂ ಅವನು ಯಮನನ್ನು ನೋಡುವುದಿಲ್ಲ. ನಾವೂ ಕೂಡ ಅವನನ್ನು ನೋಡುವುದಿಲ್ಲ.

೪೦–೪೧. ಅಂಗ, ಮುದ್ರೆ, ನ್ಯಾಸ, ಋಷಿ, ಛಂದಸ್ಸು, ದೈವತ, ದೀಕ್ಷೆ, ವಿಧಿ, ಧ್ಯಾನ ಇವುಗಳಿಂದ ಕೂಡಿಕೊಂಡಿರುವ ದ್ವಾದಶಾಕ್ಷರಿಯ ಮಂತ್ರವನ್ನಾಗಲಿ ಅಷ್ಟಾದಶಾಕ್ಷರಿಯ ಮಂತ್ರವನ್ನಾಗಲೀ ಯಾರು ಜಪಿಸುತ್ತಾರೆಯೋ ಅವರನ್ನು ನೋಡಿದರೇನೇ ಬ್ರಹ್ಮಹತ್ಯೆ ಮಾಡಿದವನು ಶುದ್ಧನಾಗುತ್ತಾನೆ. ಹೀಗಿರುವಾಗ ವೈಷ್ಣವನು ಶುದ್ಧನಾಗುವನು ಎಂಬುದನ್ನು ಹೇಳಬೇಕಾದುದೇ ಇಲ್ಲ.

ಶಂಖಿನಶ್ಚಕ್ರಿಣೋ ಭೂತ್ವಾ ಬ್ರಹ್ಮಾಯುರ್ವನಮಾಲಿನಃ ।
ವಸಂತಿ ವೈಷ್ಣವೇ ಲೋಕೇ ವಿಷ್ಣುರೂಪೇಣ ತೇ ನರಾಃ ॥ ೪೨ ॥

ಹೃದಿ ಸೂರ್ಯೇ ಜಲೇ ವಾಥ ಪ್ರತಿಮಾಸ್ಥಂಡಿಲೇಷು ಚ ।
ಸಮಭ್ಯರ್ಚ್ಯ ಹರಿಂ ಯಾನ್ತಿ ನರಾಸ್ತತ್ಪರಮಂ ಪದಂ ॥ ೪೩ ॥

ಅಥವಾ ಸರ್ವದಾ ಪೂಜ್ಯೋ ವಾಸುದೇವೋ ಮುಮುಕ್ಷುಭಿಃ ।
ಸಾಲಗ್ರಾಮಶಿಲಾಚಕ್ರೇ ಚಕ್ರೇ ಕೀಟವಿನಿರ್ಮಿತೇ ॥ ೪೪ ॥

ಅಧಿಷ್ಠಾನಂ ಚ ತದ್ವಿಷ್ಣೋಃ ಸರ್ವಪಾಪಪ್ರಣಾಶನಂ ।
ಸಾಲಗ್ರಾಮಂ ಸದಾ ವೈಶ್ಯ ಸರ್ವೇಷಾಮಪಿ ಮುಕ್ತಿದಂ ॥ ೪೫ ॥

---

೪೨. ಆ ರೀತಿಯಾಗಿ ವೈಷ್ಣವರಾದವರು ಶಂಖ ಚಕ್ರಗಳನ್ನು ಧರಿಸಿಕೊಂಡು ವನಮಾಲೆಯನ್ನು ಹಾಕಿಕೊಂಡು ವಿಷ್ಣುಲೋಕದಲ್ಲಿ ವಿಷ್ಣುವಿನ ಆಕಾರವನ್ನು ಹೊಂದಿಯೇ ಬ್ರಹ್ಮನ ಆಯುಸ್ಸನ್ನು ಹೊಂದಿ ಸುಖಿಸುತ್ತಾರೆ.

೪೩. ವೈಷ್ಣವರಾದವರು ಹೃದಯದಲ್ಲಿಯಾಗಲಿ ಸೂರ್ಯನಲ್ಲಿಯಾಗಲಿ ನೀರಿನಲ್ಲಿಯಾಗಲಿ ಸ್ಥಂಡಿಲವೆಂಬ ಮಂಡಲವನ್ನು ಹಾಕಿರುವ ಜಾಗದಲ್ಲಿಯಾಗಲಿ ಹರಿಯನ್ನು ಪೂಜಿಸಿ ಪರಮಪದವನ್ನು ಹೊಂದುತ್ತಾರೆ.

೪೪. ಹಾಗಾಗದಿದ್ದರೆ ಮೋಕ್ಷವನ್ನು ಅಪೇಕ್ಷಿಸತಕ್ಕವರು ಕೀಟಗಳಿಂದ ಚಕ್ರಾಕಾರವು ನಿರ್ಮಿತವಾಗಿರುವ ಸಾಲಿಗ್ರಾಮದ ಕಲ್ಲಿನ ಚಕ್ರದಲ್ಲಿ ಆ ವಾಸುದೇವನನ್ನು ಯಾವಾಗಲೂ ಪೂಜಿಸಬೇಕು.

೪೫. ಸಾಲಗ್ರಾಮವು ವಿಷ್ಣುವು ಯಾವಾಗಲೂ ಇರತಕ್ಕ ಸ್ಥಾನವು. ಸರ್ವಪಾಪಗಳನ್ನೂ ಹಾಳುಮಾಡುತ್ತದೆ. ಅದು ಎಲ್ಲರಿಗೂ ಮುಕ್ತಿಯನ್ನು ಕೊಡುತ್ತದೆ.

ಯಃ ಪೂಜಯೇದ್ಧರಿಂ ಚಕ್ರೇ ಸಾಲಗ್ರಾಮಸಮುದ್ಭವೇ ।
ರಾಜಸೂಯಸಹಸ್ರೈಶ್ಚ ತೈರಿಷ್ಟೈಃ ಕಿಂ ಪ್ರಯೋಜನಂ ॥ ೪೬ ॥

ಭಜನ್ತೇ ಶ್ರುತವೇದಾನ್ತಾ ಬ್ರಹ್ಮನಿರ್ವಾಣಮಚ್ಯುತಂ ।
ತತ್ಪ್ರಸಾದೋ ಭವೇನ್ನೄಣಾಂ ಸಾಲಗ್ರಾಮಶಿಲಾರ್ಚನಾತ್ ॥ ೪೭ ॥

ಸರ್ವಕಾಷ್ಠಗತೋ ವಹ್ನಿಃ ಮಥನೇನ ಪ್ರಕಾಶತೇ ।
ಯಥಾ ತಥಾ ಹರಿರ್ವ್ಯಾಪೀ ಸಾಲಗ್ರಾಮೇ ಪ್ರಕಾಶತೇ ॥ ೪೮ ॥

ಅಪಿ ಪಾಪಸಮಾಚಾರಾಃ ಕರ್ಮಣ್ಯನಧಿಕಾರಿಣಃ ।
ಸಾಲಗ್ರಾಮಾರ್ಚಕಾ ವೈಶ್ಯ ನೈವ ಯಾಂತಿ ಯಮಾಲಯಂ ॥ ೪೯ ॥

ನ ತಥಾ ರಮತೇ ಲಕ್ಷ್ಮ್ಯಾಂ ನ ತಥಾ ಸ್ವಪುರೇ ಹರಿಃ ।
ಸಾಲಗ್ರಾಮಶಿಲಾಚಕ್ರೇ ಯಥಾ ಸ ರಮತೇ ಸದಾ ॥ ೫೦ ॥

---

೪೬. ಸಾಲಗ್ರಾಮದಲ್ಲಿ ಉಂಟಾಗಿರುವ ಚಕ್ರದಲ್ಲಿ ಯಾವನು ಹರಿಯನ್ನು ಪೂಜಿಸುತ್ತಾನೆಯೋ ಅವನು ಸಾವಿರಾರು ರಾಜಸೂಯ ಯಾಗಗಳನ್ನು ಮಾಡಬೇಕಾದುದೇ ಇಲ್ಲ. ಆ ಫಲವು ಇದರಿಂದಲೇ ಬರುತ್ತದೆ.

೪೭. ವೇದಾಂತವನ್ನು ಓದಿದವರೂ ಕೇಳಿದವರೂ ಆ ಮೋಕ್ಷಸ್ವರೂಪನಾದ ಅಚ್ಯುತನನ್ನು ಸೇವಿಸುತ್ತಿರುತ್ತಾರೆ ಈ ಸಾಲಗ್ರಾಮದ ಶಿಲಾರ್ಚನೆಯಿಂದ ಅಂತಹ ಅಚ್ಯುತನ ಅನುಗ್ರಹವು ಉಂಟಾಗುತ್ತದೆ.

೪೮. ಎಲ್ಲಾ ಸೌದೆಗಳಲ್ಲಿಯೂ ಇರುವ ಬೆಂಕಿಯು ತಿಕ್ಕುವ ಕಡ್ಡಿಯಿಂದ ಹೊರಹೊಮ್ಮಿ ಪ್ರಕಾಶಿಸುವಂತೆ ಸರ್ವವ್ಯಾಪಿಯಾದ ಹರಿಯು ಸಾಲಗ್ರಾಮ ಶಿಲೆಯಲ್ಲಿ ಪ್ರಕಾಶಿಸುವನು.

೪೯. ಪಾಪಿಗಳಾಗಿ ಹರಿಯ ಅರ್ಚನೆಯಲ್ಲಿ ಅಧಿಕಾರವನ್ನು ಪಡೆಯದಿದ್ದವರೂ ಕೂಡ ಸಾಲಿಗ್ರಾಮವನ್ನು ಪೂಜಿಸಿದರೆ ಅವರು ಯಮನ ಬಳಿಗೆ ಹೋಗುವುದಿಲ್ಲ.

೫೦. ಸಾಲಗ್ರಾಮದ ಶಿಲೆಯಲ್ಲಿ ಹರಿಯು ಸರ್ವಕಾಲದಲ್ಲಿಯೂ ರಮಿಸುತ್ತಿರುವಂತೆ ಲಕ್ಷ್ಮಿಯಲ್ಲಿಯಾಗಲಿ ವೈಕುಂಠದಲ್ಲಿಯಾಗಲಿ ಅವನು ರಮಿಸುವುದಿಲ್ಲ.

ಅಗ್ನಿಹೋತ್ರಂ ಹುತಂ ತೇನ ದತ್ತಾ ಪೃಥ್ವೀ ಸಸಾಗರಾ ।
ಯೇನಾರ್ಚಿತೋ ಹರಿಶ್ಚಕ್ರೇ ಸಾಲಿಗ್ರಾಮಶಿಲೋದ್ಭವೇ ॥ ೫೧ ॥

ಸಕೃತ್ಕರೋತಿ ಮನುಜಃ ಸಾಲಗ್ರಾಮಶಿಲಾರ್ಚನಂ ।
ಪಾಪಾನಿ ವಿಲಯಂ ಯಾಂತಿ ತಮಃ ಸೂರ್ಯೋದಯೇ ಯಥಾ ॥ ೫೨ ॥

ಶಿಲಾ ದ್ವಾದಶ ಭೋ ವೈಶ್ಯ ಸಾಲಗ್ರಾಮತಿಲೋದ್ಭವಾಃ ।
ವಿಧಿವತ್ಪೂಜಿತಾ ಯೇನ ತಸ್ಯ ಪುಣ್ಯಂ ವದಾಮಿ ತೇ ॥ ೫೩ ॥

ಕೋಟಿದ್ವಾದಶಲಿಂಗೈರ್ಹಿ ಪೂಜಿತೈಃ ಸ್ವರ್ಣಪಙ್ಕಜೈಃ ।
ಯತ್ ಸ್ಯಾದ್ದ್ವಾದಶಕಲ್ಪೇಷು ದಿನೇನೈಕೇನ ತತ್ಫಲಂ ॥ ೫೪ ॥

ಯಃ ಪುನಃ ಪೂಜಯೇದ್ಭಕ್ತ್ಯಾ ಸಾಲಗ್ರಾಮಶಿಲಾಶತಂ ।
ಉಷಿತ್ವಾ ಸ ಹರೇರ್ಲೋಕೇ ಚಕ್ರವರ್ತೀ ಸ ಜಾಯತೇ ॥ ೫೫ ॥

---

೫೧. ಸಾಲಿಗ್ರಾಮ ಶಿಲೆಯಲ್ಲಿ ಹರಿಯನ್ನು ಪೂಜಿಸಿದರೆ ಅವನು ಅಗ್ನಿಹೋತ್ರವನ್ನು ಮಾಡಿದಂತಾಗುತ್ತದೆ. ಸಮುದ್ರದೊಡನೆ ಕೂಡಿದ ಭೂಮಿಯನ್ನು ದಾನಮಾಡಿದಂತಾಗುತ್ತದೆ.

೫೨. ಮನುಷ್ಯನು ಒಂದುಬಾರಿ ಸಾಲಿಗ್ರಾಮದ ಪೂಜೆಯನ್ನು ಮಾಡಿದರೂ ಕೂಡ ಸೂರ್ಯನು ಹುಟ್ಟಿದೊಡನೆಯೇ ಕತ್ತಲೆಯು ನಾಶವಾಗುವಂತೆ ಅವನ ಪಾಪಗಳೆಲ್ಲವೂ ನಾಶವಾಗುತ್ತವೆ.

೫೩. ಎಲೈ ವೈಶ್ಯನೆ! ಶಿಲೆಯಲ್ಲಿ ಹುಟ್ಟಿದ ಸಾಲಿಗ್ರಾಮಗಳು ಹನ್ನೆರಡು ಬಗೆಯಾಗಿವೆ. ಅವುಗಳಲ್ಲಿ ವಿಷ್ಣುವನ್ನು ಪೂಜಿಸಿದರೆ ಬರುವ ಪುಣ್ಯವನ್ನು ಹೇಳುತ್ತೇನೆ. ಕೇಳು.

೫೪. ಹನ್ನೆರಡು ಲಿಂಗಗಳನ್ನು ಕೋಟಿಬಾರಿ ಚಿನ್ನದ ಕಮಲಗಳಿಂದ ಹನ್ನೆರಡು ಕಲ್ಪಗಳವರೆಗೂ ಪೂಜಿಸಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಈ ಸಾಲಿಗ್ರಾಮವನ್ನು ಒಂದು ದಿನ ಪೂಜಿಸುವುದರಿಂದಲೇ ಬರುತ್ತದೆ.

೫೫. ಹೀಗಿರುವಲ್ಲಿ ಯಾವನು ನೂರು ಸಾಲಿಗ್ರಾಮಗಳನ್ನು ಭಕ್ತಿಯಿಂದ ಪೂಜಿಸುತ್ತಾನೆಯೋ ಅವನು ಹರಿಯ ಲೋಕದಲ್ಲಿ ಬಹುಕಾಲ ಸುಖವನ್ನು ಅನುಭವಿಸಿ ಚಕ್ರವರ್ತಿಯಾಗಿ ಹುಟ್ಟುವನು.

ಕಾಮ್ಯೈಃ ಕ್ರೋಧೈಶ್ಚ ಲೋಭೈಶ್ಚ ಮೋಹೈಶ್ಚಾಪಿ ನರಾಧಮಃ ।
ಸೋಽಪಿ ಯಾತಿ ಹರೇರ್ಲೋಕಂ ಸಾಲಗ್ರಾಮಶಿಲಾರ್ಚನಾತ್ ॥ ೫೬ ॥

ಯಃ ಪೂಜಯತಿ ಗೋವಿಂದಂ ಸಾಲಗ್ರಾಮೇ ಸದಾ ನರಃ ।
ಆಭೂತಸಂಪ್ಲವಂ ಯಾವನ್ನ ಸ ಪ್ರಚ್ಯವತೇ ದಿವಃ ॥ ೫೭ ॥

ವಿನಾ ತೀರ್ಥೈರ್ವಿನಾ ದಾನೈರ್ವಿನಾ ಯಜ್ಞೈರ್ವಿನಾ ಮತಿಂ ।
ಮುಕ್ತಿಂ ಯಾಂತಿ ನರಾ ವೈಶ್ಯ ಸಾಲಗ್ರಾಮಶಿಲಾರ್ಚನಾತ್ ॥ ೫೮ ॥

ನರಕಂ ಗರ್ಭವಾಸಂ ಚ ತಿರ್ಯಕ್ತ್ವಂ ಕ್ರಿಮಿಕೀಟತಾಂ ।
ನ ಯಾತಿ ವೈಶ್ಯ ಪಾಪೋಽಪಿ ಸಾಲಗ್ರಾಮಶಿಲಾರ್ಚಕಃ ॥ ೫೯ ॥

---

೫೬. ಕಾಮ, ಕ್ರೋಧ, ಲೋಭ, ಮೋಹಗಳಿಂದ ಕೂಡಿದ ಅಯೋಗ್ಯನಾದರೂ ಈ ಸಾಲಿಗ್ರಾಮವನ್ನು ಪೂಜಿಸಿದರೆ ಅವನೂ ಕೂಡ ವೈಕುಂಠವನ್ನು ಹೊಂದುತ್ತಾನೆ.

೫೭. ಯಾವನು ಸಾಲಿಗ್ರಾಮದಲ್ಲಿ ಗೋವಿಂದನನ್ನು ಯಾವಾಗಲೂ ಪೂಜಿಸುವನೋ ಅವನು ಪ್ರಳಯವಾಗುವವರೆಗೂ ವೈಕುಂಠದಿಂದ ಚ್ಯುತಿಯನ್ನು ಹೊಂದುವುದಿಲ್ಲ.

೫೮. ಎಲೈ ವೈಶ್ಯನೆ ! ಸಾಲಿಗ್ರಾಮದ ಶಿಲೆಯನ್ನು ಪೂಜಿಸುವುದರಿಂದ ಮುಕ್ತಿಯನ್ನು ಹೊಂದಿಯೇ ಹೊಂದುತ್ತಾನೆ. ಅವನು ತೀರ್ಥಸ್ನಾನವನ್ನಾಗಲಿ, ದಾನಗಳನ್ನಾಗಲಿ, ಯಜ್ಞಗಳನ್ನಾಗಲಿ ಮಾಡಬೇಕಾದುದೇ ಇಲ್ಲ. ಈ ಧರ್ಮಗಳನ್ನು ಮಾಡದಿದ್ದವನು ಸಾಲಿಗ್ರಾಮವನ್ನು ಪೂಜಿಸಿದರೆ ಮುಕ್ತಿಯನ್ನು ಹೊಂದುತ್ತಾನೆ.

೫೯. ಎಲೈ ವೈಶ್ಯನೇ ! ಸಾಲಿಗ್ರಾಮವನ್ನು ಪೂಜಿಸುವವನು ನರಕವನ್ನಾಗಲಿ, ಗರ್ಭವಾಸವನ್ನಾಗಲಿ, ಕ್ರಿಮಿಗಳಾಗಿ ಕೀಟಗಳಾಗಿ ಹುಟ್ಟುವಿಕೆಯನ್ನಾಗಲಿ ಹೊಂದುವುದೇ ಇಲ್ಲ.

ದೀಕ್ಷಾವಿಧಾನಮಂತ್ರಜ್ಞಶ್ಚಕ್ರೇ ಯೋ ಬಲಿಮಾವಹೇತ್ ।
ಸ ಯಾತಿ ವೈಷ್ಣವಂ ಧಾಮ ಸತ್ಯಂ ಸತ್ಯಂ ಮಯೋದಿತಂ ॥ ೬೦ ॥

ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಸಾಲಗ್ರಾಮಶಿಲಾತೋಯೈರ್ಯೋಭಿಷೇಕಂ ಸಮಾಚರೇತ್ ॥ ೬೧ ॥

ಗಂಗಾ ಗೋದಾವರೀ ರೇವಾ ಸದ್ಯೋ ಮುಕ್ತಿಪ್ರದಾ ಇಮಾಃ ।
ನಿವಸಂತೀಹ ತಾಸ್ಸರ್ವಾಃ ಸಾಲಗ್ರಾಮಶಿಲಾಜಲೇ ॥ ೬೨ ॥

ನೈವೇದ್ಯೈರ್ವಿವಿಧೈಃ ಪುಷ್ಪೈರ್ಧೂಪೈರ್ದೀಪೈರ್ವಿಲೇಪನೈಃ ।
ಗೀತವಾದಿತ್ರಸ್ತೋತ್ರಾದ್ಯೈಃ ಸಾಲಗ್ರಾಮಶಿಲಾರ್ಚನಂ ॥ ೬೩ ॥

ಕುರುತೇ ಮಾನವೋ ಯಸ್ತು ಕಲೌ ಭಕ್ತಿಪರಾಯಣಃ ।
ಜಪನ್ನಾಮಸಹಸ್ರಾಣಿ ರಮತೇ ಸನ್ನಿಧೌ ಹರೇಃ ॥ ೬೪ ॥

---

೬೦. ದೀಕ್ಷಾವಿಧಾನ ಮಂತ್ರಗಳನ್ನು ಬಲ್ಲವನು ಆ ವಿಧಿಯಿಂದ ಸಾಲಿಗಾಮ ಚಕ್ರದಲ್ಲಿ ಪೂಜೆಯನ್ನು ಮಾಡಿದರೆ ಅವನು ವೈಕುಂಠವನ್ನು ಹೊಂದುತ್ತಾನೆ. ಇದು ಸತ್ಯವು. ನಾನು ಹೇಳಿದ್ದೇನೆ.

೬೧. ಸಾಲಿಗ್ರಾಮದ ತೀರ್ಥದ ನೀರಿನಿಂದ ಯಾವನು ತಲೆಯ ಮೇಲೆ ಸ್ನಾನಮಾಡಿಸಿಕೊಳ್ಳುತ್ತಾನೆಯೋ ಅವನು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದಂತೆ ಆಗುತ್ತಾನೆ. ಎಲ್ಲಾ ಯಜ್ಞಗಳನ್ನೂ ಆಚರಿಸಿದಂತಾಗುತ್ತಾನೆ.

೬೨. ಗಂಗೆ ಗೋದಾವರಿ ರೇವಾ ಇವುಗಳು ತಮ್ಮಲ್ಲಿ ಸ್ನಾನ ಮಾಡಿದ ವರಿಗೆ ಒಡನೆಯೇ ಮುಕ್ತಿಯನ್ನು ಕೊಡುತ್ತವೆ. ಅವೆಲ್ಲವೂ ಈ ಸಾಲಿಗ್ರಾಮದ ತೀರ್ಥದಲ್ಲಿ ಯಾವಾಗಲೂ ವಾಸಿಸುತ್ತವೆ.

೬೩–೬೪. ನೈವೇದ್ಯಗಳಿಂದಲೂ, ಧೂಪಗಳಿಂದಲೂ, ಗೀತಗಳಿಂದಲೂ, ವಾದ್ಯಗಳಿಂದಲೂ, ಸ್ತೋತ್ರಗಳಿಂದಲೂ ಯಾವನು ಭಕ್ತಿಯಿಂದ ಸಾಲಿಗ್ರಾಮ ಶಿಲೆಯನ್ನು ಪೂಜಿಸುತ್ತಾ ಹರಿಯ ಸಹಸ್ರ ನಾಮವನ್ನು ಜಪಿಸುತ್ತಾನೆಯೋ ಅವನು ಹರಿಯ ಸನ್ನಿಧಿಯಲ್ಲಿ ವಾಸಿಸುವನು.

ಲಿಂಗೈಸ್ತು ಕೊಟಿಭಿರ್ದೃಷ್ಟೈರ್ಯತ್ಫಲಂ ಪೂಜಿತೈಸ್ತು ತೈಃ ।
ಸಾಲಗ್ರಾಮಶಿಲಾಯಾಸ್ತು ಏಕೇನಾಪೀಹ ತತ್ಫಲಂ ॥ ೬೫ ॥

ಸಕೃದಭ್ಯರ್ಚಿತೇ ಲಿಂಗೇ ಸಾಲಗ್ರಾಮಶಿಲೋದ್ಭವೇ ।
ಮುಕ್ತಿಂ ಪ್ರಯಾಂತಿ ಮನುಜಾಃ ಸಾಂಖ್ಯೇನಾಪಿ ವಿವರ್ಜಿತಾಃ ॥ ೬೬ ॥

ಸಾಲಗ್ರಾಮಶಿಲಾರೂಪೀ ಯತ್ರ ತಿಷ್ಠತಿ ಕೇಶವಃ ।
ತತ್ರ ದೇವಾಸುರಾ ಯಕ್ಷಾ ಭುವನಾನಿ ಚತುರ್ದಶ ॥ ೬೭ ॥

ಸಾಲಗ್ರಾಮ ಶಿಲಾಗ್ರೇ ಹಿ ಯಃ ಶ್ರಾದ್ಧಂ ಕುರುತೇ ನರಃ ।
ಪಿತರಸ್ತಸ್ಯ ತಿಷ್ಠಂತಿ ತೃಪ್ತಾಃ ಕಲ್ಪಶತಂ ದಿವಿ ॥ ೬೮ ॥

---

೬೫. ಕೋಟಿ ಲಿಂಗಗಳನ್ನು ದರ್ಶನಮಾಡಿ ಪೂಜಿಸಿ ಸ್ತುತಿಸಿದರೆ ಯಾವ ಫಲವು ಬರುತ್ತದೆಯೋ ಆ ಫಲವನ್ನು ಒಂದೇ ಒಂದು ಸಾಲಿಗ್ರಾಮವನ್ನು ಪೂಜಿಸುವುದರಿಂದಲೇ ಹೊಂದುತ್ತಾನೆ.

೬೬. ಸಾಲಿಗ್ರಾಮ ಶಿಲೆಯಲ್ಲಿ ಉಂಟಾಗಿರುವ ಚಕ್ರವನ್ನು ಒಂದು ಬಾರಿ ಪೂಜಿಸಿದರೇನೇ ಅವರು ಸಾಂಖ್ಯವನ್ನು ಓದಿ ಅದರಂತೆ ಆಚರಿಸದಿದ್ದರೂ ಮುಕ್ತಿಯನ್ನು ಹೊಂದುತ್ತಾರೆ.

೬೭. ಸಾಲಿಗ್ರಾಮ ಸ್ವರೂಪಿಯಾದ ಕೇಶವನು ಎಲ್ಲಿರುವನೋ ಅಲ್ಲಿ ದೇವತೆಗಳೂ, ಅಸುರರೂ, ಯಕ್ಷರೂ ಒಟ್ಟನಲ್ಲಿ ಹದಿನಾಲ್ಕು ಲೋಕಗಳೂ, ಇರುತ್ತವೆ.

೬೮. ಸಾಲಿಗ್ರಾಮದ ಶಿಲೆಯ ಎದುರಿನಲ್ಲಿ ಯಾವನು ಶ್ರಾದ್ಧವನ್ನು ಮಾಡುತ್ತಾನೆಯೋ ಅವನ ಪಿತೃಗಳು ತೃಪ್ತರಾಗಿ ನೂರು ಕಲ್ಪಗಳವರೆಗೂ ವೈಕುಂಠದಲ್ಲಿ ವಾಸಿಸುತ್ತಾರೆ.

ಯೇ ಪಿಬಂತಿ ನರಾ ನಿತ್ಯಂ ಸಾಲಗ್ರಾಮಶಿಲಾಜಲಂ ।
ಪಂಚಗವ್ಯಸಹಸ್ರೈಸ್ತು ಪ್ರಾಶಿತೈಃ ಕಿಂ ಪ್ರಯೋಜನಂ ॥ ೭೯ ॥

ಸಾಲಿಗ್ರಾಮಶಿಲಾ ಯತ್ರ ತತ್ತೀರ್ಥಂ ಯೋಜನತ್ರಯಂ ।
ತತ್ರ ದಾನಂ ಚ ಹೋಮಶ್ಚ ಸರ್ವಂ ಕೋಟಿಗುಣಂ ಭವೇತ್ ॥ ೭೦ ॥

ಸಾಲಗ್ರಾಮಶಿಲಾತೋಯಂ ಚಕ್ರಾಂಕಿತಶಿಲಾಜಲೈಃ ।
ಮಿಶ್ರಿತಂ ಪಿಬತೇ ಯಸ್ತು ದೇಹೇ ಶಿರಸಿ ಧಾರಯೇತ್ ॥ ೭೧ ॥

ತಸ್ಯ ಚಕ್ರಾಂಕಿತೋ ದೇವೋ ಭವೇನ್ನಾಸ್ತ್ಯತ್ರ ಸಂಶಯಃ ।
ಗುಪ್ತಂ ನ ಪಶ್ಯತೇ ಕೋಽಪಿ ಲೋಕೇ ಸೂರ್ಯಸುತಂ ವಿನಾ ॥ ೭೨ ॥

---

೬೯. ಯಾರು ಸಾಲಿಗ್ರಾಮದ ಅಭಿಷೇಕದ ತೀರ್ಥವನ್ನು ಕುಡಿಯುತ್ತಾರೆಯೋ ಅವರು ಸಾವಿರಾರು ಗಂಚಗವ್ಯವನ್ನು ತೆಗೆದು ಕೊಂಡುದರಿಂದ ಪ್ರಯೋಜನವೇನೂ ಇರುವುದಿಲ್ಲ. ಎಂದರೆ ಸಾವಿರಾರು ಬಾರಿ ಪಂಚಗವ್ಯವನ್ನು ತೆಗೆದು ಕೊಳ್ಳುವುದರಿಂದ ಒಂದು ಬಾರಿ ಸಾಲಿಗ್ರಾಮದ ತೀರ್ಥವನ್ನು ತೆಗೆದು ಕೊಳ್ಳುವುದು ಉತ್ತಮವು.

೭೦. ಸಾಲಿಗ್ರಾಮದ ಶಿಲೆಯು ಇರುವ ಜಾಗಕ್ಕೆ ಸುತ್ತಲೂ ಮೂರು ಯೋಜನಗಳಷ್ಟು ದೂರ ತೀರ್ಥವಾಗಿರುವುದು. ಅಷ್ಟರೊಳಗೆ ಮಾಡಿದ ದಾನ ಹೋಮಗಳೆಲ್ಲವೂ ಕೋಟಿಬಾರಿ ಮಾಡಿದ ಫಲವನ್ನು ಕೊಡುತ್ತವೆ.

೭೧-೭೨. ಚಕ್ರದಿಂದ ಕೂಡಿರುವ ಸಾಲಿಗ್ರಾಮದ ತೀರ್ಥವನ್ನು ಬೇರೆ ನೀರಿನೊಡನೆ ಸೇರಿಸಿ ಕುಡಿಯಬೇಕು. ದೇಹದ ಮೇಲೆಯೂ ತಲೆಯ ಮೇಲೆಯೂ ಧರಿಸಿಕೊಳ್ಳಬೇಕು. ಎಂದರೆ ಪ್ರೋಕ್ಷಿಸಿಕೊಳ್ಳಬೇಕು. ಅವನಿಗೆ ವಿಷ್ಣುವು ಪ್ರಸನ್ನನಾಗುತ್ತಾನೆ. ಸಂಶಯವಿಲ್ಲ. ಈ ರೀತಿಯಲ್ಲಿ ಗುಟ್ಟಾಗಿ ಸೇರಿಸಿದ್ದರೂ ಅದನ್ನು ಯಮಧರ್ಮನೊಬ್ಬನು ತಿಳಿದುಕೊಳ್ಳುವನೇ ವಿನಹ ಮತ್ತಾರಿಗೂ ತಿಳಿಯುವುದಿಲ್ಲ.

ಅತೋ ನ್ಯವಾರಯದ್ದೂತಾನ್ ವೈಷ್ಣವಾನಾಂ ಗೃಹೋತ್ತಮೇ ।
ಭೀತೋ ವೈಷ್ಣವಭಕ್ತಾನಾಂ ಪಾದೋದಕನಿಷೇವಣಾತ್ ॥ ೭೩ ॥

ತ್ರಿರಾತ್ರಫಲದೋ ಮಾಘೋ ಯಾಃ ಕಾಶ್ಚಿದಸಮುದ್ರಗಾಃ ।
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ॥ ೭೪ ॥

ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ ।
ಪಾದೋದಕಂ ಭಗವತೋ ದ್ವಾದಶಾಬ್ದಫಲಪ್ರದಂ ॥ ೭೫ ॥

ಕೋಟಿತೀರ್ಥಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಂ ।
ತೋಯಂ ಯದಿ ಭವೇತ್ಪುಣ್ಯಂ ಸಾಲಗ್ರಾಮಸಮುದ್ಭವಂ ॥ ೭೬ ॥

---

೭೩. ವಿಷ್ಣು ಭಕ್ತರ ಪಾದೋದಕದ ಸೇವನೆಯಿಂದ ಹೆದರಿದ ಯಮನು ವಿಷ್ಣುಭಕ್ತರ ಮನೆಯಲ್ಲಿ ಹೋಗುವಾಗ ಬಹುವಾಗಿ ಎಚ್ಚರಿಕೆಯಿಂದಿರಿ. ಎಂದು ಹೇಳಿರುವನು. ಕೊನೆಗೆ ಅಂತಹ ಮನೆಗೆ ಹೋಗಬೇಡಿರಿ. ಎಂದೂ ಹೇಳಿರುವನು.

೭೪-೭೫. ಮಾಘಮಾಸದಲ್ಲಿ ಆ ಮಾಸ ಪೂರ್ತಿಯಾಗಿ ಸಮುದ್ರವನ್ನು ಸೇರದ ನದಿಗಳಲ್ಲಿ ಸ್ನಾನ ಮಾಡಿದರೆ ಮೂರು ರಾತ್ರಿಯ ಫಲವನ್ನು ಕೊಡುತ್ತದೆ. ಸಮುದ್ರವನ್ನು ಸೇರುವ ನದಿಗಳಲ್ಲಿ ಆ ಮಾಘಮಾಸ ಪೂರ್ತಿ ಸ್ನಾನಮಾಡಿದರೆ ಒಂದು ಪಕ್ಷದ ಫಲವು ಬರುತ್ತದೆ. ಸಮುದ್ರದಲ್ಲಿಯೇ ಸ್ನಾನಮಾಡಿದರೆ ಒಂದು ತಿಂಗಳ ಫಲವು ಬರುತ್ತದೆ. ಗೋದಾವರಿಯಲ್ಲಿ ಆ ಮಾಘಸ್ನಾನವು ಆರು ತಿಂಗಳಿನ ಫಲವನ್ನು ಕೊಡುತ್ತದೆ. ಗಂಗೆಯಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದರೆ ಒಂದು ವರ್ಷದ ಫಲವು ಬರುತ್ತದೆ. ಭಗವಂತನ ಪಾದೋದಕದಲ್ಲಿ ಸ್ನಾನಮಾಡಿದರೆ ಅದು ಹನ್ನೆರಡು ವರ್ಷಗಳ ಫಲವನ್ನು ಕೊಡುತ್ತದೆ.

೭೬. ಸಾಲಿಗ್ರಾಮದ ತೀರ್ಥದಲ್ಲಿ ಸ್ನಾನಮಾಡುವ ಪಕ್ಷದಲ್ಲಿ ಕೋಟಿಗಟ್ಟಲೆಯ ತೀರ್ಥಗಳಲ್ಲಿ ಸ್ನಾನಮಾಡಿ ಪ್ರಯೋಜನವೇನು ? ಎಂದರೆ ಎಲ್ಲಾ ತೀರ್ಥಗಳಿಗಿಂತಲೂ ಸಾಲಿಗ್ರಾಮ ರೂಪಿಯಾದ ಭಗವಂತನ ಪಾದೋದಕವು ಹೆಚ್ಚು ಪುಣ್ಯವನ್ನು ಕೊಡುತ್ತದೆ.

ಸಾಲಿಗ್ರಾಮಶಿಲಾತೋಯಂ ಯಃ ಪಿಬೇತ್ ಬಿಂದುಮಾತ್ರಕಂ ।
ಮಾತುಃ ಸ್ತನ್ಯಂ ಪಿಬೇನ್ನೈವ ಸ ಭವೇನ್ಮುಕ್ತಿಭಾಙ್ನರಃ ॥ ೭೭ ॥

ಸಾಲಗ್ರಾಮ ಸಮೀಪೇ ಹಿ ಕ್ರೋಶಮಾತ್ರಂ ಸಮೀಪತಃ ।
ಕೀಟರೂಪೀ ಮೃತೋ ಯಾತಿ ವೈಕುಂಠಭವನಂ ತಥಾ ॥ ೭೮ ॥

ಸಾಲಿಗ್ರಾಮಶಿಲಾಚಕ್ರಂ ಯೋ ದದ್ಯಾದ್ದಾನಮುತ್ತಮಂ ।
ಭೂಚಕ್ರಂ ತೇನ ದತ್ತಂ ಸ್ಯಾತ್ಸಶೈಲವನಕಾನನಂ ॥ ೭೯ ॥

ಸಾಲಗ್ರಾಮಶಿಲಾಯಾಸ್ತು ಮೌಲ್ಯಮುತ್ಪಾದಯನ್ನರಃ ।
ವಿಕ್ರೇತಾ ಚಾನುಮಂತಾ ಚ ಯಃ ಪರೀಕ್ಷ್ಯಾನುಮೋದತೇ ॥ ೮೦ ॥

ಸರ್ವೇ ತೇ ನರಕಂ ಯಾನ್ತಿ ಯಾವದಾಭೂತಸಂಪ್ಲವಂ ।
ಅತಸ್ತಂ ವರ್ಜಯೇದ್ವೈಶ್ಯ ಚಕ್ರಸ್ಯ ಕ್ರಯವಿಕ್ರಯಂ ॥ ೮೧ ॥

---

೭೭. ಸಾಲಿಗ್ರಾಮದ ಶಿಲೆಯ ತೀರ್ಥವನ್ನು ಒಂದು ಬಿಂದುವನ್ನಾದರೂ ಕುಡಿದರೆ ಅವನು ಮುಕ್ತಿಯನ್ನು ಹೊಂದುವುದಲ್ಲದೆ ಮತ್ತೆ ಜನ್ಮವನ್ನು ಎತ್ತುವುದೇ ಇಲ್ಲ

೭೮. ಸಾಲಿಗ್ರಾಮ ಶಿಲೆಯು ಇರುವ ಜಾಗದಲ್ಲಿ ಒಂದು ಕ್ರೋಶದಗಲವು ತೀರ್ಥವಾಗಿರುವುದು. ಅಷ್ಟರೊಳಗೆ ಮೃತಪಟ್ಟ ಕೀಟವೂ ಕೂಡ ವೈಕುಂಠವನ್ನು ಹೊಂದುತ್ತದೆ.

೭೯. ಸಾಲಿಗ್ರಾಮವನ್ನು ಯಾವನು ದಾನಮಾಡುವನೋ ಅವನು ಬೆಟ್ಟ ಕಾಡು ವನಗಳಿಂದ ಕೂಡಿದ ಈ ಭೂಮಿಯನ್ನೇ ದಾನಕೊಟ್ಟಂತೆ ಆಗುತ್ತದೆ.

೮೦–೮೧. ಸಾಲಿಗ್ರಾಮ ಶಿಲಾಚಕ್ರಕ್ಕೆ ಯಾವನು ಬೆಲೆಯನ್ನು ಹೇಳುತ್ತಾನೆಯೋ ಅವನೂ ಮಾರುವವನೂ ಅನುಮೋದಿಸುವವನೂ ಪರೀಕ್ಷೆಯನ್ನು ಮಾಡಿ ಒಪ್ಪಿಸುವವನೂ ಇವರೆಲ್ಲರೂ ಕೂಡಾ ಪ್ರಾಣಿಗಳಿರುವವರೆಗೂ ನರಕವನ್ನು ಹೊಂದುತ್ತಾರೆ. ಆದ್ದರಿಂದ ಸಾಲಿಗ್ರಾಮದ ಮಾರುವಿಕೆಯನ್ನು ಮಾಡಬಾರದು.

ಬಹುನೋಕ್ತೇನ ಕಿಂ ವೈಶ್ಯ ಕರ್ತವ್ಯಂ ಪಾಪಭೀರುಭಿಃ ।
ಸ್ಮರಣಂ ವಾಸುದೇವಸ್ಯ ಸರ್ವಪಾಪಹರಂ ಸದಾ ॥ ೮೨ ॥

ತಪಸ್ತಪ್ತ್ವಾ ನರೋ ಘೋರಮರಣ್ಯೇ ನಿಯತೇಂದ್ರಿಯಃ ।
ಯತ್ಫಲಂ ಸಮವಾಪ್ನೋತಿ ತನ್ನತ್ವಾ ಗರುಡಧ್ವಜಂ ॥ ೮೩ ॥

ಕೃತ್ವಾಪಿ ಬಹುಶಃ ಪಾಪಂ ನರೋ ಮೋಹಸಮನ್ವಿತಃ ।
ನ ಯಾತಿ ನರಕಂ ನತ್ವಾ ಸರ್ವಪಾಪಹರಂ ಹರಿಂ ॥ ೮೪ ॥

ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ತಾನಿ ಸರ್ವಾಣ್ಯವಾಪ್ನೋತಿ ವಿಷ್ಣೋರ್ನಾಮಾನುಕೀರ್ತನಾತ್ ॥ ೮೫ ॥

ದೇವಂ ಶಾಂರ್ಗಧರಂ ವಿಷ್ಣುಂ ಯೇ ಪ್ರಪನ್ನಾಃ ಪರಾಯಣಂ ।
ನ ತೇಷಾಂ ಯಮಸಾಲೋಕ್ಯಂ ನ ತೇ ಹಿ ನರಕೌಕಸಃ ॥ ೮೬ ॥

---

೮೨. ಎಲೈ ವೈಶ್ಯನೆ! ಬಹುವಾಗಿ ಹೇಳಿದುದರಿಂದ ಪ್ರಯೋಜನವೇನು? ಪಾಪಕ್ಕೆ ಹೆದರುವವರು ವಾಸುದೇವನ ಸ್ಮರಣೆಯನ್ನು ಮಾಡಬೇಕು. ಅದು ಎಲ್ಲಾ ಪಾಪವನ್ನೂ ನಾಶಮಾಡುತ್ತದೆ.

೮೩. ಮನುಷ್ಯನಾದವನು ಅರಣ್ಯದಲ್ಲಿ ಜಿತೇಂದ್ರಿಯನಾಗಿ ಘೋರವಾದ ತಪಸ್ಸನ್ನು ಮಾಡಿ ಯಾವ ಫಲವನ್ನು ಹೊಂದುತ್ತಾನೆಯೋ ಆ ಫಲವನ್ನು ಒಂದುಸಾರಿ ಗರುಡಧ್ವಜನಾದ ವಿಷ್ಣುವನ್ನು ನಮಸ್ಕರಿಸಿದರೇನೇ ಹೊಂದುತ್ತಾನೆ.

೮೪. ಮನುಷ್ಯನು ಅಜ್ಞಾನದಿಂದ ಅನೇಕಬಾರಿ ಪಾಪವನ್ನು ಮಾಡಿದರೂ ಸರ್ವಪಾಪನಾಶಕನಾದ ಹರಿಯನ್ನು ನಮಸ್ಕರಿಸಿದರೆ ನರಕವನ್ನು ಹೊಂದುವುದಿಲ್ಲ.

೮೫. ವಿಷ್ಣುವಿನ ನಾಮವನ್ನು ಸ್ಮರಿಸುವುದರಿಂದ ಭೂಮಿಯಲ್ಲಿ ಎಷ್ಟು ತೀರ್ಥಗಳಿವೆಯೋ ಎಷ್ಟು ಪುಣ್ಯಸ್ಥಳಗಳಿವೆಯೋ ಅಷ್ಟನ್ನೂ ಹೊಂದಿದಂತೆ ಆಗುತ್ತದೆ.

೮೬. ಶಾಂರ್ಗಧರನಾದ ವಿಷ್ಣುವನ್ನು ಯಾರು ಮರೆಹೋಗುವರೋ ಅವರು ಯಮನ ಸಮೀಪವನ್ನು ಹೊಂದುವುದೇ ಇಲ್ಲ. ನರಕವನ್ನೂ ಹೊಂದುವುದಿಲ್ಲ.

ವೈಷ್ಣವಃ ಪುರುಷೋ ವೈಶ್ಯ ಶಿವನಿಂದಾಂ ಕರೋತಿ ಯಃ ।
ನ ವಿಂದೇದ್ವೈಷ್ಣವಂ ಲೋಕಂ ಸ ಯಾತಿ ನರಕಂ ಧ್ರುವಂ ॥ ೮೭ ॥

ಉಪೋಷ್ಯೈಕಾದಶೀಮೇಕಾಂ ಪ್ರಸಂಗೇನಾಪಿ ಮಾನವಃ ।
ನ ಯಾತಿ ಯಾತನಾಂ ಯಾಮೀಮಿತಿ ನೋ ಯಮತಃ ಶ್ರುತಂ ॥ ೮೮ ॥

ನೇದೃಶಂ ಪಾವನಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ।
ಉಭಯಂ ಪದ್ಮನಾಭಸ್ಯ ದಿನಂ ಪಾತಕನಾಶನಂ ॥ ೮೯ ॥

ತಾವತ್ಪಾಪಾನಿ ದೇಹೇಸ್ಮಿನ್ ವಸಂತೀಹ ವಿಶಾಂ ವರ ।
ಯಾವನ್ನೋಪವಸೇಜ್ಜಂತುಃ ಪದ್ಮನಾಭಶುಭಂ ದಿನಂ ॥ ೯೦ ॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ॥ ೯೧ ॥

---

೮೭. ಎಲೈ ವೈಶ್ಯನೆ ! ವಿಷ್ಣುಭಕ್ತನಾಗಿರುವವನು ಶಿವನಿಂದೆಯನ್ನು ಮಾಡಿದರೆ ಅವನಿಗೆ ವೈಕುಂಠವು ಸಿಕ್ಕುವುದಿಲ್ಲ. ನರಕವನ್ನು ಖಂಡಿತವಾಗಿಯೂ ಹೊಂದುವನು.

೮೮. ಯಾವ ಕಾರಣದಿಂದಲಾದರೂ ಸರಿಯೆ. ಏಕಾದಶಿಯ ದಿನ ಉಪವಾಸಮಾಡಿದರೆ ಅವನು ಯಮಯಾತನೆಯನ್ನು ಹೊಂದುವುದಿಲ್ಲ. ಎಂಬುದಾಗಿ ಯಮನಿಂದಲೇ ಕೇಳಿದ್ದೇವೆ.

೮೯. ಈ ಏಕಾದಶಿಯಂತೆ ಪವಿತ್ರವಾದುದು ಮೂರುಲೋಕದಲ್ಲಿಯೂ ಮತ್ತೊಂದು ಇಲ್ಲವೇ ಇಲ್ಲ. ವಿಷ್ಣುವಿನ ದಿನಗಳಾದ ಏಕಾದಶಿ ದ್ವಾದಶಿಗಳು ಪಾಪವನ್ನು ನಾಶಮಾಡುತ್ತವೆ.

೯೦. ಪದ್ಮನಾಭನ ಶುಭದಿವಸವಾದ ಏಕಾದಶಿಯದಿವಸ ಉಪವಾಸ ಮಾಡುವವರೆಗೂ ಈ ದೇಹದಲ್ಲಿ ಪಾಪಗಳು ವಾಸಿಸುತ್ತವೆ.

೯೧. ಸಾವಿರ ಅಶ್ವಮೇಧಗಳೂ ನೂರು ವಾಜಪೇಯಗಳೂ ಏಕಾದಶಿಯ ಉಪವಾಸದಿಂದ ಬರುವ ಧರ್ಮದ ಹದಿನಾರನೆಯ ಒಂದಂಶಕ್ಕೆ ಸರಿಬರಲಾರವು.

ಏಕಾದಶೇಂದ್ರಿಯೈಃ ಪಾಪಂ ಯತ್ಕೃತಂ ವೈಶ್ಯ ಮಾನವೈಃ ।
ಏಕಾದಶ್ಯುಪವಾಸೇನ ತತ್ಸರ್ವಂ ವಿಲಯಂ ವ್ರಜೇತ್ ॥ ೯೨ ॥

ಏಕಾದಶೀಸಮಂ ಕಿಂಚಿತ್ಪುಣ್ಯಂ ಲೋಕೇ ನ ವಿದ್ಯತೇ ।
ವ್ಯಾಜೇನಾಪಿ ಕೃತಾ ಯೈಸ್ತು ವಶಂ ಯಾನ್ತಿ ನ ಭಾಸ್ಕರೇಃ ॥ ೯೩ ॥

ಸ್ವರ್ಗಮೋಕ್ಷಪ್ರದಾ ಹ್ಯೇಷಾ ಶರೀರಾರೋಗ್ಯದಾಯಿನೀ ।
ಸುಕಲತ್ರಪ್ರದಾ ಹ್ಯೇಷಾ ಜೀವತ್ಪುತ್ರಪ್ರದಾಯಿನೀ ॥ ೯೪ ॥

ನ ಗಂಗಾ ನ ಗಯಾ ವೈಶ್ಯ ನ ಕಾಶೀ ನ ಚ ಪುಷ್ಕರಂ ।
ನ ಚಾಪಿ ವೈಷ್ಣವಂ ಕ್ಷೇತ್ರಂ ತುಲ್ಯಂ ಹರಿದಿನೇನ ತು ॥ ೯೫ ॥

---

೯೨. ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಮನಸ್ಸು ಒಟ್ಟು ಹನ್ನೊಂದು ಇಂದ್ರಿಯಗಳು. ಈ ಹನ್ನೊಂದು ಇಂದ್ರಿಯಗಳಿಂದಲೂ ಎಷ್ಟುಪಾಪಗಳನ್ನು ಮಾಡುತ್ತಾರೆಯೋ ಅವೆಲ್ಲವೂ ಕೂಡ ಈ ಏಕಾದಶಿಯು ಉಪವಾಸದಿಂದ ಹೋಗುತ್ತವೆ.

೯೩. ಏಕಾದಶಿಗೆ ಸಮವಾದ ಪುಣ್ಯದಿನವು ಮತ್ತೊಂದು ಲೋಕದಲ್ಲಿ ಇಲ್ಲವೇ ಇಲ್ಲ. ಅದರಲ್ಲಿಯೂ ಯಾವುದಾದರೂ ನೆವದಿಂದ ಉಪವಾಸ ಮಾಡಿದರೆ ಅವರು ಯಮನ ಅಧೀನರಾಗುವುದೇ ಇಲ್ಲ.

೯೪. ಈ ಏಕಾದಶಿಯು ಸ್ವರ್ಗವನ್ನೂ ಮೋಕ್ಷವನ್ನೂ ಕೊಡುತ್ತದೆ. ಶರೀರಕ್ಕೆ ಆರೋಗ್ಯವನ್ನು ಕೊಡುತ್ತದೆ. ಒಳ್ಳೆಯ ಹೆಂಡತಿಯನ್ನು ಕೊಟ್ಟು ಮಕ್ಕಳು ಸಾಯದೆ ಶತಾಯುಷ್ಮಂತರಾಗಿರುವಂತೆ ಮಾಡುತ್ತದೆ.

೯೫. ಗಂಗೆಯಾಗಲಿ, ಕಾಶಿಯಾಗಲಿ, ಪುಷ್ಕರವಾಗಲಿ ಮತ್ತೆ ಯಾವುದಾದರೂ ವಿಷ್ಣುವಿನ ಕ್ಷೇತ್ರವೇ ಆಗಲಿ ಹರಿದಿನವಾದ ಏಕಾದಶಿಗೆ ಸಮವಾಗುವುದಿಲ್ಲ.

ಯಮುನಾ ಚಂದ್ರಭಾಗಾ ಚ ತುಲ್ಯಂ ಹರಿದಿನೇನ ನ ।
ಅನಾಯಾಸೇನ ಯೇನಾತ್ರ ಪ್ರಾಪ್ಯತೇ ಪರಮಂ ಪದಂ ॥ ೯೬ ॥

ರಾತ್ರೌ ಜಾಗರಣಂ ಕೃತ್ವಾ ಸಮುಪೋಷ್ಯ ಹರೇರ್ದಿನಂ ।
ದಶ ವೈ ಪೈತೃಕೇ ವಕ್ಷೇ ಮಾತೃಕೇ ದಶ ಪೂರ್ವಜಾ೯ ॥ ೯೭ ॥

ಪ್ರಿಯಾಯಾ ದಶ ವೈಶ್ಯೈತಾನ್ ಸಮುದ್ಧರತಿ ನಿಶ್ಚಿತಂ ।
ತೇ ದ್ವಂದ್ವಸಂಗನಿರ್ಮುಕ್ತಾ ನಾಗಾರಿಕೃತಕೇತನಾಃ ॥ ೯೮ ॥

ಸ್ರಗ್ವಿಣಃ ಪೀತವಸನಾಃ ಪ್ರಯಾಂತಿ ಹರಿಮಂದಿರಂ ।
ಬಾಲ್ಯತ್ವೇ ಯೌವನತ್ವೇ ವಾ ವೃದ್ಧತ್ವೇ ವಾ ವಿಶಾಂ ವರ ॥ ೯೯ ॥

ಉಪೋಷ್ಯೈಕಾದಶೀಂ ನೈವ ಯಾತಿ ಪಾಪೋಽಪಿ ದುರ್ಗತಿಂ ।
ಉಪೋಷ್ಯೇಹ ತ್ರಿರಾತ್ರಾಣಿ ಕೃತ್ವಾ ವಾ ತೀರ್ಥಮಜ್ಜನಂ ॥ ೧೦೦ ॥

---

೯೬. ಯಮುನೆಯಾಗಲಿ ಚಂದ್ರಭಾಗೆಯಾಗಲಿ ಹರಿದಿನಕ್ಕೆ ಸಮವಾಗಲಾರವು. ಯಾತಕ್ಕೆಂದರೆ ತೊಂದರೆಯಿಲ್ಲದೆ ಈ ಹರಿದಿನವಾದ ಏಕಾದಶಿಯ ದಿವಸ ಪುಣ್ಯವನ್ನು ಹೊಂದಿ ವೈಕುಂಠವನ್ನು ಹೊಂದಬಹುದು.

೯೭–೧೦೨. ಹರಿಯ ದಿನವಾದ ಏಕಾದಶಿಯ ದಿವಸ ಉಪವಾಸಮಾಡಿ ರಾತ್ರಿಯಲ್ಲಿ ಜಾಗರಣೆಮಾಡಿದರೆ ಅವನು ತಂದೆಯ ಕಡೆಯ ಹತ್ತುತಲೆಗಳನ್ನೂ ತಾಯಿಯ ಕಡೆಯ ಹತ್ತುತಲೆಗಳನ್ನೂ ಹೆಂಡತಿಯ ಕಡೆಯ ಹತ್ತುತಲೆಗಳನ್ನೂ ಉದ್ಧಾರಮಾಡುತ್ತಾನೆ. ನಿಶ್ಚಯವು. ಹಾಗೆ ಹರಿದಿನವನ್ನಾಚರಿಸಿದವರು ಶೀತೋಷ್ಣಮುಂತಾದ ದ್ವಂದ್ವಗಳನ್ನು ಕಳೆದುಕೊಂಡು ಗುರುಡಧ್ವಜರಾಗಿ ವನಮಾಲೆಯನ್ನು ಹಾಕಿಕೊಂಡು ಬಿಳಿಯ ಬಟ್ಟೆಯನ್ನುಟ್ಟುಕೊಂಡು ವೈಕುಂಠಕ್ಕೆ ಹೋಗುತ್ತಾರೆ. ಬಾಲ್ಯದಲ್ಲಾಗಲಿ ಯೌವನದಲ್ಲಾಗಲಿ ಮುಪ್ಪಿನಲ್ಲಾಗಲಿ ಈ ಏಕಾದಶಿಯನ್ನು ಆಚರಿಸಿದರೆ ಆತನು ಪಾಪಿಯಾದರೂ ನರಕವನ್ನು ಹೊಂದುವುದೇ ಇಲ್ಲ. ತೀರ್ಥಗಳಿಗೆ ಹೋಗಿ ಅಲ್ಲಿ ಮೂರುದಿವಸ

ದತ್ತ್ವಾ ಹೇಮತಿಲಾನ್ ಗಾಶ್ಚ ಸ್ವರ್ಗತಿಂ ಯಾತಿ ಮಾನವಃ ।
ತೀರ್ಥೇ ಸ್ನಾತಿ ನ ಯೋ ವೈಶ್ಯ ನ ದತ್ತಂ ಕಾಂಚನಂ ತು ಯೈಃ ॥ ೧೦೧ ॥
ನೈವ ತಪ್ತಂ ತಪಃ ಕಿಂಚಿತ್ತೇ ಸ್ಯುಃ ಸರ್ವತ್ರ ದುಃಖಿತಾಃ ।
ಸಂಕ್ಷಿಪ್ಯ ವಚ್ಮಿ ತೇ ಧರ್ಮಂ ನರಕಸ್ಯ ನಿವಾರಕಂ ॥ ೧೦೨ ॥
ಅದ್ರೋಹಂ ಸರ್ವಭೂತೇಷು ವಾಙ್ಮನಃಕಾಯಕರ್ಮಭಿಃ ।
ಇಂದ್ರಿಯಾಣಾಂ ನಿರೋಧಶ್ಚ ದಾನಂ ಚ ಹರಿಸೇವನಂ ॥ ೧೦೩ ॥
ವರ್ಣಾಶ್ರಮಕ್ರಿಯಾಣಾಂ ಚ ಪಾಲನಂ ವಿಧಿವತ್ತದಾ ।
ಸ್ವರ್ಗಾರ್ಥೀ ಸರ್ವದಾ ವೈಶ್ಯ ತಪೋ ದಾನಂ ನ ಕೀರ್ತಯೇತ್ ॥ ೧೦೪ ॥
ಯಥಾಶಕ್ತಿ ಸದಾ ದದ್ಯಾದಾತ್ಮನೋ ಹಿತಮಿಚ್ಛತಾ ।
ಉಪಾನಚ್ಛತ್ರವಸ್ತ್ರಾದಿ ಹ್ಯನ್ನಂ ಮೂಲಂ ಫಲಂ ಜಲಂ ॥ ೧೦೫ ॥

---

ಉಪವಾಸವಿದ್ದು ತೀರ್ಥದಲ್ಲಿ ಸ್ನಾನಮಾಡಿ ಚಿನ್ನ, ಎಳ್ಳು, ಗೋವುಗಳನ್ನು ದಾನಮಾಡಿದರೆ ಮನುಷ್ಯನು ಸ್ವರ್ಗವನ್ನು ಹೊಂದುವನು. ಎಲೈ ವೈಶ್ಯನೆ! ಯಾವನು ತೀರ್ಥಗಳಲ್ಲಿ ಸ್ನಾನಮಾಡುವುದಿಲ್ಲವೋ ಯಾವನು ಸ್ವರ್ಣವನ್ನು ದಾನಮಾಡುವುದಿಲ್ಲವೋ, ಯಾವನು ಸ್ವಲ್ಪವಾದರೂ ತಪಸ್ಸನ್ನು ಮಾಡಿರುವುದಿಲ್ಲವೋ ಅವರು ಎಲ್ಲಾ ಕಡೆಯಲ್ಲಿಯೂ ದುಃಖವನ್ನೇ ಅನುಭವಿಸುವರು. ಆದರೆ ನರಕದಿಂದ ಬಿಡುಗಡೆಯನ್ನು ಹೊಂದುವ ಒಂದು ಧರ್ಮವನ್ನು ಸಂಕ್ಷೇಪಿಸಿ ಹೇಳುತ್ತೇನೆ. ಕೇಳು.

೧೦೩. ಎಲೈ ವೈಶ್ಯನೆ! ಪ್ರಾಣಿಗಳಲ್ಲಿ ಕಾಯಾ, ವಾಚಾ, ಮನಸಾ ದ್ರೋಹ ಮಾಡದೆ ಇರಬೇಕು. ಇಂದ್ರಿಯಗಳನ್ನು ನಿರೋಧಿಸಿರಬೇಕು. ದಾನಗಳನ್ನು ಮಾಡುತ್ತಿರಬೇಕು. ಹರಿಸೇವೆಯನ್ನು ಬಿಡಬಾರದು.

೧೦೪. ವರ್ಣಗಳ ಆಶ್ರಮಗಳ ಧರ್ಮಗಳನ್ನು ಕ್ರಮವಾಗಿ ಪಾಲಿಸಬೇಕು. ಸ್ವರ್ಗವನ್ನು ಅಪೇಕ್ಷಿಸುವವನು ಒಂದುಸಾರಿಯೂ ಕೂಡ ತಪಸ್ಸುಮಾಡಿರುವುದನ್ನಾಗಲಿ ದಾನಮಾಡಿರುವುದನ್ನಾಗಲಿ ಹೇಳಿಕೊಳ್ಳಬಾರದು.

೧೦೫. ತನಗೆ ಒಳ್ಳೆಯದನ್ನು ಮಾಡಿಕೊಳ್ಳಬೇಕೆಂದೆನ್ನುವವನು ಯಾವಾಗಲೂ ತನ್ನ ಶಕ್ತಿಯನ್ನು ಮೀರದಂತೆ ಕೆರ, ಛತ್ರಿ, ಬಟ್ಟೆ, ಅನ್ನ, ಗೆಡ್ಡೆ, ಗೆಣಸು, ಹಣ್ಣು ನೀರು ಮುಂತಾದುವನ್ನು ದಾನಮಾಡುತ್ತಿರಬೇಕು.

ಅವಂಧ್ಯಂ ದಿವಸಂ ಕುರ್ಯಾದ್ದರಿದ್ರೋsಪಿ ವಿಶಾಂ ವರ ।
ಇಹ ಲೋಕೇ ಪರೇ ಚೈವ ನಾದತ್ತಮುಪತಿಷ್ಠತಿ ॥ ೧೦೬ ॥

ಇತಿ ಮತ್ವಾ ಸದಾ ವೈಶ್ಯ ದಾತವ್ಯಂ ತು ಸ್ವಶಕ್ತಿತಃ ।
ದಾತಾರೋ ನೈವ ಪಶ್ಯಂತಿ ತಾಂ ತಾಂ ಹಿ ಯಮಯಾತನಾಂ ॥ ೧೦೭ ॥

ದೀರ್ಘಾಯುಷೋ ಧನಾಢ್ಯಾಸ್ತೇ ಭವಂತೀಹ ಪುನಃ ಪುನಃ ।
ಕಿಮತ್ರ ಬಹುನೋಕ್ತೇನ ಯಾಂತ್ಯಧರ್ಮೇಣ ದುರ್ಗತಿಂ ॥ ೧೦೮ ॥

ಆರೋಹನ್ತಿ ದಿವಂ ಧರ್ಮೈರ್ನರಾಸ್ಸರ್ವತ್ರ ಸರ್ವದಾ ।
ತೇನ ಬಾಲತ್ವಮಾರಭ್ಯ ಕರ್ತವ್ಯೋ ಧರ್ಮಸಂಗ್ರಹಃ ॥
ಇತಿ ತೇ ಕಥಿತಂ ಸರ್ವಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೧೦೯ ॥

---

೧೦೬. ದರಿದ್ರನಾದವನೂ ಕೂಡ ದಿವಸವನ್ನು ವ್ಯರ್ಥವಾದುದನ್ನಾಗಿ ಮಾಡಬಾರದು. ದಾನಮಾಡಬೇಕು. ನಾವು ದಾನಮಾಡದಿರುವುದು ಈ ಲೋಕದಲ್ಲಿಯಾಗಲಿ ಪರಲೋಕದಲ್ಲಿಯಾಗಲಿ ನಮಗೆ ಸಿಕ್ಕುತ್ತಿರುವುದಿಲ್ಲ.

೧೦೭-೧೦೯. ಎಲೈ ವೈಶ್ಯನೆ! ಇವೆಲ್ಲವನ್ನೂ ತಿಳಿದುಕೊಂಡು ಶಕ್ತಿಗನುಗುಣವಾಗಿ ಯಾವಾಗಲೂ ದಾನ ಮಾಡುತ್ತಿರಬೇಕು. ದಾನಶೀಲರು ಯಾವಾಗಲೂ ಹಿಂದೆ ಹೇಳಿದ ಆ ಯಮಯಾತನೆಗಳನ್ನು ನೋಡುವುದೇ ಇಲ್ಲ. ಅವರು ಹುಟ್ಟಿದಮೇಲೆ ಧನಾಢ್ಯರಾಗಿಯೂ ದೀರ್ಘಾಯುಸ್ಸುಳ್ಳವರಾಗಿಯೂ ಹುಟ್ಟಿ ಹುಟ್ಟುವಾಗಲೆಲ್ಲಾ ಹಾಗೆಯೇ ಹುಟ್ಟುವರು. ಈ ವಿಷಯದಲ್ಲಿ ಬಹುವಾಗಿ ಹೇಳಿ ಪ್ರಯೋಜನವಿಲ್ಲ. ಅಧರ್ಮದಿಂದ ನರಕವನ್ನೂ ಧರ್ಮದಿಂದ ಸ್ವರ್ಗವನ್ನೂ ಮನುಷ್ಯರು ಯಾವಾಗಲೂ ಹೊಂದುತ್ತಾರೆ. ಎಂಬುದನ್ನು ತಿಳಿ. ಆದ್ದರಿಂದ ಚಿಕ್ಕಂದಿನಿಂದ ಮೊದಲುಗೊಂಡು ಧರ್ಮವನ್ನು ಮಾಡಿ ಪುಣ್ಯವನ್ನು ಸಂಗ್ರಹಿಸುತ್ತಿರಬೇಕು. ಈ ರೀತಿಯಾಗಿ ಧರ್ಮ ಅಧರ್ಮಗಳೆನ್ನು ನಿನಗೆ ಹೇಳಿದ್ದೇನೆ. ಮತ್ತೇನನ್ನು ಕೇಳಲು ಇಚ್ಛೆಯಿದೆ. ಹೇಳು.

॥ ವಿಕುಂಡಲ ಉವಾಚ ॥

ಶ್ರುತ್ವಾ ತವ ವಚಸ್ಸೌಮ್ಯ ಪ್ರಸನ್ನಂ ಮಮ ಮಾನಸಂ ।
ಗಂಗೇವ ತಾಪಹಂ ದೂತ ಪಾಪಹಾರಿ ಸತಾಂ ವಚಃ ॥ ೧೧೦ ॥

ಉಪಕರ್ತುಂ ಪ್ರಿಯಂ ವಕ್ತುಂ ಗುಣೋ ನೈಸರ್ಗಿಕಃ ಸತಾಂ ।
ಶೀತಾಂಶುಃ ಕ್ರಿಯತೇ ಕೇನ ಶೀತಲೋಽಮೃತಮಣ್ಡಲಃ ॥ ೧೧೧ ॥

ದೇವದೂತ ತತೋ ಬ್ರೂಹಿ ಕಾರುಣ್ಯಾನ್ಮಮ ಪೃಚ್ಛತಃ ।
ನರಾಕಾನ್ನಿರ್ಗತಸ್ಸದ್ಯೋ ಭ್ರಾತುರ್ಮೇ ಜಾಯತೇ ಕಥಂ ॥ ೧೧೨ ॥

॥ ಶ್ರೀ ದತ್ತಾತ್ರೇಯ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ದೇವದೂತೋ ಜಗಾದ ತಂ ।
ಜ್ಞಾನದೃಷ್ಟ್ಯಾ ಕ್ಷಣಂ ಧ್ಯಾತ್ವಾ ತನ್ಮೈತ್ರೀಕೃತಬಂಧನಃ ॥ ೧೧೩ ॥

---

೧೧೦. ವಿಕುಂಡಲನು ಹೇಳಿದನು-ಎಲೈ ಸೌಮ್ಯನೆ! ನಿನ್ನ ಮಾತನ್ನು ಕೇಳಿ ನನ್ನ ಮನಸ್ಸು ನಿರ್ಮಲವಾಯಿತು. ಸತ್ಪುರುಷರ ಮಾತು ಗಂಗೆಯ ನೀರಿನಂತೆ ಪಾಪನಾಶಕವಾಗಿರುವುದು.

೧೧೧. ಉಪಕಾರಮಾಡುವುದು, ಒಳ್ಳೆಯ ಪ್ರೀತಿಯುಕ್ತವಾದ ಮಾತನಾಡುವುದು, ಇವು ಸತ್ಪುರುಷರ ಸ್ವಭಾವವು. ಶೀತಲನಾಗಿಯೂ ಅಮೃತಮಂಡಲವಾಗಿಯೂ ಇರುವ ಚಂದ್ರನಿಗೆ ಶೀತಲವಾದ ಉಪಕಾರಕವಾದ ಕಿರಣಗಳನ್ನು ಯಾರು ತಾನೇ ಬಿಡೆಂದು ಹೇಳಿರುವರು?

೧೧೨. ಎಲೈ ದೇವದೂತನೆ! ನಾನು ಕೇಳುವುದಕ್ಕೆ ಕೃಪೆಯಿಟ್ಟು ಉತ್ತರವನ್ನು ಕೊಡು. ನನ್ನ ಸಹೋದರನು ನರಕದಿಂದ ಜಾಗ್ರತೆಯಾಗಿ ಹೇಗೆ ಬರುವನು?

೧೧೩. ಶ್ರೀ ದತ್ತಾತ್ರೇಯನು ಹೇಳಿದನು-ಆಗ ಆ ದೇವದೂತನು ಆತನ ಮಾತನ್ನು ಕೇಳಿ ಆತನಲ್ಲಿ ಸ್ನೇಹಬಂಧನವುಳ್ಳವನಾಗಿ ಜ್ಞಾನ ದೃಷ್ಟಿಯಿಂದ ಕ್ಷಣಕಾಲ ಯೋಚಿಸಿ ನೋಡಿ ಅವನನ್ನು ಕುರಿತು ಇಂತೆಂದನು.

॥ ದೂತ ಉವಾಚ ॥

ಗತೇ ವೈಶ್ಯಾಷ್ಟಮೇ ಪುಣ್ಯಂ ತ್ವಯಾ ಜನ್ಮನಿ ಸಂಚಿತಂ ।
ತ್ವದ್ಭ್ರಾತ್ರೇ ದೀಯತಾಂ ಶೀಘ್ರಂ ಸ್ವರ್ಗಂ ತಸ್ಯ ಯದೀಚ್ಛಸಿ ॥ ೧೧೪ ॥

॥ ವಿಕುಂಡಲ ಉವಾಚ ॥

ಕಿಂ ತತ್ಪುಣ್ಯಂ ಕಥಂ ಜಾತಂ ಕಿಂ ಜನ್ಮಾಹಂ ಪುರಾಭವಂ ।
ತತ್ಸರ್ವಂ ಕಥ್ಯತಾಂ ದೂತ ತತೋ ದಾಸ್ಯಾಮಿ ಸತ್ವರಂ ॥ ೧೧೫ ॥

॥ ದೇವದೂತ ಉವಾಚ ॥

ಶೃಣು ವೈಶ್ಯ ಪ್ರವಕ್ಷ್ಯಾಮಿ ತತ್ಪುಣ್ಯಂ ಚ ಸಹೇತುಕಂ ।
ಪುರಾ ಮಧುವನೇ ಪುಣ್ಯೇ ಋಷಿರಾಸೀದ್ವಿಶಾಲಿಕಃ ॥ ೧೧೬ ॥

ತಪೋಧ್ಯಯನಸಂಪನ್ನಸ್ತೇಜಸಾ ಬ್ರಹ್ಮಣಾ ಸಮಃ ।
ಜಜ್ಞಿರೇ ತಸ್ಯ ರೇವತ್ಯಾಂ ನವ ಪುತ್ರಾ ಗ್ರಹಾ ಇವ ॥ ೧೧೭ ॥

---

೧೧೪. ದೂತನು ಹೇಳಿದನು-ಎಲೈ ವೈಶ್ಯನೆ! ನೀನು ಹಿಂದಿನ ಕಳೆದ ಎಂಟನೆಯ ಜನ್ಮದಲ್ಲಿ ಪುಣ್ಯವನ್ನು ಸಂಪಾದಿಸಿಕೊಂಡಿದ್ದೀಯೆ. ಅದನ್ನು ಜಾಗ್ರತೆಯಾಗಿ ಅವನಿಗೆ ಕೊಡು. ಆಗ ಅವನಿಗೆ ಸ್ವರ್ಗವು ಜಾಗ್ರತೆಯಾಗಿ ಸಿಕ್ಕುತ್ತದೆ.

೧೧೫. ವಿಕುಂಡಲನು ಹೇಳಿದನು-ಎಲೈ ದೇವದೂತನೆ! ಆ ಪುಣ್ಯವಾವುದು? ಹೇಗೆ ಉಂಟಾಯಿತು? ಪೂರ್ವಜನ್ಮದಲ್ಲಿ ನಾನು ಏನಾಗಿದ್ದೆನು? ಅದೆಲ್ಲವನ್ನೂ ಹೇಳು. ಅದನ್ನು ಕೇಳಿ ಆ ಧರ್ಮವನ್ನು ಅವನಿಗೆ ಜಾಗ್ರತೆಯಾಗಿ ಕೊಡುವೆನು.

೧೧೬. ದೇವದೂತನು ಹೇಳಿದನು-ಎಲೈ ವೈಶ್ಯನೆ! ಆ ಪುಣ್ಯವನ್ನು ಕಾರಣ ಸಹಿತವಾಗಿ ಹೇಳುತ್ತೇನೆ. ಕೇಳು. ಪೂರ್ವದಲ್ಲಿ ಮಧುವನದಲ್ಲಿ ವಿಶಾಲಿಕನೆಂಬ ಋಷಿಯೊಬ್ಬನಿದ್ದನು.

೧೧೭. ಅವನು ತಪಸ್ಸು ಅಧ್ಯಯನಗಳಿಂದ ಕೂಡಿದ್ದನು. ತೇಜಸ್ಸಿನಲ್ಲಿ ಬ್ರಹ್ಮನಿಗೆ ಸಮಾನನು. ಅವನಿಗೆ ರೇವತಿಯೆಂಬ ಹೆಂಡತಿಯಿದ್ದಳು. ಅವನಿಗೆ ಅವಳಲ್ಲಿ ನವಗ್ರಹಗಳಂತೆ ಒಂಭತ್ತು ಜನ ಮಕ್ಕಳಾದರು.

ಧ್ರುವಶ್ಶಶೀ ಬುಧಸ್ತಾರೋ ಜ್ಯೋತಿಷ್ಮಾನತ್ರ ಪಂಚಮಃ ।
ಅಗ್ನಿಹೋತ್ರಪ್ರಿಯಾ ಹ್ಯೇತೇ ಗೃಹಧರ್ಮೇಷು ರೇಮಿರೇ || ೧೧೮ ||

ನಿರ್ಮೋಹೋ ಜಿತಮಾಯಶ್ಚ ಧ್ಯಾನಕಾಮೋ ಗುಣಾತಿಗಃ ।
ಏತೇ ಗೃಹವಿರಕ್ತಾ ಹಿ ಚತ್ವಾರೋ ದ್ವಿಜಸೂನವಃ || ೧೧೯ ||

ಚತುರ್ಥಾಶ್ರಮಮಾಪನ್ನಾಃ ಸರ್ವಕರ್ಮವಿನಿಸ್ಪೃಹಾಃ ।
ಗ್ರಾಮೈಕನಿಲಯಾಸ್ಸರ್ವೇ ನಿಸ್ಸಂಗಾ ನಿರುಪದ್ರವಾಃ || ೧೨೦ ||

ನಿಶ್ಶಿಖಾ ನೋಪವೀತಾಶ್ಚ ಸಮಲೋಷ್ಟಾಶ್ಮಕಾಂಚನಾಃ ।
ಯೇನ ಕೇನ ಚಿದಾಚ್ಛನ್ನಾ ಯೇನ ಕೇನ ಚಿದಾಶಿತಾಃ || ೧೨೧ ||

ಸಾಯಂ ಗೃಹಾಸ್ತಥಾ ನಿತ್ಯಂ ಬ್ರಹ್ಮಧ್ಯಾನಪರಾಯಣಾಃ ।
ಜಿತನಿದ್ರಾ ನಿರಾಹಾರಾಃ ಶೀತವಾತಸಹಿಷ್ಣವಃ || ೧೨೨ ||

---

೧೧೮. ಧ್ರುವ, ಶಶಿ, ಬುದ, ತಾರ, ಜ್ಯೋತಿಷ್ಮಾ ಎಂಬ ಐದು ಜನರು ಅಗ್ನಿಹೋತ್ರವನ್ನು ಮಾಡಿಕೊಂಡು ಗೃಹಸ್ಥಾಶ್ರಮ ಧರ್ಮದಲ್ಲಿದ್ದುಕೊಂಡು ಸುಖಿಸುತ್ತಿದ್ದರು.

೧೧೯. ನಿರ್ಮೋಹ, ಜಿತಮಾಯ, ಧ್ಯಾನಕಾಮ, ಗುಣಾತಿಗ ಎಂಬ ನಾಲ್ವರು ವೈರಾಗ್ಯವನ್ನು ಹೊಂದಿದರು.

೧೨೦-೧೨೧. ಈ ನಾಲ್ವರು ನಾಲ್ಕನೆಯದಾದ ಸನ್ಯಾಸಾಶ್ರಮವನ್ನು ಹೊಂದಿ ಎಲ್ಲಾ ಕರ್ಮಗಳನ್ನೂ ಬಿಟ್ಟಿದ್ದರು. ಒಂದೊಂದು ದಿವಸಕ್ಕೆ ಒಂದೊಂದು ಗ್ರಾಮದಲ್ಲಿರುತ್ತಿದ್ದರು. ಸಹವಾಸವನ್ನು ಬಿಟ್ಟಿದ್ದರು. ಒಬ್ಬರಿಗೂ ತೊಂದರೆಯನ್ನು ಕೊಡುತ್ತಿರಲಿಲ್ಲ. ಜುಟ್ಟು ಜನಿವಾರಗಳನ್ನು ತೆಗೆದುಬಿಟ್ಟಿದ್ದರು. ಕಲ್ಲು, ಮಣ್ಣು, ಚಿನ್ನಗಳಲ್ಲಿ ಒಂದೇ ರೀತಿಯಾದ ಅಭಿಪ್ರಾಯವುಳ್ಳವರಾಗಿದ್ದರು. ಗುಹ್ಯಗಳನ್ನು ಯಾವುದು ಸಿಕ್ಕಿದರೆ ಅದರಿಂದಲೇ ಮುಚ್ಚಿಕೊಳ್ಳುತ್ತಿದ್ದರು. ಏನು ಸಿಕ್ಕಿದರೆ ಅದನ್ನೇ ತಿಂದು ಹಸಿವನ್ನು ನೀಗಲಾಡಿಸಿಕೊಳ್ಳುತ್ತಿದ್ದರು.

೧೨೨. ಸಾಯಂಕಾಲದಲ್ಲಿ ಮಾತ್ರ ಮನೆಯನ್ನು ಸೇರುತ್ತಿದ್ದರು. ಬ್ರಹ್ಮಧ್ಯಾನದಲ್ಲಿ ಆಸಕ್ತರಾಗಿದ್ದರು. ನಿದ್ರೆಯನ್ನೂ ಆಹಾರವನ್ನೂ ಜಯಿಸಿದ್ದರು. ಎಂದರೆ ಬೇಕಾದಾಗ ನಿದ್ದೆ ಬರುತ್ತಿದ್ದಿತು. ಬೇಡವಾದಾಗ ಇಲ್ಲ. ಹಸಿವನ್ನು ತಡೆಯುವ ಶಕ್ತಿಯುಳ್ಳವರಾಗಿದ್ದರು. ಶೀತವಾತಗಳನ್ನು ತಡೆಯುವ ಶಕ್ತಿಯನ್ನು ಹೊಂದಿದ್ದರು.

ಪಶ್ಯಂತೋ ವಿಷ್ಣುರೂಪೇಣ ಜಗತ್ಸರ್ವಂ ಚರಾಚರಂ |
ಚರಂತಿ ಲೀಲಯಾ ಪೃಥ್ವೀಂ ತೇನ್ಯೋನ್ಯಂ ಮೌನಮಾಶ್ರಿತಾಃ || ೧೨೩ ||

ನ ಕುರ್ವಂತಿ ಕ್ರಿಯಾಂ ಕಾಂಚಿದಣುಮಾತ್ರಾಂ ಚ ಯೋಗಿನಃ |
ದೃಷ್ಟಜ್ಞಾನಾ ಅಸಂದೇಹಾಶ್ಚಿದ್ವಿಚಾರವಿಶಾರದಾಃ || ೧೨೪ ||

ಏವಂ ತೇ ತವ ವಿಪ್ರಸ್ಯ ಪೂರ್ವಮಷ್ಟಮಜನ್ಮನಿ |
ತಿಷ್ಠತೋ ಮತ್ಸ್ಯದೇಶೇಷು ಪುತ್ರದಾರಕುಟುಂಬಿನಃ || ೧೨೫ ||

ಗೇಹಂ ಚ ತಾವಕಂ ಜಗ್ಮುರ್ಮಧ್ಯಾಹ್ನೇ ಕ್ಷುತ್ಪಿಪಾಸಿತಾಃ |
ವೈಶ್ವದೇವಾಂತರೇ ಕಾಲೇ ತ್ವಯಾ ದೃಷ್ಟಾ ಗೃಹಾಂಗಣೇ || ೧೨೬ ||

ಸಗದ್ಗದಂ ಸಾಶ್ರುನೇತ್ರಂ ಸಹರ್ಷಂ ಚ ಸಸಂಭ್ರಮಂ |
ದಂಡವತ್ಪ್ರಣಿಪಾತೇನ ಬಹುಮಾನಪುರಸ್ಸರಂ || ೧೨೭ ||

---

೧೨೩. ಚರಾ ಚರವಾದ ಈ ಪ್ರಪಂಚವನ್ನು ವಿಷ್ಣುರೂಪದಿಂದಲೇ ತಿಳಿಯುತ್ತಿದ್ದರು. ಅವರು ಮೌನದಿಂದಿರುತ್ತಾ ಭೂಮಿಯೆಲ್ಲವನ್ನೂ ಸುತ್ತುತ್ತಿದ್ದರು.

೧೨೪. ಆ ಯೋಗಿಗಳು ಸ್ವಲ್ಪವೂ ಕೂಡ ಕೆಲಸವನ್ನು ಮಾಡುತ್ತಲೇ ಇರಲಿಲ್ಲ. ಅವರುಗಳು ಎಲ್ಲವನ್ನೂ ಬಲ್ಲ ಜ್ಞಾನಿಗಳಾಗಿದ್ದರು. ಸಂದೇಹವೇ ಇರಲಿಲ್ಲ. ಚಿತ್‌ಸ್ವರೂಪನಾದ ಬ್ರಹ್ಮನನ್ನು ವಿಚಾರಮಾಡುವುದರಲ್ಲಿ ಚತುರರು.

೧೨೫. ಅವರು ಹೀಗೆ ಸಂಚರಿಸುತ್ತಿದ್ದಾಗ ನೀನು ಮತ್ಸ್ಯದೇಶದಲ್ಲಿ ಹೆಂಡತಿಮಕ್ಕಳುಳ್ಳ ಕುಟುಂಬಿಯಾಗಿ ಇದ್ದೆ. ನೀನು ಹೀಗಿದ್ದುದು ಇದಕ್ಕಿಂತಲೂ ನಿನ್ನ ಎಂಟನೆಯ ಜನ್ಮದಲ್ಲಿ ಎಂದು ತಿಳಿ.

೧೨೬. ಆಗ ಈ ಯತಿಗಳು ಹಸಿವು ಬಾಯಾರಿಕೆಯುಳ್ಳವರಾಗಿ ಮಧ್ಯಾಹ್ನ ಸಮಯದಲ್ಲಿ ನೀನು ವೈಶ್ವದೇವವನ್ನು ಮಾಡುತ್ತಿದ್ದಾಗ ನಿನ್ನ ಮನೆಯೊಳಕ್ಕೆ ಅವರು ಬಂದುದನ್ನು ನೀನು ನೋಡಿದೆ.

೧೨೭–೧೨೮. ಗದ್ಗದ ಧ್ವನಿಯಿಂದಲೂ ಹರ್ಷದಿಂದ ಕಣ್ಣಿನಲ್ಲಿ ನೀರು ಸುರಿಸುತ್ತಲೂ ಅವಸರದಿಂದಲೂ ಗೌರವ ಪೂರ್ವಕವಾಗಿ ಅವರಿಗೆ ನಮಸ್ಕಾರವನ್ನು

ಪ್ರಣಮ್ಯ ಚರಣೌ ಸ್ಪೃಷ್ಟ್ವಾ ಕೃತ್ವಾ ಪಾಣಿಯುಗಾಂಜಲಿಂ |
ತ್ವಯಾಭಿನಂದಿತಾಸ್ಸರ್ವೇ ತಥಾ ಸೂನೃತಯಾ ಗಿರಾ || ೧೨೮ ||

ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ |
ಅದ್ಯ ವಿಷ್ಣುಃ ಪ್ರಸನ್ನೋ ಮೇ ಸನಾಥೋಸ್ಮ್ಯದ್ಯ ಪಾವಿತಃ || ೧೨೯ ||

ಧನ್ಯೋಸ್ಮಿ ಮೇ ಗೃಹಂ ಧನ್ಯಂ ಧನ್ಯಾ ಮೇದ್ಯ ಕುಟುಂಬಿನೀ |
ಮಮಾದ್ಯ ಪಿತರೌ ಧನ್ಯೌ ಧನ್ಯಾ ಗಾವಃ ಶ್ರುತಂ ಧನಂ || ೧೩೦ ||

ಯದ್ದೃಷ್ಟ್ವೌ ಭವತಾಂ ಪಾದೌ ತಾಪತ್ರಯಹರೌ ಮಮ |
ಭವತಾಂ ದರ್ಶನಂ ಯಸ್ಮಾದ್ಧನ್ಯೋಸ್ಮ್ಯದ್ಯ ಹರೇರಿವ || ೧೩೧ ||

|| ದೂತ ಉವಾಚ ||

ಏವಂ ಸಂಪೂಜ್ಯ ತೇಷಾಂ ಚ ಚರಣಕ್ಷಾಳಿತೋದಕಂ |
ಧೃತಂ ಮೂರ್ಧ್ನಿ ವಿಶಾಂ ಶ್ರೇಷ್ಠ ಶ್ರದ್ಧಯಾ ಪರಯಾ ಮುದಾ || ೧೩೨ ||

---

ಮಾಡಿದೆ. ಮತ್ತು ಕಾಲನ್ನು ಮುಟ್ಟಿ ನಮಸ್ಕರಿಸಿ ಕೈ ಮುಗಿದುಕೊಂಡು ಒಳ್ಳೆಯ ಪ್ರಿಯವಾದ ಮಾತುಗಳಿಂದ ಅವರನ್ನು ಗೌರವಿಸಿದೆ.

೧೨೯-೧೩೦. ಈಗ ನನ್ನ ಜನ್ಮವು ಸಫಲವಾಯಿತು. ನನ್ನ ಜೀವಿತವು ಒಳ್ಳೆಯ ಜೀವಿತವಾಯಿತು. ಇಂದು ನನಗೆ ವಿಷ್ಣುವು ಪ್ರಸನ್ನನಾದನು. ನಾನು ಈಗ ಸನಾಥನಾದೆನು. ಪವಿತ್ರನಾದೆನು. ಧನ್ಯನೂ ಆದೆನು. ನನ್ನ ಮನೆಯೂ ಧನ್ಯವಾಯಿತು. ನನ್ನ ಹೆಂಡತಿಯೂ ಇಂದು ಧನ್ಯಳಾದಳು. ನನ್ನ ತಾಯಿ ತಂದೆಗಳು ಇಂದು ಧನ್ಯರು. ನನ್ನ ಪಶುಗಳೂ, ನನ್ನ ವಿದ್ಯೆಯೂ, ನನ್ನ ಧನವೂ, ಇಂದು ಧನ್ಯವಾದುವು.

೧೩೧. ನನ್ನ ತಾಪತ್ರಯ ಎಂದರೆ ಆಧಿಭೌತಿಕ, ಆಧ್ಯಾತ್ಮಿಕಾ, ಆಧಿದೈವಿಕಗಳನ್ನು ನಾಶಮಾಡುವ ತಮ್ಮ ಪಾದಗಳನ್ನು ನೋಡಿದೆನು. ತಮ್ಮನ್ನು ನೋಡಿದುದರಿಂದ ಹರಿಯನ್ನು ನೋಡಿದಂತೆ ಧನ್ಯನಾದೆನು.

೧೩೨. ದೂತನು ಹೇಳಿದನು–ಹೀಗೆಂದು ಹೇಳಿ ಅವರನ್ನು ಪೂಜಿಸಿ, ಅವರ ಕಾಲನ್ನು ತೊಳೆದ ನೀರನ್ನು ತಲೆಯಲ್ಲಿ ಬಹುವಾದ ಶ್ರದ್ಧೆಯಿಂದ ಧರಿಸಿಕೊಂಡೆ.

ಯತಿಪಾದೋದಕಂ ವೈಶ್ಯ ಹನ್ತ್ಯಪುಣ್ಯಂ ಪುರಾತನಂ ।
ಶತಜನ್ಮಾರ್ಜಿತಂ ಸತ್ಯಂ ಶ್ರದ್ಧಯಾ ಶಿರಸಾ ಧೃತಂ ॥ ೧೩೩ ॥

ಗಂಧಪುಷ್ಪಾಕ್ಷತೈರ್ಧೂಪೈರ್ನೀರಾಜನಪುರಸ್ಸರಂ ।
ಸಂಪೂಜ್ಯ ಸಂಸ್ಕೃತೈರನ್ನೈರ್ಭೋಜಿತಾ ಯತಯಸ್ತ್ವಯಾ ॥ ೧೩೪ ॥

ತೃಪ್ತಾಃ ಪರಮಹಂಸಾಸ್ತೇ ವಿಶ್ರಾನ್ತೇ ಮಂದಿರೇ ನಿಶಿ ।
ಧ್ಯಾಯಂತಶ್ಚ ಪರಂ ಬ್ರಹ್ಮ ಯಜ್ಜ್ಯೋತಿರ್ಜ್ಯೋತಿಷಾಂ ಪರಂ ॥ ೧೩೫ ॥

ತೇಷಾಮಾತಿಥ್ಯಜಂ ಪುಣ್ಯಂ ಜಾತಂ ತೇ ಯದ್ವಿಶಾಂ ವರ ।
ನ ತದ್ವಕ್ತ್ರಸಹಸ್ರೇಣ ವಕ್ತುಂ ಶಕ್ತೋಽಸ್ಮ್ಯಹಂ ಖಲು ॥ ೧೩೬ ॥

ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ ।
ಬುದ್ಧಿಮತ್ಸು ನರಾಃ ಶ್ರೇಷ್ಠಾಃ ತೇಷು ಚ ಬ್ರಾಹ್ಮಣಾಸ್ತಥಾ ॥ ೧೩೭ ॥

---

೧೩೩. ಶ್ರದ್ಧೆಯಿಂದ ತಲೆಗೆ ಪ್ರೋಕ್ಷಿಸಿಕೊಂಡ ಯತಿಯ ಪಾದೋದಕವು ನೂರು ಜನ್ಮಗಳಿಂದಲೂ ನಾವು ಮಾಡಿದ್ದ ಪಾಪವನ್ನು ನಾಶ ಮಾಡುತ್ತದೆ. ನಿಶ್ಚಯವು.

೧೩೪. ಆ ಯತಿಗಳನ್ನು ನೀನು ಗಂಧ ಹೂ ಅಕ್ಷತೆಗಳಿಂದಲೂ ಆರತಿಯಿಂದಲೂ ಪೂಜಿಸಿ ಉತ್ತಮವಾದ ಭಕ್ಷ್ಯಗಳಿಂದ ತೃಪ್ತಿಯನ್ನು ಹೊಂದಿಸಿದೆ.

೧೩೫ ಆ ಪರಮಹಂಸರು ತೃಪ್ತರಾಗಿ ಆ ರಾತ್ರಿಯಲ್ಲಿ ನಿನ್ನ ಮನೆಯಲ್ಲಿಯೇ ಜೋತಿಸ್ಸಿಗಿಂತಲೂ ಉತ್ತಮ ಜೋತಿಸ್ಸಾದ ಆ ಪರಬ್ರಹ್ಮನನ್ನು ಧ್ಯಾನಿಸುತ್ತಾ ವಿಶ್ರಮಿಸಿಕೊಂಡರು.

೧೩೬. ಎಲೈ ವೈಶ್ಯನೆ! ಆ ಪುಣ್ಯವನ್ನು ಸಾವಿರ ಬಾಯಿದ್ದರೂ ಇದರಿಂದಲೂ ಕೂಡ ನಾನು ಹೇಳಲಾರೆನು. ಅಷ್ಟು ಪುಣ್ಯವು ನಿನಗೆ ಬಂದಿತು.

೧೩೭-೧೩೮. ಪದಾರ್ಥಗಳಲ್ಲಿ ಪ್ರಾಣವಿರುವುವು. ಶ್ರೇಷ್ಠವಾದುವು. ಆ ಪ್ರಾಣಿಗಳಲ್ಲಿ ಬುದ್ಧಿಯಿಂದ ಜೀವಿಸುವುವು ಶ್ರೇಷ್ಠವಾದುವು. ಆ ಬುದ್ಧಿಯಿರುವವರಲ್ಲಿ ಮನುಷ್ಯರು ಶ್ರೇಷ್ಠರು. ಆ ಮನುಷ್ಯರಲ್ಲಿ ಬ್ರಾಹ್ಮಣರು

ಬ್ರಾಹ್ಮಣೇಷು ಚ ವಿದ್ವಾಂಸೋ ವಿದ್ವತ್ಸು ಕೃತಬುದ್ಧಯಃ ।
ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವಾದಿನಃ ॥ ೧೩೮ ॥

ಅತ ಏವ ಹಿ ಪೂಜ್ಯಾಸ್ತೇ ಯಸ್ಮಾಚ್ಛ್ರೇಷ್ಠಾ ಜಗತ್ತ್ರಯೇ ।
ತತ್ಸಂಗತಿರ್ವಿಶಾಂ ಶ್ರೇಷ್ಠ ಮಹಾಪಾತಕನಾಶಿನೀ ॥ ೧೩೯ ॥

ವಿಶ್ರಾಂತಾಸ್ತವ ಗೇಹೇ ತೇ ಸತ್ವಸ್ಥಾ ಬ್ರಹ್ಮವಾದಿನಃ ।
ಆಜನ್ಮಸಂಚಿತಂ ಪಾಪಂ ನಾಶಯಂತಿ ಕ್ಷಣೇನ ತೇ ॥ ೧೪೦ ॥

ಸಂಚಿತಂ ಯದ್ಗೃಹಸ್ಥಸ್ಯ ಪಾಪಮಾಮರಣಾಂತಿಕಂ ।
ಭಸ್ಮೀಕೃತ್ಯ ಚ ತತ್ಸರ್ವಮೇಕರಾತ್ರೋಷಿತೋ ಯತಿಃ ॥ ೧೪೧ ॥

ಇತಿ ತೇ ಸಂಚಿತಂ ಪುಣ್ಯಮಷ್ಟಮೇ ಪೂರ್ವಜನ್ಮನಿ ।
ತ್ವದ್ಧಾತ್ರೀ ದೇಹಿ ತತ್ಪುಣ್ಯಂ ನರಕಾದ್ಯೇನ ಮುಚ್ಯತೇ ॥ ೧೪೨ ॥

---

ಶ್ರೇಷ್ಠರು. ಆ ಬ್ರಾಹ್ಮಣರಲ್ಲಿ ವಿದ್ವಾಂಸರು ಶ್ರೇಷ್ಠರು. ಆ ವಿದ್ವಾಂಸರಲ್ಲಿ ಬುದ್ಧಿಯನ್ನು ಉಪಯೋಗಿಸುವವರು ಶ್ರೇಷ್ಠರು. ಆ ಬುದ್ಧಿವಂತರಲ್ಲಿ ಬುದ್ಧಿಗೆ ತಕ್ಕಂತೆ ಕೆಲಸಮಾಡುವವರು ಶ್ರೇಷ್ಠರು. ಆ ಕೆಲಸ ಮಾಡುವವರಲ್ಲಿ ಬ್ರಹ್ಮನನ್ನು ಬಲ್ಲವರು ಬಹು ಶ್ರೇಷ್ಠರು.

೧೩೯. ಆದ್ದರಿಂದಲೇ ಅವರು ಪೂಜ್ಯರು. ಮೂರು ಲೋಕದಲ್ಲಿಯೂ ಶ್ರೇಷ್ಠರು. ಅವರ ಸಹವಾಸವು ಮಹಾಪಾಪಗಳನ್ನು ನಾಶಮಾಡುತ್ತದೆ.

೧೪೦. ಸತ್ವಗುಣವುಳ್ಳ ಬ್ರಹ್ಮವಾದಿಗಳಾದ ಅವರು ನಿನ್ನ ಮನೆಯಲ್ಲಿ ವಿಶ್ರಾಂತಿಯನ್ನು ಹೊಂದಿದರು. ಆಗ ಅವರು ನಿನ್ನ ಜನ್ಮಮೊದಲುಗೊಂಡು ಬಂದ ಪಾಪಗಳೆಲ್ಲವನ್ನೂ ನಾಶಮಾಡಿದರು.

೧೪೧. ಗೃಹಸ್ಥನು ಜನ್ಮಮೊದಲು ಸಾಯುುವವರೆಗೂ ಸಂಪಾದಿಸಿರುವ ಪಾಪಗಳನ್ನು ಒಂದು ರಾತ್ರಿಯಕಾಲ ಮನೆಯಲ್ಲಿ ವಿಶ್ರಮಿಸಿಕೊಂಡ ಒಬ್ಬ ಯತಿಯೇ ಬೂದಿಯನ್ನಾಗಿ ಮಾಡುತ್ತಾನೆ.

೧೪೨ ಈ ರೀತಿಯಾಗಿ ನಿನ್ನ ಹಿಂದಿನ ಎಂಟನೆಯ ಜನ್ಮದಲ್ಲಿ ಪುಣ್ಯವನ್ನು ಸಂಪಾದಿಸಿದ್ದೀಯೆ ಆ ಪುಣ್ಯವನ್ನು ನೀನು ಅವನಿಗೆ ಕೊಟ್ಟರೆ ಅವನು ನರಕದಿಂದ ಬಿಡುಗಡೆಯನ್ನು ಹೊಂದುತ್ತಾನೆ.

|| ಶ್ರೀ ದತ್ತಾತ್ರೇಯ ಉವಾಚ ||

ಇತಿ ದೂತವಚಃ ಶ್ರುತ್ವಾ ದದೌ ಪುಣ್ಯಂ ಸ ಸತ್ವರಂ |
ಹೃಷ್ಟೇನ ಚೇತಸಾ ಭ್ರಾತ್ರೇ ನಿರಯಾತ್ಸೋಽಪಿ ನಿರ್ಗತಃ || ೧೪೩ ||

ದೇವೈಸ್ತೌ ಪುಷ್ಪವರ್ಷೇಣ ಪೂಜಿತೌ ಚ ದಿವಂ ಗತೌ |
ತಾಭ್ಯಾಂ ಸಂಪೂಜಿತಸ್ಸಮ್ಯಗ್ಗತೋ ದೂತೋ ಯಮಾಲಯಂ || ೧೪೪ ||

ಅಖಿಲಜನಸುಬೋಧಂ ದೇವದೂತಸ್ಯ ವಾಕ್ಯಂ
ನಿಗಮವಚನತುಲ್ಯಂ ವೈಶ್ಯಪುತ್ರೋ ನಿಶಮ್ಯ |
ಸ್ವಕೃತಸುಕೃತದಾನಾದ್ಭ್ರಾತರಂ ಮೋಚಯಿತ್ವಾ
ಸುರಪತಿರಿವ ಲೋಕಂ ತೇನ ಸಾರ್ಧಂ ಜಗಾಮ || ೧೪೫ ||

---

೧೪೩. ದತ್ತಾತ್ರೇಯನು ಹೇಳಿದನು—ದೂತನು ಹೇಳಲು ವಿಕುಂಡಲನು ಸಂತೋಷದಿಂದ ಕೂಡಿದವನಾಗಿ ತನ್ನ ಸಹೋದರನಿಗೆ ಆ ಪುಣ್ಯವನ್ನು ಕೊಟ್ಟನು. ಒಡನೆಯೇ ಆತನೂ ನರಕದಿಂದ ಹೊರಗೆ ಬಂದನು.

೧೪೪. ಆಗ ದೇವತೆಗಳು ಅವರ ಮೇಲೆ ಪುಷ್ಪವರ್ಷವನ್ನು ಮಾಡಿದರು. ಹೀಗೆ ಗೌರವಿತರಾದ ಅವರು ಸ್ವರ್ಗಕ್ಕೆ ಹೋದರು. ಅವರಿಂದಲೂ ಗೌರವಿತನಾದ ದೂತನು ಹಿಂದಿರುಗಿ ಯಮನ ಮನೆಗೆ ಹೋದನು.

೧೪೫. ವೈಶ್ಯ ಪುತ್ರನಾದ ಈ ವಿಕುಂಡಲನು ಎಲ್ಲಾ ಜನರಿಗೂ ಸುಲಭವಾಗಿ ತಿಳಿಯುವಂತಹ ವೇದವಾಕ್ಯಕ್ಕೆ ಸಮವಾದ ದೇವದೂತನ ವಾಕ್ಯವನ್ನು ಕೇಳಿ ತನ್ನ ಪುಣ್ಯವನ್ನು ದಾನಮಾಡಿ ಸಹೋದರನನ್ನು ನರಕದಿಂದ ಬಿಡಿಸಿ ಅವನೊಡನೆ ದೇವೇಂದ್ರನ ಲೋಕವನ್ನು ಕುರಿತು ಹೊರಟನು.

ಇತಿಹಾಸಮಿಮಂ ರಾಜನ್ ಯಃ ಪಠೇಚ್ಛೃಣುಯಾದಪಿ ।
ಸ ಗೋಸಹಸ್ರದಾನಸ್ಯ ವಿಪಾಪ್ರೋ ಲಭತೇ ಫಲಂ ॥ ೧೪೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ಕುಂಡಲ ವಿಕುಂಡಲ ಸ್ವರ್ಗಪ್ರಾಪ್ತಿ ರ್ನಾಮ ಪಂಚಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೪೬. ಪುಣ್ಯವನ್ನು ಕೊಡುವ ಈ ಇತಿಹಾಸವನ್ನು ಯಾವನು ಕೇಳುತ್ತಾನೆಯೋ ಅಥವಾ ಓದುತ್ತಾನೆಯೋ ಅವನು ತನ್ನ ಪಾಪವನ್ನು ಕಳೆದುಕೊಂಡು ಸಾವಿರಗೋದಾನದ ಪುಣ್ಯವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ಕುಂಡಲ ವಿಕುಂಡಲರ ಸ್ವರ್ಗಪ್ರಾಪ್ತಿ ಎಂಬ ಇನ್ನೂರನಲವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಟ್‌ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಃ ||



|| ಕಾರ್ತವೀರ್ಯ ಉವಾಚ ||

ಹೇತುನಾ ಕೇನ ವಿಪ್ರರ್ಷೇ ಮಾಘಸ್ನಾನೇ ಮಹಾದ್ಭುತಃ ।
ಪ್ರಭಾವೋ ವರ್ಣಿತೋ ನೂನಂ ತನ್ಮೇ ಕಥಯ ವಿಸ್ತರಾತ್ || ೧ ||

ಗತಪಾಪೋ ಯದೇಕೇನ ದ್ವಿತೀಯೇನ ದಿವಂ ಗತಃ ।
ವೈಶ್ಯೋ ಮಾಘಜಪುಣ್ಯೇನ ಕಥಂ ಮಾಘಸ್ಯ ತತ್ಫಲಂ || ೨ ||

---

## ಇನ್ನೂರ ನಲವತ್ತಾರನೆಯ ಅಧ್ಯಾಯವು



೧. ಕಾರ್ತವೀರ್ಯನು ಹೇಳಿದನು—ಎಲೈ ದೇವರ್ಷಿಯೆ! ಯಾವ ಕಾರಣದಿಂದ ಈ ಮಾಘಸ್ನಾನದಲ್ಲಿ ಬಹುವಾದ ಅದ್ಭುತವಾದ ಮಹಿಮೆಯನ್ನು ವರ್ಣಿಸುತ್ತಿದ್ದೀಯೆ ? ಅದನ್ನು ನನಗೆ ವಿಸ್ತಾರವಾಗಿ ತಿಳಿಸು.

೨. ಆ ವೈಶ್ಯನು ಒಂದು ಮಾಘದ ಪುಣ್ಯದಿಂದ ಪಾಪವನ್ನು ಕಳೆದು ಕೊಂಡು ಎರಡನೆಯ ಮಾಘದ ಪುಣ್ಯದಿಂದ ಸ್ವರ್ಗವನ್ನು ಹೊಂದಿದನು. ಅಂತಹ ಮಾಘದ ಮಹಿಮೆಯನ್ನು ವಿಸ್ತಾರವಾಗಿಯೂ ಸ್ಫುಟವಾಗಿಯೂ ಹೇಳು.

|| ಶ್ರೀ ದತ್ತಾತ್ರೇಯ ಉವಾಚ ||

ನಿಸರ್ಗಾತ್ಸಲಿಲಂ ಮೇಧ್ಯಂ ನಿರ್ಮಲಂ ಶುಚಿ ಪಾಂಡುರಂ |
ಮಲಹಂ ಪುರುಷವ್ಯಾಪ್ರ ದ್ರಾವಕಂ ದಾಹಕಂ ತಥಾ || ೩ ||

ತಾರಕಂ ಸರ್ವಭೂತಾನಾಂ ಪೋಷಣಂ ಜೀವನಂ ತಥಾ |
ಆಪೋ ನಾರಾಯಣೋ ದೇವಃ ಸರ್ವನೇದೇಷು ಪಠ್ಯತೇ || ೪ ||

ಗ್ರಹಾಣಾಂ ಚ ಯಥಾ ಸೂರ್ಯೋ ನಕ್ಷತ್ರಾಣಾಂ ಯಥಾ ಶಶೀ |
ಮಾಸಾನಾಂ ಚ ತಥಾ ಮಾಘಃ ಶ್ರೇಷ್ಠಃ ಸರ್ವೇಷು ಕರ್ಮಸು || ೫ ||

ಮಕರಸ್ಥೇ ರವೌ ಮಾಘೇ ಪ್ರಾತಃಕಾಲೇ ಯಥಾಮತಿ |
ಗೋಷ್ಪದೇಪಿ ಜಲೇ ಸ್ನಾನಂ ಸ್ವರ್ಗದಂ ಪಾಪಿನಾಮಪಿ || ೬ ||

---

೩. ಶ್ರೀ ದತ್ತಾತ್ರೇಯನು ಹೇಳಿದನು–ನೀರೆಂಬುದು ಸ್ವಭಾವವಾಗಿಯೇ ಪವಿತ್ರವಾದುದು. ಶುಚಿಯೂ ಆಗಿರುವುದು. ಬೆಳ್ಳಗಿರುವುದು. ಕೊಳೆಯನ್ನು ಹಾಳುಮಾಡುವುದು. ದ್ರವಿಸುವ ಸ್ವಭಾವವುಳ್ಳದ್ದು. ಮತ್ತೊಂದನ್ನು ನೀರಾಗಿ ಮಾಡುತ್ತದೆ. ಮತ್ತು ಸುಡುವ ಪದಾರ್ಥಗಳನ್ನುಳ್ಳದ್ದು.

೪. ಎಲ್ಲಾ ಪ್ರಾಣಿಗಳನ್ನೂ ಕಾಪಾಡುತ್ತದೆ. ಎಲ್ಲಾ ಪ್ರಾಣಿಗಳನ್ನೂ ಕಷ್ಟದಿಂದ ಪಾರುಗಾಣಿಸುತ್ತದೆ. ಅವನ್ನೆಲ್ಲಾ ಪೋಷಿಸುತ್ತದೆ. ಅಂತೆಯೇ ಎಲ್ಲಕ್ಕೂ ಜೀವನವನ್ನು ಕೊಡುತ್ತದೆ. ನೀರೇ ನಾರಾಯಣಸ್ವಾಮಿಯೆಂದು ಎಲ್ಲಾ ವೇದಗಳಲ್ಲಿಯೂ ಹೇಳಿದೆ.

೫ ಗ್ರಹಗಳೊಳಗೆ ಸೂರ್ಯನೂ ನಕ್ಷತ್ರಗಳೊಳಗೆ ಚಂದ್ರನೂ ಹೇಗೆ ಮುಖ್ಯರೋ ಹಾಗೆ ಮಾಸಗಳೊಳಗೆ ಮಾಘಮಾಸವು ಶ್ರೇಷ್ಠವಾದುದು. ಎಲ್ಲ ಕರ್ಮಗಳಲ್ಲಿ ಅಂತೆಯೇ ಉತ್ತಮವಾದುದು.

೬. ಸೂರ್ಯನು ಮಕರರಾಶಿಯಲ್ಲಿದ್ದು ಮಾಘಮಾಸವು ಬಂದಿದ್ದರೆ ಆಗ ಪ್ರಾತಃಕಾಲದಲ್ಲಿ ಒಂದು ಸಣ್ಣದಾಗಿರುವ ಕಟ್ಟೆಯಲ್ಲಿ ಸ್ನಾನಮಾಡಿದರೂ ಅದು ಪಾಪಿಗಳಿಗೂ ಸ್ವರ್ಗವನ್ನು ಕೊಡುತ್ತದೆ.

ಯೋಗೋಽಯಂ ದುರ್ಲಭೋ ರಾಜನ್ ತ್ರೈಲೋಕೇ ಸಚರಾಚರೇ ।
ಅಸ್ಮಿನ್ ಯೋಗೇ ತ್ವಶಕ್ತೋಽಪಿ ಸ್ನಾನಂ ಕುರ್ಯಾದ್ದಿನತ್ರಯಂ ॥ ೭ ॥

ದೇಯಂ ಕಿಂಚಿದ್ಯಥಾಶಕ್ತಿ ದಾರಿದ್ರ್ಯಾಭಾವಮಿಚ್ಛತಾ ।
ತ್ರಿಸ್ನಾನೇನಾಪಿ ಮಾಘೇ ಸ್ಯುಃ ಧನಿನೋ ದೀರ್ಘಜೀವಿನಃ ॥ ೮ ॥

ಪಂಚಭಿಸ್ಸಪ್ತಭಿಸ್ನಾನೈಶ್ಚಂದ್ರವದ್ವರ್ಧತೇ ಫಲಂ ।
ಸಂಪ್ರಾಪ್ತೇ ಮಕರಾದಿತ್ಯೇ ಪುಣ್ಯೇ ಪುಣ್ಯಪ್ರದೇ ನೃಣಾಂ ॥ ೯ ॥

ಮಾಕರ್ಯಸ್ಥಿತಯಸ್ಸರ್ವಾಃ ಸ್ನಾನದಾನಾದಿಕರ್ಮಣಾಂ ।
ಕರ್ತಾರಂ ಪ್ರಾಪಯಂತೀಹ ಹ್ಯಕ್ಷಯ್ಯಂ ಶಾಶ್ವತಂ ಪದಂ ॥ ೧೦ ॥

---

೭. ಈ ಮಾಘಮಕರಗಳ ಯೋಗವು ಚರಾಚರಾತ್ಮಕವಾದ ಈ ಮೂರು ಲೋಕಗಳಲ್ಲಿಯೂ ದುರ್ಲಭವಾದುದು. ಈ ಯೋಗದಲ್ಲಿ ಅಶಕ್ತನಾದವನೂ ಕೂಡ ಮೂರು ದಿನಗಳಾದರೂ ಸ್ನಾನವನ್ನು ಮಾಡಬೇಕು.

೮. ದರಿದ್ರನಾಗಿ ಇರಬಾರದು ಎಂದು ಇಚ್ಛಿಸುವವನು ತನ್ನ ಯೋಗ್ಯತೆಗೆ ತಕ್ಕಂತೆ ದಾನಮಾಡಬೇಕು. ಮಾಘದಲ್ಲಿ ಮೂರು ಸ್ನಾನಮಾಡಿದರೇನೇ ಧನಿಕರಾಗಿಯೂ ಬಹುಕಾಲ ಬದುಕುವವರಾಗಿಯೂ ಆಗುತ್ತಾರೆ.

೯. ಪುಣ್ಯರೂಪವೂ ಪುಣ್ಯಪ್ರದವೂ ಆದ ಈ ಮಕರಾದಿತ್ಯನುಳ್ಳ ಮಾಘಮಾಸದಲ್ಲಿ ಐದು ಅಥವಾ ಏಳು ಸ್ನಾನಗಳಿಂದ ಮನುಷ್ಯನಿಗೆ ಫಲವು ಚಂದ್ರನಂತೆ ವೃದ್ಧಿಹೊಂದುತ್ತದೆ.

೧೦. ಮಕರಮಾಸದಲ್ಲಿ ತೀರ್ಥಗಳೆಲ್ಲವೂ ಸ್ನಾನ ಮಾಡುವವನನ್ನೂ ದಾನ ಮಾಡುವವನನ್ನೂ ಅಕ್ಷಯವೂ ಶಾಶ್ವತವೂ ಆದ ಸ್ಥಾನವನ್ನು ಹೊಂದಿಸುತ್ತವೆ.

ತಸ್ಮಾನ್ಮಾಘೇ ಬಹಿಸ್ಸ್ನಾಯಾದಾತ್ಮನೋ ಹಿತಕಾಮ್ಯಯಾ |
ಅಥಾತಃ ಸಂಪ್ರವಕ್ಷ್ಯಾಮಿ ಮಾಘಸ್ನಾನವಿಧಿಂ ಪರಂ || ೧೧ ||

ಕರ್ತವ್ಯೋ ನಿಯಮಃ ಕಶ್ಚಿದ್ವ್ರತಕಾಮೈರ್ನರೋತ್ತಮೈಃ |
ಫಲಾತಿಶಯಹೇತೋರ್ವೈ ಕಂಚಿತ್ಸಂಗಂ ತ್ಯಜೇದ್ಬುಧಃ || ೧೨ ||

ಭೂಮೌ ಶಯೀತ ಹೋತವ್ಯಮಾಜ್ಯಂ ತಿಲವಿಮಿಶ್ರಿತಂ |
ತ್ರಿಕಾಲಂ ಚಾರ್ಚಯೇನ್ನಿತ್ಯಂ ವಾಸುದೇಸಂ ಸನಾತನಂ || ೧೩ ||

ದಾತವ್ಯೋ ದೀಪಕೋಽಖಂಡೋ ದೇವಮುದ್ದಿಶ್ಯ ಮಾಧವಂ |
ಗುಡಕಂಬಲಕಂ ವಸ್ತ್ರಮುಪಾನತ್ಕುಂಕುಮಂ ಘೃತಂ || ೧೪ ||

---

೧೧. ಆದ್ದರಿಂದ ತನಗೆ ಹಿತವನ್ನು ಮಾಡಿಕೊಳ್ಳಬೇಕೆಂಬ ಅಪೇಕ್ಷೆಯುಳ್ಳವನು ಮಾಘಮಾಸದಲ್ಲಿ ಹೊರಗಿನ ನೀರಿನಲ್ಲಿ ಸ್ನಾನಮಾಡಬೇಕು. ಇನ್ನುಮೇಲೆ ಶ್ರೇಷ್ಠವಾಗಿ ಮಾಘಸ್ನಾನದ ವಿಧಿಯನ್ನು ಹೇಳುತ್ತೇನೆ.

೧೨. ವ್ರತದ ಫಲವನ್ನು ಅಪೇಕ್ಷಿಸುವ ಮನುಷ್ಯರು ನಿಯಮವನ್ನು ಸ್ವೀಕರಿಸಬೇಕು. ಮತ್ತೊಬ್ಬರ ಸಹವಾಸವನ್ನು ಬಿಟ್ಟರೆ ಬಹುವಾಗಿರುವ ಫಲವು ಸಿಕ್ಕುತ್ತದೆ.

೧೩. ನೆಲದಮೇಲೆ ಮಲಗಿರಬೇಕು. ಎಳ್ಳನ್ನೂ ತುಪ್ಪವನ್ನೂ ಹೋಮ ಮಾಡಬೇಕು ಬೆಳಗ್ಗೆ ಮಧ್ಯಾಹ್ನ ಸಾಯಂಕಾಲಗಳಲ್ಲಿ ಮೂರುಕಾಲಗಳಲ್ಲಿಯೂ ಆ ಸನಾತನನಾದ ವಾಸುದೇವನನ್ನು ಪೂಜಿಸಬೇಕು.

೧೪. ಆ ಮಾಧವನ ಎದುರಿಗೆ ಅಖಂಡವಾದ ದೀಪವನ್ನೂ ಸ್ವಾಮಿಗೆ ತೃಪ್ತಿಯಾಗಲೆಂದು ಹಚ್ಚಬೇಕು. ಬೆಲ್ಲ, ಕಂಬಳಿ, ಬಟ್ಟೆ, ಕೆರ, ಕುಂಕುಮ, ತುಪ್ಪ, ಇವನ್ನು ದಾನಮಾಡಬೇಕು.

ತೈಲಕಾರ್ಪಾಸಕೋಷ್ಠಂ ಚ ತೂಲೀಂ ತೂಲವತೀಂ ಪಟೀಂ ।
ಅನ್ನಂ ಚೈವ ಯಥಾಶಕ್ತಿ ದೇಯಂ ಮಾಘೇ ನರಾಧಿಪ ॥ ೧೫ ॥

ಸುವರ್ಣಂ ಚ ಯಥಾಶಕ್ತಿ ದದ್ಯಾದ್ವೇದವಿದೇ ತಥಾ ।
ತದ್ದಾನಮಕ್ಷಯಂ ಪ್ರಾಹುರ್ಯನ್ಮಾಘೇ ದೀಯತೇ ನೃಪ ॥ ೧೬ ॥

ಪರಸ್ಯಾನ್ನಂ ನ ಸೇವೇತ ತ್ಯಜೇದ್ವಿಪ್ರಃ ಪ್ರತಿಗ್ರಹಂ ।
ಮಾಘಾನ್ತೇ ಭೋಜಯೇದ್ವಿಪ್ರಾನ್ ಯಥಾಶಕ್ತಿ ನರಾಧಿಪ ॥ ೧೭ ॥

ದೇಯಾ ಚ ದಕ್ಷಿಣಾ ತೇಭ್ಯ ಆತ್ಮನೇ ಹಿತಮಿಚ್ಛತಾ ।
ಏಕಾದಶೀವಿಧಾನೇನ ಮಾಘಸ್ಯೋದ್ಯಾಪನಂ ತಥಾ ॥ ೧೮ ॥

---

೧೫. ಎಣ್ಣೆ, ಹತ್ತಿ, ಕೋಷ್ಠ, ಬಿಡಿಸಿದ ಹತ್ತಿ ಹತ್ತಿಯಿಂದ ಕೂಡಿದ ಸೀರನ್ನು ಹೋಗಲಾಡಿಸುವ ವಸ್ತ್ರ, ಇವುಗಳನ್ನು ಕೊಡಬೇಕು. ಅಲ್ಲದೆ ಮಾಘಮಾಸದಲ್ಲಿ ಶಕ್ತಿಗನುಗುಣವಾಗಿ ಅನ್ನದಾನವನ್ನು ಮಾಡಬೇಕು.

೧೬. ವೇದ, ಓದಿದ್ದವರಿಗೆ ಚಿನ್ನವನ್ನು ದಾನ ಮಾಡಬೇಕು. ಮಾಘಮಾಸದಲ್ಲಿ ಮಾಡಿದ ದಾನಗಳು ಅಕ್ಷಯವಾಗುತ್ತವೆಯೆಂದು ಹೇಳುತ್ತಾರೆ.

೧೭. ಪರಾನ್ನವನ್ನು ಊಟಮಾಡಬಾರದು. ದಾನವನ್ನು ತೆಗೆದುಕೊಳ್ಳಬಾರದು. ಮಾಘಮಾಸ ಮುಗಿಯುತ್ತಲೂ ತನಗೆ ಸಾಧ್ಯವಾದಷ್ಟು ಜನರಿಗೆ ಸಂತರ್ಪಣೆಯನ್ನು ಮಾಡಿಸಬೇಕು.

೧೮. ಅವರಿಗೆ ದಕ್ಷಿಣೆಯನ್ನು ಕೊಡಬೇಕು. ಹಾಗೆಮಾಡಿದರೆ ತನಗೆ ಒಳ್ಳೆಯದಾಗುತ್ತದೆ. ಏಕಾದಶಿಗೆ ಹೇಳಿರುವ ರೀತಿಯಲ್ಲಿ ಮಾಘಮಾಸದ ಉದ್ಯಾಪನೆಯನ್ನು ಮಾಡಬೇಕು.

ಕರ್ತವ್ಯಂ ಶ್ರದ್ಧಧಾನೇನ ಅಕ್ಷಯ್ಯಂ ಸ್ವರ್ಗಮಿಚ್ಛತಾ ।
ಮಕರಸ್ಥೇ ರವೌ ಮಾಘೇ ಗೋವಿಂದಾಚ್ಯುತಮಾಧವ ॥ ೧೯ ॥

ಸ್ನಾನೇನಾನೇನ ಮೇ ದೇವ ಯಥೋಕ್ತಫಲದೋ ಭವ ।
ಇತಿ ಮಂತ್ರಂ ಸಮುಚ್ಚಾರ್ಯ ಸ್ನಾಯಾನ್ಮೌನಂ ಸಮಾಶ್ರಿತಃ ॥ ೨೦ ॥

ವಾಸುದೇವಂ ಹರಿಂ ವಿಷ್ಣುಂ ಮಾಧವಂ ಚ ಸ್ಮರೇತ್ಪುನಃ ।
ಗೃಹೇಪಿ ಸಜಲಂ ಕುಂಭಂ ವಾಯುನಾ ನಿಶಿ ಪೀಡಿತಂ ॥ ೨೧ ॥

ತತ್ ಸ್ನಾನಂ ತೀರ್ಥಸದೃಶಂ ಸರ್ವಕಾಮಫಲಪ್ರದಂ ।
ತತ್ರ ವ್ರತೇನ ದಾತವ್ಯಂ ಸ್ನಾನಂ ಚೋಪಸ್ಕರಾನ್ವಿತಂ ॥ ೨೨ ॥

---

೧೯-೨೦. ಅಕ್ಷಯವಾದ ಸ್ವರ್ಗವನ್ನು ಅಪೇಕ್ಷಿಸುವವನು ಶ್ರದ್ಧೆಯಿಂದ ಮೇಲೆ ಹೇಳಿದಂತೆ ಮಾಡಬೇಕು. ಮಕರ ರಾಶಿಗೆ ಸೂರ್ಯನು ಬಂದಿರುವಾಗ ಮಾಘಮಾಸದಲ್ಲಿ "ಗೋವಿಂದ ಅಚ್ಯುತ, ಮಾಧವ ಈ ಸ್ನಾನದಿಂದ ನೀನು ಸಂತುಷ್ಟನಾಗಿ ಅದಕ್ಕೆ ಯೋಗ್ಯವಾಗಿರುವ ಫಲವನ್ನು ಕೊಡು," ಎಂಬ ಈ ಮಂತ್ರವನ್ನು ಹೇಳಿ ಮೌನದಿಂದ ಸ್ನಾನವನ್ನು ಮಾಡಬೇಕು.

೨೧-೨೨. ವಾಸುದೇವ, ಹರಿ, ವಿಷ್ಣು, ಮಾಧವ ಎಂಬದಾಗಿ ಆ ಸ್ವಾಮಿಯನ್ನು ಸ್ಮರಿಸುತ್ತಿರಬೇಕು. ಹೊರಗಿನ ನೀರಿನಲ್ಲಿ ಸ್ನಾನಮಾಡದೆ ಮನೆಯಲ್ಲಿಯೇ ಸ್ನಾನಮಾಡಿದರೆ, ಅಥವಾ ಕೆರೆ, ಕೊಳ ನದಿಗಳಿಲ್ಲದ ಭಾಗದಲ್ಲಿ ಸ್ನಾನ ಮಾಡಬೇಕಾದರೆ ರಾತ್ರಿಯೇ ನೀರನ್ನು ಬಿಂದಿಗೆಗಾಗಲಿ ಗಡಿಗೆಗಾಗಲಿ ತುಂಬಿಟ್ಟಿರಬೇಕು. ಆ ನೀರಿನ ಮೇಲೆ ಗಾಳಿಯು ರಾತ್ರಿಯೆಲ್ಲಾ ಚೆನ್ನಾಗಿ ಬೀಸಬೇಕು. ಬೆಳಗ್ಗೆ ಎದ್ದು ಆ ನೀರಿನಲ್ಲಿ ಸ್ನಾನ ಮಾಡಬೇಕು. ಆ ನೀರು ತೀರ್ಥಕ್ಕೆ ಸಮವಾದುದು. ಎಲ್ಲಾ ಇಷ್ಟಗಳನ್ನೂ ಕೊಡುತ್ತದೆ. ಈ ಮಾಘವ್ರತದಲ್ಲಿ ಅನ್ನವನ್ನೂ ಅದಕ್ಕೆ ಬೇಕಾದ ಪದಾರ್ಥಗಳನ್ನೂ ಕೊಡಬೇಕು. ಭೋಜನವನ್ನಾದರೂ ಮಾಡಿಸಬಹುದು.

ತತ್ಸ್ನಾನಸ್ಯ ಪ್ರಭಾವೇನ ನರೋ ನ ನಿರಯಂ ವ್ರಜೇತ್ |
ತಪ್ತೇನ ವಾರಿಣಾ ಸ್ನಾನಂ ಯದ್ಗೃಹೇ ಕ್ರಿಯತೇ ನರೈಃ || ೨೩ ||

ಷಡಬ್ದಫಲದಂ ತದ್ಧಿ ಮಕರಸ್ಥೇ ದಿವಾಕರೇ |
ಶೀತೋದಕೇನ ತು ಸ್ನಾನೇ ದ್ವಿಗುಣಂ ಫಲಮುಚ್ಯತೇ || ೨೪ ||

ಬಹಿಸ್ಸ್ನಾನಂ ತು ವಾಪ್ಯಾದೌ ದ್ವಾದಶಾಬ್ದಫಲಪ್ರದಂ |
ತಟಾಗೇ ದ್ವಿಗುಣಂ ರಾಜನ್ನದ್ಯಾಂ ಚೈವ ಚತುರ್ಗುಣಂ || ೨೫ ||

ದಶಧಾ ದೇವಖಾತೇ ಚ ಶತಧಾ ಚ ಮಹಾನದೀ |
ಶತಂ ಚ ದ್ವಿಗುಣಂ ರಾಜನ್ ಮಹಾನದ್ಯೋಃಸ್ತು ಸಂಗಮೇ || ೨೬ ||

ಸಹಸ್ರಗುಣಿತಂ ಪುಣ್ಯಂ ಸರ್ವತ್ರ ಮಕರೇ ರವೌ |
ಗಂಗಾಯಾಂ ಸ್ನಾನಮಾತ್ರೇಣ ಲಭತೇ ಮಾನವೋ ನೃಪ || ೨೭ ||

ಗಂಗಾಂ ಯೇತ್ರಾವಗಾಹನ್ತೇ ಮಾಘೇ ಮಾಸೇ ನರೋತ್ತಮ |
ಚತುರ್ಯುಗಸಹಸ್ರಾಣಿ ನ ಪತಂತಿ ಸುರಾಲಯಾತ್ || ೨೮ ||

---

೨೩. ಈ ಸ್ನಾನದ ಪ್ರಭಾವದಿಂದ ಮನುಷ್ಯನು ನರಕಕ್ಕೆ ಹೋಗುವುದಿಲ್ಲ. ಯಾರು ಮನೆಯಲ್ಲಿ ಸ್ನಾನಮಾಡುತ್ತಾರೆಯೋ ಅವರಿಗೆ ಆರುವರ್ಷಗಳ ಫಲವು ಬರುತ್ತದೆ.

೨೪-೨೭. ತಣ್ಣೀರಿನಲ್ಲಿ ಸ್ನಾನಮಾಡಿದರೆ ಆ ಬಿಸಿನೀರಿನಲ್ಲಿ ಮಾಡಿದ ಸ್ನಾನಕ್ಕಿಂತ ಎರಡರಷ್ಟು ಫಲವು ಬರುತ್ತದೆ. ಭಾವಿಯೇ ಮುಂತಾದುವುಗಳಲ್ಲಿ ಹೊರಗೆ ಸ್ನಾನಮಾಡಿದರೆ ಹನ್ನೆರಡುವರ್ಷದ ಫಲವು ಬರುತ್ತದೆ. ಕೆರೆಯಲ್ಲಿ ಸ್ನಾನ ಮಾಡಿದರೆ ಅದರ ಎರಡರಷ್ಟು ಫಲವು ಬರುತ್ತದೆ. ನದಿಯಲ್ಲಿ ಸ್ನಾನಮಾಡಿದರೆ ನಾಲ್ಕರಷ್ಟು ಫಲವು ಬರುತ್ತದೆ. ತಾನಾಗಿಯೇ ಉಂಟಾಗಿರುವ ಮಡುವು ಮುಂತಾದುವುಗಳಲ್ಲಿ ಸ್ನಾನಮಾಡಿದರೆ ಹತ್ತರಷ್ಟು ಪುಣ್ಯವು ಬರುತ್ತದೆ. ಮಹಾನದಿಯಲ್ಲಿ ಸ್ನಾನಮಾಡಿದರೆ ಇನ್ನೂರರಷ್ಟು ಪುಣ್ಯವು ಬರುತ್ತದೆ. ಗಂಗೆಯಲ್ಲಿ ಸ್ನಾನಮಾಡಿದ ಮಾತ್ರಕ್ಕೇನೇ ಸಾವಿರದಷ್ಟು ಪುಣ್ಯವು ಬರುತ್ತದೆ.

೨೮. ಮಾಘಮಾಸದಲ್ಲಿ ಪೂರ್ತಿಯಾಗಿ ಗಂಗೆಯಲ್ಲಿ ಸ್ನಾನಮಾಡಿದರೆ ನಾಲ್ಕುಯುಗಗಳು ಪೂರ್ತಿಯಾಗಿ ಸ್ವರ್ಗದಿಂದ ಹಿಂದಿರುಗುವುದೇ ಇಲ್ಲ.

ಶತೇನ ಗುಣಿತಂ ಮಾಘೇ ಸಹಸ್ರಂ ರಾಜಸತ್ತಮ ।
ನಿರ್ದಿಷ್ಟಮೃಷಿಭಿಃ ಸ್ನಾನಂ ಗಂಗಾಯಮುನಸಂಗಮೇ ॥ ೨೯ ॥

ದಿನೇ ದಿನೇ ಸಹಸ್ರಂ ತು ಸುವರ್ಣಾನಾಂ ವಿಶಾಂ ಪತೇ ।
ತೇನ ದತ್ತಂ ಹಿ ಗಂಗಾಯಾಂ ಯೋ ಮಾಘೇ ಸ್ನಾತಿ ಮಾನವಃ ॥೩೦॥

ಅನಡುಹಾಂ ಸಹಸ್ರಂ ತು ಅಯುತಂ ಕಾಪಿಲಂ ತಥಾ ।
ತೇನ ದತ್ತಂ ಹಿ ಗಂಗಾಯಾಂ ಯೋ ಮಾಘೇ ಸ್ನಾತಿ ಮಾನವಃ ॥ ೩೧ ॥

ಪಾಪೌಘಭೂರಿಭಾರಸ್ಯ ದಾಹಾರ್ಥೇ ಚ ಪ್ರಜಾಪತಿಃ ।
ಪ್ರಯಾಗಂ ವಿದಧೇ ಭೂಪ ಪ್ರಜಾನಾಂ ಚ ಹಿತೇಚ್ಛಯಾ ॥ ೩೨ ॥

ಸೂನಾಸ್ಥಾನಮಿದಂ ಸಮ್ಯಕ್ ಸಿತಾಸಿತಜಲಂ ಕಿಲ ।
ಪಾಪರೂಪಪಶೂನಾಂ ಹಿ ಬ್ರಹ್ಮಣಾ ವಿಹಿತಂ ಪುರಾ ॥ ೩೩ ॥

---

೨೯ ಈ ಮಾಘಮಾಸದಲ್ಲಿ ಗಂಗಾಯಮುನೆಗಳ ಸಂಗಮದಲ್ಲಿ ಸ್ನಾನ ಮಾಡಿದರೆ ಒಂದು ಲಕ್ಷದಷ್ಟು ಪುಣ್ಯವು ಬರುತ್ತದೆ.

೩೦. ಮಾಘಮಾಸದಲ್ಲಿ ಗಂಗೆಯಲ್ಲಿ ಸ್ನಾನಮಾಡಿದರೆ ಅವನು ದಿನ ದಿನವೂ ಸಾವಿರಚಿನ್ನದ ನಾಣ್ಯಗಳನ್ನು ದಾನಮಾಡಿದ ಪುಣ್ಯವನ್ನು ಹೊಂದುತ್ತಾನೆ

೩೧. ಮಾಘದಲ್ಲಿ ಗಂಗೆಯಲ್ಲಿ ಸ್ನಾನ ಮಾಡಿದರೆ ಹತ್ತುಸಾವಿರ ಕಪಿಲೆ ಹಸುಗಳನ್ನೂ ಜೊತೆಗೆ ಸಾವಿರ ಹೋರಿಗಳನ್ನೂ ದಾನಮಾಡಿದ ಫಲವು ಬರುತ್ತದೆ.

೩೨. ಬ್ರಹ್ಮನು ಪ್ರಜೆಗಳ ಪಾಪವನ್ನು ನಾಶಮಾಡಬೇಕೆಂಬ ಇಚ್ಛೆಯಿಂದ ಪ್ರಯಾಗವನ್ನು ಸೃಷ್ಟಿಸಿರುವನು.

೩೩. ಈ ಗಂಗೆ ಯಮುನೆಯ ನೀರು ಪಾಪರೂಪವೆಂಬ ಪಶುಗಳಿಗೆ ವಧೆಯ ಸ್ಥಾನವನ್ನಾಗಿ ಬ್ರಹ್ಮನು ಪೂರ್ವದಲ್ಲಿ ನಿರ್ಮಿಸಿರುವನು.

॥ ಬ್ರಹ್ಮೋವಾಚ ॥

ಮಾ ಗರ್ವೀರಶ್ವಮೇಧೀ ಮಖಕೃದಹಮಿತಿ ಬಹ್ಮಹನ್ಮಾ ಚ ಭೈಷೀಃ ।
ಪಾತಕಸ್ಮೀತಿ ಪುಣ್ಯೇ ಮಹತಿ ಚ ದುರಿತೇ ಕೋ ಮದಃ ಕಾ ಚ ಭೀತಿಃ ।
ಮಾಘೇ ಮಾಸಿ ಪ್ರಯಾಗೇ ಮಕರಗತರವೌ ಮಜ್ಜತಾಂ ಸಜ್ಜನಾನಾಂ ।
ಅಬ್ಬಿಂದುರ್ವಾಂ ಧುನೀತೇ ಮದಮಪಿ ಭಯಮಪ್ಯತ್ರವೇದಾಃ ಪ್ರಮಾಣಂ॥

ಸಿತಾಸಿತೇ ಸರಿತೇ ಯತ್ರ ಸಂಗತೇ ತತ್ರಾಪ್ಲುತಾಸೋ ದಿವಮುತ್ಪತಂತಿ ।
ಯೇ ವೈ ತನ್ವಾಂ ನಿಸೃಜಂತಿ ಧಿರಾಸ್ತೇ ಜನಾಸೋ ಅಮೃತತ್ವಂ ಭಜಂತೇ ॥

॥ ದತ್ತಾತ್ರೇಯ ಉವಾಚ ॥

ಸಿತಾಸಿತೇಪಿ ಯಾ ಧಾರಾ ಸರಸ್ವತ್ಯಾಪಿ ಗರ್ಭಿತಾ ।
ತಂ ಮಾರ್ಗಂ ಬ್ರಹ್ಮಲೋಕಸ್ಯ ಸೃಷ್ಟಿಕರ್ತಾ ಸಸರ್ಜ ಹ ॥ ೩೬ ॥

---

೩೪. ಎಲೈ ಅಶ್ವಮೇಧಯಾಗವನ್ನು ಮಾಡಿದ ದೀಕ್ಷಿತನೇ! ನಾನು ಯಾಗವನ್ನು ಮಾಡಿದ್ದೇನೆಂದು ಗರ್ವಿಸಬೇಡ ಎಲೈ ಬ್ರಹ್ಮಹತ್ಯೆಮಾಡಿದವನೇ! ನೀನು ನಾನು ಮಹಾಪಾತಕಿಯಲ್ಲ! ಎಂದು ಹೇದರಬೇಡ. ಪುಣ್ಯವು ಹೆಚ್ಚಾಗಿದೆ ಯೆಂದು ಹೆಮ್ಮೆ ಮಾಡಬೇಡ. ಪಾಪವು ಹೆಚ್ಚಿದೆಯೆಂಬುದಾಗಿ ಹೆದರಿಕೆಯೂ ಬೇಡ ಸೂರ್ಯನು ಮಕರರಾಶಿಗೆ ಬಂದು ಮಾಘವು ಪ್ರಾಪ್ತವಾಗಿರುವಾಗ ಯಾವ ಸಜ್ಜನರು ಪ್ರಯಾಗದಲ್ಲಿ ಸ್ನಾನಮಾಡುತ್ತಾರೆಯೋ ಅವರ ಮೇಲಿನ ನೀರಿನ ಹನಿಯು ನಿಮ್ಮ ಗರ್ವವನ್ನಾಗಲಿ ನಿಮ್ಮ ಪಾಪದ ಹೆದರಿಕೆಯನ್ನಾಗಲಿ ನಾಶಮಾಡುತ್ತದೆ. ಎಂದರೆ ಆ ನೀರಿನ ಹನಿಯ ಯಾಗಕ್ಕಿಂತಲೂ ಹೆಚ್ಚು ಪುಣ್ಯವನ್ನು ಕೊಡುತ್ತದೆ ಬ್ರಹ್ಮಹತ್ಯಾದಿ ಪಾಪಗಳನ್ನೂ ನಾಶಮಾಡುತ್ತದೆ.

೩೫. ಜನರು ಗಂಗೆ ಯಮುನೆಗಳು ಸಂಗಮವಾಗುವ ಜಾಗದಲ್ಲಿ ಸ್ನಾನ ಮಾಡುವುದರಿಂದ ಸ್ವರ್ಗಕ್ಕೆ ಹೋಗುತ್ತಾರೆ. ಯಾರು ಈ ಸಂಗಮದಲ್ಲಿ ದೇಹವನ್ನು ತ್ಯಾಗಮಾಡಿಕೊಳ್ಳುತ್ತಾರೆಯೋ ಅವರು ಮುಕ್ತಿಯನ್ನು ಹೊಂದುತ್ತಾರೆ.

೩೬. ದತ್ತಾತ್ರೇಯನು ಹೇಳಿದನು–ಗಂಗೆ ಯಮುನೆಗಳ ಜೊತೆಗೆ ಸರಸ್ವತಿಯೂ ಸೇರಿದ್ದ ಭಾಗವನ್ನು ಬ್ರಹ್ಮಲೋಕದ ಮಾರ್ಗವನ್ನಾಗಿ ಬ್ರಹ್ಮನು ಸೃಷ್ಟಿಸಿರುತ್ತಾನೆ.

ಸಿತಾಸಿತೇ ತು ಯೋ ಮಜ್ಜೇದಪಿ ಪಾಪಶತಾನ್ವಿತಃ ।
ಮಕರಸ್ಥೇ ರವೌ ರಾಜನ್ನ ಸ ಗರ್ಭೇಷು ಮಜ್ಜತಿ || ೩೭ ||

ದುರ್ಜಯಾ ವೈಷ್ಣವೀ ಮಾಯಾ ದೇವೈರಪಿ ಸುದುಸ್ತ್ಯಜಾ ।
ಪ್ರಯಾಗೇ ದಹ್ಯತೇ ಸಾಪಿ ಮಾಘೇ ಮಾಸಿ ನರಾಧಿಪ || ೩೮ ||

ತೇಜೋಮಯೇಷು ಲೋಕೇಷು ಭುಕ್ತ್ವಾ ಭೋಗಾನನೇಕಶಃ ।
ಪಶ್ಚಾಚ್ಚಕ್ರಿಣಿ ಲೀಯಂತೇ ಪ್ರಯಾಗೇ ಮಾಘಮಜ್ಜನಾತ್ || ೩೯ ||

ಉಪಸ್ಪೃಶತಿ ಯೋ ಮಾಘೇ ಮಕರಾರ್ಕೇ ಸಿತಾಸಿತೇ ।
ತಸ್ಯ ಪುಣ್ಯಸ್ಯ ಸಂಖ್ಯಾಂ ನೋ ಚಿತ್ರಗುಪ್ತೋಽಪಿ ವೇತ್ತ್ಯಲಂ || ೪೦ ||

---

೩೭. ಮಕರರಾಶಿಯಲ್ಲಿ ಸೂರ್ಯನಿರುವ ಮಾಘಮಾಸದಲ್ಲಿ ಯಾವನು ಸ್ನಾನಮಾಡುತ್ತಾನೆಯೋ ಅವನು ಸಾವಿರಾರು ಪಾಪಗಳಿಂದ ಕೂಡಿಕೊಂಡಿದ್ದರೂ ಮತ್ತೆ ಗರ್ಭವಾಸವನ್ನು ಹೊಂದುವುದಿಲ್ಲ.

೩೮. ವಿಷ್ಣುವಿನ ಮಾಯೆಯು ಜಯಿಸುವುದಕ್ಕಾಗಲಿ ಮೀರುವುದಕ್ಕಾಗಲಿ ಆಗದಿರುವಂತಹದು ದೇವತೆಗಳೂ ಕೂಡ ಬಿಡಲಾರರು. ಹೀಗಿರುವಲ್ಲಿ ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡಿದರೆ ಆ ಮಾಯೆಯು ನಾಶವಾಗುತ್ತದೆ.

೩೯. ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡಿದರೆ ತೇಜೋಮಯವಾದ ಲೋಕಗಳಲ್ಲಿ ಅನೇಕಬಗೆಯಾಗಿ ಭೋಗಗಳನ್ನೂ ಅನುಭವಿಸಿ ಅನಂತರ ಶ್ರೀ ಮಹಾವಿಷ್ಣುವಿನಲ್ಲಿ ಸೇರಿಹೋಗುತ್ತಾರೆ.

೪೦. ಮಕರಮಾಘದಲ್ಲಿ ಗಂಗಾ ಯಮುನೆಗಳ ಸಂಗಮದಲ್ಲಿ ನೀರನ್ನು ಮುಟ್ಟಿದ ಪುಣ್ಯವನ್ನು ಎಣಿಸಲು ಚಿತ್ರಗುಪ್ತನಿಗೂ ತಿಳಿಯುವುದಿಲ್ಲ.

ಸನ್ನಿಮಜ್ಜತಿ ಯೋ ಮಾಘೇ ಮಕರಸ್ಥೇ ಸಿತಾಸಿತೇ ।
ತಸ್ಯ ಪುಣ್ಯಸ್ಯ ಮಾಹಾತ್ಮ್ಯಂ ವಕ್ತುಂ ಬ್ರಹ್ಮಾಪಿ ನ ಕ್ಷಮಃ ॥ ೪೧ ॥

ಸಂವತ್ಸರಶತಂ ಸಾಗ್ರಂ ನಿರಾಹಾರಸ್ಯ ಯತ್ಫಲಂ ।
ಪ್ರಯಾಗೇ ಮಾಘಮಾಸೇ ಚ ತ್ರ್ಯಹಸ್ನಾನಾಚ್ಚ ತತ್ಫಲಂ ॥ ೪೨ ॥

ಸ್ವರ್ಣಭಾರಸಹಸ್ರೇಣ ಕುರುಕ್ಷೇತ್ರೇ ರವಿಗ್ರಹೇ ।
ಯತ್ಫಲಂ ಲಭತೇ ಮಾಘೇ ವೇಣ್ಯಾಂ ತತ್ತು ದಿನತ್ರಯಂ ॥ ೪೩ ॥

ಯೋಗಾಭ್ಯಾಸೇನ ಯತ್ಪುಣ್ಯಂ ಸಂವತ್ಸರಶತತ್ರಯಂ ।
ಪ್ರಯಾಗೇ ಮಾಘಮಾಸೇ ತು ತ್ರ್ಯಹಂ ಸ್ನಾತಸ್ಯ ತತ್ಫಲಂ ॥ ೪೪ ॥

ರಾಜಸೂಯಸಹಸ್ರಸ್ಯ ರಾಜನ್ನವಿಕಲಂ ಫಲಂ ।
ಸಿತಾಸಿತೇ ತು ಮಾಘೇ ತತ್ ಸ್ನಾತಾನಾಂ ಭವತಿ ಧ್ರುವಂ ॥ ೪೫ ॥

---

೪೧. ಮಾಘಮಾಸ ಮಕರಮಾಸಗಳು ಕೂಡಿರುವಾಗ ಗಂಗಾ ಯಮುನೆಗಳ ಸಂಗಮದಲ್ಲಿ ಸ್ನಾನಮಾಡಿದವನ ಪುಣ್ಯದ ಮಾಹಾತ್ಮೆಗಳನ್ನು ಬ್ರಹ್ಮನೂ ಕೂಡ ಹೇಳಲಾರನು.

೪೨. ನೂರುವರ್ಷಗಳವರೆಗೆ ಆಹಾರವನ್ನು ಬಿಟ್ಟು ಯಾವನು ನಿಯಮದಿಂದ ಇರುವನೋ ಅವನ ಪುಣ್ಯವನ್ನು ಮಾಘಮಾಸದಲ್ಲಿ ಪ್ರಯಾಗದಲ್ಲಿ ಮೂರುದಿನ ಸ್ನಾನಮಾಡುವುದರಿಂದ ಹೊಂದುತ್ತಾನೆ.

೪೩. ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರದಲ್ಲಿ ಸಾವಿರಮಣ ಚಿನ್ನವನ್ನು ದಾನ ಮಾಡಿದರೆ ಯಾವ ಪುಣ್ಯವು ಬರುವುದೋ ಆ ಪುಣ್ಯವು ಮಾಘಮಾಸದಲ್ಲಿ ತ್ರಿವೇಣಿಯಲ್ಲಿ ಮೂರುದಿನ ಸ್ನಾನ ಮಾಡಿದರೆ ಬರುತ್ತದೆ.

೪೪. ಮುನ್ನೂರು ವರ್ಷಗಳವರೆಗೂ ಯೋಗಾಭ್ಯಾಸವನ್ನು ಮಾಡಿದರೆ ಯಾವ ಪುಣ್ಯಬರುತ್ತದೆಯೋ ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡಿದರೆ ಆ ಫಲವು ಬರುತ್ತದೆ.

೪೫. ಸಾವಿರ ರಾಜಸೂಯಗಳನ್ನು ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಗಂಗಾ ಯಮುನೆಗಳ ಸಂಗಮದಲ್ಲಿ ಮಾಘಮಾಸದಲ್ಲಿ ಸ್ನಾನ ಮಾಡಿದರೆ ಬರುತ್ತದೆ.

ಪೃಥಿವ್ಯಾಂ ಯಾನಿ ತೀರ್ಥಾನಿ ಪುರ್ಯಃ ಸಪ್ತೈವ ಯಾಃ ಪುನಃ ।
ಸ್ನಾತುಮಾಯಾಂತಿ ವೈ ವೇಣ್ಯಾಂ ಮಾಘೇ ಮಾಸಿ ನರಾಧಿಪ ॥ ೪೬ ॥

ಸರ್ವತೀರ್ಥಾನಿ ಕೃಷ್ಣಾನಿ ಪಾಪಿನಾಂ ಸಂಗದೋಷತಃ ।
ಭವಂತಿ ಶುಕ್ಲವರ್ಣಾನಿ ಪ್ರಯಾಗೇ ಮಾಘಮಜ್ಜನಾತ್ ॥ ೪೭ ॥

ಆಕಲ್ಪಸಂಚಿತಂ ಪಾಪಂ ಜನ್ಮಭಿರ್ಯನ್ನರಾಧಿಪ ।
ತದ್ಭವೇದ್ಭಸ್ಮಸಾನ್ಮಾಘೇ ಸ್ನಾತಾನಾಂ ತು ಸಿತಾಸಿತೇ ॥ ೪೮ ॥

ವಾಙ್ಮನಃಕಾಯಜಂ ಪಾಪಂ ನರಸ್ಯ ಸುದೃಢಂ ಭವೇತ್ ।
ಪ್ರಯಾಗೇ ಮಾಘಮಾಸೇ ತು ತ್ರ್ಯಹಸ್ನಾನೇನ ತತ್ ಕ್ಷಯಂ ॥ ೪೯ ॥

ಪ್ರಯಾಗೇ ಮಾಘಮಾಸೇ ತು ಯಸ್ತ್ರ್ಯಹಂ ಸ್ನಾತಿ ಮಾನವಃ ।
ಪಾಪಂ ತ್ಯಕ್ತ್ವಾ ದಿವಂ ಯಾತಿ ಜೀರ್ಣಾಂ ತ್ವಚಮಿವೋರಗಃ ॥ ೫೦ ॥

---

೪೬. ಭೂಮಿಯಲ್ಲಿ ಇರುವ ತೀರ್ಥಗಳೆಲ್ಲವೂ ಮತ್ತು ಅಯೋಧ್ಯಾ ಮಧುರಾ, ಮಾಯಾ, ಕಾಶಿ, ಕಾಂಚಿ, ಅವಂತಿಕಾ, ದ್ವಾರಕೆ ಇವುಗಳೂ ಕೂಡ ಮಾಘಮಾಸದಲ್ಲಿ ತ್ರಿವೇಣೀನದಿಯಲ್ಲಿ ಸ್ನಾನಮಾಡುವುದಕ್ಕೆ ಬರುತ್ತವೆ.

೪೭. ಪಾಪಿಗಳ ಸಹವಾಸದಿಂದ ಎಲ್ಲಾ ತೀರ್ಥಗಳೂ ಕಪ್ಪುಬಣ್ಣಕ್ಕೆ ಇರುತ್ತವೆ. ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನಮಾಡುವುದರಿಂದ ಅವೆಲ್ಲವೂ ಬೆಳ್ಳಗಾಗುತ್ತವೆ.

೪೮. ಜನ್ಮದಿಂದ ಮೊದಲುಗೊಂಡು ಮನುಷ್ಯನು ಮಾಡಿರುವ ಪಾಪವೆಲ್ಲವೂ ಕೂಡ ಮಾಘಮಾಸದಲ್ಲಿ ಗಂಗೆ ಯಮುನೆಗಳಲ್ಲಿ ಸ್ನಾನಮಾಡುವುದರಿಂದ ಭಸ್ಮವಾಗಿ ಹೋಗುತ್ತವೆ.

೪೯. ವಾಕ್ಕು, ಮನಸ್ಸು ದೇಹಗಳಿಂದ ಮಾಡಿದ ಮನುಷ್ಯನ ಪಾಪಗಳೆಲ್ಲವೂ ಪ್ರಯಾಗದಲ್ಲಿ ಮಾಘಮಾಸದಲ್ಲಿ ಮೂರುದಿನ ಸ್ನಾನಮಾಡುವುದರಿಂದ ನಾಶವಾಗುತ್ತದೆ.

೫೦. ಮಾಘಮಾಸದಲ್ಲಿ ಪ್ರಯಾಗದಲ್ಲಿ ಮನುಷ್ಯನು ಮೂರುದಿನಗಳು ಸ್ನಾನಮಾಡಿದರೆ ಅವನು ಹಾವು ಪರೆಯನ್ನು ಕಳೆದುಕೊಳ್ಳುವಂತೆ ಪಾಪವನ್ನು ಕಳೆದುಕೊಂಡು ಸ್ವರ್ಗವನ್ನು ಹೊಂದುತ್ತಾನೆ

ಕುರುಕ್ಷೇತ್ರಸಮಾ ಗಂಗಾ ಯತ್ರ ಕುತ್ರಾವಗಾಹಿತಾ ।
ತಸ್ಮಾದ್ದಶಗುಣಾ ರಾಜನ್ ಯತ್ರ ವಿಂಧ್ಯೇನ ಸಂಗತಾ ॥ ೫೧ ॥

ತಸ್ಮಾಚ್ಛತಗುಣಾ ಗಂಗಾ ಕಾಶ್ಯಾಮುತ್ತರವಾಹಿನೀ ।
ಕಾಶ್ಯಾಃ ಶತಗುಣಾ ಪ್ರೋಕ್ತಾ ಗಂಗಾಯಮುನಸಂಗಮೇ ॥ ೫೨ ॥

ಸಹಸ್ರಗುಣಿತಾ ಪ್ರೋಕ್ತಾ ಭವೇತ್ಪಶ್ಚಿಮವಾಹಿನೀ ।
ಸಾ ರಾಜನ್ ದರ್ಶನಾದೇವ ಬ್ರಹ್ಮಹತ್ಯಾಪಹಾರಿಣೀ ॥ ೫೩ ॥

ಪಶ್ಚಿಮಾಭಿಮುಖೀ ಗಂಗಾ ಕಾಲಿಂದ್ಯಾ ಯತ್ರ ಸಂಗತಾ ।
ಹಂತಿ ಕಲ್ಪಕೃತಂ ಪಾಪಂ ಸಾ ಮಾಘೇ ನೃಪ ದುರ್ಲಭಂ ॥ ೫೪ ॥

---

೫೧. ಗಂಗೆಯಲ್ಲಿ ಎಲ್ಲಿ ಸ್ನಾನಮಾಡಿದರೂ ಅದು ಕುರುಕ್ಷೇತ್ರಕ್ಕೆ ಸಮವಾದ ಪುಣ್ಯವನ್ನು ಕೊಡುತ್ತದೆ. ಆ ಗಂಗೆಯು ವಿಂಧ್ಯಪರ್ವತದಲ್ಲಿ ಹರಿಯುವಾಗ ಸ್ನಾನ ಮಾಡಿದರೆ ಮೇಲೆ ಹೇಳಿದುದಕ್ಕಿಂತಲೂ ಹತ್ತರಷ್ಟು ಪುಣ್ಯವು ಹೆಚ್ಚಾಗಿ ಬರುತ್ತದೆ.

೫೨. ಕಾಶಿಯಲ್ಲಿ ಉತ್ತರವಾಹಿನಿಯಾಗಿರುವ ಗಂಗೆಯಲ್ಲಿ ಸ್ನಾನಮಾಡಿದರೆ ಆ ವಿಂಧ್ಯಗಂಗೆಯ ಸ್ನಾನಕ್ಕಿಂತಲೂ ಮೂರರಷ್ಟು ಹೆಚ್ಚು ಫಲವು ಬರುತ್ತವೆ. ಗಂಗಾಯಮುನೆಗಳ ಸಂಗಮದಲ್ಲಿ ಸ್ನಾನಮಾಡಿದರೆ ಆ ಕಾಶಿಯ ಸ್ನಾನಕ್ಕಿಂತಲೂ ಮೂರರಷ್ಟು ಹೆಚ್ಚು ಫಲವು ಬರುತ್ತದೆಂದು ಹೇಳಿದ್ದಾರೆ.

೫೩. ಆ ಗಂಗೆಯು ಪಶ್ಚಿಮವಾಹಿನಿಯಾಗಿ ಹರಿಯುವ ಭಾಗದಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿದರೆ ಗಂಗೆ ಯಮುನೆಗಳ ಸಂಗಮದಲ್ಲಿ ಬರುವ ಪುಣ್ಯಕ್ಕಿಂತಲೂ ಸಾವಿರದಷ್ಟು ಹೆಚ್ಚುಪುಣ್ಯವು ಬರುತ್ತದೆ. ಆ ಪಶ್ಚಿಮವಾಹಿನಿಯಾದ ಗಂಗೆಯನ್ನು ದರ್ಶನಮಾಡಿದರೇನೇ ಬ್ರಹ್ಮಹತ್ಯೆಯು ಹೋಗುತ್ತದೆ.

೫೪. ಪಶ್ಚಿಮಕ್ಕೆ ಹರಿಯುತ್ತಿರುವಾಗ ಗಂಗಾನದಿಯು ಯಮುನೆಯೊಡನೆ ಸೇರಿದಲ್ಲಿ ಸ್ನಾನಮಾಡಿದರೆ ಅವನು ಮಾಡಿದ ಕಲ್ಪಕಾಲದ ಪಾಪವೂ ನಾಶವಾಗುತ್ತದೆ. ಅದು ಮಾಘಮಾಸದಲ್ಲಿ ಸಿಕ್ಕುವುದು ಕಷ್ಟವು.

ಯತ್ಕಥ್ಯತೇಽಮೃತಂ ರಾಜನ್ ಸಾ ವೇಣೀ ಭುವಿ ಕೀರ್ತಿತಾ ।
ತಸ್ಯಾಂ ಮುಹೂರ್ತೋ ಲೋಕಾನಾಂ ದೇವಾನಾಮಪಿ ದುರ್ಲಭಃ ॥೫೫॥

ಬ್ರಹ್ಮಾ ವಿಷ್ಣುರ್ಮಹಾದೇವೋ ರುದ್ರಾದಿತ್ಯಮರುದ್ಗಣಾಃ ।
ಗಂಧರ್ವಾ ಲೋಕಪಾಲಾಶ್ಚ ಯಕ್ಷಕಿನ್ನರಗುಹ್ಯಕಾಃ ॥ ೫೬ ॥

ಅಣಿಮಾದಿಗುಣೈಸ್ಸಿದ್ಧಾಃ ಯೇ ಚಾನ್ಯೇ ತತ್ವದರ್ಶಿನಃ ।
ಬ್ರಹ್ಮಾಣೀ ಪಾರ್ವತೀ ಲಕ್ಷ್ಮೀರ್ದಿತಿರ್ಮೇಧಾ ಶಚೀ ರತಿಃ ॥ ೫೭ ॥

ಸರ್ವಾಸ್ತಾ ದೇವಪತ್ನ್ಯಶ್ಚ ತಥಾ ನಾಗಾಂಗನಾ ನೃಪ ।
ಘೃತಾಚೀ ಮೇನಕಾ ರಂಭಾ ಊರ್ವಶೀ ಚ ತಿಲೋತ್ತಮಾ ॥ ೫೮ ॥

ಗಣಾಶ್ಚಾಪ್ಸರಸಾಂ ಸರ್ವೇ ಪಿತೃಣಾಂ ಚ ಗಣಾಸ್ತಥಾ ।
ಸ್ನಾತುಮಾಯಾಂತಿ ತೇ ಸರ್ವೇ ಮಾಘೇ ವೇಣ್ಯಾಂ ನರಾಧಿಪ ॥ ೫೯ ॥

ಕೃತೇ ಯುಗೇ ಸ್ವರೂಪೇಣ ಕಲೌ ಪ್ರಚ್ಛನ್ನರೂಪಿಣಃ ।
ಪ್ರಯಾಗೇ ಮಾಘಮಾಸೇ ತು ತ್ರ್ಯಹಸ್ನಾನಸ್ಯ ಯದ್ಭವೇತ್ ॥ ೬೦ ॥

---

೫೫. ಎಲೈ ದೊರೆಯೆ! ಲೋಕದಲ್ಲಿ ಅಮೃತವೆಂದು ಯಾವುದನ್ನು ಹೇಳುತ್ತಾರೆಯೋ ಅದೇನೆ ಭೂಮಿಯಲ್ಲಿ ವೇಣಿ ನದಿಯಾಗಿ ಹುಟ್ಟಿದೆ. ಅದು ಸಿಕ್ಕುವುದೂ ಅದರಲ್ಲಿ ಸ್ನಾನವೂ ದೇವತೆಗಳಿಗೂ ದುರ್ಲಭವು.

೫೬-೫೯. ಬ್ರಹ್ಮ, ವಿಷ್ಣು, ಮಹಾದೇವ, ರುದ್ರಗಣ, ಆದಿತ್ಯಗಣ, ಮರುದ್ಗಣ, ಗಂಧರ್ವರು, ಲೋಕಪಾಲಕರು, ಯಕ್ಷರು, ಕಿನ್ನರರು, ಗುಹ್ಯಕರು, ಅಣಿಮಾದಿಗಳು, ಸಿದ್ಧರು, ಇನ್ನೂ ಅನೇಕಜನ ತತ್ವದರ್ಶಿಗಳು, ಸರಸ್ವತಿ, ಪಾರ್ವತಿ, ಲಕ್ಷ್ಮಿ, ದಿತಿ, ಮೇಧೆ, ಶಚಿ, ರತಿ, ಇನ್ನೂ ಎಲ್ಲಾ ದೇವತೆಗಳ ಹೆಂಡಿರು ಮತ್ತು ನಾಗಸ್ತ್ರೀಯರು, ಘೃತಾಚ, ಮೇನಕೆ, ರಂಭೆ, ಊರ್ವಶಿ, ತಿಲೋತ್ತಮೆ ಅಪ್ಸರಗಣಗಳು, ಪಿತೃಗಣಗಳು, ಇವರೆಲ್ಲರೂ ಕೂಡ ಮಾಘಮಾಸದಲ್ಲಿ ಈ ವೇಣಿಯಲ್ಲಿ ಸ್ನಾನಮಾಡಲು ಬರುತ್ತಾರೆ.

೬೦-೬೧. ಈ ವೇಣಿಯು ಕೃತಯುಗದಲ್ಲಿ ತನ್ನ ಸ್ವರೂಪದಿಂದಲೂ ಕಲಿಯುಗದಲ್ಲಿ ಕಾಣದಂತೆ ಗುಟ್ಟಾಗಿಯೂ ಇರುತ್ತಾಳೆ. ಪ್ರಯಾಗದಲ್ಲಿ ಮಾಘಮಾಸದಲ್ಲಿ ಮೂರುದಿನಗಳು ಸ್ನಾನಮಾಡಿದರೆ ಯಾವ ಪುಣ್ಯವು

ನಾಶ್ವಮೇಧಸಹಸ್ರಾಣಾಂ ತತ್ಪುಣ್ಯಂ ಲಭತೇ ಭುವಿ ।
ತ್ರ್ಯಹಸ್ನಾನಫಲಂ ಮಾಘೇ ಪುರಾ ಕಾಂಚನಮಾಲಿನೀ ॥ ೬೦ ॥

ರಾಕ್ಷಸಾಯ ದದೌ ಭೂಪ ತೇನ ಮುಕ್ತಸ್ಸ ಪಾಪಕೃತ್ ॥ ೬೨ ॥

॥ ಕಾರ್ತವೀರ್ಯ ಉವಾಚ ॥

ಭಗವನ್ ರಾಕ್ಷಸಃ ಕೋಽಸೌ ಕಾ ಸಾ ಕಾಂಚನಮಾಲಿನೀ ।
ಕಥಂ ದತ್ತವತೀ ಧರ್ಮಂ ಕಥಂ ವಾ ಸಂಗತಿಸ್ತಯೋಃ ॥ ೬೩ ॥

ಏತತ್ಕಥಯ ಯೋಗೇಂದ್ರ ಅತ್ರಿಸಂತಾನಭಾಸ್ಕರ ।
ಯದಿ ತ್ವಂ ಮನ್ಯಸೇ ಶ್ರಾವ್ಯಂ ಪರಂ ಕೌತೂಹಲಂ ಮಮ ॥ ೬೪ ॥

॥ ಶ್ರೀ ದತ್ತಾತ್ರೇಯ ಉವಾಚ ॥

ಶೃಣು ರಾಜನ್ ವಿಚಿತ್ರಂ ತ್ವಮಿತಿಹಾಸಂ ಪುರಾತನಂ ।
ಯಸ್ಯ ಶ್ರವಣಮಾತ್ರೇಣ ವಾಜಪೇಯಫಲಂ ಭವೇತ್ ॥ ೬೫ ॥

---

ಬರುತ್ತದೆಯೋ ಆ ಪುಣ್ಯವನ್ನು ಸಾವಿರ ಅಶ್ವಮೇಧಯಾಗಗಳನ್ನು ಮಾಡಿದರೂ. ಭೂಮಿಯಲ್ಲಿ ಹೊಂದಲಾರರು.

೬೨. ಈ ಪ್ರಯಾಗದಲ್ಲಿ ಮಾಘಮಾಸದಲ್ಲಿ ಮೂರುದಿನ ಸ್ನಾನಮಾಡಿ ಆ ಫಲವನ್ನು ಕಾಂಚನಮಾಲಿಯು ಪೂರ್ವದಲ್ಲಿ ಒಬ್ಬ ರಾಕ್ಷಸನಿಗೆ ಕೊಡಲು ಅವನು ತನ್ನ ಪಾಪದಿಂದ ಮುಕ್ತನಾದನು.

೬೩-೬೪. ಕಾರ್ತವೀರ್ಯನು ಹೇಳಿದನು–ಎಲೈ ಪೂಜ್ಯನೆ ! ಆ ರಾಕ್ಷಸನು ಯಾರು ? ಆ ಕಾಂಚನಮಾಲಿನಿಯು ಯಾರು ? ಅವಳು ಆ ಧರ್ಮವನ್ನು ಹೇಗೆ ಕೊಟ್ಟಳು ? ಅವರಿಬ್ಬರೂ ಸೇರಲು ಕಾರಣವೇನು ? ಎಲೈ ಅತ್ರಿಯವಂಶಕ್ಕೆ ಸೂರ್ಯನಂತಿರುವ ದತ್ತಾತ್ರೇಯನೇ ! ಅದು ಹೇಳುವುದಕ್ಕೆ ಯೋಗ್ಯವಾಗಿದ್ದರೆ ಅದೆಲ್ಲವನ್ನೂ ನನಗೆ ಹೇಳು. ಕೇಳಬೇಕೆಂಬ ಆಸೆಯು ಬಹುವಾಗಿರುವುದು.

೬೫. ದತ್ತಾತ್ರೇಯನು ಹೇಳಿದನು–ಎಲೈ ದೊರೆಯೆ ! ಈ ಇತಿಹಾಸವು ಬಹು ಹಿಂದಿನದು. ಆಶ್ಚರ್ಯಕರವಾದುದು. ಅದನ್ನು ಕೇಳಿದರೇನೇ ವಾಜಪೇಯ ಫಲವು ಬರುತ್ತದೆ.

ಅಪ್ಸರಾ ರೂಪಸಂಪನ್ನಾ ನಾಮ್ನಾ ಕಾಂಚನಮಾಲಿನೀ ।
ಪ್ರಯಾಗೇ ಮಾಘಮಾಸೇ ಸಾ ಸ್ನಾತ್ವಾ ಯಾನ್ತೀ ಹರಾಲಯಂ ॥ ೬೬ ॥

ನಿಕುಂಜೇ ಗಿರಿರಾಜಸ್ಯ ತಿಷ್ಠತಾ ಘೋರರೂಪಿಣಾ ।
ದೃಷ್ಟ್ವಾ ಗಗನಮಾರೂಢಾ ತೇನ ವೃದ್ಧೇನ ರಕ್ಷಸಾ ॥ ೬೭ ॥

ತದ್ವಸ್ತ್ರಬಿಂದುಪಾತೇನ ರಾಕ್ಷಸಸ್ಯ ಬಲೀಯಸಃ ।
ಕ್ರೂರತ್ವಂ ಚ ವಿಹಾಯಾಶು ಮನಃ ಶಾನ್ತಮಜಾಯತ ॥ ೬೮ ॥

ತೇಜಸ್ವಿನೀಂ ಸುಹೇಮಾಭಾಂ ಸುಶ್ರೋಣೀಂ ದೀರ್ಘಲೋಚನಾಂ ।
ಚಂದ್ರಾನನಾಂ ಸುಕೇಶೀಮಾಪೀನೋನ್ನತಪಯೋಧರಾಂ ॥ ೬೯ ॥

ದೃಷ್ಟ್ವಾ ತಾಂ ರೂಪಸಂಪನ್ನಾಮುವಾಚ ಸ ಚ ರಾಕ್ಷಸಃ ॥ ೭೦ ॥

---

೬೬-೬೭. ಒಬ್ಬಳು ರೂಪವತಿಯಾದ ಕಾಂಚನಮಾಲಿನೀ ಎಂಬ ಅಪ್ಸರ ಸ್ತ್ರೀಯು ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನಮಾಡಿ ಮನೆಗೆ ಹೋಗುತ್ತಿದ್ದಳು. ಆಗ ಆ ಹಿಮವಂತನ ತಪ್ಪಲಿನ ಒಂದು ಗವಿಯಲ್ಲಿ ಒಬ್ಬ ಘೋರರೂಪಿಯಾದ ರಾಕ್ಷಸನಿದ್ದನು. ಅವನು ಮುದುಕನು. ಹರನ ಮನೆಗೆ ಹೋಗುತ್ತಿರುವ ಆ ಕಾಂಚನಮಾಲಿಯನ್ನು ನೋಡಿದನು.

೬೮. ಆಗ ಮೇಲೆ ಹೋಗುತ್ತಿದ್ದ ಕಾಂಚನಮಾಲಿನಿಯ ಬಟ್ಟೆಯ ಶೆರಗಿನಿಂದ ಬಂದು ಬಿಂದು ನೀರು ಆ ರಾಕ್ಷಸನಮೇಲೆ ಬೀಳಲು ಅದರ ಪ್ರಭಾವದಿಂದ ಅವನಿಗೆ ಇದ್ದ ಕ್ರೂರತನವು ಹೋಯಿತು. ಮನಸ್ಸು ಶಾಂತವಾಯಿತು.

೬೯-೭೦. ತೇಜಸ್ವಿನಿಯಾಗಿಯೂ ಹೊಂಬಣ್ಣವುಳ್ಳವಳಾಗಿಯೂ ಚೆನ್ನಾಗಿರುವ ಸೊಂಟವುಳ್ಳವಳಾಗಿಯೂ ಧೀರ್ಘವಾದ ಕಣ್ಣುಳ್ಳವಳಾಗಿಯೂ ಚಂದ್ರನಂತೆ ಮುಖವುಳ್ಳವಳಾಗಿಯೂ ಚೆನ್ನಾಗಿರುವ ಕೂದಲುಳ್ಳವಳಾಗಿಯೂ ದೊಡ್ಡದಾದ ಸ್ತನಗಳುಳ್ಳವಳಾಗಿಯೂ ರೂಪವತಿಯಾಗಿಯೂ ಇರುವ ಆಕೆಯನ್ನು ನೋಡಿ ಆ ರಾಕ್ಷಸನು ಇಂತೆಂದನು.

|| ರಾಕ್ಷಸ ಉವಾಚ ||

ಕಾ ತ್ವಂ ಕಮಲಪತ್ರಾಕ್ಷಿ ಕುತ್ರ ಆಗಮ್ಯತೇ ತ್ವಯಾ |
ಆರ್ದ್ರಂ ಚ ವಸನಂ ಕಸ್ಮಾದಾರ್ದ್ರಾ ತೇ ಕಬರೀ ಕುತಃ || ೭೧ ||

ಕುತ್ರ ವಾ ಗಮ್ಯತೇ ಭೀರು ಕುತಸ್ತೇ ಗಗನೇ ಗತಿಃ |
ಕೇನ ಪುಣ್ಯಪ್ರಭಾವೇನ ತವ ತೇಜೋಮಯಂ ವಪುಃ || ೭೨ ||

ಅತೀವ ರೂಪಸಂಪನ್ನಂ ಸಂಭೂತಂ ಚ ಮನೋಹರಂ |
ತ್ವದ್ವಸ್ತ್ರಬಿಂದುಪಾತೇನ ಮಮ ಮೂರ್ಧ್ನಿ ಸುಲೋಚನೇ || ೭೩ ||

ಪ್ರಶಾನ್ತಮಭವತ್ಸದ್ಯಃ ಕ್ರೂರಂ ಮೇ ಮಾನಸಂ ಸದಾ |
ನೀರಸ್ಯ ಮಹಿಮಾ ಕೋಽಯಮೇತದ್ವ್ಯಾಚಷ್ಟುಮರ್ಹಸಿ || ೭೪ ||

ತ್ವಂ ಮೇ ಶೀಲವತೀ ಭಾಸಿ ವ್ಯಾಕರೋತಿ ತಥಾಕೃತಿಃ |
ಆಕಾರೇಣೈವ ಜಾನಂತಿ ಸಮರ್ಥಾಃ ಪರಚೇಷ್ಟಿತಂ || ೭೫ ||

---

೭೧. ರಾಕ್ಷಸನು ಹೇಳಿದನು-ಎಲೈ ಕಮಲಾಕ್ಷಿಯೆ ! ನೀನು ಯಾರು? ನೀನು ಎಲ್ಲಿಂದ ಬರುತ್ತೀಯೆ ! ನಿನ್ನ ಬಟ್ಟೆಯೇಕೆ ಒದ್ದೆಯಾಗಿದೆ? ನಿನ್ನ ತಲೆಯ ಕೂದಲೇತಕ್ಕೆ ಒದ್ದೆಯಾಗಿರುವುದು?

೭೨. ಎಲೈ ಹೆಂಗಸೆ ! ನೀನು ಎಲ್ಲಿಗೆ ಹೋಗುತ್ತಿದ್ದೀಯೆ ? ನೀನು ಆಕಾಶದಲ್ಲಿ ಹೋಗುತ್ತಿರಲು ಕಾರಣವೇನು ? ಯಾವ ಪುಣ್ಯಪ್ರಭಾವದಿಂದ ನಿನ್ನ ದೇಹವು ಬಹುವಾದ ತೇಜಸ್ಸುಳ್ಳದ್ದಾಗಿದೆ?

೭೩–೭೪ ನಿನ್ನ ಈ ದೇಹವು ಬಹುವಾಗಿ ಸುಂದರವಾಗಿಯೂ ಮನೋಹರವಾಗಿಯೂ ಇರಲು ಕಾರಣವೇನು ? ನಿನ್ನ ಬಟ್ಟೆಯಲ್ಲಿನ ನೀರಿನ ಬಿಂದುವು ನನ್ನ ತಲೆಯಮೇಲೆ ಬಿದ್ದುದರಿಂದ ನನ್ನ ಮನಸ್ಸು ಒಡನೆಯೇ ಶಾಂತವಾಗಿ ಕ್ರೂರತನವು ಮನಸ್ಸಿನಿಂದಲೇ ಹೊರಟುಹೋಯಿತು. ಈ ನೀರಿನ ಮಹಿಮೆಯು ಯಾವುದು ? ಎಂಬುದನ್ನು ನೀನು ಹೇಳು.

೭೫–೭೬. ನೀನು ಒಳ್ಳೆಯ ಸ್ವಭಾವದವಳಂತೆ ನನಗೆ ಕಾಣುತ್ತಿದ್ದೀಯೆ. ನಿನ್ನ ಆಕಾರವೇ ಅದನ್ನು ಹೇಳುತ್ತದೆ. ಶಕ್ತರಾದವರು ಪರರ ಕೆಲಸವನ್ನು

ವಸಂತೇ ಸತಿ ಭ್ರಮರಾ ಇವ ಸತ್ಪುಷ್ಪಸೌರಭಂ । ॥ ೭೬ ॥

॥ ಅಪ್ಸರ ಉವಾಚ ॥

ಶ್ರೂಯತಾಮಪ್ಸರಾಶ್ಚಾಹಂ ಭೋ ರಕ್ಷಃ ಕಾಮರೂಪಿಣೀ ।
ಆಗತಾಹಂ ಪ್ರಯಾಗಾಚ್ಚ ನಾಮ್ನಾ ಕಾಂಚನಮಾಲಿನೀ ॥ ೭೭ ॥

ಆರ್ದ್ರಾ ತು ಕಬರೀ ಚೇಯಂ ಪ್ರಯಾಗಾಂಭಸಿ ಮಜ್ಜನಾತ್ ।
ಗಂತವ್ಯಶ್ಚ ಮಯಾ ರಕ್ಷಃ ಕೈಲಾಸಃ ಪರ್ವತೋತ್ತಮಃ ॥ ೭೮ ॥

ಯತ್ರಾಸ್ತೇ ಪಾರ್ವತೀನಾಥಃ ಸುರಾಸುರನಮಸ್ಕೃತಃ ।
ವೇಣೀವಾರಿಪ್ರಭಾವೇನ ರಕ್ಷಸ್ತೇ ಕ್ರೂರತಾ ಗತಾ ॥ ೭೯ ॥

ಜಾತಾಹಂ ಯೇನ ಪುಣ್ಯೇನ ಗಂಧರ್ವಸ್ಯ ಸುಮೇಧಸಃ ।
ಕನ್ಯಾಕಾ ದಿವ್ಯರೂಪಾಹಂ ತತ್ಸರ್ವಂ ಕಥಯಾಮಿ ತೇ ॥ ೮೦ ॥

---

ಆಕಾರದಿಂದಲೇ ತಿಳಿದುಕೊಳ್ಳುತ್ತಾರೆ. ವಸಂತಕಾಲವು ಬರಲು ಭ್ರಮರಗಳು ಒಳ್ಳೆಯ ಹೂಗಳ ವಾಸನೆಯನ್ನು ತಿಳಿಯುವಂತೆ ಶಕ್ತರಾದವರು ಕಂಡುಹಿಡಿಯುತ್ತಾರೆ.

೭೭. ಅಪ್ಸರಸ್ತ್ರೀಯು ಹೇಳಿದಳು–ಹಾಗಾದರೆ ಹೇಳುತ್ತೇನೆ. ಕೇಳು. ನಾನು ಅಪ್ಸರಸ್ತ್ರೀಯು. ಅಲ್ಲದೆ ಇಷ್ಟಬಂದಂತೆ ಆಕಾರವನ್ನು ಹೊಂದತಕ್ಕವಳು. ಪ್ರಯಾಗದಿಂದ ಬಂದೆನು. ನನ್ನ ಹೆಸರು ಕಾಂಚನಮಾಲಿನಿಯು.

೭೮-೭೯. ನಾನು ಪ್ರಯಾಗದ ನೀರಿನಲ್ಲಿ ಸ್ನಾನಮಾಡಿದ್ದರಿಂದ ತಲೆಯು ಒದ್ದೆಯಾಗಿದೆ. ಸುರಾಸುರನಮಸ್ಕೃತನಾದ ಆ ಪರಶಿವನು ಇರುವ ಪರ್ವತೋತ್ತಮವಾದ ಕೈಲಾಸಕ್ಕೆ ನಾನು ಹೋಗಬೇಕು. ವೇಣಿಯ ನೀರಿನ ಮಹಿಮೆಯಿಂದ ನಿನ್ನ ಕ್ರೌರ್ಯವು ಹೋಯಿತು.

೮೦. ನಾನು ಸುಮೇಧಸನೆಂಬ ಗಂಧರ್ವನ ಮಗಳಾಗುವುದಕ್ಕೂ ಸುಂದರವತಿಯಾಗುವುದಕ್ಕೂ ಕಾರಣವಾದ ಪುಣ್ಯದ ವಿಷಯವನ್ನು ಹೇಳುತ್ತೇನೆ.

ಕಲಿಂಗಾದಿಪತೇ ರಾಜ್ಞೋ ಹ್ಯಹಮಾಸಂ ವಿಲಾಸಿನೀ ।
ರೂಪಲಾವಣ್ಯಸಂಪನ್ನಾ ಸೌಭಾಗ್ಯಮದಗರ್ವಿತಾ ॥ ೬೧ ॥

ಅನ್ಯಾಸಾಂ ಯುವತೀನಾಂ ಚ ತತ್ಪುರೇಹಂ ಶಿರೋಮಣಿಃ ।
ತಜ್ಜನ್ಮನಿ ಮಯಾ ರಕ್ಷೋ ಭುಕ್ತಾ ಭೋಗಾ ಯಥೇಚ್ಛಯಾ ॥ ೬೨ ॥

ಮೋಹಿತಂ ತತ್ಪುರಂ ಸರ್ವಂ ಮಯಾ ಯೌವನಸಂಪದಾ ।
ಅಮೂಲ್ಯಾನಿ ಚ ರತ್ನಾನಿ ಭೂಷಣಾನಿ ಧನಾನಿ ಚ ॥ ೬೩ ॥

ವಾಸಾಂಸಿ ಚ ವಿಚಿತ್ರಾಣಿ ಕರ್ಪೂರಾಗರುಚಂದನಂ ।
ಏವಂ ಹ್ಯುಪಾರ್ಜಿತಂ ದ್ರವ್ಯಂ ಮಯಾ ಯೌವನರೂಪಯಾ ॥ ೬೪ ॥

ನಾಹಂ ಜಾನಾಮಿ ಮೋಹಂ ತಂ ಸ್ವನಿವಾಸೇ ನಿಶಾಚರ ।
ಸುಸೇವಂತೇ ಯುವಾನೋ ಮೇ ಚರಣೌ ಕಾಮಪೀಡಿತಾಃ ॥ ೬೫ ॥

---

೬೧. ನಾನು ಕಳಿಂಗದೇಶದ ರಾಜನಿಗೆ ಸೂಳೆಯಾಗಿದ್ದೆನು. ಬಹುರೂಪವತಿಯಾಗಿಯೂ ಸೌಭಾಗ್ಯವುಳ್ಳವಳಾಗಿಯೂ ಇದ್ದೆನು. ಅದೇ ಮದವು ನನ್ನಲ್ಲಿ ಬಹುವಾಗಿದ್ದಿತು.

೬೨. ಆ ಜನ್ಮದಲ್ಲಿ ನಾನು ಆ ರಾಜನ ಊರಿನಲ್ಲಿದ್ದವರಿಗೆಲ್ಲಾ ಮೊದಲನೆಯವಳಾಗಿಯೂ ಸುಂದರಿಯಾಗಿಯೂ ಇದ್ದೆನು. ಆಗ ನಾನು ಬಹು ಪ್ರಕಾರವಾಗಿ ಭೋಗಗಳನ್ನೆಲ್ಲಾ ಅನುಭವಿಸಿದೆನು.

೬೩-೬೪. ನನ್ನ ಯೌವನದಿಂದಲೂ ಸೌಂದರ್ಯದಿಂದಲೂ ಆ ಪಟ್ಟಣವೆಲ್ಲವೂ ಮೋಹಗೊಂಡಿದ್ದಿತು. ಇದರಿಂದ ಉತ್ತಮವಾದ ರತ್ನಗಳು, ಒಡವೆಗಳು, ಧನಗಳು, ಬಟ್ಟೆಗಳು, ಕರ್ಪೂರ, ಅಗರು, ಚಂದನ, ಅಮೂಲ್ಯವಾದ ಅನೇಕ ಪದಾರ್ಥಗಳು, ಇವುಗಳನ್ನು ತಂದುಕೊಟ್ಟು ನನ್ನನ್ನು ಭೋಗಿಸುತ್ತಿದ್ದರು. ಹೀಗೆಯೇ ಈ ಯೌವನದಿಂದಲೂ ರೂಪದಿಂದಲೂ ಜನಗಳನ್ನು ಮೋಹಿಸಿ ಬಹುವಾದ ಹಣವನ್ನು ಸಂಪಾದಿಸಿದೆನು.

೬೫. ಇಷ್ಟು ಹಣಬಂದರೂ ಕೂಡ ಅದರಿಂದ ನನಗೆ ಹೆಮ್ಮೆಯೆಂಬುದೇ ಬರಲಿಲ್ಲ. ಕಾಮಬಾಧೆಗೊಳಗಾದ ಅನೇಕಜನ ಯುವಕರು ನನ್ನ ಪಾದಗಳನ್ನು ಎಡಬಿಡದೆ ಸೇವಿಸುತ್ತಿದ್ದರು.

ಮಯಾ ತೇ ವಂಚಿತಾಸ್ಸರ್ವೇ ಸರ್ವಸ್ವೇನ ತು ಮಾಯಯಾ ।
ಅನ್ಯೋನ್ಯದುಷ್ಟಭಾವೇನ ಮೃತಾಃ ಕೇಚಿತ್ತು ಕಾಮಿನಃ ॥ ೮೬ ॥

ಇತ್ಥಂ ತನ್ನಗರೇ ರಮ್ಯೇ ಸ ಕಾಲೋ ಮೇ ಗತಸ್ತದಾ ।
ಪ್ರಾಪ್ತೇ ತು ವಾರ್ಧಕೇ ಭಾವೇ ಶುಶೋಚ ಹೃದಯಂ ಮಮ ॥ ೮೭ ॥

ನ ದತ್ತಂ ನ ಹುತಂ ದಾನಂ ನ ವ್ರತಂ ಚರಿತಂ ಮಯಾ ।
ನಾರಾಧಿತೋ ಮಹಾದೇವಶ್ಚತುರ್ವರ್ಗಫಲಪ್ರದಃ ॥ ೮೮ ॥

ನ ಮಯಾ ಪೂಜಿತಾ ದೇವೀ ದುರ್ಗಾ ದುರ್ಗತಿಹಾರಿಣೀ ।
ಸರ್ವಪಾಪಹರೋ ವಿಷ್ಣುಃ ನ ಸ್ಮೃತೋ ಭೋಗಲುಬ್ಧಯಾ ॥ ೮೯ ॥

ನ ಚ ಸಂತರ್ಪಿತಾ ವಿಪ್ರಾ ನ ಕೃತಂ ಪ್ರಾಣಿನಾಂ ಹಿತಂ ।
ಅಣುಮಾತ್ರಂ ಮಯಾ ಪುಣ್ಯಂ ನ ಕೃತಂ ಚ ಪ್ರಮಾದತಃ ॥ ೯೦ ॥

---

೮೬. ನಾನು ಕಾಮಮೋಹಕ್ಕೆ ಅತಿಯಾಗಿ ಸಿಕ್ಕಿಕೊಳ್ಳದೆ ಅವರನ್ನು ನನ್ನ ಮಾತು ಹಾವಭಾವಗಳಿಂದಲೇ ವಂಚಿಸಿ ಅವರ ಧನವನ್ನೆಲ್ಲಾ ಸೂರೆಮಾಡಿ ಕೊಂಡೆನು. ಅವರೂ ಕೂಡ ನನಗೋಸ್ಕರ ಹೊಡೆದಾಡುತ್ತಾ ಎಷ್ಟೋ ಜನರು ಮೃತರಾದರು.

೮೭. ಈ ರೀತಿಯಾಗಿ ಸಂತೋಷಕರವಾದ ಆ ವೂರಿನಲ್ಲಿ ನನ್ನ ಯೌವನ ಕಾಲವು ಕಳೆದುಹೋಯಿತು. ಕ್ರಮೇಣ ಮುಪ್ಪುಬರಲು ನನ್ನ ಹೃದಯದಲ್ಲಿ ದುಃಖವು ಪ್ರಾಪ್ತವಾಯಿತು.

೮೮-೯೦. ಒಬ್ಬರಿಗೂ ಏನನ್ನೂ ಕೈಯ್ಯೆತ್ತಿಕೊಡಲಿಲ್ಲ. ಹೋಮ ಮಾಡಲಿಲ್ಲ. ದಾನಕೊಡಲಿಲ್ಲ. ವ್ರತವನ್ನಾಚರಿಸಲಿಲ್ಲ. ಧರ್ಮ, ಕಾಮ, ಅರ್ಥ, ಮೋಕ್ಷಗಳನ್ನು ಕೊಡುವ ಮಹಾದೇವನನ್ನು ಪೂಜಿಸಲಿಲ್ಲ. ಪಾಪವನ್ನು ನಾಶಮಾಡುವ ವಿಷ್ಣುವನ್ನು ಪೂಜಿಸಲಿಲ್ಲ. ಎಲ್ಲಾ ಕಷ್ಟಗಳನ್ನೂ ನಾಶಮಾಡುವ ದುರ್ಗಿಯನ್ನು ಪೂಜಿಸಲಿಲ್ಲ. ಪಾಪಗಳನ್ನು ನಾಶಮಾಡುವನ್ನು ವಿಷ್ಣುವನ್ನು ಪೂಜಿಸಲಿಲ್ಲ. ಭೋಗದಲ್ಲಿ ಮನಗೊಂಡು ನಾನು ಅವನನ್ನು ಸ್ಮರಿಸಲೇ ಇಲ್ಲ. ವಿಪ್ರರಿಗೆ ತೃಪ್ತಿಯಾಗುವಂತೆ ಅನ್ನವನ್ನು ಹಾಕಲೇ ಇಲ್ಲ. ಯಾವ ರೀತಿಯಲ್ಲಿಯೂ ಪ್ರಾಣಿಗಳಿಗೆ ಹಿತವನ್ನುಂಟುಮಾಡಲೇ ಇಲ್ಲ. ಪ್ರಮಾದವಶ ದಿಂದಲಾದರೂ ಪುಣ್ಯವನ್ನು ಮಾಡಲೇ ಇಲ್ಲ.

ಪಾತಕಂ ತು ಕೃತಂ ಭದ್ರ ತೇನ ಮೇ ದಹ್ಯತೇ ಮನಃ ।
ಬಹುಧೈವಂ ವಿಲಪ್ಯಾಹಂ ಬ್ರಾಹ್ಮಣಂ ಶರಣಂ ಗತಾ ॥ ೯೧ ॥

ಬ್ರಹ್ಮಜ್ಞಂ ವೇದವಿದ್ವಾಂಸಂ ತಸ್ಯ ರಾಜ್ಞಃ ಪುರೋಹಿತಂ ।
ಸ ಚ ಪೃಷ್ಟೋ ಮಯಾ ದಕ್ಷೋ ನಿಷ್ಕೃತಿಃ ಸ್ಯಾತ್ಕಥಂ ಮಮ ॥ ೯೨ ॥

ಪಾಪಸ್ಯಾಸ್ಯ ದ್ವಿಜಶ್ರೇಷ್ಠ ಕಥಂ ಯಾಮೀತಿ ನಿಷ್ಕೃತಿಂ ।
ಸ್ವೇನೈವ ಕರ್ಮಣಾ ತಪ್ತಾಂ ವರಾಕೀಂ ದೀನಮಾನಸಾಂ ॥ ೯೩ ॥

ಪಾಪಪಂಕನಿಮಗ್ನಾಂ ಚ ಮಾಮುದ್ಧರ ಕಚಗ್ರಹೈಃ ।
ಮಯಿ ಕಾರುಣ್ಯಜಂ ವಾರಿ ವರ್ಷ ತ್ವಂ ದ್ವಿಜಪುಂಗವ ॥ ೯೪ ॥

ಸಜ್ಜನೇ ಸಾಧವಃ ಸರ್ವೇ-ಸಾಧು ಸಾಧುರಸಜ್ಜನೇ ।
ಇತ್ಯಸೌ ಮದ್ವಚಃ ಶ್ರುತ್ವಾ ಚಕಾರಾನುಗ್ರಹಂ ಮಯಿ ।
ಊಚೇ ಪ್ರೀತಿಕರಂ ವಾಕ್ಯಂ ಸರ್ವಧರ್ಮಮಯಂ ದ್ವಿಜಃ ॥ ೯೫ ॥

---

೯೧. ಹೀಗಾಗಿ ನಾನು ಬಹುವಾದ ಪಾಪಗಳನ್ನು ಮಾಡಿದೆನು. ಆದರಿಂದ ನನ್ನ ಮನಸ್ಸು ಬಹುವಾಗಿ ನೊಂದಿತು. ಹೀಗೆ ಬಹುರೀತಿ ಯೋಚಿಸಿ ವ್ಯಥೆಗೊಂಡು ಕೊನೆಗೆ ಒಬ್ಬ ಬ್ರಾಹ್ಮಣನನ್ನು ಶರಣು ಹೊಕ್ಕೆನು.

೯೨-೯೪. ಆ ಬ್ರಾಹ್ಮಣನು ತತ್ವವನ್ನು ಬಲ್ಲವನು. ವೇದದಲ್ಲಿ ವಿದ್ವಾಂಸನು. ರಾಜನಿಗೂ ಪುರೋಹಿತನಾಗಿದ್ದನು ಅವನ ಬಳಿಗೆ ಹೋಗಿ ಈ ಪಾಪದಿಂದ ನನಗೆ ಬಹು ದುಃಖವಾಗಿದೆ. ಏನುಮಾಡಿದರೆ ಈ ಪಾಪದಿಂದ ಪಾರುಗಾಣುವೆನು? ಎಂದು ಕೇಳಿದೆನು. ಎಲೈ ಬ್ರಾಹ್ಮಣ ಶ್ರೇಷ್ಠನೇ? ನಾನು ಮಾಡಿದ ಪಾಪಕೆಲಸಗಳಿಂದಲೇ ಈಗ ನಾನು ಪರಿತಪಿಸುತ್ತಿದ್ದೇನೆ. ದೀನಳಾಗಿದ್ದೇನೆ. ಮನಸ್ಸು ಬಹುವಾಗಿ ನೊಂದಿದೆ. ಪಾಪವೆಂಬ ಕೆಸರಿನಲ್ಲಿ ಹೂತುಹೋಗಿದ್ದೇನೆ. ನನ್ನನ್ನು ಜುಟ್ಟು ಹಿಡಿದೆತ್ತು. ಕೃಪೆಯಿಂದ ಹೊರ ಹೊಮ್ಮುವ ಮಳೆಯ ನೀರನ್ನು ನನ್ನ ಮೇಲೆ ಸುರಿಸು.

೯೫. ಸತ್ಪುರುಷನನ್ನು ಕಂಡರೆ ಎಲ್ಲರೂ ಸಾಧುಗಳಾಗಿಯೇ ಇರುತ್ತಾರೆ. ದುಷ್ಟನನ್ನು ಕಂಡರೆ ಸಾಧುವಾಗಿದ್ದರೂ ಅವನಲ್ಲಿ ದುಷ್ಟಭಾವನೆಯನ್ನೇ ಹೊಂದುತ್ತಾರೆ. ಹೀಗೆ ಹೇಳಲು ಈಮಾತನ್ನು ಕೇಳಿ ಆತನು ನನ್ನಲ್ಲಿ ಪ್ರೀತಿಕರವಾದ ಮಾತನ್ನಾಡಿ ಅನುಗ್ರಹಮಾಡಿದನು. ಆಗ ಉತ್ತಮವಾಗಿಯೂ ಧರ್ಮಗಳಿಂದ ಕೂಡಿಯೂ ಇರುವ ಪ್ರೀತಿಕರವಾದ ಈ ಮಾತುಗಳನ್ನಾಡಿದನು.

॥ ದ್ವಿಜ ಉವಾಚ ॥

ನಿಷಿದ್ಧಾಚರಣಂ ಜಾನೇ ಸರ್ವಂ ತೇಹಂ ವರಾನನೇ ।
ಕುರು ಮೇ ಸತ್ವರಂ ವಾಕ್ಯಂ ಯಾಹಿ ಕ್ಷೇತ್ರಂ ಪ್ರಜಾಪತೇಃ ॥ ೯೬ ॥

ತತ್ರ ಗತ್ವಾ ಕುರು ಸ್ನಾನಂ ತೇನ ಪಾಪಕ್ಷಯಸ್ತವ ।
ನಾಹಮನ್ಯತ್ರಪಶ್ಯಾಮಿ ಯತ್ತೇ ಪಾಪಪ್ರಣಾಶನಂ ॥ ೯೭ ॥

ಪ್ರಾಯಶ್ಚಿತ್ತಂ ಪರಂ ತೀರ್ಥಸ್ನಾನಂ ಮಹರ್ಷಿಭಿಃ ಸ್ಮೃತಂ ।
ಕಿಂ ತು ತೀರ್ಥೇ ತ್ಯಜೇದ್ಧೀರು ಮನಸಾಪ್ಯಶಿವಕ್ರಿಯಾಂ ॥ ೯೮ ॥

ಪ್ರಯಾಗಸ್ನಾನಶುದ್ಧಾ ತ್ವಂ ಸ್ವರ್ಗಂ ಯಾಸ್ಯಸಿ ನಿಶ್ಚಿತಂ ।
ಪ್ರಯಾಗಸ್ನಾನಮಾತ್ರೇಣ ನೃಣಾಂ ನಾಕೋ ನ ಸಂಶಯಃ ॥ ೯೯ ॥

---

೯೬. ದ್ವಿಜನು ಹೇಳಿದನು–ಎಲೈ ವರಾನನೆಯೆ ! ನೀನು ಮಾಡುತ್ತಿರುವ ಕೆಟ್ಟ ಕೆಲಸಗಳನ್ನು ನಾನು ಬಲ್ಲೆನು. ನಾನು ಹೇಳುವ ಮಾತನ್ನು ಕೇಳು ಜಾಗ್ರತೆಯಾಗಿ ಪ್ರಜಾಪತಿಯ ಕ್ಷೇತ್ರವಾದ ಪ್ರಯಾಗಕ್ಕೆ ಹೋಗು.

೯೭. ಅಲ್ಲಗೆ ಹೋಗಿ ಸ್ನಾನಮಾಡು. ಅದರಿಂದ ಪಾಪವು ಕ್ಷಯಿಸಿ ಹೋಗುತ್ತದೆ. ನಿನಗೆ ಪಾಪವು ನಾಶವಾಗಲು ಇದೊಂದನ್ನು ಹೊರತಾಗಿ ಮತ್ತೊಂದನ್ನೂ ನಾನು ಕಾಣೆನು.

೯೮. ತೀರ್ಥಸ್ನಾನವೇ ಉತ್ತಮವಾದ ಪ್ರಾಯಶ್ಚಿತ್ತವು. ಅದರಿಂದ ಪಾಪವು ನಾಶವಾಗುತ್ತದೆ. ಎಂದು ಮಹರ್ಷಿಗಳು ಹೇಳಿದ್ದಾರೆ. ಆದರೆ ಆ ತೀರ್ಥಗಳಲ್ಲಿ ಕೆಟ್ಟಕೆಲಸಗಳನ್ನು ಬಿಟ್ಟು ಬಿಡಬೇಕು-

೯೯. ಪ್ರಯಾಗದಲ್ಲಿ ಸ್ನಾನಮಾಡಿದರೆ ಸ್ವರ್ಗವನ್ನು ಹೊಂದುತ್ತೀಯೆ. ಇದು ನಿಶ್ಚಯವು. ಪ್ರಯಾಗಸ್ನಾನಮಾತ್ರದಿಂದಲೇ ಮನುಷ್ಯರು ಸ್ವರ್ಗವನ್ನು ಹೊಂದುತ್ತಾರೆ. ಸಂಶಯವಿಲ್ಲ.

ಅನ್ಯದೇಶಕೃತಂ ಪಾಪಂ ತತ್ ಕ್ಷಣಾದೇವ ನಶ್ಯತಿ ।
ಪ್ರಯಾಗೇ ವಿಲಯಂ ಯಾತಿ ಪಾಪಂ ತೀರ್ಥಕೃತಂ ವಿನಾ ॥ ೧೦೦ ॥

ಶೃಣು ಭೀರು ಪುರಾ ಶಕ್ರೋ ಗೌತಮಸ್ಯ ವಧೂಂ ಪ್ರತಿ ।
ದೃಷ್ಟ್ವಾ ಕಾಮವಶಂ ಪ್ರಾಪ್ತಸ್ತಾಂ ಗತೋ ಗುಪ್ತಕಾಮುಕಃ ॥ ೧೦೧ ॥

ತೇನೈವೋಗ್ರೇಣ ಪಾಪೇನ ತದ್ಯೈವ ಜನಿತಂ ಫಲಂ ।
ಋಷಿಸ್ತ್ರೀಗನ್ತುರಿಂದ್ರಸ್ಯ ತಸ್ಯಾಶ್ಚ ಪುರತಸ್ತದಾ ॥ ೧೦೨ ॥

ಕುರೂಪಂ ಗರ್ಹಿತಂ ಜಾತಮತಿಲಜ್ಜಾಕರಂ ವಪುಃ ।
ತದ್ಭರ್ತುಶ್ಶಾಪಮಹಾತ್ಮ್ಯಾತ್ಸಹಸ್ರಭಗಚಿಹ್ನಿತಂ ॥ ೧೦೩ ॥

ಅಧೋಮುಖಸ್ತತೋ ಭೂತ್ವಾ ದೇವರಾಜೋ ವಿನಿರ್ಗತಃ ।
ವಿನಿಂದನ್ ಸ್ವಕೃತಂ ಕರ್ಮ ಪರಿಭೂತಸ್ತು ಲಜ್ಜಯಾ ॥ ೧೦೪ ॥

---

೧೦೦. ಪ್ರಯಾಗದಲ್ಲಿ ಬೇರೆಯ ಕಡೆಯ ತೀರ್ಥದಲ್ಲಿ ಮಾಡಿದ ಪಾಪವು ಹೋಗುತ್ತದೆ. ಆದರೆ ಈ ಪ್ರಯಾಗದಲ್ಲಿ ಮಾಡಿದ ಪಾಪವು ಮಾತ್ರ ತೀರ್ಥಗಳಲ್ಲಿ ಹೋಗುವುದಿಲ್ಲ.

೧೦೧–೧೦೩. ಎಲೈ ಕಾಮಿನಿಯೆ! ಒಂದು ಕಥೆಯನ್ನು ಹೇಳುತ್ತೇನೆ. ಕೇಳು. ಹಿಂದೆ ಇಂದ್ರನು ಗೌತಮನ ಹೆಂಡತಿಯನ್ನು ನೋಡಿ ಅವಳಲ್ಲಿ ಇಚ್ಛೆಯುಳ್ಳವನಾಗಿ ಗುಟ್ಟಾಗಿ ಬಂದು ಆಕೆಯನ್ನು ರಮಿಸಿದನು. ಒಡನೆಯೇ ಆ ಉಗ್ರವಾದ ಪಾಪಕ್ಕೆ ಫಲವು ದೊರಕಿತು. ಆ ಋಷಿಯ ಹೆಂಡತಿಯಲ್ಲಿ ರಮಿಸಿದ ಇಂದ್ರನಿಗೆ ಆ ಅಹಲ್ಯೆಯ ಎದುರಿನಲ್ಲಿಯೇ ನಿಂದಿತವಾದ ಕೆಟ್ಟದಾದ ರೂಪವು ಬಂದಿತು. ಅದು ಬಹು ಲಜ್ಜಾಕರವಾಗಿಯೂ ಇದ್ದಿತು. ಆ ಅಹಲ್ಯೆಯ ಗಂಡನಾದ ಗೌತಮನ ಶಾಪದಮಹಿಮೆಯಿಂದ ಇಂದ್ರನಿಗೆ ಮೈಯೆಲ್ಲವೂ ಭಗಾಕಾರವಾಗಿ (ಹೆಂಗಸರ ಗುಹ್ಯದ ಆಕಾರ) ಆಯಿತು.

೧೦೪. ಆಗ ಇಂದ್ರನು ಲಜ್ಜೆಪಟ್ಟು ತಾನು ಮಾಡಿದರ ಕೆಟ್ಟಕೆಲಸವನ್ನು ಸ್ಮರಿಸಿಕೊಳ್ಳುತ್ತಾ ತಲೆಯನ್ನು ಬಗ್ಗಿಸಿಕೊಂಡು ಹೊರಟುಹೋದನು.

ಮೇರೌ ಸರಸಿ ತೋಯಾಢ್ಯೇ ಶತಯೋಜನವಿಸ್ತರೇ ।
ತತ್ರ ಗತ್ವಾ ಪ್ರವಿಷ್ಟಃ ಸ ಹೇಮಾಂಬುರುಹಕುಟ್ಮಲೇ ।
ತತ್ರಸ್ಥೋ ಗರ್ಹಯನ್ನಿತ್ಯಮಾತ್ಮಾನಂ ಮನ್ಮಥಂ ತಥಾ ॥ ೧೦೫ ॥

॥ ಇಂದ್ರ ಉವಾಚ ॥

ಧಿಕ್ತಾಂ ಕಾಮಾತ್ಮತಾಂ ಲೋಕೇ ಸದ್ಯಃ ಪಾತಕದಾಯಿನೀಂ ।
ಆಯುಷ್ಕೀರ್ತಿಯಶೋಧರ್ಮಧೈರ್ಯಧ್ವಂಸಕರೀಂ ನೃಣಾಂ ॥ ೧೦೬ ॥

ಯಯಾ ವೈ ನರಕಂ ಯಾನ್ತಿ ಸರ್ವಲೋಕವಿಗರ್ಹಿತಾಃ ।
ಧಿಙ್ಮನ್ಮಥಂ ದುರಾಚಾರಮಾಪದಾಂ ಪರಮಂ ಪದಂ । ॥ ೧೦೭ ॥

ದೇಹಸ್ಥಂ ದುರ್ದಮಂ ಶತ್ರುಮಸಂತುಷ್ಟಂ ಸದಾಕ್ಷಯಂ ॥ ೧೦೮ ॥

---

೧೦೫. ಅಲ್ಲಿಂದ ಹೊರಟು ಮೇರು ಪರ್ವತದಲ್ಲಿ ಬಹುವಾದ ನೀರಿರುವ ನೂರು ಯೋಜನಗಳಷ್ಟು ವಿಸ್ತಾರವಾಗಿರುವ ಒಂದು ಸರೋವರಕ್ಕೆ ಹೋದನು. ಅನಂತರ ಆ ಸರೋವರದಲ್ಲಿದ್ದ ಒಂದು ಚಿನ್ನದ ಕಮಲದ ಮೊಗ್ಗಿನೊಳಹೊಕ್ಕು ಅಲ್ಲಿ ಸೇರಿಕೊಂಡನು. ಅದರೊಳಗೆ ಇದ್ದುಕೊಂಡು ತನ್ನನ್ನೂ ತನ್ನ ಆಕಾರವನ್ನೂ ಮನ್ಮಥನನ್ನೂ ಕುರಿತು ನಿಂದಿಸುತ್ತ ಯೋಚಿಸುತ್ತಿದ್ದನು.

೧೦೬. ಇಂದ್ರನು ಹೇಳಿದನು–ಒಡನೆಯೇ ಪಾಪವನ್ನು ಉಂಟುಮಾಡತಕ್ಕ ಆಯಸ್ಸು, ಕೀರ್ತಿ ಯಶಸ್ಸು, ಧರ್ಮ, ಧೈರ್ಯ, ಇವೆಲ್ಲವನ್ನೂ ನಾಶಮಾಡುವ, ಲೋಕಗಳಲ್ಲಿ ಪ್ರಖ್ಯಾತವಾಗಿರುವ ಈ ಕಾಮದ ಆಶೆಗೆ ಧಿಕ್ಕಾರವಿರಲಿ.

೧೦೭. ಜನಗಳು ಆ ಮನ್ಮಥನಿಂದಲೇ ಎಲ್ಲರಿಂದಲೂ ನಿಂದಿತರಾಗಿ ನರಕವನ್ನು ಹೊಂದುತ್ತಾರೆ. ಇಂತಹ ದುರಾಚಾರಿಯಾದ ಆಪತ್ತಿಗೆಲ್ಲವೂ ತೌರುಮನೆಯಾದ ಆ ಮನ್ಮಥನಿಗೆ ಧಿಕ್ಕಾರವಿರಲಿ.

೧೦೮. ಅವನು ದೇಹದಲ್ಲಿಯೇ ಇದ್ದುಕೊಂಡು ಇರುವ ಶತ್ರುವು. ಅವನಿಗೆ ಸಂತೋಷವೆಂಬುದೇ ಇಲ್ಲ. ಯಾವಾಗಲೂ ಹೆಚ್ಚುತ್ತಲೇ ಇರುವನು.

|| ದ್ವಿಜ ಉವಾಚ ||

ಇತ್ಥಂ ವಾದಿನಿ ಪ್ರಚ್ಛನ್ನೇ ವಾಸವೇ ಪದ್ಮವಾಸಿನಿ |
ಆಖಂಡಲಂ ವಿನಾ ಭೀರು ದೇವಲೋಕೋ ನ ಶೋಭತೇ || ೧೦೯ ||

ತದಾ ದೇವಾಸ್ಸ ಗಂಧರ್ವಾ ಲೋಕಪಾಲಾಸ್ಸಕಿಂಕರಾಃ |
ಶಚ್ಯಾ ಸಹ ಸಮಾಗತ್ಯ ಪ್ರತ್ಯೂಚುಸ್ತೇ ಬೃಹಸ್ಪತಿಂ || ೧೧೦ ||

|| ದೇವಾದಯ ಊಚುಃ ||

ಭಗವನ್ ಬಲಭಿದ್ದೇವಂ ನ ವಿಜಾನೀಮಹೇ ವಯಂ |
ಕ್ವ ತಿಷ್ಠತಿ ಗತಃ ಕುತ್ರ ಕುತ್ರ ವಾ ನ್ಮೃಗಯಾಮಹೇ || ೧೧೧ ||

ನ ನಾಕಃ ಶೋಭತೇ ತೇನ ವಿನಾ ದೇವಗಣೈಸ್ಸಹ |
ಸುಪುತ್ರೇಣ ವಿನಾ ಯದ್ವತ್ಕುಲಂ ಶ್ರೀಮದ್ಗುಣಾನ್ವಿತಂ || ೧೧೨ ||

---

೧೦೯. ಬ್ರಾಹ್ಮಣನು ಹೇಳಿದನು–ದೇವೇಂದ್ರನು ಗುಟ್ಟಾಗಿ ಆ ಪದ್ಮದಲ್ಲಿದ್ದುಕೊಂಡು ಇಂತೆಂದುಕೊಳ್ಳುತ್ತಿದ್ದನು. ಇತ್ತ ದೇವೇಂದ್ರನಿಲ್ಲದಿದ್ದುದರಿಂದ ಸ್ವರ್ಗವು ಕಳೆಗುಂದಿತು.

೧೧೦. ಇದನ್ನು ತಿಳಿದ ದೇವತೆಗಳು, ಗಂಧರ್ವರು, ಲೋಕಪಾಲಕರು, ಕಿನ್ನರರು ಇವರೆಲ್ಲರೂ ಶಚೀದೇವಿಯನ್ನು ಕರೆದುಕೊಂಡು ಬೃಹಸ್ಪತಿಯ ಬಳಿಗೆ ಬಂದು ಇಂತೆಂದರು.

೧೧೧. ದೇವಾದಿಗಳು ಹೇಳಿದರು–ಎಲೈ ಭಗವಂತನಾದ ಬೃಹಸ್ಪತಿಯೇ! ಸ್ವಾಮಿಯಾದ ಇಂದ್ರನು ಎಲ್ಲಿಗೆ ಹೋಗಿರುವನೋ ಅದು ನಮಗೆ ಗೊತ್ತಾಗಲೇ ಇಲ್ಲ. ಎಲ್ಲಿದ್ದಾನೆ? ಎಲ್ಲಿಗೆ ಹೋದನು? ಎಲ್ಲಿ ಹುಡುಕಬೇಕು? ಹೇಳು.

೧೧೨. ಒಳ್ಳೆಯ ಗುಣದಿಂದ ಕೂಡಿದ ವಂಶವು ಉತ್ತಮವಾದ ಮಗನಿಲ್ಲದಿದ್ದರೆ ಹೇಗೆ ಪ್ರಕಾಶಿಸುವುದಿಲ್ಲವೋ ಹಾಗೆ ಆ ಇಂದ್ರನಿಲ್ಲದಿದ್ದರೆ ದೇವತೆಗಳ ಗಣಗಳಿದ್ದರೂ ಸ್ವರ್ಗವು ಪ್ರಕಾಶಿಸುವುದಿಲ್ಲ

ಉಪಾಯಶ್ಚಿಂತ್ಯತಾಂ ಸದ್ಯಃ ಸ್ವರ್ಲೋಕೋ ಯೇನ ಶೋಭತೇ ।
ಸನಾಥಶ್ಚ ಕ್ರಿಯಾಯುಕ್ತೋ ನ ವಿಲಂಬೋತ್ರ ಯುಜ್ಯತೇ ॥ ೧೧೩ ॥

॥ ದ್ವಿಜ ಉವಾಚ ॥

ಇತಿ ತೇಷಾಂ ವಚಶ್ಶ್ರುತ್ವಾ ಗುರುರ್ವಚನಮಬ್ರವೀತ್ ॥ ೧೧೪ ॥

॥ ಗುರುರುವಾಚ ॥

ಜಾನೇಹಂ ಸ್ವಾಪರಾಧೇನ ಲಜ್ಜಯಾ ಯತ್ರ ತಿಷ್ಠತಿ ।
ರಭಸಾರಬ್ಧಕಾರ್ಯಸ್ಯ ಭುಂಕ್ತೇಸೌ ಮಘವಾ ಫಲಂ ॥ ೧೧೫ ॥

ನೃಣಾಂ ನೀತಿಪರಿತ್ಯಾಗಾದ್ವಿಪದಃ ಸ್ಯುರ್ಭಯಂಕರಾಃ ।
ಅಹೋ ರಾಜ್ಯಮದೈರ್ಮತ್ತಃ ಕೃತ್ಯಾಕೃತ್ಯಮಚಿಂತಯತ್ ॥ ೧೧೬ ॥

---

೧೧೩. ಸ್ವರ್ಗಲೋಕವು ಪ್ರಕಾಶಿಸುವಂತೆ ಒಂದು ಉಪಾಯವನ್ನು ಯೋಚಿಸು. ಈ ಸ್ವರ್ಗವು ಸ್ವಾಮಿಯನ್ನು ಹೊಂದುವಂತೆಯೂ ಕೆಲಸಗಳಿಂದ ಕೂಡಿ ಚಟುವಟಿಕೆಯಾಗಿರುವಂತೆಯೂ ಮಾಡು. ಈ ವಿಷಯದಲ್ಲಿ ಸಾವಕಾಶವಾಗಿರುವಿಕೆಯು ಚೆನ್ನಾಗಿರುವುದಿಲ್ಲ.

೧೧೪. ಬ್ರಾಹ್ಮಣನು ಹೇಳಿದನು–ಅವರೆಲ್ಲರೂ ಹಾಗೆನ್ನಲು ಆ ಮಾತನ್ನು ಕೇಳಿ ಗುರುವು ಇಂತೆಂದನು.

೧೧೫. ಗುರುವು ಹೇಳಿದನು–ಆ ಇಂದ್ರನು ತನ್ನ ತಪ್ಪಿನಿಂದ ತೊಂದರೆ ಪಟ್ಟು ಲಜ್ಜೆಯಿಂದ ಎಲ್ಲಿ ಇದ್ದಾನೆ ಎಂಬುದನ್ನು ನಾನು ಬಲ್ಲೆನು. ಯೋಚನೆ ಮಾಡದೆ ಮಾಡಿದ ಕೆಲಸಕ್ಕೆ ಸರಿಯಾದ ಫಲವನ್ನು ಆ ಇಂದ್ರನು ಹೊಂದಿದ್ದಾನೆ.

೧೧೬. ಜನರು ನಡತೆಯನ್ನು ಬಿಟ್ಟರೆ ಅದರಿಂದ ಭಯಂಕರವಾದ ವಿಪತ್ತುಗಳು ಬರುತ್ತವೆ. ಈ ಇಂದ್ರನು ರಾಜ್ಯದ ಮದದಿಂದ ಮದಿಸಿದವನಾಗಿ ಒಳ್ಳೆಯದು ಕೆಟ್ಟದ್ದು ಇವನ್ನು ಯೋಚಿಸದೆ ಕೆಟ್ಟಕೆಲಸವನ್ನು ಮಾಡಿದನು.

ಕೃತವಾನ್ ನಿಂದ್ಯಮಾನೋಽಸೌ ದೃಷ್ಟಾದೃಷ್ಟಭಯಂಕರಂ ।
ಕುರ್ವಂತಿ ಬಾಲಿಶಾ ಹ್ಯದ್ಯ ದೈವೋಪಹತಬುದ್ಧಯಃ ॥ ೧೧೭ ॥

ಅಪರಾದ್ಧಂ ತದೇವ ಸ್ಯಾದಿಹಾಮುತ್ರ ವಿನಿಷ್ಫಲಂ ।
ಅಧುನಾ ತತ್ರ ಗಚ್ಛಾಮೋ ಯತ್ರ ಶಕ್ರಃ ಸ ತಿಷ್ಠತಿ ॥ ೧೧೮ ॥

॥ ದ್ವಿಜ ಉವಾಚ ॥

ಇತ್ಯುಕ್ತ್ವಾ ನಿರ್ಗತಾಸ್ಸರ್ವೇ ಬೃಹಸ್ಪತಿಪುರೋಗಮಾಃ ।
ದೃಷ್ಟ್ವಾ ಸರಸಿ ವಿಸ್ತೀರ್ಣೇ ಸ್ವರ್ಣಪಂಕಜಕಾನನೇ ॥ ೧೧೯ ॥

ತುಷ್ಟುವುರ್ದೇವರಾಜಂ ತು ಪ್ರಬೋಧೋ ಯೇನ ಜಾಯತೇ ।
ತತೋ ಗುರೋಃ ಪ್ರಬೋಧೇನ ನಿರ್ಗತಃ ಪದ್ಮಕುಟ್ಮಲಾತ್ ॥ ೧೨೦ ॥

---

೧೧೭. ಈ ಅಪರಾಧದಿಂದ ನಿಂದೆಯನ್ನು ಹೊಂದಿ ಇಹಪರಗಳೆರಡರಲ್ಲಿಯೂ ಭಯವನ್ನುಂಟುಮಾಡುವ ಆ ಕೆಲಸದಿಂದ ಕಾಣದಂತಾಗಿ ಮರೆಯಾಗಿರುವನು. ಇಂತಹ ಕೆಲಸವನ್ನು ದುರದೃಷ್ಟದ ದೆಸೆಯಿಂದಲೇ ಬುದ್ಧಿಯು ಕೆಟ್ಟಿರುವ ದಡ್ಡರು ಮಾಡುತ್ತಾರೆ.

೧೧೮. ತಾನು ಮಾಡಿದ ಅಪರಾಧವು ಈ ಲೋಕ ಪರಲೋಕಗಳಲ್ಲಿ ಪುಣ್ಯದಿಂದ ಬರುವ ಒಳ್ಳೆಯ ಫಲವನ್ನೂ ಕೊಡುವುದಿಲ್ಲ. ಆದರೂ ಕೂಡ ಈಗ ಆ ಇಂದ್ರನು ಎಲ್ಲಿರುವನೋ ಅಲ್ಲಿಗೆ ಹೋಗೋಣ.

೧೧೯-೧೨೦. ದ್ವಿಜನು ಹೇಳಿದನು ಹೀಗೆಂದು ಬೃಹಸ್ಪತಿಯು ಹೇಳಲು ಎಲ್ಲರೂ ಆ ಬೃಹಸ್ಪತಿಯನ್ನೇ ಮುಂದು ಮಾಡಿಕೊಂಡು ಇಂದ್ರನಿದ್ದಲ್ಲಿಗೆ ಹೋದರು. ಆದೊಡ್ಡ ಸರೋವರದಲ್ಲಿ ಚೆನ್ನಾಗಿರುವ ಕಮಲಗಳಗುಂಪನ್ನು ನೋಡಿಅಲ್ಲಿ ಆ ಇಂದ್ರನನ್ನು ಸ್ತುತಿಸಿದರು. ಇಲ್ಲಿಗೆ ಬಂದಿರುವವರು ದೇವತೆಗಳು. ಇವರಿಂದ ನಿನಗೆ ಉಪಕಾರ ವಾಗುತ್ತದೆ. ಎಂಬ ಬುದ್ಧಿ ಬರುವಂತೆ ಅವನನ್ನು ಸ್ತುತಿಸಿದರು. ಗುರುವಿನ ಆ ಉತ್ತಮವಾದ ರೀತಿಯ ಮಾತನ್ನು ಕೇಳಿ ಪದ್ಮದ ಮೊಗ್ಗಿನಿಂದ ಇಂದ್ರನು ಹೊರಕ್ಕೆಹೊರಟನು.

ದೀನಾನನೋ ವಿರೂಪೋಽಸೌ ವ್ರೀಡಾಕುಂಚಿತಲೋಚನಃ ।
ಜಗ್ರಾಹ ಚರಣಾವಿಂದ್ರೋ ಗುರೋಸ್ತಸ್ಯಾಗ್ರಜನ್ಮನಃ ॥ ೧೨೧ ॥

॥ ಇಂದ್ರ ಉವಾಚ ॥

ಪಾಹಿ ಮಾಂ ನಿಷ್ಕೃತಿಂ ಬ್ರೂಹಿ ಪಾಪಸ್ಯಾಸ್ಯ ಬೃಹಸ್ಪತೇ । ॥ ೧೨೨ ॥

॥ ದ್ವಿಜ ಉವಾಚ ॥

ದೇವರಾಜವಚಶ್ಶ್ರುತ್ವಾ ಜಗೌ ವಿಪ್ರೋ ಬೃಹಸ್ಪತಿಃ ॥ ೧೨೩ ॥

॥ ಗುರುರುವಾಚ ॥

ಶೃಣು ದೇವೇಂದ್ರ ವಕ್ಷ್ಯೇಽಹಮುಪಾಯಂ ಪಾಪನಾಶಕಂ ।
ಪ್ರಯಾಗಸ್ನಾನಮಾತ್ರೇಣ ತತ್‌ಕ್ಷಣಾದೇವ ಪಾತಕಾತ್ ।
ಮುಚ್ಯಸೇ ದೇವರಾಜ ತ್ವಂ ತತ್ರ ಯಾಸ್ಯಾಮಹೇ ವಯಂ । ॥ ೧೨೪ ॥

---

೧೨೧. ವಿಕಾರವಾದ ರೂಪುಳ್ಳ ಈ ಇಂದ್ರನು ಕಾಂತಿಹೀನನಾಗಿ ಲಜ್ಜೆಯಿಂದ ಕಣ್ಣುಗಳನ್ನು ಕಿರುಗಣ್ಣುಗಳನ್ನಾಗಿ ಬಿಡುತ್ತಾ ಬಂದು ಬ್ರಾಹ್ಮಣನಾದ ಬೃಹಸ್ಪತಿಯಪಾದಗಳನ್ನು ಹಿಡಿದುಕೊಂಡನು.

೧೨೨. ಇಂದ್ರನು ಹೇಳಿದನು-ಎಲೈ ಗುರುವೆ ! ನನ್ನನ್ನು ಕಾಪಾಡು. ನಾನು ಮಾಡಿದ ಈ ಪಾಪಕ್ಕೆ ಪ್ರತೀಕಾರವನ್ನು ದಯವಿಟ್ಟು ಹೇಳು.

೧೨೩. ಬ್ರಾಹ್ಮಣನು ಹೇಳಿದನು-ದೇವರಾಜನಾದ ಇಂದ್ರನ ಮಾತನ್ನು ಕೇಳಿ ಬ್ರಾಹ್ಮಣನಾದ ಬೃಹಸ್ಪತಿಯು ಇಂತೆಂದನು

೧೨೪. ಗುರುವು ಹೇಳಿದನು-ಎಲೈ ದೇವೇಂದ್ರನೆ ! ಪಾಪನಾಶಕವಾದ ಉಪಾಯವನ್ನು ಹೇಳುತ್ತೇನೆ. ಕೇಳು. ಪ್ರಯಾಗದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಆ ಕ್ಷಣದಲ್ಲಿಯೇ ಪಾಪಗಳನ್ನೆಲ್ಲಾ ಕಳೆದುಕೊಂಡು ಮುಕ್ತನಾಗುತ್ತೀಯೆ. ಅಲ್ಲಿಗೆ ನಾವೆಲ್ಲರೂ ಹೋಗೋಣ.

॥ ದ್ವಿಜ ಉವಾಚ ॥

ಅಥೋ ಪುರೋಧಸಾ ಸಾರ್ಧಮಾಗತ್ಯ ಬಲಮರ್ದನಃ ।
ಸಸ್ನೌ ಸಿತಾಸಿತೇ ತೀರ್ಥೇ ವಿಮುಕ್ತಃ ಸರ್ವಪಾತಕೈಃ ॥ ೧೨೫ ॥

ತತೋ ದೇವಗುರುಸ್ತಸ್ಮೈ ವಿಶುದ್ಧಾಯ ವರಂ ದದೌ ॥ ೧೨೬ ॥

॥ ಗುರುರುವಾಚ ॥

ಕ್ಷೀಣಪಾಪೋಽಸಿ ಹೇ ಶಕ್ರ ಮತ್ಪ್ರಸಾದೇನ ಸಾಂಪ್ರತಂ ।
ಸಹಸ್ರಮೇತದ್ಯೋನೀನಾಂ ಸಹಸ್ರಂ ಸ್ಯಾದ್ದೃಶಾಂ ತವ ॥ ೧೨೭ ॥

॥ ದ್ವಿಜ ಉವಾಚ ॥

ತದೈವ ದ್ವಿಜವಾಕ್ಯೇನ ಶುಶುಭೇ ಸ ಶಚೀಪತಿಃ ।
ಲೋಚನಾನಾಂ ಸಹಸ್ರೇಣ ಪಂಕಜೈರಿವ ಮಾನಸಂ ॥ ೧೨೮ ॥

---

೧೨೫-೧೨೬. ಬ್ರಾಹ್ಮಣನು ಹೇಳಿದನು–ಅನಂತರ ಇಂದ್ರನು ಪುರೋಹಿತನಾದ ಗುರುವಿನೊಡನೆ ಆ ಪ್ರಯಾಗಕ್ಕೆ ಬಂದನು. ಅಲ್ಲಿ ಹರಿಯುವ ಗಂಗೆಯಮುನೆಗಳ ಸಂಗಮದಲ್ಲಿ ಸ್ನಾನಮಾಡಿದನು. ಒಡನೆಯೇ ಪಾಪಗಳೆಲ್ಲವೂ ಹೋದುವು. ಇಂದ್ರನು ಶುದ್ಧನಾಗಲು ದೇವಗುರುವಾದ ಬೃಹಸ್ಪತಿಯು ಒಡನೆಯೇ ವರಗಳನ್ನು ಕೊಟ್ಟನು.

೧೨೭. ಗುರುವು ಹೇಳಿದನು-ಎಲೈ ಶಕ್ರನೇ! ನೀನು ಈಗ ನಿನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡೆ. ಈಗ ನನ್ನ ಅನುಗ್ರಹದಿಂದ ನಿನ್ನ ಮೈಯ್ಯಲ್ಲಿ ಕಾಣುವ ಈ ಸಾವಿರ ಯೋನಿಗಳೂ ಸಾವಿರ ಕಣ್ಣುಗಳಂತೆ ಕಾಣಲಿ.

೧೨೮. ದ್ವಿಜನು ಹೇಳಿದನು-ಬೃಹಸ್ಪತಿಯು ಹೀಗೆ ವರವನ್ನು ಕೊಡಲು ಇಂದ್ರನು ಆ ಬ್ರಾಹ್ಮಣನಾದ ಗುರುವಿನ ಮಾತಿನಿಂದ (ವರದಿಂದ) ಮಾನಸ ಸರೋವರವು ಪದ್ಮಗಳ ಗುಂಪಿನಿಂದ ಪ್ರಕಾಶಿಸುವಂತೆ ಸಾವಿರ ಕಣ್ಣುಗಳಿಂದ ಪ್ರಕಾಶಿಸಿದನು.

ತತೋ ವೃಂದಾರಕೈಸ್ಸರ್ವೈಃ ಋಷಿಭಿಶ್ಚಾಭಿಪೂಜಿತಃ ।
ಗಂಧರ್ವೈಃ ಸ್ತೂಯಮಾನಸ್ತು ಗತಃ ಶಕ್ರೋಽಮರಾವತೀಂ　　॥ ೧೨೯ ॥

ಇತ್ಥಂ ಸದ್ಯೋ ವಿಪಾಪೋಽಭೂತ್ ಪ್ರಯಾಗೇ ಪಾಕಶಾಸನಃ ।
ಅಪಿ ತ್ವಂ ಯಾಹಿ ಕಲ್ಯಾಣಿ ಪ್ರಯಾಗಂ ಯೋಗಿಸೇವಿತಂ ॥
ಸದ್ಯಃ ಪಾತಕನಾಶಾಯ ತಥಾ ಸ್ವರ್ಗತಯೇ ಧ್ರುವಂ　　॥ ೧೩೦ ॥

॥ ಕಾಂಚನಮಾಲಿನ್ಯುವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಸೇತಿಹಾಸಂ ಸುಮಂಗಳಂ ।
ತದೈವ ಸಂಭ್ರಮಾಪನ್ನಾ ಪಾದೌ ನತ್ವಾ ದ್ವಿಜನ್ಮನಃ　　॥ ೧೩೧ ॥

ತ್ಯಕ್ತ್ವಾ ಬಂಧುಜನಂ ಸರ್ವಂ ದಾಸೀರ್ದಾಸಾನ್ ಗೃಹಂ ಧನಂ ।
ಸಕಲಾನ್ ವಿಷಯಾನ್ ರಕ್ಷೋ ವಿಷಗ್ರಾಸಾನಿವ ಸ್ಫುಟಂ　　॥ ೧೩೨ ॥

---

೧೨೯. ಹೀಗೆ ವರದಿಂದ ಇಂದ್ರನು ಉತ್ತಮನಾಗಿ ದೇವತೆಗಳಿಂದಲೂ ಋಷಿಗಳಿಂದಲೂ, ಗಂಧರ್ವರಿಂದಲೂ ಸ್ತುತಿಸಲ್ಪಡುತ್ತಾ ಗೌರವಿತನಾಗಿ ಅಮರಾವತಿಗೆ ಹೋದನು.

೧೩೦. ಈರೀತಿಯಾಗಿ ಪಾಕಶಾಸನನಾದ ಇಂದ್ರನು ಪ್ರಯಾಗದಲ್ಲಿ ಸ್ನಾನಮಾಡಿದುದರಿಂದ ಒಡನೆಯೇ ಪಾಪಗಳನ್ನು ಕಳೆದುಕೊಂಡನು. ಎಲೈ ಕಲ್ಯಾಣಿಯೇ! ಯೋಗಿಗಳು ಸೇವಿಸುತ್ತಿರುವ ಪ್ರಯಾಗಕ್ಕೆ ನೀನು ಹೋದರೆ ಆಗ ನಿನ್ನ ಪಾಪವೂ ನಾಶವಾಗುತ್ತದೆ. ಸ್ವರ್ಗವೂ ಸಿಕ್ಕುತ್ತದೆ. ಇದು ಖಂಡಿತ.

೧೩೧-೧೩೨. ಕಾಂಚನಮಾಲಿನಿಯು ಹೇಳಿದಳು—ಆ ಬ್ರಾಹ್ಮಣನು ಹೇಳಿದ ಇತಿಹಾಸದೊಡನೆ ಕೂಡಿದ ಈ ಒಳ್ಳೆಯಮಾತನ್ನು ಕೇಳಿ ಆ ಬ್ರಾಹ್ಮಣನಿಗೆ ನಮಸ್ಕರಿಸಿ ಅವಸರ ಪಡುತ್ತ ಬಂಧು ಜನಗಳು, ದಾಸಿಯರು, ದಾಸರು, ಮನೆ, ಹಣ, ಎಲ್ಲವನ್ನೂ ವಿಷವನ್ನು ಸೇರಿಸಿಕೊಂಡಿರುವ ತುತ್ತಿನಂತೆ ಬಿಟ್ಟು ಬಿಟ್ಟು ಹೊರಟಳು.

ವಪುಶ್ಚ ಕ್ಷಣವಿಧ್ವಂಸಿ ಪಶ್ಯನ್ತೀ ನಿರ್ಗತಾಪ್ಯಹಂ ।
ನರಕಾರ್ಣವಸಂಪಾತದಾರುಣಾನ್ತರವಹ್ನಿನಾ ॥ ೧೩೩ ॥

ಹೃದಯೇ ಕೌಣಪವ್ಯಾಘ್ರ ತದಾ ಸಂತಪ್ಯಮಾನಯಾ ।
ಮಯಾ ಗತ್ವಾ ಕೃತಂ ಸ್ನಾನಂ ಮಾಘಮಾಸೇ ಸಿತಾಸಿತೇ ॥ ೧೩೪ ॥

ತಸ್ಯ ಸ್ನಾನಸ್ಯ ಮಾಹಾತ್ಮ್ಯಂ ಶೃಣು ವೃದ್ಧ ನಿಶಾಚರ ।
ತ್ರ್ಯಹಾತ್ಪಾಪಕ್ಷಯೋ ಜಾತಃ ಪಂಚವಿಂಶತಿಭಿರ್ದಿನೈಃ ॥ ೧೩೫ ॥

ಶೇಷೈರ್ಮೇ ಯದಭೂತ್ಪುಣ್ಯಂ ತೇನ ದೇವತ್ವಮಾಗತಾ ।
ರಮಮಾಣಾ ತು ಕೈಲಾಸೇ ಗಿರಿಜಾಯಾಃ ಪ್ರಿಯಾಸಖೀ ॥ ೧೩೬ ॥

ಜಾತಿಸ್ಮರಾಥ ಜಾತಾಹಂ ಪ್ರಯಾಗಸ್ಯ ಪ್ರಭಾವತಃ ।
ಸ್ಮೃತ್ವಾ ಪ್ರಯಾಗಮಾಹಾತ್ಮ್ಯಂ ಮಾಘೇ ಮಾಘೇ ವ್ರಜಾಮ್ಯಹಂ ॥

---

೧೩೩-೧೩೪. ಈ ದೇಹವೂ ಕೂಡ ಕ್ಷಣಕಾಲದಲ್ಲಿ ನಾಶವಾಗುತ್ತದೆಂದು ತಿಳಿದು ವೈರಾಗ್ಯವನ್ನು ಹೊಂದಿ ಅಲ್ಲಿಂದ ಹೊರಟೆನು. ನರಕವೆಂಬ ಸಮುದ್ರದಲ್ಲಿ ಬೀಳಬೇಕೆಂಬ ಯೋಚನೆಯಿಂದ ಹುಟ್ಟಿದ ದಾರುಣವಾದ ಬೆಂಕಿಯಿಂದ ಸುಡಲ್ಪಟ್ಟವಳಾಗಿ ಮನಸ್ಸಿನಲ್ಲಿ ಬಹುತಾಪವನ್ನು ಹೊಂದಿ ಆ ಪ್ರಯಾಗಕ್ಕೆ ಹೋಗಿ ಗಂಗೆ ಯಮುನೆಗಳ ಸಂಗಮದಲ್ಲಿ ಸ್ನಾನಮಾಡಿದೆನು.

೧೩೫-೧೩೬. ಎಲೈ ಮುದುಕನಾದ ರಾಕ್ಷಸನೇ! ಕೇಳು. ಆ ಸ್ನಾನದ ಮಹಿಮೆಯನ್ನು ಹೇಳುತ್ತೇನೆ ಮೂರುದಿನದ ಸ್ನಾನದಿಂದಲೇ ನನ್ನ ಪಾಪವೆಲ್ಲವೂ ಹೋಯಿತು. ಅನಂತರ ಮಿಕ್ಕ ಇಪ್ಪತ್ತೇಳು ದಿನಗಳ ಕಾಲ ಮಾಡಿದ ಸ್ನಾನದಿಂದ ಕೈಲಾಸಪರ್ವತದಲ್ಲಿ ರಮಿಸುತ್ತಾ ಗಿರಿಜೆಗೆ ಪ್ರೀತಿಪಾತ್ರಳಾದ ಸ್ನೇಹಿತೆಯಾದೆನು.

೧೩೭. ಈ ಪ್ರಯಾಗದ ಮಹಿಮೆಯಿಂದ ನನಗೆ ಹಿಂದಿನ ಜನ್ಮದ ಜಾತಿಯ ಸ್ಮರಣೆಯು ಬರುತ್ತದೆ. ಆದನ್ನು ಜ್ಞಾಪಿಸಿಕೊಂಡು ಪ್ರತಿಮಾಘಮಾಸದಲ್ಲಿಯೂ ಪ್ರಯಾಗಕ್ಕೆ ಹೋಗುತ್ತಿದ್ದೇನೆ.

ಇತಿ ರಾಕ್ಷಸ ಯತ್ಪೃಷ್ಟಂ ತ್ವಯಾ ವಿಸ್ಮಿತಚೇತಸಾ ।
ತನ್ಮಯಾ ಚರಿತಂ ಸರ್ವಂ ಕಥಿತಂ ಪ್ರೀತಯೇ ತವ ॥ ೧೩೮ ॥

ಮತ್ಪ್ರೀತಯೇ ಚರಿತ್ರಂ ಸ್ವಂ ತ್ವಂ ಬ್ರೂಹಿ ಮಮ ರಾಕ್ಷಸ ।
ಕರ್ಮಣಾ ಕೇನ ಜಾತೋಽಸಿ ವಿರೂಪೋಽತಿಭಯಂಕರಂ ॥ ೧೩೯ ॥

ಶ್ಮಶ್ರುಲೋ ದೀರ್ಘದಂಷ್ಟ್ರಶ್ಚ ಕ್ರವ್ಯಾದೋ ಗಿರಿಗಹ್ವರೇ ॥ ೧೪೦ ॥

॥ ರಾಕ್ಷಸ ಉವಾಚ ॥

ಇಷ್ಟಂ ದದಾತಿ ಗೃಹ್ಣಾತಿ ಗುಹ್ಯಮಾಖ್ಯಾತಿ ಪೃಚ್ಛತಿ ।
ಪ್ರೀತ್ಯಾ ಚ ಸಜ್ಜನೋ ಭದ್ರೇ ತಚ್ಚ ಸರ್ವಂ ತ್ವಯಿ ಸ್ಥಿತಂ ॥ ೧೪೧ ॥

ತ್ವಯಾ ಸಂಭಾವಿತೋ ನೂನಂ ಮನ್ಯೇಽಹಂ ವಾಮಲೋಚನೇ ।
ಭಾವಿನೀ ನಿಷ್ಕೃತಿಸ್ಸದ್ಯಃ ತ್ವಯಾಸ್ಯ ಕ್ರೂರಜನ್ಮನಃ ॥ ೧೪೨ ॥

---

೧೩೮. ಎಲೈ ರಾಕ್ಷಸನೆ: ವಿಸ್ಮಯಪಟ್ಟು ನೀನು ಯಾವುದನ್ನು ನನ್ನ ವಿಷಯದಲ್ಲಿ ಕೇಳಿದೆಯೋ ಅದೆಲ್ಲವನ್ನೂ ನಿನಗೆ ಪ್ರೀತಿಯುಂಟಾಗಲೆಂದು ಹೇಳಿದ್ದೇನೆ.

೧೩೯–೧೪೦. ನನ್ನಲ್ಲಿರುವ ವಿಶ್ವಾಸದಿಂದಲೂ ಪ್ರೀತಿಯಿಂದಲೂ ನಿನ್ನ ಚರಿತ್ರೆಯನ್ನು ನನಗೆ ಹೇಳು. ಯಾವ ಕೆಲಸದಿಂದ ಈರೀತಿ ಕುರೂಪಿಯಾಗಿಯೂ ಭಯಂಕರವಾಗಿಯೂ ಹುಟ್ಟಿದ್ದೀಯೆ? ನಿನ್ನ ಮೈಯೆಲ್ಲವೂ ರೋಮಗಳಿಂದಲೇ ಬಹುವಾಗಿ ಕೂಡಿಕೊಂಡಿದೆ? ಉದ್ದವಾದ ಕೋರೆದಾವಡೆಗಳು ಬಂದಿವೆ? ರಾಕ್ಷಸನಾಗಿ ಈ ಬೆಟ್ಟದಕಿಬ್ಬಿಯಲ್ಲಿದ್ದೀಯೆ ?

೧೪೧. ರಾಕ್ಷಸನು ಹೇಳಿದನು–ಎಲೈ ಭದ್ರೆಯೇ! ಸಜ್ಜನರಾದವರು ಇಷ್ಟವಾದುದನ್ನು ಕೊಡುತ್ತಾರೆ. ತೆಗೆದುಕೊಳ್ಳುತ್ತಾರೆ. ಗುಟ್ಟನ್ನು ಹೇಳುತ್ತಾರೆ. ಅದೆಲ್ಲವೂ ನಿನ್ನಲ್ಲಿದೆ.

೧೪೨. ಎಲೈ ವಾಮಲೋಚನೆಯೇ! ನೀನು ನನ್ನನ್ನು ಗೌರವಿಸಿದ್ದೀಯೆ. ಎಂಬುದಾಗಿ ನಾನು ತಿಳಿದುಕೊಂಡಿದ್ದೇನೆ. ನನ್ನ ಈ ಕ್ರೂರ ಜನ್ಮಕ್ಕೆ ನಿನ್ನಿಂದ ವಿಮೋಚನೆಯಾಗುವುದೆಂದು ನಾನು ತಿಳಿದಿದ್ದೇನೆ.

ಅತೋ ವಕ್ಷ್ಯಾಮಿ ತೇ ಭದ್ರೇ ದುಷ್ಕೃತಂ ಯತ್ ಸ್ವಯಂ ಕೃತಂ ।
ನಿವೇದ್ಯ ಸಜ್ಜನೇ ದುಃಖಂ ಯತಃ ಸರ್ವಂ ಸುಖೀ ಭವೇತ್ ॥ ೧೪೩ ॥

ಶೃಣು ಸಶ್ರೋಣ್ಯಹಂ ಕಾಶ್ಯಾಂ ಬಹ್ವೃಚೋ ವೇದಪಾರಗಃ ।
ಜಾತಃ ಪುರಾ ದ್ವಿಜಶ್ರೇಷ್ಠಃ ಕುಲೇ ಮಹತಿ ನಿರ್ಮಲೇ ॥ ೧೪೪ ॥

ರಾಜ್ಞಾಂ ದುಷ್ಕೃತಿನಾಂ ಭೀರು ಶೂದ್ರಾಣಾಂ ಚ ತಥಾ ವಿಶಾಂ ।
ವಾರಾಣಸ್ಯಾಂ ಮಹಾಘೋರಃ ಕೃತೋ ದುಷ್ಟಪ್ರತಿಗ್ರಹಃ ॥ ೧೪೫ ॥

ಬಹುಧಾ ಬಹುವಾರಂ ಚ ನಿಷಿದ್ಧೋ ವೇದಪಾರಗೈಃ ।
ಚಂಡಾಲಸ್ಯಾಪಿ ನ ತ್ಯಕ್ತೋ ಮಯಾ ಭದ್ರೇ ಪ್ರತಿಗ್ರಹಃ ॥ ೧೪೬ ॥

ಅನ್ಯಚ್ಚ ಪಾತಕಂ ತತ್ರ ಮಮಾಭೂನ್ಮೂಢಚೇತಸಃ ।
ತನ್ನಾಸ್ತಿ ದುಷ್ಕೃತಂ ಕರ್ಮ ಮಯಾ ತತ್ರ ನ ಯತ್ಕೃತಂ ॥ ೧೪೭ ॥

---

೧೪೩. ಆದ್ದರಿಂದ ನಾನು ಮಾಡಿದ ಪಾಪಕೆಲಸವನ್ನು ನಿನಗೆ ಹೇಳುತ್ತೇನೆ. ಪ್ರತಿಯೊಬ್ಬನೂ ಕೂಡ ಸಜ್ಜನರಲ್ಲಿ ತನ್ನ ದುಃಖವನ್ನು ಹೇಳಿಕೊಂಡರೆ ಸುಖಿಯಾಗುತ್ತಾನೆ.

೧೪೪. ಅಮ್ಮ! ನನ್ನ ವಿಷಯವನ್ನು ಕೇಳು. ನಾನು ಕಾಶಿಯಲ್ಲಿದ್ದವನು. ಬಹು ಋಚರೆಂಬ ಜಾತಿಯ ಬ್ರಾಹ್ಮಣನು. ವೇದದಲ್ಲಿ ಬಹು ಗಟ್ಟಿಗನಾಗಿದ್ದೆನು. ನಮ್ಮ ವಂಶವು ಬಹು ನಿರ್ಮಲವಾದುದೂ ಉತ್ಕೃಷ್ಟವಾದುದೂ ಆಗಿದ್ದಿತು.

೧೪೫. ಆ ಕಾಶಿಯಲ್ಲಿದ್ದುಕೊಂಡು ಪಾಪಿಗಳಾದ ಕ್ಷತ್ರಿಯರು, ಶೂದ್ರರು, ವೈಶ್ಯರು ಇವರುಗಳು ತಮ್ಮ ಪಾಪ ಪರಿಹಾರಕ್ಕೋಸ್ಕರ ಕೊಡುತ್ತಿದ್ದ ಬಹು ಕೆಟ್ಟ ದಾನಗಳನ್ನು ತೆಗೆದುಕೊಳ್ಳುತ್ತಿದ್ದೆನು.

೧೪೬. ವೇದವನ್ನು ಬಲ್ಲ ಧರ್ಮಿಷ್ಠರು ಅನೇಕ ಪ್ರಕಾರವಾಗಿ ಅನೇಕ ಬಾರಿ ತೆಗೆದುಕೊಳ್ಳಕೂಡದೆಂದು ನಿಷೇಧ ಮಾಡಿರುವ ದಾನಗಳನ್ನು ನಾನು ಬಿಡದೆ ತೆಗೆದುಕೊಳ್ಳುತ್ತಿದ್ದೆನು.

೧೪೭. ಮೂಢನಾದ ನಾನು ಕಾಶಿಯಲ್ಲಿ ಮಾಡದಿರುವ ಪಾಪಕರ್ಮಗಳು ಯಾವುದೂ ಉಳಿಯಲಿಲ್ಲ. ಅಂತಹ ಮಹಾ ಪಾಪಗಳನ್ನು ಮೂಢನಾದ ನಾನು ಮಾಡಿದೆನು.

ಅನ್ಯಚ್ಛ ಶ್ರೂಯತಾಂ ದೇವಿ ಕ್ಷೇತ್ರಸ್ಯ ವರವರ್ಣಿನಿ ।
ಅವಿಮುಕ್ತೇಽಣುಮಾತ್ರಂ ಯದ್ದತ್ತಂ ತನ್ಮೇರುತಾಂ ವ್ರಜೇತ್ ॥ ೧೪೮ ॥

ನ ಧರ್ಮಸ್ತು ಮಯಾ ಕಿಂಚಿತ್ ಸಂಚಿತಸ್ತತ್ರ ಜನ್ಮನಿ
ತತೋ ಬಹುತಿಥೇ ಕಾಲೇ ಮೃತಸ್ತತ್ರೈವ ಶೋಭನೇ ॥ ೧೪೯ ॥

ಅವಿಮುಕ್ತನಿವಾಸೇನ ನ ಚಾಹಂ ನರಕಂ ಗತಃ ।
ಕಾಶೀವಾಸಿಜನಃ ಕಶ್ಚಿತ್ ನರಕಂ ಯಾತಿ ನ ಕ್ವಚಿತ್ ॥ ೧೫೦ ॥

ಅವಿಮುಕ್ತೇ ಕೃತಂ ಕಿಂಚಿತ್ಪಾಪಂ ವಜ್ರೀಭವೇದ್ದೃಢಂ ।
ವಜ್ರಲೇಪೇನ ಪಾಪೇನ ತೇನ ಮೇ ಜನ್ಮರಾಕ್ಷಸಂ ॥ ೧೫೧ ॥

ರೌದ್ರಂ ಕ್ರೂರತರಂ ರೂಪಂ ಸಂಭೂತಂ ಹಿಮಪರ್ವತೇ ।
ದ್ವಿರ್ಜಾತೋ ಗೃಧ್ರಯೋನೌ ಪ್ರಾಕ್ ತ್ರಿರ್ವ್ಯಾಘ್ರೋ ದ್ವಿಸ್ಸರೀಸೃಪಃ॥೧೫೨॥

---

೧೪೮-೧೪೯. ಹಾಗೆ ಮಹಾಪಾಪಗಳನ್ನು ಗಳಿಸಿದುದಲ್ಲದೆ ಮತ್ತೊಂದನ್ನು ಹೇಳುತ್ತೇನೆ ಕೇಳು. ಅವಿಮುಕ್ತವೆಂಬ ಈ ಕಾಶೀಕ್ಷೇತ್ರದಲ್ಲಿ ಸ್ವಲ್ಪವನ್ನು ದಾನ ಮಾಡಿದರೂ ಅದು ಮೇರುಪರ್ವತದಷ್ಟು ಹೆಚ್ಚುತ್ತದೆ. ಅಲ್ಲಿ ಅಂತಹ ಧರ್ಮವೊಂದನ್ನೂ ನಾನು ಮಾಡಲೇ ಇಲ್ಲ. ಹೀಗೆಯೇ ಬಹುಕಾಲದವರೆಗೆ ಇದ್ದು ಮೃತನಾದೆನು.

೧೫೦. ಅವಿಮುಕ್ತದಲ್ಲಿ ವಾಸಮಾಡಿಕೊಂಡಿದ್ದುದರಿಂದ ನಾನು ನರಕವನ್ನು ಹೊಂದಲಿಲ್ಲ. ಅವಿಮುಕ್ತವೆಂಬ ಈ ಕಾಶಿಯಲ್ಲಿ ವಾಸಿಸಿದವನೊಬ್ಬನೂ ನರಕವನ್ನು ಹೊಂದುವುದಿಲ್ಲ.

೧೫೧-೧೫೪. ಅವಿಮುಕ್ತದಲ್ಲಿ ಮಾಡಿದ ಪಾಪವು ಸ್ವಲ್ಪವಾದರೂ ಅದು ಬಿಡದಂತೆ ಗಟ್ಟಿಯಾಗಿ ನಿಲ್ಲುತ್ತದೆ. ಆ ವಜ್ರಲೇಪವುಳ್ಳ ಪಾಪದಿಂದ ನಾನು ರಾಕ್ಷಸನಾಗಿ ಹುಟ್ಟಿದೆನು. ಭಯಂಕರನಾಗಿಯೂ ಕ್ರೂರತರನಾಗಿಯೂ ಆಗಿ ಈ ಮಹಾ ಹಿಮವತ್ಪರ್ವತದಲ್ಲಿ ಜನ್ಮವನ್ನು ಎತ್ತಿದೆನು. ಅನಂತರ ಜನ್ಮವನ್ನು ಹೊಂದಿದ ಮೇಲೆ ಎರಡು ಬಾರಿ ಹದ್ದಾಗಿಯೂ ಮೂರುಬಾರಿ ಹುಲಿಯಾಗಿಯೂ ಎರಡು

ಏಕವಾರಮುಲೂಕಶ್ಚ ವಿಡ್ವರಾಹಸ್ತತಃ ಪರಂ ।
ಇದಂ ತು ದಶಮಂ ಜನ್ಮ ರಾಕ್ಷಸಂ ಯತ್ರ ಭಾಮಿನಿ ॥ ೧೫೩ ॥

ಅತೀತಾನಿ ಸಹಸ್ರಾಣಿ ವರ್ಷಾಣಾಂ ಪಂಚಸಪ್ತತಿಃ ।
ನಾಸ್ತಿ ಮೇ ನಿಷ್ಕೃತಿರ್ಭದ್ರೇ ಹ್ಯೇತಸ್ಮಾದ್ದುಃಖಸಾಗರಾತ್ ॥ ೧೫೪ ॥

ಅತ್ರ ತ್ರಿಯೋಜನಂ ಸುಭ್ರೂರ್ನಿರ್ಜನಂ ಚ ಮಯಾ ಕೃತಂ ।
ಅನಾಗಸಾಂ ಚ ಭೂತಾನಾಂ ಬಹೂನಾಂ ಚ ಕ್ಷಯಃ ಕೃತಃ ॥ ೧೫೫ ॥

ಕರ್ಮಣಾ ತೇನ ಮೇ ಸುಭ್ರೂರ್ದಹ್ಯತೇ ಸತತಂ ಮನಃ ।
ತ್ವದ್ದರ್ಶನಸುಧಾಸಿಕ್ತಂ ಗತಂ ಶೈತ್ಯಂ ಮನೋ ಮಮ ॥ ೧೫೬ ॥

ತೀರ್ಥಂ ಫಲತಿ ಕಾಲೇನ ಸದ್ಯಸ್ಸಂಗಃ ಸತಾಂ ಖಲು ।
ಅತಃ ಸತ್ಸಂಗತಿಂ ಸುಭ್ರೂಃ ಪ್ರಶಂಸನ್ತಿ ವಿಪಶ್ಚಿತಃ ॥ ೧೫೭ ॥

---

ಬಾರಿ ಹಾವಾಗಿಯೂ ಒಂದುಬಾರಿ ಗೂಬೆಯಾಗಿಯೂ ಅನಂತರ ಮುಳ್ಳುಹಂದಿಯಾಗಿಯೂ ಹುಟ್ಟಿ ಈಗ ಹತ್ತನೆಯದಾದ ಈ ರಾಕ್ಷಸ ಜನ್ಮವನ್ನು ಹೊಂದಿದ್ದೇನೆ. ಇಲ್ಲಿ ನಾನು ರಾಕ್ಷಸನಾಗಿ ಹುಟ್ಟಿ ಎಪ್ಪತ್ತೈದುಸಾವಿರ ವರ್ಷಗಳಾದುವು. ಈ ರಾಕ್ಷಸಜನ್ಮವು ಬಹು ದುಃಖಕರವಾದುದು. ಇದರ ದೆಸೆಯಿಂದ ನನಗೆ ಬಹು ಕಷ್ಟವಾಗಿದೆ. ಇದಕ್ಕೆ ಬದಲೇ ಇಲ್ಲವಾಗಿದೆ. ಇದು ಹೋಗತಕ್ಕದ್ದಾಗಿ ಕಾಣುವುದೇ ಇಲ್ಲ.

೧೫೫. ಎಲೈ ಮಂಗಳಕರಳೆ! ಈ ನಾನಿರುವ ಸುತ್ತಲೂ ಮೂರು ಯೋಜನಗಳ ಅಗಲಕ್ಕೆ ಜನಗಳೇ ಇಲ್ಲದಂತೆ ಮಾಡಿಬಿಟ್ಟಿದ್ದೇನೆ. ತಪ್ಪಿಲ್ಲದ ಬಹು ಪ್ರಾಣಿಗಳನ್ನು ಕೊಂದುಹಾಕಿದ್ದೇನೆ.

೧೫೬. ಈ ಕೆಟ್ಟಕೆಲಸದಿಂದ ನನ್ನ ಮನಸ್ಸು ಬಹುವಾಗಿ ದುಃಖಪಡುತ್ತಿರುವುದು. ಆದರೆ ನಿನ್ನನ್ನು ನೋಡಿದಮೇಲೆ ನನಗೆ ಉಂಟಾದ ಆನಂದಕ್ಕೆ ಪಾರವೇ ಇಲ್ಲ. ನನ್ನ ಮನಸ್ಸು ಶಾಂತವಾಗಿದೆ.

೧೫೭. ತೀರ್ಥಗಳು ಫಲಕೊಡಬೇಕಾದರೆ ಬಹು ಕಾಲವು ಬೇಕಾಗುವುದು. ಸತ್ಪುರುಷರ ಸಹವಾಸವು ಒಡನೆಯೇ ಫಲವನ್ನು ಕೊಡುತ್ತದೆ. ಆದ್ದರಿಂದಲೇ ತಿಳಿದವರು ಸಜ್ಜನರ ಸಹವಾಸವನ್ನು ಒಳ್ಳೆಯದೆಂದು ಹೊಗಳುತ್ತಾರೆ.

**ಏತತ್ತೇ ಕಥಿತಂ ಸರ್ವಂ ಸ್ವದುಃಖಂ ಹೃದ್ಗತಂ ಮಯಾ ।**
**ವಿರಳಸ್ಸಜ್ಜನಸ್ಸುಭ್ರೂಃ ಸ್ವಾತ್ಮಾ ಯಸ್ಯ ನ ಖಿದ್ಯತೇ ॥ ೧೫೮ ॥**

**ಜಾನಾಸ್ಯತ್ರೋಚಿತಂ ತ್ವಂ ಹಿ ಕಿಂಚಿನ್ನೋ ವಚ್ಮ್ಯತಃ ಪರಂ ।**
**ಅಸ್ಯ ದುಃಖೋದಧೇಃ ಪಾರಂ ಕಥಂ ಯಾಮೀತಿ ಚಿಂತಯ ॥ ೧೫೯ ॥**

**ಸಜ್ಜನಾನಾಂ ಮಹಾಭೂತಿಃ ಸರ್ವೇಷಾಮುಪಜೀವಿನೀ ।**
**ಕ್ಷೀರಾರ್ಣವಃ ಪಯೋ ದತ್ತೇ ಹಂಸಾಯ ನ ಬಕಾಯ ಕಿಂ ॥ ೧೬೦ ॥**

**॥ ಶ್ರೀ ದತ್ತಾತ್ರೇಯ ಉವಾಚ ॥**

**ಇತಿ ತಸ್ಯ ವಚಶ್ಶ್ರುತ್ವಾ ಕೃಪಾರ್ದ್ರೀಕೃತಮಾನಸಾ ।**
**ಧರ್ಮದಾನೇ ಮನಃ ಕೃತ್ವಾ ಜಗೌ ಕಾಂಚನಮಾಲಿನೀ ॥ ೧೬೧ ॥**

---

೧೫೮. ಅಮ್ಮಾ! ನನ್ನ ಮನಸ್ಸಿನ ದುಃಖವೆಲ್ಲವನ್ನೂ ನಿನಗೆ ಹೇಳಿದೆನು. ಪರರ ದುಃಖವನ್ನು ಕೇಳಿ ದುಃಖಪಡದಿರುವ ಸಜ್ಜನರು ಲೋಕದಲ್ಲಿ ಬಹು ಅಪೂರ್ವರಾಗಿರುವರು.

೧೫೯. ಈ ವಿಷಯದಲ್ಲಿ ನನಗೆ ಏನನ್ನು ಮಾಡಿದರೆ ಆ ಪೈಶಾಚ್ಯವು ಹೋಗುವುದೆಂಬುದನ್ನು ನೀನು ತಿಳಿದಿದ್ದೀಯೆ. ಆದ್ದರಿಂದ ಇದಕ್ಕಿಂತಲೂ ಹೆಚ್ಚಾಗಿ ನಾನು ಏನನ್ನೂ ಹೇಳುವುದೇ ಇಲ್ಲ. ದುಃಖಸಾಗರದಿಂದ ನಾನು ಹೇಗೆ ಪಾರಾಗಬೇಕೆಂಬುದನ್ನು ಯೋಚಿಸು.

೧೬೦. ಸಜ್ಜನರಲ್ಲಿರುವ ಐಶ್ವರ್ಯಗಳೆಲ್ಲವೂ ಎಲ್ಲರಿಗೂ ಉಪಕಾರಕವಾಗಿಯೇ ಇರುತ್ತವೆ. ಕ್ಷೀರಸಮುದ್ರವು ಹಂಸಕ್ಕೆ ಹಾಲನ್ನು ಕೊಡುತ್ತದೆ. ಬಕಕ್ಕೆ ಕೊಡುವುದಿಲ್ಲವೇನು? ಎಲ್ಲದಕ್ಕೂ ಕೊಡುತ್ತದೆ. ಅದರಂತೆಯೇ ಸಜ್ಜನರು ಎಲ್ಲರಿಗೂ ಉಪಕರಿಸುತ್ತಾರೆ.

೧೬೧. ಶ್ರೀ ದತ್ತಾತ್ರೆಯನು ಹೇಳಿದನು–ಆ ರಾಕ್ಷಸನು ಹೀಗೆ ಹೇಳಿದುದನ್ನು ಕೇಳಿ ಕಾಂಚನಮಾಲಿನಿಗೆ ಮನಸ್ಸು ಕೃಪೆಯಿಂದ ಕೂಡಿಕೊಂಡಿತು. ಆಗ ಧರ್ಮದಲ್ಲಿ ಮನಸ್ಸನ್ನು ಮಾಡಿ ಆತನನ್ನು ಕುರಿತು ಇಂತೆಂದಳು.

|| ಕಾಂಚನಮಾಲಿನ್ಯುವಾಚ ||

ಕರಿಷ್ಯೇ ನಿಷ್ಕೃತಿಂ ರಕ್ಷ ಇದಾನೀಂ ಖಲು ಮಾ ಶುಚಃ ।
ಪ್ರತಿಜ್ಞಾಂ ತು ದೃಢಾಂ ಕೃತ್ವಾ ಯತಿಷ್ಯೇ ತವ ಮುಕ್ತಯೇ || ೧೬೨ ||

ಬಹವೋ ಹಿ ಕೃತಾ ಮಾಘಾ ವರ್ಷೇ ವರ್ಷೇ ಯಥಾವಿಧಿ ।
ಶ್ರದ್ಧಾಪೂರ್ವಂ ಮಯಾ ರಕ್ಷೋ ಬ್ರಹ್ಮಕ್ಷೇತ್ರೇ ಸಿತಾಸಿತೇ || ೧೬೩ ||

ತಾಂ ವದಾಮಿ ನ ಸಂಖ್ಯಾಂ ತೇ ತಸ್ಯ ಧರ್ಮಸ್ಯ ರಾಕ್ಷಸ ।
ಗೂಢೋ ಧರ್ಮೋ ಹಿ ಕರ್ತವ್ಯಃ ಇತ್ಯೂಚುರ್ವಿಬುಧೋತ್ತಮಾಃ ||೧೬೪||

ಆರ್ತೇ ದಾನಂ ಪ್ರಶಂಸಂತಿ ಮುನಯೋ ವೇದವಾದಿನಃ ।
ಸಾಗರೇ ವರ್ಷತೋ ಭದ್ರ ಕಿಂ ಮೇಘಸ್ಯ ಫಲಂ ಭವೇತ್ || ೧೬೫ ||

---

೧೬೨. ಕಾಂಚನಮಾಲಿನಿಯು ಹೇಳಿದಳು-ಎಲೈ ರಾಕ್ಷಸನೆ ! ನಿನ್ನ ಜನ್ಮವು ನಾಶವಾಗುವುದಕ್ಕೆ ಈಗ ಪ್ರತಿಯನ್ನು ಮಾಡುತ್ತೇನೆ. ದುಃಖಿಸಬೇಡ. ದೃಢವಾದ ಪ್ರತಿಜ್ಞೆಯನ್ನು ಮಾಡಿಕೊಂಡು ನಿನ್ನ ಮುಕ್ತಿಗೋಸ್ಕರ ಪ್ರಯತ್ನಿಸುತ್ತೇನೆ.

೧೬೩. ನಾನು ವರ್ಷ ವರ್ಷವೂ ಶ್ರದ್ಧೆಯಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಬ್ರಹ್ಮಕ್ಷೇತ್ರವಾದ ಪ್ರಯಾಗದಲ್ಲಿ ಗಂಗೆ ಯಮುನೆಗಳಲ್ಲಿ ಸ್ನಾನಮಾಡಿ ಅನೇಕ ಮಾಘಗಳನ್ನು ಮಾಡಿದ್ದೇನೆ.

೧೬೪. ಆದರೆ ಆ ಧರ್ಮಗಳ ಸಂಖ್ಯೆಗಳನ್ನು ನಿನಗೆ ಹೇಳುವುದಿಲ್ಲ. ಏತಕ್ಕೆಂದರೆ ತಿಳಿದವರು ಧರ್ಮವನ್ನು ಗುಟ್ಟಾಗಿ ಮಾಡಬೇಕು. ಗುಟ್ಟಾಗಿ ಇಟ್ಟುಕೊಂಡಿರಬೇಕೆಂದು ಹೇಳಿದ್ದಾರೆ.

೧೬೫. ವೇದಾದಿಗಳಾದ ಮುನಿಗಳು ಕಷ್ಟಪಡುತ್ತಿರುವವರಲ್ಲಿ ಕೊಟ್ಟದಾನವು ಸಾರ್ಥಕವಾಗುವುದೆಂದು ಹೊಗಳುತ್ತಾರೆ. ಸುಖಿಸುವವರಲ್ಲಿ ದಾನ ಮಾಡಿದರೆ ಸಾರ್ಥಕವಿಲ್ಲ. ಮೇಘವು ಒಣಗುತ್ತಿರುವ ಸಸ್ಯಗಳಿರುವ ಭೂಮಿಯಲ್ಲಿ ಮಳೆಯನ್ನು ಸುರಿಸಿದರೆ ಸಾರ್ಥಕವಾಗುತ್ತದೆ. ಸಮುದ್ರದಲ್ಲಿ ಸುರಿದರೆ ಪ್ರಯೋಜನವೇನು ?

ದದಾಮಿ ಮಾಘಪುಣ್ಯಂ ತೇ ಕೃತಮೇಕಂ ಸಿತಾಸಿತೇ ।
ತೇನ ತೇ ಸ್ವರ್ಗತಿಸ್ಸದ್ಯೋ ಭವಿಷ್ಯತಿ ನ ಸಂಶಯಃ ॥ ೧೬೬ ॥

ಅನುಭೂತಂ ಮಯಾ ರಕ್ಷಃ ಸ್ವಯಂ ತತ್ಪುಣ್ಯಜಂ ಫಲಂ ।
ತವ ದಾಸ್ಯಾಮಿ ತದ್ರಕ್ಷಃ ಸದ್ಯಸ್ತಾಪವಿನಾಶನಂ ॥ ೧೬೭ ॥

॥ ಶ್ರೀ ದತ್ತಾತ್ರೇಯ ಉವಾಚ ॥

ನಿಷ್ಪೀಡ್ಯಾಥ ತದಾ ವಸ್ತ್ರಂ ಜಲಂ ಕೃತ್ವಾ ಕರಾಂಬುಜೇ ।
ದದೌ ಸಾ ಮಾಘಜಂ ಪುಣ್ಯಂ ಯದಾ ವೃದ್ಧಾಯ ರಕ್ಷಸೇ ॥ ೧೬೮ ॥

ಶೃಣು ರಾಜನ್ ವಿಚಿತ್ರಂ ತಂ ಪ್ರಭಾವಂ ಮಾಘಮಾಸಜಂ ।
ತದೈವ ಪ್ರಾಪ್ತಪುಣ್ಯಸ್ತಾಂ ವಿಮುಚ್ಯ ರಾಕ್ಷಸೀಂ ತನುಂ ॥ ೧೬೯ ॥

ಸಂಭೂತೋ ದೇವತಾಕಾರಸ್ತತೋ ಭಾಸ್ಕರವಿಗ್ರಹಃ ।
ದೇವಯಾನಂ ಸಮಾರೂಢೋ ಹರ್ಷಾದುತ್ಫುಲ್ಲಲೋಚನಃ ॥ ೧೭೦ ॥

---

೧೬೬. ಆ ಗಂಗಾ ಯಮುನೆಗಳ ಸಂಗಮವಾದ ಪ್ರಯಾಗದಲ್ಲಿ ಸ್ನಾನಮಾಡಿ ಮಾಡಿದ ಒಂದು ಮಾಘದ ಪುಣ್ಯವನ್ನು ನಿನಗೆ ಕೊಡುತ್ತೇನೆ. ಅದರಿಂದಲೇ ನಿನಗೆ ಸ್ವರ್ಗವು ಸಿಕ್ಕುವುದು. ಸಂದೇಹವಿರುವುದಿಲ್ಲ.

೧೬೭. ಆ ಪುಣ್ಯದ ಫಲವನ್ನು ನಾನು ಅನುಭವಿಸಿದ್ದೇನೆ. ಅದನ್ನೇ ನಿನಗೆ ನಾನು ಕೊಡುತ್ತೇನೆ. ಕೂಡಲೇ ನಿನ್ನ ತಾಪವು ನಾಶವಾಗುತ್ತದೆ.

೧೬೮ ಶ್ರೀ ದತ್ತಾತ್ರೇಯನು ಹೇಳಿದನು—ಆಗ ಆಕೆಯು ತನ್ನ ಒದ್ದೆಯ ಬಟ್ಟೆಯನ್ನು ಹಿಂಡಿ ಅದೇ ನೀರನ್ನು ಕೈಗೆ ಬಿಟ್ಟುಕೊಂಡು ಮಾಘದ ಪುಣ್ಯವನ್ನು ಆ ರಾಕ್ಷಸನಿಗೆ ಕೊಟ್ಟಳು.

೧೬೯-೧೭೦. ಎಲೈ ದೊರೆಯೆ! ಆ ಮಾಘಮಾಸದ ಪುಣ್ಯಪ್ರಭಾವದಿಂದ ಉಂಟಾದ ಆಶ್ಚರ್ಯವನ್ನು ಕೇಳು. ಅವನಿಗೆ ಈ ಮಾಘದ ಪುಣ್ಯವು ಸಿಕ್ಕಲು ಒಡನೆಯೇ ಆ ರಾಕ್ಷಸ ದೇಹವನ್ನು ಬಿಟ್ಟುಬಿಟ್ಟನು. ದೇವತಾಕಾರವಾದ ಶರೀರವನ್ನು ಹೊಂದಿ ಸೂರ್ಯನಂತೆ ಪ್ರಕಾಶಿಸಿದನು. ಸಂತೋಷದಿಂದ ಕಣ್ಣುಗಳನ್ನು ಅರಳಿಸಿಕೊಂಡು ವಿಮಾನವನ್ನು ಹತ್ತಿದನು.

ದ್ಯೋತಮಾನಸ್ತದಾ ವ್ಯೋಮ್ನಿ ಭಾಸಯನ್ ಪ್ರಭಯಾ ದಿಶಃ ।
ದಿವ್ಯರೂಪಧರೋ ರೇಮೇ ದ್ವಿತೀಯ ಇವ ಭಾಸ್ಕರಃ ।
ತತೋಭಿವಂದಯಾಮಾಸ ಸತಾಂ ಕಾಂಚನಮಾಲಿನೀಂ ॥ ೧೭೧ ॥

॥ ರಾಕ್ಷಸ ಉವಾಚ ॥

ಭದ್ರೇ ವೇತ್ತೀಶ್ವರೋ ದೇವಃ ಕರ್ಮಣಾಂ ಯಃ ಫಲಪ್ರದಃ ।
ತ್ವಯಾಪ್ಯುಪಕೃತಂ ಸಮ್ಯಗ್ಯತ್ರ ಮೇ ನಾಸ್ತಿ ನಿಷ್ಕೃತಿಃ ॥ ೧೭೨ ॥

ಇದಾನೀಂ ಮಮ ಕಾರುಣ್ಯಾತ್ ಪ್ರಸೀದಾನುಗ್ರಹಂ ಕುರು ।
ಶಿಕ್ಷಾಂ ವಿಧೇಹಿ ಮೇ ದೇವಿ ಸರ್ವನೀತಿಮಯೀಂ ಶುಭಾಂ ॥ ೧೭೩ ॥

ಸರ್ವಧರ್ಮಕರೀಂ ನೂನಂ ನ ಕುರ್ವೇ ಪಾತಕಂ ಯಥಾ ।
ತಾಂ ಶ್ರುತ್ವಾ ತ್ವದನುಜ್ಞಾತಃ ಪಶ್ಚಾದ್ಯಾಮಿ ಸುರಾಲಯಂ ॥ ೧೭೪ ॥

---

೧೭೧. ಆಕಾಶದಲ್ಲಿ ಪ್ರಕಾಶಿಸುತ್ತಾ ಹತ್ತುದಿಕ್ಕುಗಳನ್ನೂ ಕಾಂತಿಗೊಳಿಸುತ್ತಾ ಎರಡನೆಯ ಸೂರ್ಯನಂತೆ ದಿವ್ಯವಾದ ದೇಹವನ್ನು ಹೊಂದಿ ಕಂಗೊಳಿಸಿದನು. ಅನಂತರ ಆ ಕಾಂಚನಮಾಲಿಕೆಯನ್ನು ಕುರಿತು ಸಂತೋಷದಿಂದ ಧನ್ಯವಾದಗಳನ್ನು ತಿಳಿಸಿದನು.

೧೭೨. ರಾಕ್ಷಸನು ಹೇಳಿದನು-ಎಲೈ ಮಂಗಳಾಂಗಿಯೇ! ಕರ್ಮಗಳಲ್ಲಿಯೂ ಯಾವುದು ಎಷ್ಟುಫಲವನ್ನು ಕೊಡುತ್ತದೆಂಬುದನ್ನು ಈಶ್ವರನೊಬ್ಬನೇ ಬಲ್ಲನು. ನೀನು ನನಗೆ ಬಹುವಾದ ಉಪಕಾರಮಾಡಿದೆ. ಆ ಉಪಕಾರಕ್ಕೆ ಬದಲು ಮಾಡುವ ಹಾಗೆಯೇ ಇಲ್ಲ.

೧೭೩. ಅಮ್ಮ! ನನ್ನ ಮೇಲೆ ಕೃಪೆಯಿಟ್ಟು ಪ್ರಸನ್ನಳಾಗಿ ಅನುಗ್ರಹವನ್ನು ಮಾಡು. ಎಲ್ಲಾ ನೀತಿಗಳಿಂದಲೂ ಕೂಡಿರುವ ಉತ್ತಮವಾದ ಬುದ್ಧಿವಾದಗಳನ್ನು ಹೇಳು.

೧೭೪. ನೀನು ಅಂತಹ ಉತ್ತಮವಾದ ಧರ್ಮಗಳ ಉಪದೇಶವನ್ನು ಕೊಟ್ಟಮೇಲೆ ಮತ್ತೆ ಪಾಪಗಳನ್ನು ಮಾಡುವುದಿಲ್ಲ. ಆ ಧರ್ಮಗಳೆಲ್ಲವನ್ನೂ ಕೇಳಿ ಅನಂತರ ಅನುಮತಿಯನ್ನು ತೆಗೆದುಕೊಂಡು ಆಮೇಲೆ ಸ್ವರ್ಗಲೋಕಕೆ ಹೋಗುತ್ತೇನೆ.

॥ ಶ್ರೀ ದತ್ತಾತ್ರೇಯ ಉವಾಚ ॥

ಏತನ್ನಿಶಮ್ಯ ತೇನೋಕ್ತಂ ಪ್ರಿಯಂ ಧರ್ಮಮಯಂ ವಚಃ ।
ಅತಿಪ್ರೀತಾಬ್ರವೀದ್ರಾಜನ್ ಧರ್ಮಂ ಕಾಂಚನಮಾಲಿನೀ ॥ ೧೭೫ ॥

॥ ಕಾಂಚನಮಾಲಿನ್ಯುವಾಚ ॥

ಧರ್ಮಂ ಭಜಸ್ವ ಸತತಂ ತ್ಯಜ ಭೂತಹಿಂಸಾಂ
ಸೇವಸ್ವ ಸಾಧುಪುರುಷಾನ್ ಜಹಿ ಕಾಮಶತ್ರುಂ ।
ಅನ್ಯಸ್ಯ ದೋಷಗುಣಕೀರ್ತನಮಾಶುಮುಕ್ತ್ವಾ
ಸತ್ಯಂ ವದಾರ್ಚಯ ಹರಿಂ ಜಹಿ ಸರ್ವದುಃಖಂ ॥ ೧೭೬ ॥

ದೇಹೇಸ್ಥಿಮಾಂಸರುಧಿರೇಽಹಂಮತಿಂ ತ್ಯಜ ತ್ವಂ
ಜಾಯಾಸುತಾದಿಷು ಸದಾ ಮಮತಾಂ ವಿಮುಂಚ ।
ಪಶ್ಯಾನಿಶಂ ಜಗದಿದಂ ಕ್ಷಣಭಂಗನಿಷ್ಠಂ
ವೈರಾಗ್ಯಭಾವರಸಿಕೋ ಭವ ಯೋಗನಿಷ್ಠಃ ॥ ೧೭೭ ॥

---

೧೭೫. ಶ್ರೀ ದತ್ತಾತ್ರೇಯನು ಹೇಳಿದನು-ಆಗ ಆ ಕಾಂಚನಮಾಲಿನಿಯು ಆತನು ಹೇಳಿದುದನ್ನು ಕೇಳಿ ಧರ್ಮದಿಂದ ಕೂಡಿದ ಮಾತುಗಳನ್ನು ಬಹು ಪ್ರೀತಿಯಿಂದ ಹೇಳಿದಳು.

೧೭೬. ಕಾಂಚನಮಾಲಿನಿಯು ಹೇಳಿದಳು–ಯಾವಾಗಲೂ ಧರ್ಮವನ್ನು ಮಾಡು. ಪ್ರಾಣಿಹಿಂಸೆಯನ್ನು ಮಾಡಬೇಡ. ಸಾಧುಜನರನ್ನು ಸೇವಿಸು ಕಾಮವೆಂಬ ಶತ್ರುವನ್ನು ನಾಶಮಾಡು. ಪರರ ದೋಷಗಳನ್ನಾಗಲಿ ಗುಣಗಳ ನ್ನಾಗಲಿ ಮನಸ್ಸಿಗೆ ತೆಗೆದುಕೊಳ್ಳದೆ ಸತ್ಯವನ್ನು ಹೇಳು. ಹರಿಯನ್ನು ಪೂಜಿಸು. ಎಲ್ಲಾ ದುಃಖಗಳನ್ನೂ ಬಿಟ್ಟು ಇಂದ್ರಿಯವನ್ನು ನಿಗ್ರಹಿಸು.

೧೭೭. ಮೂಳೆ ಮಾಂಸ ರಕ್ತಗಳಿಂದ ಕೂಡಿರುವ ಈ ದೇಹದಲ್ಲಿ ಮಮತೆ ಯನ್ನು ಬಿಟ್ಟುಬಿಡು. ಹೆಂಡತಿ ಮಕ್ಕಳು ಎಂಬ ಮಮತೆಯನ್ನು ಬಿಟ್ಟೇಬಿಡು. ಯಾವಾಗಲೂ ಈ ಪ್ರಪಂಚವು ಕ್ಷಣಿಕವಾದುದು ಎಂಬುದನ್ನು ತಿಳಿ. ಯೋಗದಿಂದ ಕೂಡಿಕೊಂಡು ವೈರಾಗ್ಯದಲ್ಲಿ ಆಸೆಯುಳ್ಳವನಾಗಿ ಆಗು.

ಪ್ರೀತ್ಯಾ ಮಯಾ ನಿಗದಿತಂ ತವ ಧರ್ಮಜಾತಂ
ಚಿತ್ತೇ ನಿಧೇಹಿ ಸಫಲಂ ಭವ ಶೀಲಯುಕ್ತಃ ।
ಸಂತಜ್ಯ ರಾಕ್ಷಸತನುಂ ಧೃತದೇವದೇಹೋ
ಜ್ಯೋತಿರ್ಮಯೋ ವ್ರಜ ಯಥಾಸುಖಮಾಶು ನಾಕಂ ॥೧೭೮॥

॥ ಶ್ರೀ ದತ್ತಾತ್ರೇಯ ಉವಾಚ ॥

ಶ್ರುತೇ ಧರ್ಮೇ ತತೋ ರಕ್ಷಃ ಸಂತುಷ್ಟೋ ವಾಕ್ಯಮಬ್ರವೀತ್ ॥ ೧೭೯ ॥

॥ ರಾಕ್ಷಸ ಉವಾಚ ॥

ಭವ ಪ್ರಮುದಿತಾ ನಿತ್ಯಂ ಸರ್ವದಾ ಶಿವಮಸ್ತು ತೇ ।
ಆಚಂದ್ರಾರ್ಕಂ ರಮಸ್ವ ತಂ ಕೈಲಾಸೇ ಶಿವಸನ್ನಿಧೌ ॥ ೧೮೦ ॥

ಉಮಯಾಽಖಂಡಿತಂ ಪ್ರೇಮ ತವಾಸ್ತು ವರವರ್ಣಿನಿ ।
ಧರ್ಮನಿಷ್ಠಾ ತಪೋನಿಷ್ಠಾ ಮಾತಸ್ತ್ವಂ ಭವ ಸರ್ವದಾ ।
ಮಾಸ್ತು ಲೋಭಃ ಶರೀರೇ ತೇ ಆಪನ್ನಾರ್ತಿಹರಾ ಭವ ॥ ೧೮೧ ॥

---

೧೭೮. ನಿನ್ನಲ್ಲಿರುವ ಪ್ರೀತಿಯಿಂದ ಧರ್ಮಗಳನ್ನು ನಿನಗೆ ಹೇಳಿದ್ದೇನೆ. ಇವನ್ನು ಮನಸಿನಲ್ಲಿಟ್ಟುಕೊ. ಆಚಾರದಿಂದ ಕೂಡಿಕೊಂಡು ಅವೆಲ್ಲವನ್ನೂ ಸಫಲವಾದುವುಗಳನ್ನಾಗಿ ಮಾಡು. ಈ ರಾಕ್ಷಸ ದೇಹವನ್ನು ಬಿಟ್ಟು ದೇವ ದೇಹವನ್ನು ಹೊಂದಿ ಕಾಂತಿಯಿಂದ ಕೂಡಿಕೊಂಡು ಸುಖವಾಗಿ ಜಾಗ್ರತೆಯಾಗಿ ಸ್ವರ್ಗಕ್ಕೆ ಹೋಗು.

೧೭೯. ದತ್ತಾತ್ರೇಯನು ಹೇಳಿದನು-ಈ ದಮಗಳೆಲ್ಲವನ್ನೂ ಕೇಳಿದ ಮೇಲೆ ರಾಕ್ಷಸನು ಸಂತೋಷಗೊಂಡು ಇಂತೆಂದನು.

೧೮೦. ರಾಕ್ಷಸನು ಹೇಳಿದನು-ನೀನು ಯಾವಾಗಲೂ ಸಂತೋಷದಿಂದಿರು. ಯಾವಾಗಲೂ ನಿನಗೆ ಮಂಗಳವೇ ಆಗಲಿ. ಕೈಲಾಸದಲ್ಲಿ ಶಿವನ ಹತ್ತಿರ ಚಂದ್ರಸೂರ್ಯರು ಇರುವವರೆಗೂ ಸುಖಿಸು.

೧೮೧. ಎಲೈ ವರವರ್ಣಿನಿಯೆ ! ನಿನಗೆ ಉಮೆಯೊಡನೆ ಎಡೆಬಿಡದ ಸ್ನೇಹವಿರಲಿ. ಅಮ್ಮಾ ! ನೀನು ಧರ್ಮವಂತಳಾಗಿಯೂ ತಪೋವಂತಳಾಗಿಯೂ ಇರು. ಯಾವಾಗಲೂ ನೀನು ಶರೀರದಲ್ಲಿ ಆಸೆಯನ್ನು ಮಾಡಬೇಡ. ಯಾವಾಗಲೂ ಆಪತ್ತನ್ನು ಹೊಂದಿದವರ ಕಷ್ಟಗಳನ್ನು ನಾಶಮಾಡುತ್ತಲೇ ಇರು.

॥ ಶ್ರೀ ದತ್ತಾತ್ರೇಯ ಉವಾಚ ॥

ಇತ್ಯುಕ್ತ್ವಾ ಸಂಪ್ರಣಮ್ಯಾಥ ಸ ತಾಂ ಕಾಂಚಲಮಾಲಿನೀಂ ।
ಜಗಾಮ ರಾಕ್ಷಸಃ ಸ್ವರ್ಗಂ ಗಂಧರ್ವೈರ್ಬಹುಭಿಸ್ಸ್ತುತಃ ॥ ೧೮೨ ॥

ದೇವಕನ್ಯಾಸ್ತದಾಗತ್ಯ ವವೃಷುಃ ಪುಷ್ಪವೃಷ್ಟಿಭಿಃ ।
ತಸ್ಯಾಃ ಕಾಂಚನಮಾಲಿನ್ಯಾ ಮೂರ್ಧ್ನಿ ಹರ್ಷಸಮಾಕುಲಾಃ ।
ತಾಮಾಲಿಂಗ್ಯ ತತಃ ಪ್ರೋಚುಃ ಕನ್ಯಕಾಃ ಸುಪ್ರಿಯಂ ವಚಃ ॥ ೧೮೩ ॥

॥ ದೇವಕನ್ಯಾ ಊಚುಃ ॥

ಕೃತಂ ಭದ್ರೇ ತ್ವಯಾ ಚಿತ್ರಂ ರಕ್ಷಸೋ ಹಿ ವಿಮೋಕ್ಷಣಂ ।
ದುಷ್ಟಾಸ್ಯಸ್ಯ ಭಿಯಾ ಕಿಂಚಿದ್ವಿಶತ್ಯಸ್ಮಿನ್ನ ಕಾನನೇ ।
ಅಧುನಾ ನಿರ್ಭಯಾಹ್ಯತ್ರ ವಿಚರಾಮೋ ಯಥಾ ಸುಖಂ ॥ ೧೮೪ ॥

॥ ದತಾತ್ರೇಯ ಉವಾಚ ॥

ಶ್ರುತ್ವಾ ತು ವಚನಂ ತಾಸಾಂ ರಾಜ್ಞ ಕಾಂಚನಮಾಲಿನೀ ।
ಹೃಷ್ಟಾ ತೇನೈವ ದಾನೇನ ಕೃತಕೃತ್ಯಾ ಸತೀ ತದಾ ॥ ೧೮೫ ॥

---

೧೮೨. ಶ್ರೀ ದತ್ತಾತ್ರೇಯನು ಹೇಳಿದನು–ಹೀಗೆಂದು ಕಾಂಚನಮಾಲಿನಿಗೆ ಹೇಳಿ ಆಕೆಗೆ ನಮಸ್ಕರಿಸಿ ಅನೇಕ ಜನಗಂಧರ್ವರಿಂದ ಹೊಗಳಲ್ಪಡುತ್ತಾ ಆ ರಾಕ್ಷಸನು ಸ್ವರ್ಗಕ್ಕೆ ಹೋದನು.

೧೮೩. ಆಗ ದೇವಕನ್ಯೆಯರು ಬಂದು ಇವಳ ಮೇಲೆ ಹೂಮಳೆಯನ್ನು ಕರೆದರು. ಕಾಂಚನಮಾಲಿನಿಯ ಬಳಿಗೆ ಬಂದು ಆ ದೇವಕನ್ಯೆಯರು ಅವಳ ತಲೆಯನ್ನು ಪ್ರೀತಿಯಿಂದ ಮೂಸಿನೋಡಿ ಅವಳನ್ನು ಆಲಿಂಗಿಸಿಕೊಂಡು ಪ್ರೀತಿಯಿಂದ ಒಳ್ಳೆಯ ಮಾತನ್ನಾಡಿದರು.

೧೮೪. ದೇವಕನ್ಯೆಯರು ಹೇಳಿದರು–ಎಲೈ ಮಂಗಳೆಯೆ! ಈ ರಾಕ್ಷಸನಿಗೆ ನೀನು ಮೋಕ್ಷವನ್ನುಂಟುಮಾಡಿದುದು ವಿಚಿತ್ರವಾಗಿದೆ. ಈ ದುಷ್ಟನ ಹೆದರಿಕೆಯಿಂದ ಯಾರೂ ಕೂಡ ಈ ಕಾಡಿನಲ್ಲಿ ಪ್ರವೇಶಿಸುತ್ತಿರಲಿಲ್ಲ. ಈಗ ಭಯವಿಲ್ಲದೆ ಈ ಕಾಡಿನಲ್ಲಿ ಇಷ್ಟಬಂದಂತೆ ಸುಖವಾಗಿ ಸಂಚರಿಸುತ್ತೇವೆ.

೧೮೫. ಶ್ರೀ ದತ್ತಾತ್ರೇಯನು ಹೇಳಿದನು–ಎಲೈ ರಾಜನೆ! ಆ ಕಾಂಚನಮಾಲಿನಿಯು ಅವರ ಮಾತನ್ನು ಕೇಳಿ ಸಂತೋಷಗೊಂಡು ಆ ದಾನದಿಂದ ಆಗ ಕೃತಕೃತ್ಯಳಾಗಿ ಕಂಡುಬಂದಳು.

ತಂ ರಾಕ್ಷಸಂ ಕಾಂಚನಮಾಲಿನೀ ತದಾ
ಗಂಧರ್ವಕನ್ಯಾ ಪರಿಮೋಕ್ಷ್ಯ ಸತ್ವರಂ ।
ಕ್ರೀಡಂತ್ಯಮೂಭಿಃ ಪ್ರಯಯೌ ಹರಾಲಯಂ ।
ಪ್ರೀತ್ಯಾ ಸುಪೂರ್ಣಾ ಹಿ ಪರೋಪಕಾರಿಣೀ ॥ ೧೮೬ ॥

ಸಂವಾದಮೇತದ್ವರಕನ್ಯಕೇರಿತಂ
ಭಕ್ತ್ಯಾ ಪರಂ ಯಶ್ಚ ಶೃಣೋತಿ ಮಾನವಃ ।
ನೋ ಬಾಧ್ಯತೇ ಜಾತ್ವಪಿ ರಾಕ್ಷಸಾದಿಭಿಃ
ಧರ್ಮೇ ಮತಿಸ್ತಸ್ಯ ಭೃಶಂ ಪ್ರಜಾಯತೇ ॥ ೧೮೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ವಸಿಷ್ಠ ದಿಲೀಪ ಸಂವಾದೇ ಮಾಘ ಮಾಹಾತ್ಮ್ಯೇ ರಾಕ್ಷಸ ವಿಮೋಕ್ಷಣಂ ನಾಮ ಷಟ್‌ಚತ್ವಾರಿಂಶದಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೮೬. ಗಂಧರ್ವಕನ್ಯೆಯಾದ ಈ ಕಾಂಚನಮಾಲಿನಿಯು ಆ ರಾಕ್ಷಸನಿಗೆ ರಾಕ್ಷಸ ದೇಹದಿಂದ ನಿವೃತ್ತಿಮಾಡಿಸಿ ಅವನನ್ನು ಕಳುಹಿಸಿಬಿಟ್ಟು ಈ ದೇವಕನ್ಯೆಯರೊಡನೆ ವಿಹರಿಸುತ್ತ ಕೈಲಾಸಕ್ಕೆ ಹೊರಟು ಹೋದಳು.

೧೮೭. ಈ ಕಾಂಚನಮಾಲಿನಿಯು ಹೇಳಿದ ಸಂವಾದವನ್ನು ಭಕ್ತಿಯಿಂದ ಯಾವನು ಕೇಳುವನೋ ಅವನಿಗೆ ರಾಕ್ಷಸರಿಂದ ಬಾಧೆಯೆಂಬುದು ಇರುವುದೇ ಇಲ್ಲ ಮತ್ತು ಧರ್ಮದಲ್ಲಿ ಬುದ್ಧಿಯು ಬಹುವಾಗಿ ಉಂಟಾಗುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ವಸಿಷ್ಠ ದಿಲೀಪರ ಸಂವಾದದ ಮಾಘ ಮಹಿಮೆಯಲ್ಲಿ ರಾಕ್ಷಸ ವಿಮೋಕ್ಷಣ ಎಂಬ ಇನ್ನೂರ ನಲವತ್ತಾರನೆಯ ಅಧ್ಯಾಯವು ಮುಗಿದುದು.

